॥ ಶ್ರೀಃ ॥

ಶ್ರೀ ಜಯಚಾಮರಾಜೇಂದ್ರಗ್ರಂಥರತ್ನಮಾಲಾ

(ಸಂ. ೩೨)

# ಶ್ರೀಶಿವರಹಸ್ಯ

ಸಂಪುಟ ೨೪

ಅನುವಾದಕ

ಆಸ್ಥಾನವಿದ್ವಾನ್ ಎಚ್. ಗಂಗಾಧರಶಾಸ್ತ್ರೀ

ಧರ್ಮಪ್ರಕಾಶ ಡಿ. ಬನುಮಯ್ಯನವರ ಹೈಸ್ಕೂಲು ಅಧ್ಯಾಪಕ

ಮೈಸೂರು

ಮೈಸೂರು

ಶ್ರೀ ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್

1951

॥ ಶ್ರೀಃ ॥

ಶ್ರೀ ಜಯಚಾಮರಾಜೇಂದ್ರಗ್ರಂಥರತ್ನಮಾಲಾ

(ಸಂ. ೩೨)

# ಶ್ರೀಶಿವರಹಸ್ಯ

ಸಂಪುಟ ೨೪

ಅನುವಾದಕ

ಆಸ್ಥಾನವಿದ್ವಾನ್ ಎಚ್. ಗಂಗಾಧರಶಾಸ್ತ್ರೀ

ಧರ್ಮಪ್ರಕಾಶ ಡಿ. ಬನುಮಯ್ಯನವರ ಹೈಸ್ಕೂಲು ಅಧ್ಯಾಪಕ

ಮೈಸೂರು



ಮೈಸೂರು

ಶ್ರೀ ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್

1951

# ಮುನ್ನುಡಿ

ಸದಾಶಿವನಾಮಕವಾಗಿ ಬರೆಯಲ್ಪಟ್ಟಿರುವ ಶ್ರೀ ಶಿವರಹಸ್ಯದ ನವಮಾಂಶದಲ್ಲಿ ಮೂವತ್ತಾರನೆಯ ಅಧ್ಯಾಯದಿಂದ ಅಂಶಪೂರ್ತಿಯಾಗಿ ಅಂದರೆ ಅರುವತ್ತೈದನೆಯ ಅಧ್ಯಾಯಗಳ ವರೆಗಿನ ಸಂಸ್ಕೃತದ ಮೂಲ ಮತ್ತು ಕನ್ನಡ ಟೀಕೆಗಳು ಈ ಭಾಗದಲ್ಲಿ ಅಡಕವಾಗಿವೆ. ಅಂಶಾಂತ್ಯದಲ್ಲಿ ಹೇಳಿರುವ "ತ್ರಿಷಷ್ಟಿಭಕ್ತಾಃ ಶಿಪಿ ವಿಷ್ಟನಿಷ್ಠಾಃ ಕನಿಷ್ಠವರ್ಣಾ ಅಪಿ ತೇಪಿ ಶಿಷ್ಟಾಃ" ಎಂಬ ಮಾತಿನಂತೆ ಅರುವತ್ತು ಮೂರು ಮಂದಿ ಭಕ್ತರ ಇತಿಹಾಸಗಳೇ ಈ ನವಮಾಂಶದ ಸಾರ. ಅದ್ವೈತಮತ ಪ್ರಕಾಶಕರಾದ ಶ್ರೀ ಶಂಕರಾಚಾರ್ಯರೇ ಅರುವತ್ತುಮೂರು ಮಂದಿ ಭಕ್ತರಲ್ಲಿ ಮೊದಲನೆಯವರಾಗುತ್ತಾರೆ. ಭಕ್ತಿ ಜ್ಞಾನ ವೈರಾಗ್ಯಗಳಲ್ಲಿ ಸಿದ್ಧಿಪಡೆದ ಆ ಮಹನೀಯರನ್ನು ಈ ಗ್ರಂಥಕಾರರು ಕೇವಲ ಭಕ್ತಿಯಿಂದಲೇ ಅವರು ಮುಕ್ತರಾದವರೆಂಬ ಅಭಿಪ್ರಾಯದಿಂದ ನಿರೂಪಿಸಿದ್ದಾರೆ. ವಿಷ್ಣುವೇ ಮುಂತಾದ ಶಿವಭಿನ್ನ ಇತರ ದೇವತೆಗಳ ಉಪಾಸನೆಯಿಂದ ಮುಕ್ತರಾದವರ ವಿಚಾರಗಳು ಇದರಲ್ಲಿ ಎಲ್ಲೂ ಬರುವುದಿಲ್ಲ. ಮತ್ತು ಅರುವತ್ತುಮೂರು ಮಂದಿ ಭಕ್ತರೂ ಕೇವಲ ದಕ್ಷಿಣಭಾರತಕ್ಕೆ ಅದರಲ್ಲಿಯೂ ಹೆಚ್ಚಾಗಿ ಚೋಲದೇಶಕ್ಕೆ ಸಂಬಂಧಿಸಿದವರು. ಇವರಲ್ಲಿ ಎಲ್ಲ ವರ್ಣದವರೂ, ಎಲ್ಲ ವಯಸ್ಸಿನವರೂ ಇದ್ದಾರೆ. ಶಿವಸೇವೆಗೆ ಅಥವಾ ಶಾಂಭವರ ಸತ್ಕಾರಕ್ಕಾಗಿ ಸರ್ವವನ್ನೂ ತ್ಯಾಗಮಾಡಿ, ಅನಿವಾರ್ಯಸಂದರ್ಭದಲ್ಲಿ ಆತ್ಮನಿವೇದನರೂಪವಾದ ಭಕ್ತಿಮಾರ್ಗದಲ್ಲಿ ನಡೆದು, ಶಿವಾನುಗ್ರಹವನ್ನು ಸಂಪಾದಿಸಿದವರೇ ಬಹುಮಂದಿ. ಶಿವಪ್ರೀತಿಯನ್ನು ಸಂಪಾದಿಸುವ ಭರದಲ್ಲಿ ಈ ಭಕ್ತರು ಅನೇಕ ಹಿಂಸಾಕಾರ್ಯಗಳನ್ನು ನಡೆಸುವರು. ಆದರೂ ಶಿವಾನುಗ್ರಹಬಲದಿಂದ ಅವು ಆಶ್ಚರ್ಯಪ್ರದವಾಗುವ ಸನ್ನಿವೇಶಗಳಾಗಿ ತಿರುಗುವುವು. ಯುಗಾಂತರಗಳಲ್ಲಿದ್ದ ಪ್ರಹ್ಲಾದ, ನಾರದ, ಅಂಬರೀಷ ಮುಂತಾದ ಭಕ್ತಶಿರೋಮಣಿಗಳ ಇತಿಹಾಸವಾವುದೂ ಇಲ್ಲಿ ತೋರುವುದಿಲ್ಲ. ಕಲಿಯುಗದಲ್ಲಿ ಹುಟ್ಟಿ ಸಾಮಾನ್ಯಜನವರ್ಗದಲ್ಲಿ ಬೆಳೆದು ಶಿವಭಕ್ತಿಯಲ್ಲಿ ಮುಂದುವರಿದು ಮುಕ್ತರಾದ ಮಹನೀಯರೇ ಈ ಗ್ರಂಥದಲ್ಲಿ ಕಂಡುಬರುತ್ತಿರುವರು. ಭಕ್ತನ ಜಾತಿ, ಕ್ರಿಯಾದಿಗಳು ಮುಖ್ಯವಲ್ಲವೆಂದೂ, ಭಕ್ತಿಭಾವನೆಯೊಂದೇ ಶಿವಪ್ರೀತಿಕರವೆಂದೂ ನಿರೂಪಿಸುತ್ತಾ ಗ್ರಂಥಕಾರರು ಈ ಅಂಶಾಂತ್ಯದಲ್ಲಿ—

ಚಂಡಾಲಃ ಶ್ವಪಚೋಸ್ತು ವಾ ಗಿರಿಸುತೇ ವಿಪ್ರೋಪಿ ವಾ ವೇದವಿ
ನ್ಮದ್ಭಕ್ತ್ಯಾ ಭುವನೇ ವನೇಪಿ ನಿವಸನ್ನ್ಯಾಯಾಚ್ಛಿವೇ ಪಾವನಃ

ತಸ್ಮೈ ತಾಂ ವಿತರಾಮಿ ಮುಕ್ತಿಪದವೀಂ ನಾಚಾರಜಾತಿಸ್ಪೃಹಾ
ನೋ ಶೀಲಂ ನ ಕುಲಂ ತದೀಯಮಗಜೇ ಪಶ್ಯಾಮಿ ಭಕ್ತ್ಯಾ ಹೃತಃ ॥

ಹೀಗೆಂದಿರುವರು. ಪರಮೇಶ್ವರನು ಭಕ್ತನ ಸ್ವರೂಪವನ್ನು ತನ್ನ ಪ್ರಿಯಪತ್ನಿಯಾದ ಪಾರ್ವತಿಗೆ ತಿಳಿಸುತ್ತಾ, ಭಕ್ತನಲ್ಲಿ ನಾನು ಗಮನಿಸುವುದು ಭಕ್ತಿಯೊಂದನ್ನೇ ಎಂದು ಸಿದ್ಧಾಂತರೂಪವಾಗಿ ನುಡಿದಿರುವನು. ಕಲಿಯುಗದಲ್ಲಿ ಸಂಸಾರಸಾಗರಕ್ಕೆ ಸಿಕ್ಕಿ ತೊಳಲುವವರೇ ಹೆಚ್ಚುಮಂದಿ; ಅವರು ಕರ್ಮ ಅಥವಾ ಜ್ಞಾನಮಾರ್ಗ ಗಳಲ್ಲಿ ಪ್ರವೇಶಿಸಿ, ವೈರಾಗ್ಯವನ್ನು ಪಡೆದು, ಅದರಿಂದ ಪರಮಪದವನ್ನು ಪಡೆಯು ವುದು ಸಾಧ್ಯವಲ್ಲ; ಭಕ್ತಿಪಂಥವಾದರೋ ಮುಕ್ತಿಗೆ ಬಹು ಸುಲಭವಾದ ದಾರಿ; ಒಂದು ಕ್ಷಣಕಾಲ ಮನಸ್ಸನ್ನು ದೈವಭಾವನೆಯಲ್ಲಿ ನಿಲ್ಲಿಸಿದರೂ ಅವನಿಗೆ ಮೋಕ್ಷ ವುಂಟು; ಇತ್ಯಾದಿ ತತ್ತ್ವಗಳನ್ನು ಪ್ರತಿಪಾದಿಸುವುದೇ ಈ ಅಂಶದಲ್ಲಿ ಗ್ರಂಥಕಾರರ ಉದ್ದೇಶ. ಇಂತಹ ಭಕ್ತಿರಸಪ್ರಧಾನವಾದ ಇತಿಹಾಸಗ್ರಂಥಗಳು ಸಂಸ್ಕೃತಭಾಷೆ ಯಲ್ಲಿರುವಂತೆ ಮತ್ತಾವಭಾಷೆಯಲ್ಲಿಯೂ ದೊರಕಲಾರವು. ಈಚೆಗೆ ಮಹಾರಾಷ್ಟ್ರ ಭಾಷೆಯವರು ಅನೇಕ ಭಕ್ತರ ಚರಿತ್ರೆಗಳನ್ನು ಸಂಗ್ರಹಿಸಿ ಭಕ್ತವಿಜಯವೇ ಮೊದ ಲಾದ ಗ್ರಂಥಗಳನ್ನು ರಚಿಸಿರುವರು. ಅವುಗಳಲ್ಲಿ ಕೆಲವು ಕನ್ನಡಭಾಷೆಗೂ ಪರಿವರ್ತಿತಗಳಾಗಿವೆ. ಗ್ರಂಥಭಂಡಾರದಲ್ಲಿ ಸ್ವಲ್ಪ ಹಿಂದಾಗಿರುವ ಕನ್ನಡನಾಡಿಗೆ ಇಂತಹ ಗ್ರಂಥಗಳು ಅಮೋಘವಾದ ಸಹಾಯವನ್ನು ಒದಗಿಸುವುವು ಎಂಬುದರಲ್ಲಿ ಸಂಶಯವಿಲ್ಲ.

ನಿಜವಾದ ಭಕ್ತಿಜ್ಞಾನವೈರಾಗ್ಯಗಳಲ್ಲಿ ವಿಶೇಷವಾಗಿ ಮುಂದುವರಿದು ಪ್ರಜಾ ವರ್ಗಕ್ಕೆ ಮಾದರಿಮಹಾರಾಜರೆನಿಸಿ ನಮ್ಮ ಮೈಸೂರು ರಾಜ್ಯವನ್ನು ಪರಿಪಾಲಿಸು ತ್ತಿರುವ ಶ್ರೀಮನ್ಮಹಾರಾಜ ಶ್ರೀ ಜಯಚಾಮರಾಜ ಒಡೆಯರ್ ಬಹದ್ದೂರ್, ಜಿ.ಸಿ.ಬಿ., ಜಿ.ಸಿ.ಎಸ್.ಐ. ಮಹಾಪ್ರಭುಗಳು, ಇಂತಹ ಪ್ರಾಚೀನಗ್ರಂಥಗಳ ಪರಿಷ್ಕಾರಕ್ಕೂ, ಪರಿವರ್ತನೆಗೂ ಸಂಪೂರ್ಣವಾದ ನೆರವು ನೀಡಿ, ಕನ್ನಡಪ್ರಪಂಚಕ್ಕೇ ಮಹೋಪಕಾರಮಾಡಿದ್ದಾರೆ. ಇಂತಹ ಮಹನೀಯ ಪ್ರಭುವರ್ಯರಿಗೂ, ಇವರ ಕುಟುಂಬವರ್ಗಕ್ಕೂ ಸರ್ವಾಂತರ್ಯಾಮಿಯಾದ ಸರ್ವೇಶ್ವರನು ಸಕಲ ಸೌಭಾಗ್ಯ ಗಳನ್ನೂ ಸತ್ಸಂತಾನಾದಿಸಕಲಸನ್ಮಂಗಳಗಳನ್ನೂ ಕರುಣಿಸಿ ಸರ್ವದಾ ಸಲಹುತ್ತಿರ ಲೆಂದು ನಾನು ಅನನ್ಯಭಕ್ತಿಯಿಂದ ಪರಮಾತ್ಮನಲ್ಲಿ ಮೊರೆಯಿಡುತ್ತೇನೆ.

ಶ್ರೀಖರನಾಮ ಸಂವತ್ಸರದ
ಆಶ್ವಯುಜ ಶು॥ ದ್ವಾದಶೀ
ಶುಕ್ರವಾರ
12—10—1951.

ಸಜ್ಜನವಿಧೇಯ,
ಹೊನ್ನೇನಹಳ್ಳಿ ಗಂಗಾಧರಶಾಸ್ತ್ರೀ,
ಆಸ್ಥಾನವಿದ್ವಾನ್, ಮೈಸೂರು.

# ಶ್ರೀ ಶಿವರಹಸ್ಯದ ಒಂಬತ್ತನೆಯ ಅಂಶದ
# ವಿಷಯಾನುಕ್ರಮಣಿಕಾ

ಅಧ್ಯಾಯಗಳು ೩೬—೬೫ ಪೂರ್ತಿ


## ಮೂವತ್ತಾರನೆಯ ಅಧ್ಯಾಯ

ಕಲಾನಾಥನೆಂಬ ಭಕ್ತನ ಇತಿಹಾಸ ; ಧೂಪದಾನದ ಮಹಿಮೆ. ಪುಟ ೧–೧೩

## ಮೂವತ್ತೇಳನೆಯ ಅಧ್ಯಾಯ

ಮಾನಕಂಜನದೀಶಭಕ್ತನ ಚರಿತ್ರೆ ....... ಪುಟ ೧೪–೨೪

## ಮೂವತ್ತೆಂಟನೆಯ ಅಧ್ಯಾಯ

ಶಂಕುಲಾದಾಯಭಕ್ತನ ವೃತ್ತಾಂತ, ಗೋನಾಥನ ಕಥೆ, ವೇಣುನಾದವರ್ಣನೆ ....... ಪುಟ ೨೫–೪೦

## ಮೂವತ್ತೊಂಬತ್ತನೆಯ ಅಧ್ಯಾಯ

ಮೂರ್ತಿನಾಥನ ಚರಿತ್ರೆ ....... ಪುಟ ೪೧–೫೫

## ನಲವತ್ತನೆಯ ಅಧ್ಯಾಯ

ಸ್ಕಂದನಾಥಚರಿತ್ರೆ, ಪಶುಪತಿ ಚರಿತ್ರೆ ....... ಪುಟ ೫೬–೬೭

## ನಲವತ್ತೊಂದನೆಯ ಅಧ್ಯಾಯ

ಶ್ವೋಗಂತು ಎಂಬ ಹೆಸರಿನ ಭಕ್ತನ ವೃತ್ತಾಂತ ಪುಟ ೬೮–೮೦

## ನಲವತ್ತೆರಡನೆಯ ಅಧ್ಯಾಯ

ವಿಚಾರಭಕ್ತನ ಚರಿತ್ರೆ ....... ಪುಟ ೮೧–೧೦೩

### ನಲವತ್ತುಮೂರನೆಯ ಅಧ್ಯಾಯ

ವಾಗೀಶಭಕ್ತಚರಿತ್ರೆ, ಭಸ್ಮಪ್ರಭಾವವರ್ಣನೆ ಪುಟ ೧೦೪–೧೧೭

### ನಲವತ್ತುನಾಲ್ಕನೆಯ ಅಧ್ಯಾಯ

ಕುಲಪಕ್ಷಭಕ್ತಚರಿತೆ, ಶೂರನಾಥಭಕ್ತಚರಿತೆ ಪುಟ ೧೧೮–೧೩೦

### ನಲವತ್ತುಐದನೆಯ ಅಧ್ಯಾಯ

ಬೋಧಸಂಬಂಧನಾಥಕಥೆ ....... ಪುಟ ೧೩೧–೧೪೭

### ನಲವತ್ತಾರನೆಯ ಅಧ್ಯಾಯ

ಜ್ಞಾನಸಂಬಂಧಭಕ್ತಚರಿತ್ರೆ ....... ಪುಟ ೧೪೮–೧೫೭

### ನಲವತ್ತೇಳನೆಯ ಅಧ್ಯಾಯ

ಪೂತವತೀಚರಿತ್ರೆ ....... ಪುಟ ೧೫೮–೧೭೩

### ನಲವತ್ತೆಂಟನೆಯ ಅಧ್ಯಾಯ

ತದ್ಭೂತಿನಾಮಭಕ್ತಚರಿತ್ರೆ ....... ಪುಟ ೧೭೪–೧೮೬

### ನಲವತ್ತೊಂಬತ್ತನೆಯ ಅಧ್ಯಾಯ

ನೀಲಲಗ್ನಾಖ್ಯಚರಿತ್ರೆ ....... ಪುಟ ೧೮೭–೧೯೭

### ಐವತ್ತನೆಯ ಅಧ್ಯಾಯ

ನಮಿನಂತಿಭಕ್ತಚರಿತೆ ....... ಪುಟ ೧೯೮–೨೦೭

### ಐವತ್ತೊಂದನೆಯ ಅಧ್ಯಾಯ

ಕಲಿಕಾಮಾಹ್ವಯ ಕಥೆ ....... ಪುಟ ೨೦೮–೨೧೫

### ಐವತ್ತೆರಡನೆಯ ಅಧ್ಯಾಯ

ಮೂಲದೇವ ಚರಿತ್ರೆ ....... ಪುಟ ೨೧೬–೨೨೪

ಐವತ್ತುಮೂರನೆಯ ಅಧ್ಯಾಯ

ದಂತಿಭಕ್ತಚರಿತ್ರೆ, ಮೂರ್ಖಭಕ್ತಚರಿತ್ರೆ ....... ಪುಟ ೨೨೫–೨೩೬

ಐವತ್ತುನಾಲ್ಕನೆಯ ಅಧ್ಯಾಯ

ಸೋಮಯಾಜಿಮಾರಚರಿತ್ರೆ, ಶಾಕ್ಯನಾಥಚರಿತೆ ಪುಟ ೨೩೭–೨೪೪

ಐವತ್ತುಐದನೆಯ ಅಧ್ಯಾಯ

ದಭ್ರಭಕ್ತಚರಿತೆ ....... ಪುಟ ೨೪೫–೨೬೨

ಐವತ್ತಾರನೆಯ ಅಧ್ಯಾಯ

ದಭ್ರಭಕ್ತಚರಿತೆ ....... ಪುಟ ೨೬೩–೨೭೩

ಐವತ್ತೇಳನೆಯ ಅಧ್ಯಾಯ

ಮಹಾಗೋದನ ವಿಚಾರ ....... ಪುಟ ೨೭೪–೨೮೨

ಐವತ್ತೆಂಟನೆಯ ಅಧ್ಯಾಯ

ಮಹಾಗೋದ ಮತ್ತು ಚೋಳರಾಜರ ವಿಚಾರ ಪುಟ ೨೮೩–೨೯೩

ಐವತ್ತೊಂಬತ್ತನೆಯ ಅಧ್ಯಾಯ

ಕೃತಾಂತಕನ ವಿಚಾರ ....... ಪುಟ ೨೯೪–೩೦೧

ಅರವತ್ತನೆಯ ಅಧ್ಯಾಯ

ಕೀರ್ತಿಚೋಳರಾಜನ ಕಥೆ ....... ಪುಟ ೩೦೩–೩೧೧

ಅರವತ್ತೊಂದನೆಯ ಅಧ್ಯಾಯ

ಕಲಿಕಾಮಜಿತಾಖ್ಯಾನ, ಕಲಿಕಂಪನ ಚರಿತ್ರೆ ಪುಟ ೩೧೨–೩೨೦

ಅರವತ್ತೆರಡನೆಯ ಅಧ್ಯಾಯ

ಕಲಿನೀತಿಕಥೆ, ಶಕ್ತಿನಾಥಕಥೆ ....... ಪುಟ ೩೨೧–೩೨೯

## ಅರವತ್ತುಮೂರನೆಯ ಅಧ್ಯಾಯ

ಶಿವಭಕ್ತದ್ವಿಜನ ಕಥೆ, ಕಾರಿನಾಥನ ಕಥೆ ಪುಟ ೩೩೦–೩೩೯

## ಅರವತ್ತುನಾಲ್ಕನೆಯ ಅಧ್ಯಾಯ

ನಾಸೀರಭಂಜನ ಕಥೆ, ಪಾದಸಿಂಹನ ಕಥೆ ಪುಟ ೩೪೦–೩೪೯

## ಅರವತ್ತೈದನೆಯ ಅಧ್ಯಾಯ

ಕೀರ್ತಿಮಿತ್ರನ ಇತಿಹಾಸ, ವೀರಶಾರ್ದೂಲನ ಕಥೆ ಪುಟ ೩೫೦–೩೬೩

ಇಲ್ಲಿಗೆ ಶಿವರಹಸ್ಯದ ಒಂಬತ್ತನೆಯ ಅಂಶದ ವಿಷಯಾನುಕ್ರಮಣಿಕೆ ಮುಗಿದುದು.



॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಸದಾಶಿವಾಖ್ಯೇ

## ನವಮಾಂಶೇ

## ಷಟ್ತ್ರಿಂಶೋಽಧ್ಯಾಯಃ

॥ ಶ್ರೀ ಸ್ಕಂದ ಉವಾಚ ॥

ಕಲಾನಾಥೋಽಭವದ್ವೈಶ್ಯೋ ಸದಾ ವಶ್ಯಧನೋ ಯುವಾ ।
ಬಿಲ್ವಾರಣ್ಯೇಽವಸತ್ಪುಣ್ಯೇ ದಂಡಕಾರಣ್ಯಮಧ್ಯಮೇ ॥೧॥

ಕಲ್ಹಾರಸೌರಭೋದಾರಕಾವೇರೀಭೂರಿವಾರಿಷು ।
ಚೋಲೇಷ್ವಸ್ತಿ ಘಟಗ್ರಾಮೋ ಭೂಸುರೇಂದ್ರನಿವಾಸಭೂಃ ॥೨॥

---

## ಮೂವತ್ತಾರನೆಯ ಅಧ್ಯಾಯ

ಈಶ್ವರ ಪುತ್ರನಾದ ಕುಮಾರಸ್ವಾಮಿಯು ಶಿವಮಹಿಮೆಯನ್ನೇ ವಿವರಿಸುತ್ತಾ, ಶಿವಲೀಲಾರೂಪವಾದ ಮತ್ತೊಂದು ಇತಿಹಾಸವನ್ನು ಜೈಗೀಷವ್ಯನಿಗೆ ಬೋಧಿಸತೊಡಗಿದನು—ಅಯ್ಯ ಜೈಗೀಷವ್ಯನೇ, ಹಿಂದೆ ಶ್ರೀಮಂತರಲ್ಲಿ ಅಗ್ರಗಣ್ಯನೆನಿಸಿದ ಕಲಾನಾಥನೆಂಬ ಯುವಕ ವೈಶ್ಯನೊಬ್ಬನು ದಂಡಕಾರಣ್ಯದ ಮಧ್ಯದಲ್ಲಿ ಪುಣ್ಯಕರವಾದ ಬಿಲ್ವಾರಣ್ಯವೊಂದರಲ್ಲಿ ವಾಸಮಾಡುತ್ತಿದ್ದನು. ಅದೇ ಕಾಲದಲ್ಲಿ ಸೌಗಂಧಿಕಾಪುಷ್ಪಗಳಿಂದ ಅಲಂಕೃತವಾಗಿಯೂ, ಸುಗಂಧಭರಿತವಾಗಿಯೂ ಇದ್ದು ಸದಾ ಪ್ರವಾಹಪೂರ್ಣವಾದ ಕಾವೇರೀ ನದಿಯಿಂದ ಶೋಭಿಸುತ್ತಿರುವ ಚೋಲದೇಶದಲ್ಲಿ, ಬ್ರಾಹ್ಮಣೋತ್ತಮರಿಗೆ ಆವಾಸಸ್ಥಾನವೆನಿಸಿದ ಘಟಗ್ರಾಮವೆಂಬ ಒಂದು ಊರಿದ್ದಿತು. ॥೧-೨॥

ಯತ್ರ ಗಂಗಾಶಶಿಬ್ರಹ್ಮಕಪಾಲಾಂಕಜಟಾಭರಃ ।
ಭಕ್ತಂ ಪಾತುಂ ಹರಃ ಕ್ರೋಧಾತ್ಪದಾ ಕಾಲಂ ಪುರಾಽವಧೀತ್ ॥೩॥

ಯತ್ರ ಕ್ಷೇತ್ರೇಷು ಶಾಲಿಶ್ರೀಶಂಖಮುಕ್ತಾತಟೇಷು ಚ ।
ಪಾರ್ಶ್ವೇ ತು ಯಜ್ಞಶಾಲಾಶ್ಚ ಕಲ್ಹಾರೌಘಾಶ್ಚ ಸೇತುಷು ॥೪॥

ಗೀತಾನಿ ಶಾಲಿಕಾಸ್ತ್ರೀಣಾಂ ಧಾನ್ಯರಕ್ಷೋಘಭೂಮಿಷು ।
ಋಗ್ಯಜುಃಶಾಸ್ತ್ರಮುಖರ ಸಾಮಘೋಷೋರುಭೂಷಿತೇ ॥೫॥

ತಸ್ಮಿನ್ನಿತ್ಯವರ್ಧಿತೇ ಗ್ರಾಮೇ ಕಲಾನಾಥ ಇತಿ ದ್ವಿಜಃ ।
ಆಸೀತ್ಸರಿತ್ಕಿರೀಟಾಂಘ್ರಿಸದಾರ್ಚನಪರಾಯಣಃ ॥೬॥

ಮೃಕಂಡುಸೂನೋರ್ಬಾಲಸ್ಯ ಗಾಢಮಾಶ್ಲಿಷ್ಯತೋ ಭಯಾತ್ ।
ಭಕ್ತಸಂವರಣೇ ಮೃತ್ಯುಂ ಜಘಾನ ಪ್ರಪದೇನ ಯಃ ॥೭॥

---

ಅಲ್ಲಿಯೇ ಗಂಗಾ, ಚಂದ್ರರನ್ನು ಜಡೆಯಲ್ಲಿ ಧರಿಸಿ ಬ್ರಹ್ಮಕಪಾಲವನ್ನು ಹಿಡಿದು ಪರಮೇಶ್ವರನು ಹಿಂದೆ ತನ್ನ ಭಕ್ತರನ್ನು ಕಾಪಾಡುವುದಕ್ಕೋಸ್ಕರ ಕೋಪದಿಂದ ಯಮನನ್ನು ಕಾಲಿನಿಂದ ಒದೆದು ಬೀಳಿಸಿದ್ದನು. ಆ ಕ್ಷೇತ್ರದ ಗದ್ದೆಗಳು ಸದಾ ಬತ್ತದ ಪೈರಿನ ಕಾಂತಿಯಿಂಧ ರಂಜಿಸುತ್ತಿದ್ದುವು. ಕಾವೇರಿ ನದಿಯ ದಡಗಳಲ್ಲಿ ಶಂಖ ಮತ್ತು ಮುತ್ತುಗಳೂ, ಪಕ್ಕಗಳಲ್ಲಿ ಯಾಗಶಾಲೆಗಳೂ, ಸೇತುವೆಗಳಲ್ಲಿ ಕಲ್ಹಾರಪುಷ್ಪಗಳಿಂದ ಕೂಡಿದ ಜಲಪ್ರವಾಹಗಳೂ ವಿರಾಜಿಸುತ್ತಿರುವುವು. ॥೩-೪॥

ಆ ಘಟಗ್ರಾಮದಲ್ಲಿ ಧಾನ್ಯಗಳನ್ನು ಕಾಯುವುದಕ್ಕೋಸ್ಕರ ಗುಂಪಾಗಿ ಗದ್ದೆಗಳಲ್ಲಿ ಕುಳಿತಿರುವ ಗದ್ದೆ ಕಾಯುವ ಹೆಂಗಸರ ಸಂಗೀತವೂ, ಋಗ್ವೇದ, ಯಜುರ್ವೇದ, ಶಾಸ್ತ್ರ ಮತ್ತು ಸಾಮವೇದಗಳ ಘೋಷಗಳೂ ಆ ಊರಿಗೆ ಅಲಂಕಾರವನ್ನುಂಟುಮಾಡುತ್ತಿದ್ದವು. ಹಾಗೆ ಸಂಪದಭಿವೃದ್ಧಿ ಪಡೆದ ಘಟಗ್ರಾಮದಲ್ಲಿ ಕಲಾನಾಥನೆಂಬ ವೈಶ್ಯನು ಗಂಗಾಜೂಟನಾದ ಶಂಕರನ ಪಾದವನ್ನು ಸರ್ವದಾ ಪೂಜಿಸುವುದರಲ್ಲಿ ನಿರತನಾಗಿ ವಾಸಿಸುತ್ತಿದ್ದನು. ॥೫-೬॥

ಮೃಕಂಡುಮುನಿಕುಮಾರನಾದ ಮಾರ್ಕಂಡೇಯನು ಹಿಂದೆ ಯಮನ ಭಯದಿಂದ ತನ್ನನ್ನು ಬಿಗಿಯಾಗಿ ತಬ್ಬಿಕೊಳ್ಳಲು, ಆಗ ಆ ಭಕ್ತನನ್ನು ಉದ್ಧಾರ ಮಾಡುವುದಕ್ಕೋಸ್ಕರ ಮಹೇಶ್ವರನು ಯಮನನ್ನು ಅಂಗಾಲಿನಿಂದ ಒದೆದನು.

ತಂ ಗಂಗಾವೀಚಿವಾಚಾಲಕಿರೀಟಂ ಸ ಕಲಾಧಿಪಃ ।
ಆನರ್ಚ ಸೌರಭಜುಷಾ ನಿತ್ಯಂ ಗುಗ್ಗುಲುಧೂಪತಃ ॥೮॥

ದೇವೇಶದಯಯಾ ರಿಕ್ತೇ ಜಾತೇಽಪಿ ಸ ಕಲಾಧಿಪಃ ।
ಗುಗ್ಗುಲೂಚಯಧೂಪೇನ ನ ತತ್ಯಾಜ ಶಿವಾರ್ಚನಂ ॥೯॥

ಗೋಗೃಹಕ್ಷೇತ್ರದಾಸಾದಿ ವಿಕ್ರೀಯ ವಿಭವಂ ವಿಭೋಃ ।
ಕುರ್ವನ್ಗುಗ್ಗುಲುಧೂಪಾರ್ಚಾಂ ಸುತದಾರಶುಚಂ ವ್ಯಧಾತ್ ॥೧೦॥

ಉಪೋಷಿತೇಷು ಪುತ್ರಾದಿಷ್ವತಿರೇಕೇ ದಿನದ್ವಯೇ ।
ಯವಾನ್ಕ್ರೇತುಂ ದಧೌ ಭಾರ್ಯೋ ಪತ್ನ್ಯಾ ಮಾಂಗಲ್ಯಸೂತ್ರಕಂ ॥೧೧॥

ಸ ತದ್ಗೃಹೀತ್ವಾ ವಿಪಣೀಂ ಗಚ್ಛನ್ಗುಗ್ಗುಲುಪೂರ್ಣಯಾ ।
ನಾವಾ ಸಮಾಗತಂ ವೈಶ್ಯಂ ದೃಷ್ಟ್ವಾ ಹೃಷ್ಟತರೋಽಭವತ್ ॥೧೨॥

---

ಗಂಗಾಪ್ರವಾಹದಿಂದ ಶಬ್ದಾಯಮಾನವಾಗಿರುವ ಕಿರೀಟವುಳ್ಳ ಆಮಹೇಶ್ವರನನ್ನು ಆದೇ ಕ್ಷೇತ್ರದಲ್ಲಿ ಕಲಾನಾಥನೆಂಬ ವಿಪ್ರನು ನಿತ್ಯವೂ ಸುಗಂಧದ್ರವ್ಯಗಳಿಂದಲೂ ಗುಗ್ಗುಲು ಧೂಪದಿಂದಲೂ ಭಕ್ತಿಯಿಂದ ಪೂಜೆಮಾಡುತ್ತಿದ್ದನು. ||೭-೮||

ಆ ಮಹೇಶ್ವರನ ದಯೆಯಿಂದ (ಅವನಿಗೆ) ಬಡತನ ಬಂದಾಗ್ಯೂ ಆ ಕಲಾನಾಥನು ಗುಗ್ಗುಲುರಾಶಿಯೇ ಮುಂತಾದ ಸುಗಂಧದ್ರವ್ಯಗಳಿಂದ ಶಿವಪೂಜೆ ಮಾಡುವುದನ್ನು ಬಿಡಲೇ ಇಲ್ಲ. ಈ ಕಲಾನಾಥನು ಮನೆ, ಹಸು, ಗದ್ದೆ, ಸೇವಕರೇ ಮೊದಲಾದ ತನ್ನ (ವೈಭವ) ಐಶ್ವರ್ಯವನ್ನೆಲ್ಲಾ ಮಾರಿ, ಆ ಪ್ರಭುವಿಗೆ ಗುಗ್ಗುಲು ಧೂಪದಿಂದ ಪೂಜೆಯನ್ನು ಮಾಡುತ್ತಾ ತನ್ನ ಹೆಂಡತಿ ಮಕ್ಕಳಿಗೆ ಮಾತ್ರ ಆಹಾರ ಒದಗಿಸದೆ ಶೋಕವನ್ನುಂಟುಮಾಡಿದನು. ||೯-೧೦||

ಹೀಗೆ ಮಕ್ಕಳುಮರಿಗಳೆಲ್ಲರೂ ಎರಡು ದಿನ ಪೂರ್ತ ಉಪವಾಸಮಾಡು ತ್ತಿರಲು ಒಮ್ಮೆ ಆ ಶಿವಭಕ್ತನು ಅಕ್ಕಿಯನ್ನು ಕೊಂಡುಕೊಂಡು ಬರಲು ತನ್ನ ಹೆಂಡತಿಯ ಮಾಂಗಲ್ಯಸೂತ್ರವನ್ನು ತೆಗೆದುಕೊಂಡನು. ಅದನ್ನು ಹಿಡಿದುಕೊಂಡು ಅಂಗಡಿ ಬೀದಿಯಲ್ಲಿ ಹೋಗುತ್ತಾ ಗುಗ್ಗುಲದಿಂದ ತುಂಬಿದ ದೋಣಿಯೊಡನೆ ಆಗತಾನೇ ಬಂದಿರುವ ವೈಶ್ಯನನ್ನು ನೋಡಿ ತುಂಬಾ ಸಂತುಷ್ಟನಾದನು. ||೧೧-೧೨||

ಗಂಗಾಧರಸ್ಯ ಪೂಜಾರ್ಥಂ ಸುಗಂಧವರಗುಗ್ಗುಲಃ ।
ಲಬ್ಧೋ ನಾಸ್ಮಾತ್ಪರೋ ಲಾಭೋ ಕಿಂ ವ್ರೀಹಿಕ್ರಯಣೇನ ಮೇ ॥೧೩॥

ಇತಿ ನೃತ್ಯಕಲಾನಾಥಃ ಸ್ವರ್ಣಂ ದಾಸ್ಯಾಮಿ ಗುಗ್ಗುಲೇ ।
ದಿಶೇತ್ಯಾಹ ವಿಶಂ ವೈಶ್ಯಃ ಪ್ರಾಹ ತ್ವಂ ಕಿಂ ದದಾಸಿ ಮೇ ॥೧೪॥

ಮಾಂಗಲ್ಯಸೂತ್ರಂ ಸ್ವರ್ಣಾಢ್ಯಂ ದದಾಮೀತಿ ಕಲಾಧಿಪಃ ।
ತದ್ದತ್ವಾ ಗುಗ್ಗುಲಭರಂ ದತ್ವಾ ಪ್ರೀತಮನಾಯಯೌ ॥೧೫॥

ಪ್ರಾಪ್ಯ ವೀರೇಶ್ವರಸ್ಥಾನಂ ತತ್ರಾಸೌ ಗುಗ್ಗುಲೋಚ್ಚಯಂ ।
ಸ್ವಗೋತ್ರ ಭಕ್ತನಾಥಸ್ಯ ಅಸ್ಯ ಕೋಶಗೃಹೇ ಸ್ಥಿತಃ ॥೧೬॥

ಭಾರ್ಯಾಸುತಭಯಾದ್ವೈಶ್ಯೋ ಕಲಾನಾಥಧರಾರ್ಚಕಃ ।
ತದ್ಭಾರ್ಯಾ ತತ್ಸುತಾಶ್ಚೈವ ವಿಚಿನ್ವಂತಿ ಚ ಕಂ ತದಾ ॥೧೭॥

---

ಆ ಶಂಕರನ ಪೂಜೆಗೋಸ್ಕರ ಸುಗಂಧಭರಿತವಾದ ಗುಗ್ಗುಲವು ದೊರೆಯಿತು ; ಇದಕ್ಕಿಂತಲೂ ಹೆಚ್ಚಿನ ಲಾಭವಿನ್ನೇನು ! ಅಕ್ಕಿಯನ್ನು ಕೊಳ್ಳುವುದರಿಂದ ಈಗ ನನಗೇನು ಪ್ರಯೋಜನವೆಂದು ಭಾವಿಸಿ, ಆ ನಾಟ್ಯ ಕಲಾನಾಥನು, ಅಯ್ಯ ವೈಶ್ಯನೇ, ಚಿನ್ನವನ್ನು ಕೊಡುತ್ತೇನೆ. ಅದಕ್ಕೆ ಬದಲಾಗಿ ನೀನು ಗುಗ್ಗುಲವನ್ನು ಕೊಡೆಂದು ವರ್ತಕನಿಗೆ ಹೇಳಲು, ಆ ವೈಶ್ಯನು ಅದನ್ನು ಕೇಳಿ, ನೀನು ಎಂತಹ ಚಿನ್ನವನ್ನು ಕೊಡುತ್ತೀಯೆಂದು ಮತ್ತೆ ಕೇಳಿದನು. ॥೧೩-೧೪॥

ಆಗ ಆ ಕಲಾನಾಥನು ಚಿನ್ನದಿಂದ ರಚಿತವಾದ ಮಾಂಗಲ್ಯಸೂತ್ರವನ್ನು ಕೊಡುತ್ತೇನೆಂದು ಹೇಳಿ, ಅದರಂತೆ ಅದನ್ನು ಕೊಟ್ಟು ಗುಗ್ಗುಲದ ಉಂಡೆಯನ್ನು ತೆಗೆದುಕೊಂಡು ಸಂತೋಷ ಹೊಂದಿ ಉತ್ಸಾಹದಿಂದ ಹೊರಟನು. ಹಾಗೆ ಬರುತ್ತ ವೀರೇಶ್ವರಸ್ವಾಮಿಯ ದೇವಾಲಯಕ್ಕೆ ಹೋಗಿ ಅಲ್ಲಿ ಇವನು ತನ್ನ ವಂಶದ ಭಕ್ತರಿಗೆಲ್ಲಾ ಒಡೆಯನಾದ ಆ ಮಹಾದೇವನ ಗರ್ಭಾಂಕಣದಲ್ಲಿ ನಿಂತನು. ॥೧೫-೧೬॥

ಹೆಂಡತಿಮಕ್ಕಳ ಭಯದಿಂದ ಆ ಶಂಕರನ ಪೂಜಕನಾದ ವರ್ತಕನು ಮನೆಗೆ ಹೋಗದೇ ದೇವಾಲಯದಲ್ಲಿಯೇ ಅಡಗಿರಲು, ಅವನ ಹೆಂಡತಿ ಮಕ್ಕಳೆಲ್ಲರೂ ಇವನನ್ನು ಹುಡುಕಿಕೊಂಡು ಪೇಟೆಗೆ ಬಂದರು. ಬರುತ್ತಾ ಅಂಗಡಿ ಬೀದಿಯಲ್ಲಿ 'ಕಲಾಧರನಿಲ್ಲಿಗೆ ಬಂದಿದ್ದನೇ? ಈಗೆಲ್ಲಿ ಹೋದನೆಂದು ಕೇಳಲು ವರ್ತಕರ

ವಿಪಣಾಪಣವೀಥೀಷು ಕ್ವಾಸ್ತಿ ಚಾದ್ಯ ಕಲಾಧರಃ ।
ವೈಶ್ಯಪುತ್ರಾಶ್ಚ ತಾನಾಹುರ್ನಿರ್ಗತೋಽದ್ಯೈವ ಗುಗ್ಗುಲಂ ॥೧೮॥

ಗೃಹೀತ್ವಾಯಾತಿ ವೈಶ್ಯಾತೋ
ನ ಗೃಹೀತಾ ಯವಾಸ್ತದಾ ।
ಇತ್ಯುಕ್ತಂ ತದ್ವಚಃ ಶ್ರುತ್ವಾ
ಸಾ ಪುತ್ರೈಃ ಸಹ ಶುಚಾಕುಲಾ ॥೧೯॥

ತಮನ್ವಧಾವತ್ತ್ವರಿತಾ ಶೂನ್ಯಂ ತ್ಯಕ್ತ್ವಾ ಸುತೈರ್ಗೃಹಂ ।
ಇತ್ಥಂ ಸ್ಥಿತೇ ಮಹೇಶೇನ ಪ್ರೇರಿತೋ ಧನಪಃ ಸ್ವಯಂ ॥೨೦॥

ತದ್ಗೃಹಂ ಪೂರಯಾಮಾಸ ಧನಧಾನ್ಯಾಂಬರಾದಿಭಿಃ ।
ಸಾಪ್ಯನ್ವಿಷ್ಯ ಶುಚಾ ಪುತ್ರೈರ್ಗೃಹಂ ಪ್ರಾಪ್ಯ ಕ್ಷುಧಾತುರಾ ॥೨೧॥

ಸುಪ್ತಾಂಗಣೇ ತದಾ ಸ್ವಪ್ನೇ ವೃದ್ಧವಿಪ್ರಸ್ವರೂಪಧೃಕ್ ।
ಭಸ್ಮರುದ್ರಾಕ್ಷಸಂಪನ್ನೋ ತಾಮುವಾಚ ಮಹೇಶ್ವರಃ ॥೨೨॥

---

ಮಕ್ಕಳು, ಈಗ ಕೊಂಚ ಹೊತ್ತಿನಲ್ಲಿ ಇಲ್ಲಿಗೆ ಬಂದು ಗುಗ್ಗುಲವನ್ನು ಕೊಂಡು ಕೊಂಡು ಹೋದನು. ಅಕ್ಕಿಯನ್ನು ಮಾತ್ರ ಅವನು ತೆಗೆದುಕೊಳ್ಳಲಿಲ್ಲವೆಂದು ಹೇಳಿದರು. ॥೧೭-೧೮॥

ವರ್ತಕರ ಮಕ್ಕಳು ಹೀಗೆ ನುಡಿದುದನ್ನು ಕೇಳಿ ಆ ಕಲಾನಾಥನ ಹೆಂಡತಿಯು ಮಕ್ಕಳೊಡನೆ ದುಃಖಿತಳಾಗಿ, ಶೂನ್ಯವಾದ ಮನೆಯನ್ನು ಬಿಟ್ಟು ಅವನನ್ನು(ಪತಿಯನ್ನು) ಹುಡುಕಲು ಪೇಟೆಯನ್ನು ಅನುಸರಿಸಿ ನಡೆದಳು. ಹೀಗಿರಲು ಮಹೇಶ್ವರನಿಂದ ಪ್ರೇರಿತನಾದ ಕುಬೇರನು ತಾನೇ ಆ ಕಲಾನಾಥನ ಮನೆಗೆ ಬಂದು ಅವನ ಮನೆಯನ್ನು ಧನಧಾನ್ಯ ವಸ್ತ್ರವೇ ಮೊದಲಾದವುಗಳಿಂದ ತುಂಬಿದನು. ॥೧೯-೨೦॥

ಆಕೆಯೂ ಸಹ ಮಕ್ಕಳೊಡನೆ ಎಲ್ಲೆಲ್ಲಿಯೂ ಹುಡುಕಿ, ಪತಿಯನ್ನು ಕಾಣದೆ ದುಃಖದಿಂದ ಮನೆಗೆ ಬಂದು, ಹಸಿವಿನಿಂದ ಪೀಡಿತಳಾಗಿ ಅಂಗಳದಲ್ಲಿ ಮಲಗಿಕೊಂಡಳು. ಆಗ ಅವಳ ಕನಸಿನಲ್ಲಿ ಮುದಿಬ್ರಾಹ್ಮಣವೇಷಧಾರಿಯಾಗಿ ಮಹೇಶ್ವರನು ಭಸ್ಮರುದ್ರಾಕ್ಷಗಳನ್ನಲಂಕರಿಸಿಕೊಂಡು ಕಾಣಿಸುತ್ತಾ ಅವಳೊಡನೆ ಹೀಗೆ ನುಡಿದನು. ॥೨೧-೨೨॥

॥ ಮಹೇಶ್ವರ ಉವಾಚ ॥

ಮಾಪೀಡಯಾದ್ಯ ಭಕ್ತಂ ಮೇ ಕಲಾನಾಥಂ ಮದರ್ಚಕಂ ।
ಗುಗ್ಗುಲೂದ್ದಾಮಧೂಪೇನ ಪೂರಿತಂ ತೇನ ಮೇ ಗೃಹಂ ॥೨೩॥

ತವ ಸಂಪದಿಯಂ ಸರ್ವಾಂ ಪಶ್ಯೇತ್ಯಾಹ ಸುಲೋಚನಾಂ ।
ಇತ್ಯುಕ್ತಾ ಸಾ ತದೋತ್ಥಾಯ ಸಮಂತಾದ್ವೀಕ್ಷ್ಯ ಮಂದಿರಂ ॥೨೪॥

ಸ್ವರ್ಣರತ್ನಾದಿಭಿಃ ಪೂರ್ಣಂ ನತ್ವಾ ಶಿವಕೃಪೇತಿ ಸಾ ।
ಹರ್ಷಾಶ್ರುಪೂರ್ಣನಯನಾ ಸುತೈಃ ಸಹ ಮುದಾ ತದಾ ॥೨೫॥

ಪತ್ಯುರ್ಭೋಜ್ಯಾದಿಕಂ ಪಕ್ತುಂ ಪ್ರವೃತ್ತಾಽಭೂತ್ಪತಿವ್ರತಾ ।
ತಮಂತಶ್ಚ ಶಿವಾಗಾರೇ ಸುಪ್ತಂ ಭಾರ್ಯಾಭಿಯಾ ತದಾ ॥೨೬॥

ದತ್ವಾ ಗುಗ್ಗುಲುಧೂಪಂ ಚ ನತ್ವಾ ದೃಷ್ಟ್ವಂ ಭಯಾಕುಲಂ ।
ದೇವದೇವೋಽಪಿ ದಯಯಾ ಸ್ವಪ್ನೇ ಪ್ರಾಹ ಕಲಾಧಿಪಂ ॥೨೭॥

---

ಎಲೌ ಸ್ತ್ರೀಯೆ! ನನ್ನ ಪೂಜಕನೂ, ಭಕ್ತನೂ ಆದ ಕಲಾನಾಥನನ್ನು ಸುಮ್ಮನೆ ಪೀಡಿಸಬೇಡ; ಅವನಿಂದ ನನ್ನ ದೇವಾಲಯವೆಲ್ಲವೂ ಗುಗ್ಗುಲು ಧೂಪದ ದಿವ್ಯಪರಿಮಳದಿಂದ ತುಂಬಿಹೋಗಿದೆ. ಇಗೋ ಇವೆಲ್ಲವೂ ನಿನಗಾಗಿ ತಂದಿರುವ ಐಶ್ವರ್ಯಗಳು, ಇವನ್ನು ನೋಡು-ಎಂದು ಆ ಸುಲೋಚನೆಗೆ (ಸುಂದರವಾದ ಕಣ್ಣುಳ್ಳ ಕಲಾನಾಥನ ಹೆಂಡತಿಗೆ) ಎಚ್ಚರಿಸಿದನು. ॥೨೩॥

ಹೀಗೆ ಈಶ್ವರನಿಂದ ಹೇಳಲ್ಪಟ್ಟ ಕೂಡಲೇ ಅವಳು ಎಚ್ಚೆತ್ತು ಸುತ್ತಲೂ ಮನೆಯ ಒಳಗೆ ನೋಡಲು, ಮನೆಯು ಸುವರ್ಣ, ರತ್ನ ಮುಂತಾದವುಗಳಿಂದ ತುಂಬಿದ್ದುದು ಕಂಡುಬಂದಿತು. ಆಗ ಆ ಗೃಹಿಣಿಯು ಇವೆಲ್ಲವೂ ಶಿವನ ದಯೆಯಿಂದು ತಿಳಿದು ಶಿವನಿಗೆ ನಮಸ್ಕಾರಮಾಡಿ, ಆನಂದಬಾಷ್ಪಗಳಿಂದ ತುಂಬಿದ ಕಣ್ಣುಗಳುಳ್ಳವಳಾಗಿ ಮಕ್ಕಳೊಡನೆ ಸಂತೋಷಪಡುತ್ತಾ, ತನ್ನ ಪತಿಗಾಗಿ ಅಡಿಗೆಮಾಡಲು ನಿರತಳಾದಳು. ॥೨೪-೨೫॥

ಇತ್ತ ಹೆಂಡತಿಯ ಹೆದರಿಕೆಯಿಂದ ಶಿವದೇವಾಲಯದೊಳಗೇ ಅಡಗಿ ಮಹಾದೇವನಿಗೆ ಸಂತೋಷದಿಂದ ಗುಗ್ಗುಲು ಧೂಪವನ್ನು ಹಾಕಿ, ನಮಸ್ಕಾರಮಾಡಿ ಭಯಾಕುಲನಾಗಿ ಮಲಗಿರುವ ಆ ವೈಶ್ಯನನ್ನು ನೋಡಿ ದೇವಾದಿದೇವನಾದ ಮಹಾ

॥ ಮಹೇಶ್ವರ ಉವಾಚ ॥

ಕಲಾನಾಥ ಕ್ಷುಧಾರ್ತೋಽಸಿ ನಿಜಂ ಗತ್ವಾ ನಿಕೇತನಂ ।
ಅನ್ನಂ ಕ್ಷೀರಾದಿಸಂಪನ್ನಂ ಭವತಾ ಭುಜ್ಯತಾಮಿತಿ ॥೨೮॥

ತಚ್ಛ್ರುತ್ವಾಥ ಪ್ರಬುದ್ಧೋಽಸೌ ನತ್ವೇಶಂ ನಿರ್ಗತೋ ಗೃಹಂ ।
ಸ್ವರ್ಣರತ್ನಾದಿಸಂಪೂರ್ಣಂ ವೀಕ್ಷ್ಯ ವೇಶ್ಮ ವಿಶಿಸ್ಮಯೇ ॥೨೯॥

ಸಮಾಗತಂ ಕಲಾನಾಥಂ ಭಾರ್ಯಾ ಪ್ರತ್ಯುಜ್ಜಗಾಮ ತಂ ।
ಪುತ್ರಾಶ್ಚ ಹರ್ಷಿತಾಸ್ತತ್ರ ಪಿತರಂ ಪ್ರಯಯುರ್ಮುದಾ ॥೩೦॥

ಪ್ರಣಮ್ಯ ತಂ ಕಲಾನಾಥಮಾರಾರ್ತಿಕ್ಯೇನ ಸೇವಿತುಂ ।
ತದ್ಗೃಹಪ್ರಾಂತಸದನಾಮದನಾರಾತಿದಯೇತಿ ತೇ ॥೩೧॥

ಪ್ರಾಹ ಸ್ವಭಾರ್ಯಯಾ ಸಾರ್ಧಂ ಪುತ್ರೈಃ ಸೋಽಪಿ ಪ್ರಹರ್ಷಿತಃ ।
ಉವಾಚ ಭಾರ್ಯಾಂ ಹೃಷ್ಟಾಂ ತಾಂ ಕಲಾನಾಥೋಽತಿಹೃಷ್ಟಧೀಃ ॥೩೨॥

---

ದೇವನು ವಿಶೇಷ ದಯೆಯುಳ್ಳವನಾಗಿ ಕನಸಿನಲ್ಲಿ ಆ ಕಲಾನಾಥನಿಗಿಂತೆಂದನು. ॥೨೬-೨೭॥

ಓ ಕಲಾನಾಥನೇ! ಹಸಿವಿನಿಂದ ಬಳಲಿರುವೆ; ನಿನ್ನ ಸ್ವಂತಮನೆಗೆ ಹೋಗಿ ಹಾಲು ಮೊಸರುಗಳಿಂದ ಕೂಡಿದ ಅನ್ನವನ್ನು ನೀನು ಊಟಮಾಡೆಂದು ಶಿವನು ಸ್ವಪ್ನದಲ್ಲಿ ಹೇಳಿದಂತಾಗಲು, ಆ ಮಾತನ್ನು ಕೇಳಿ ಕಲಾನಾಥನು ಎಚ್ಚೆತ್ತು ಈಶ್ವರನಿಗೆ ನಮಸ್ಕಾರಮಾಡಿ ಸುವರ್ಣ, ರತ್ನಾದಿಗಳಿಂದ ಪರಿಪೂರ್ಣವಾದ ತನ್ನ ಮನೆಯನ್ನು ಕಂಡು ವಿಸ್ಮಯಗೊಂಡನು. ॥೨೮-೨೯॥

ಬರುತ್ತಿರುವ ಆ ಕಲಾನಾಥನನ್ನು ಆತನ ಹೆಂಡತಿಯು ಭಕ್ತಿಯಿಂದ ಎದುರುಗೊಂಡಳು; ಅವನ ಮಕ್ಕಳೂ ಸಂತುಷ್ಟರಾಗಿ ಪ್ರೀತಿಯಿಂದ ತಂದೆಯ ಸಮೀಪಕ್ಕೆ ಬಂದರು. ಆ ಕಲಾನಾಥನಿಗೆ ನಮಸ್ಕಾರಮಾಡಿ ಆರತಿಮಾಡುವುದಕ್ಕೋಸ್ಕರ ಅತ್ಯಂತ ಪ್ರೀತಿಯಿಂದ ಆತನ ಹೆಂಡತಿಯು ಪಕ್ಕದ ಮನೆಯವರಿಂದ, ಕೂಡಿ ಓ ಪ್ರಭುವೇ! ಇವೆಲ್ಲವೂ ಮನ್ಮಥರಿಪುವಾದ ಮಹೇಶನ ದಯೆಯು; ಎಂದು ಹೇಳಿದರು.॥೩೦-೩೧॥

ಆಗ ತನ್ನ ಹೆಂಡತಿಮಕ್ಕಳಿಂದ ಒಡಗೂಡಿ ಸಂತುಷ್ಟನಾದ ಆ ಕಲಾನಾಥನೂ, ಸಂತೋಷಗೊಂಡಿರುವ ತನ್ನ ಹೆಂಡತಿಯನ್ನು ಕುರಿತು ಶಿವಲೀಲೆಗಳನ್ನು ಸ್ಮರಿಸುತ್ತಾ ಸಂತೋಷದಿಂದ ಹೀಗೆಂದನು. ॥೩೨॥

॥ ಕಲಾನಾಥ ಉವಾಚ ॥

ಅತ್ರ ಚಿತ್ರಂ ಕಥಂ ಸಭ್ರು ನಿಃಸೀಮಾ ಶ್ರೀರಿಯಂ ವದ ।
ಗೋಮಹಿಷ್ಯಾದಿಸಂಪೂರ್ಣಂ ಧನಧಾನ್ಯಾಂಬರಾದಿಭಿಃ ॥೩೩॥

ಪ್ರಾಸಾದಕಕ್ಷ್ಯಾವಿತತಂ ಪ್ರಸಾದಃ ಕೋಽಸ್ಯ ವಾ ಮಮ ।
ಇತಿ ತದ್ವಚನಂ ಶ್ರುತ್ವಾ ಪತ್ಯುರ್ಭಾರ್ಯಾ ತಮಬ್ರವೀತ್ ॥೩೪॥

॥ ಭಾರ್ಯೋವಾಚ ॥

ಸ್ವಪ್ನೇ ಮಾಮಾಹ ವಿಪ್ರೇಂದ್ರೋ ತವಾದ್ಯ ಸದನಂ ಶುಭಂ ।
ಶ್ರಿಯಾ ಸಂಪೂರಿತಂ ಭದ್ರೇ ಗೃಹಾಣ ವಸುಪೂರಿತಂ ॥೩೫॥

ಇತ್ಯುಕ್ತ್ವಾ ನಿರ್ಜಗಾಮೈವ ತದಾದ್ರಾಕ್ಷಂ ಗೃಹಂ ಮಮ ।
ಧನಧಾನ್ಯಾದಿ ಸಂಪೂರ್ಣಂ ತೂರ್ಣಂ ಶಂಭೋಃ ಪ್ರಸಾದತಃ ॥೩೬॥

ಇತ್ಯುಕ್ತಾ ಸಾ ತದಾ ವೈಶ್ಯಾ ವೈಶ್ಯೇನಾಭೂತ್ಸುವಿಸ್ಮಿತಾ ।
ಅನ್ನೈಃ ಷಡ್ರಸಸಂಪೂರ್ಣೈರ್ಭೋಜಯಾಮಾಸ ಬಾಂಧವಾನ್ ॥೩೭॥

---

ಎಲೌ ಶೋಭನವಾದ ಹುಬ್ಬುಳ್ಳವಳೇ! ಇದೇನಾಶ್ಚರ್ಯವು! ಎಲ್ಲೆಯಿಲ್ಲದ ಈ ಸಂಪತ್ತೆಲ್ಲಿಯದು ಹೇಳು? ಹಸು, ಎಮ್ಮೆ ಮುಂತಾದ ಪ್ರಾಣಿಗಳಿಂದಲೂ ಧನ, ಧಾನ್ಯ, ವಸ್ತ್ರಾದಿಗಳಿಂದಲೂ ಪೂರ್ಣವಾದ ಉಪ್ಪರಿಗೆಗಳ ಸಾಲುಗಳಿಂದಲೂ ಶೋಭಿಸುತ್ತಿರುವ ಈ ಮಹಡಿಮನೆಯು ನನಗೆ ಹೇಗೆ ಬಂದಿತೆಂದು ಕಲಾನಾಥನು ಹೆಂಡತಿಯನ್ನು ಕೇಳಲು, ಆಕೆಯು ಪತಿವಚನವನ್ನು ಕೇಳಿ, ॥೩೩-೩೪॥

ಸ್ವಾಮಿ! ಕನಸಿನಲ್ಲಿ ಒಬ್ಬ ಬ್ರಾಹ್ಮಣೋತ್ತಮನು ಗೋಚರನಾಗಿ ನನಗೆ ಇಂತೆಂದನು, ಎಲೌ! ಈಗ ಈ ನಿನ್ನ ಶುಭಕರವಾದ ಮನೆಯು ಧನಧಾನ್ಯಾದಿ ಸಂಪತ್ತುಗಳಿಂದ ಪೂರ್ಣವಾಗಿದೆ, ತೆಗೆದುಕೋ ಎಂದು ಹೇಳಿ ಹೊರಟುಹೋದನು. ಆಗ ನಾನು ಎದ್ದು, ಅಷ್ಟು ಜಾಗ್ರತೆಯಾಗಿ ಆ ಶಂಭುವಿನ ಅನುಗ್ರಹದಿಂದ ಧನಧಾನ್ಯಾದಿಸಂಪತ್ತುಗಳಿಂದ ತುಂಬಿರುವ ಈ ನನ್ನ ಮನೆಯನ್ನು ಕಂಡೆನು, ಎಂದು ಹೆಂಡತಿಯು ಕಲಾನಾಥನಿಗೆ ಹೇಳಿದಳು. ॥೩೫-೩೬॥

ಹೀಗೆ ಅವಳು ತನ್ನ ಗಂಡನಿಗೆ ಹೇಳುತ್ತಾ, ಆ ವೈಶ್ಯನ ಜೊತೆಯಲ್ಲಿ ತಾನೂ ತುಂಬಾ ವಿಸ್ಮಯಗೊಂಡಳು. ಆಗ ಮಧುರಾಮ್ಲಲವಣ ಕಟುಕಷಾಯತಿಕ್ತಗಳೆಂಬ

ಬ್ರಾಹ್ಮಣಾಂಛಿವಭಕ್ತಾಂಶ್ಚ ಭೋಜಯಾಮಾಸ ಹರ್ಷಿತಃ ।
ಲಬ್ಧ್ವಾ ಶ್ರಿಯಂ ಕೃಪಾಶೇಷೈರ್ವಿಭೋರ್ಭಿಕ್ಷಾಟನಸ್ಯ ಸಃ ॥೩೮॥

ಅನ್ನೈರಾರಾಧಯನ್ಭಕ್ತಾನನ್ವಹಂ ರಸಶಾಲಿಭಿಃ ।
ತಚ್ಛ್ರುತ್ವೋದಂತಮಧುನಾ ಚೋಲೇಂದ್ರೋ ವಿಸ್ಮಿತೋಽಭವತ್ ॥೩೯॥

ತಂ ವೈಶ್ಯಂ ಪೂಜಯಾಮಾಸ ಧೂಪದಂ ಶಂಕರಾಲಯೇ ।
ಸೋಽಪಿ ಗುಗ್ಗುಲುಧೂಪೇನಾಧಿಕಂ ಸೋಽಪ್ಯಧೂಪಯತ್ ॥೪೦॥

ತೇನ ಭಕ್ತೇನ ಚೋಲೇಂದ್ರೋ ಶ್ರೀತಾಲವಿಪಿನಂ ಯಯೌ ।
ತತ್ರ ಕಾಲವನಾಧೀಶೋ ನೀಲಗ್ರೀವೋಽಪಿ ಶಂಕರಃ ॥೪೧॥

ವಕ್ರಿತಗ್ರೀವಮಾಲೋಕ್ಯ ಸಮೀಕರ್ತುಂ ನೃಪೋಽಭವತ್ ।
ಪತ್ತಿಭಿರ್ವಾಜಿಭಿಃ ಪಾಶೈರ್ಗಜಶುಂಡಾಬಲೋದ್ಧತೈಃ ॥೪೨॥

---

ಆರು ರಸಗಳಿಂದ ಸಂಪೂರ್ಣವಾಗಿರುವ ಪಾಕಗಳಿಂದ ನೆಂಟರಿಷ್ಟರನ್ನೆಲ್ಲಾ ಸಂತೋಷಪಡಿಸಿ, ಶಿವಭಕ್ತರಾದ ಬ್ರಾಹ್ಮಣರಿಗೂ ಸಂತುಷ್ಟನಾಗಿ ಭೋಜನಮಾಡಿಸಿದನು. ಭಿಕ್ಷಾಟನೆಮಾಡುವ ಪ್ರಭುವಾದ ಆ ಮಹಾದೇವನ ಲೇಶಮಾತ್ರ ದಯೆಯಿಂದ ಅಪಾರವಾದ ಐಶ್ವರ್ಯವನ್ನು ಪಡೆದು ಅವನು ಭಕ್ತವೃಂದವನ್ನು ಪ್ರತಿನಿತ್ಯವೂ ರಸಭರಿತವಾದ ಊಟ ಉಪಚಾರಗಳಿಂದ ಸೇವಿಸುತ್ತಿದ್ದನು. ಈ ಕಲಾನಾಥನ ವೃತ್ತಾಂತವನ್ನು ಕೇಳಿದ ಆ ಚೋಲದೇಶದ ರಾಜನೂ ಆಶ್ಚರ್ಯಹೊಂದಿದನು. ॥೩೭-೩೮-೩೯॥

ಒಂದುದಿನ ಚೋಲರಾಜನು ಶಿವದೇವಾಲಯದಲ್ಲಿ ಶಂಕರನಿಗೆ ಧೂಪವನ್ನು ಹಾಕಿದ ಆ ಕಲಾನಾಥನೆಂಬ ವೈಶ್ಯನನ್ನು ಪೂಜೆಮಾಡಿದನು. ಆ ರಾಜನೂ ಗುಗ್ಗುಲುವಿನ ಧೂಪದಿಂದ ಮಹಾದೇವನಿಗೆ ಭಕ್ತಿಯಿಂದ ಧೂಪಹಾಕಿದನು. ಒಂದು ದಿನ ಆ ಚೋಲರಾಜನು ಅಂತಹ ಭಕ್ತನೊಡನೆ ಸೇರಿ ಶ್ರೀತಾಲಾರಣ್ಯಕ್ಕೆ ಹೋದನು. ಅಲ್ಲಿ ತಾಲವನಾಧಿಪನಾದ ಶಂಕರನು ವಿಷಭಕ್ಷಣದಿಂದ ನೀಲವರ್ಣವಾದ ಕತ್ತುಳ್ಳವನಾದರೂ ಕುತ್ತಿಗೆಯು ಚೊಟ್ಟಾಗಿರುವುದನ್ನು ನೋಡಿ ಆ ರಾಜನು ಅದನ್ನು ಸರಿಮಾಡಲು ಮನಸ್ಸು ಮಾಡಿದನು. ॥೪೦-೪೧॥

ಆಗ ಅವನು, ಕಾಲಾಳು, ಮತ್ತು ಕುದುರೆ ಸೈನ್ಯಗಳಿಂದಲೂ, ಕೊಬ್ಬಿದ ಆನೆ ಸೊಂಡಲಿನಿಂದಲೂ ದೇವೇಶ್ವರನಿಗೆ ಹಗ್ಗವನ್ನು ಕಟ್ಟಿ ಜೋರಾಗಿ ಎಳೆಸಿ

ಪಾಶೈರುದ್ಬಧ್ಯ ದೇವೇಶಂ ಚಕರ್ಷಾತಿಬಲೇನ ಸಃ ।
ಸ ತದುನ್ನಮಯಾಶಕ್ತೇಃ ಭಕ್ತೇನ ಸ ನೃಪೋ ಯಯೌ ॥೪೩॥

ಸ್ವಯಂ ದರ್ಶಯಿತುಂ ದೇವಮೃಜುಂ ನಿರಗಮದ್ಗೃಹಾತ್ ।
ಮಾರ್ಗೇ ಮಹೇಶ್ವರಂ ನತ್ವಾ ತೇಷು ತೇಷು ಚ ಧಾಮಸು ॥೪೪॥

ಪ್ರಾಪ ಯಜ್ವದ್ವಿಜಾವಾಸಂ ಶ್ರೀತಾಲವಿಪಿನಂ ಯಯೌ ।
ದೃಷ್ಟ್ವಾ ನೃಪಸ್ಯ ತತ್ಕರ್ಮ ತದ್ಬಲಂ ಚ ಕೃತಶ್ರಮಂ ॥೪೫॥

ಕಥಂ ನೃಪಃ ಕೃತಾರ್ಥಃ ಸ್ಯಾದಿತಿ ಭಕ್ತೋ ವ್ಯಚಿಂತಯತ್ ।
ಸಾರ್ಧಂ ನೃಪಬಲೇನೈವ ಯತಿಷ್ಯೇ ಸ್ವಯಮಿತ್ಯಸೌ ॥೪೬॥

ದೇವೋತ್ತಮಾಂಗಸಂಬಂಧ ಕಂಠರಜ್ಜುಶ್ಚಕರ್ಷ ತಂ ।
ಕರವಾಲಂ ಗಲೇ ಬಿಭ್ರನ್ ವ್ಯಶ್ಯೋಽಕರ್ಷಂ ನೃಪಾಗ್ರತಃ ॥೪೭॥

---

ದನು. ಆದರೂ ಆ ಕೊರಳನ್ನು ಮೇಲಕ್ಕೆತ್ತಿ ಸರಿಮಾಡಲು ಸಾಧ್ಯವಾಗದೇ ಕೊನೆಗೆ ಈ ಭಕ್ತನಾದ ಕಲಾನಾಥನೊಡನೆ ಸಮೀಪಕ್ಕೆ ಹೋಗಲು ಇಚ್ಛಿಸಿದನು. ॥೪೨-೪೩॥

ಆಗ ಆ ಕಲಾನಾಥನು ತಾನು ಮಹಾದೇವನ ಕತ್ತನ್ನು ಸರಿಮಾಡುತ್ತೇನೆಂದು ಮನಸ್ಸುಮಾಡಿ ಮನೆಯಿಂದ ಹೊರಟು ಮಧ್ಯದ ದಾರಿಯಲ್ಲಿ ಸಿಗುವ ಶಿವಸ್ಥಾನಗಳಲ್ಲೆಲ್ಲಾ ಮಹೇಶ್ವರನಿಗೆ ನಮಸ್ಕಾರಮಾಡಿ, ಅನಂತರ ಯಾಗ ಶೀಲರಾದ ಬ್ರಾಹ್ಮಣರಿಗೆ ಆವಾಸಭೂಮಿಯಾಗಿರುವ ಶ್ರೀತಾಲವನಕ್ಕೆ ಬಂದನು. ಅಲ್ಲಿ ರಾಜನ ಆ ಕೆಲಸವನ್ನೂ, ಆವನ ಸೈನ್ಯವು ಇದಕ್ಕಾಗಿ ಪ್ರಯತ್ನಪಟ್ಟು ಬಳಲಿರುವುದನ್ನೂ ಕಂಡು, ಈ ರಾಜನು ಯಾವರೀತಿಯಲ್ಲಿ ಕೃತಕೃತ್ಯನಾಗುವನೋ ಎಂಬುದಾಗಿ ಆ ಕಲಾನಾಥನು ಯೋಚಿಸಿದನು. ॥೪೪-೪೫॥

ನಾನೂ ಈ ರಾಜನ ಸೈನ್ಯದೊಡನೆಯೇ ಪ್ರಯತ್ನಿಸುತ್ತೇನೆಂದು ಆ ಕಲಾನಾಥನು ತನ್ನ ಕತ್ತಿಗೆ ಕತ್ತಿಯನ್ನು ಕಟ್ಟಿಕೊಂಡು, ಮಹಾದೇವನ ಕೊರಳಿಗೆ ಹಾಕಿದ್ದ ಹಗ್ಗವನ್ನು ಹಿಡಿದು, ತಾನೂ ರಾಜನೂ ಮುಂದೆ ನಿಂತು ಅದನ್ನು ಎಳೆಯು ತೊಡಗಿದರು. ॥೪೬-೪೭॥

॥ ವೈಶ್ಯ ಉವಾಚ ॥

ಪಾಹೀಶೇಂದುಕಲಾಲಲಾಮ ಭಗವಂಛ್ರೀಕಂಠಕಂಠೀರವೋ-
ದ್ಯದ್ದೃಚ್ಚರ್ಮಧರಾವ್ಯಯೇಶ ಭಗವನ್ಮಾಂ ಪಾಹಿ ಸರ್ವೇಶ್ವರ ।
ಬ್ರಹ್ಮಾದ್ಯಚ್ಯುತವಂದ್ಯಪಾದಸುಮಹಾನಾಗಾಂಗಗೌರೀಮುಖ-
ಉತ್ಫುಲ್ಲಾಬ್ಜವಿಕಾಸನಾರ್ಕಭಗವನ್ತ್ರ್ಯಕ್ಷಾಧುನಾ ಪಾಹಿ ಮಾಂ॥೪೮॥

ಭಕ್ತಿರೂಪೇಣ ಪಾಶೇನ ಏವಂ ಕರ್ಷತಿ ಶಂಕರೇ ।
ಕಂಠಕರ್ತನಜಂ ದುಃಖಂ ನ ಸಸ್ಮಾರ ಸ್ಮರದ್ರುಹಿ ॥೪೯॥

ಭಕ್ತಿಮಾಧತ್ತ ವೈಶ್ಯೋಽಸೌ ಋಜುರ್ಜಾತೋ ಮಹೇಶ್ವರಃ ।
ವವೃಷುಃ ಕುಸುಮಂ ದೇವಾಸ್ತತ್ರ ವೈಶ್ಯನೃಪೋಪರಿ ॥೫೦॥

---

ಚಂದ್ರಕಲೆಯನ್ನು ಹಣೆಯಲ್ಲಿ ಧರಿಸಿರುವ ಈಶ್ವರನೇ, ವಿಷಕಂಠಸ್ವಾಮಿಯಾದ ಭಗವಂತನೇ, ನನ್ನನ್ನು ಕಾಪಾಡು; ಸಿಂಹಚರ್ಮವನ್ನು ಧರಿಸಿ, ನಾಶರಹಿತನೂ, ಸಕಲ ಚರಾಚರಾತ್ಮಕವಾದ ಪ್ರಪಂಚಗಳಿಗೂ ಒಡೆಯನಾದ ಭಗವಂತನೇ, ನನ್ನನ್ನು ಕಾಪಾಡು; ಬ್ರಹ್ಮ, ವಿಷ್ಣು ಮುಂತಾದ ದೇವತೆಗಳಿಂದ ನಮಸ್ಕರಿಸಲ್ಪಡುವ ಪಾದವುಳ್ಳವನೇ, ದೊಡ್ಡ ಸರ್ಪರಾಜನಾದ ಆದಿಶೇಷನನ್ನೇ ಅಂಗಭೂಷಣವನ್ನಾಗಿ ಮಾಡಿಕೊಂಡಿರುವ ಸ್ವಾಮಿಯೇ, ಪಾರ್ವತಿಯ ಮುಖಕಮಲವನ್ನು ಚೆನ್ನಾಗಿ ಅರಳಿಸಿ ಸಂತೋಷಗೊಳಿಸುವುದರಲ್ಲಿ ಸೂರ್ಯನಂತಿರುವ ಭಗವಂತನೇ, ಮುಕ್ಕಣ್ಣನಾದ ಮಹೇಶ್ವರನೇ, ಈಗ ನನ್ನನ್ನು ರಕ್ಷಿಸೆಂದು ಕಲಾನಾಥನು ಮಹಾದೇವನನ್ನು ಸ್ತೋತ್ರಮಾಡಿದನು. ॥೪೮॥

ಹೀಗೆ ಕಲಾನಾಥನು ಭಕ್ತಿರೂಪವಾದ ಹಗ್ಗದಿಂದ ಶಂಕರನನ್ನು ಎಳೆಯುತ್ತಿರಲು, ಮನ್ಮಥಾಂತಕನಾದ ಶಿವನ ವಿಷಯವಾಗಿ ಸ್ತೋತ್ರಮಾಡುವಾಗ ಕೊರಳಿಗೆ ಕತ್ತಿ ಕಟ್ಟಿಕೊಂಡು ಎಳೆಯುತ್ತಿದ್ದುದರಿಂದ, ತನ್ನ ಕತ್ತು ಕುಯ್ದುಹೋಗುತ್ತದಲ್ಲಾ ಎಂಬ ದುಃಖದ ಸ್ಮರಣೆಯೂ ಆ ಭಕ್ತನಿಗೆ ಉಂಟಾಗಲಿಲ್ಲ. ಅಂತಹ ನಿಜವಾದ ಭಕ್ತಿಯನ್ನು ವೈಶ್ಯನು ತಾಳಿದನು. ಇದರಿಂದ ಮಹೇಶ್ವರನ ಕೊರಳು ನೆಟ್ಟಗಾಗಿ ಸರಿಯಾಯಿತು. ಆಗ ದೇವತೆಗಳು ಕೂಡಲೇ ಕಲಾನಾಥ ಮತ್ತು ಚೋಳರಾಜರ ಮೇಲೆ ಹೂಮಳೆಗರೆದರು. ॥೪೯-೫೦॥

ತತೋ ನೃಪಃ ಕಲಾನಾಥಪಾದಯೋಃ ಪ್ರಣನಾಮ ಸಃ ।
ವನಸ್ಥಲೀವ ತತ್ಸೇನಾವರ್ಷೇಣೋಲ್ಲಾಸಿತಾಽಭವತ್ ॥೫೧॥

ತ್ರಿಪುರಂ ದಗ್ಧುಕಾಮಸ್ಯ ಸ್ಥಿತಸ್ಯ ಪೃಥಿವೀರಥೇ ।
ಮೌರ್ವೀನೀತಿವತಃ ಶಂಭೋರ್ನಾಗಂ ಕಾರ್ಮುಕಮದ್ರಿರಾಟ್ ॥೫೨॥

ಸ್ಥಿತಂ ಸ್ಥಾಣುಮಿವಾಶಕ್ಯೈಃ ಸ್ಥಾಣುಂ ವೈ ಭಕ್ತಿನಿರ್ಭರಃ ।
ಬ್ರಹ್ಮಣಾ ಮೃಗ್ಯಮೌಳಿಂ ತಮೃಜುಂ ಚಕ್ರೇ ನೃಪಾಗ್ರತಃ ॥೫೩॥

ಭಕ್ತಾದೃತೇ ಕೇನ ಶಕ್ಯೋ ಮಹೇಶೋ ಭಕ್ತಿಭಾವಿತಃ ।
ನೃಪಃ ಪುರಮಗಾದ್ಭಕ್ತಃ ಸ ವೈಶ್ಯೋಽಪಿ ಸ್ಥಿತಸ್ತದಾ . ॥೫೪॥

ತತ್ರ ತಾಲವನಾಧೀಶಂ ಗುಗ್ಗುಲೂದ್ಧಾಮಧೂಪತಃ ।
ಧೂಪಯಂಶ್ರೀಮಹಾದೇವಂ ತತ್ರೋವಾಸ ಪ್ರಹೃಷ್ಟಧೀಃ ॥೫೫॥

ಪ್ರವಿಶ್ಯ ವೇಶ್ಮ ಸ್ವಂಸ್ರಾಜ್ಯಮಾಚ್ಯಾನ್ಯೈರ್ಭಕ್ತಪೂಜಕೈಃ ।
ಸ ದೇಹಾಂತೇ ಶಿವಂ ಪ್ರಾಪ ಭಾರ್ಯಾಪುತ್ರಸಮನ್ವಿತಃ ॥೫೬॥

---

ಆಮೇಲೆ ಚೋಲರಾಜನು ಕಲಾನಾಥನ ಕಾಲುಗಳಿಗೆ ನಮಸ್ಕಾರ ಮಾಡಿದನು. ಮರುಭೂಮಿಯಲ್ಲಿ ಮಳೆಗರೆದಂತೆ ಆ ರಾಜನ ಸೈನ್ಯವೆಲ್ಲವೂ ಉಲ್ಲಾಸಗೊಂಡಿತು. ಹಿಂದೆ ತ್ರಿಪುರರನ್ನು ಸುಡಲಿಚ್ಛೆಯುಳ್ಳವನಾಗಿ ನೀತಿವಂತನಾದ ಶಂಭುವು ಭೂಮಿಯೆಂಬ ರಥದಲ್ಲಿ ನಿಂತು, ಆದಿಶೇಷನನ್ನು ಹೆದೆಯನ್ನಾಗಿಯೂ ಮೇರುಪರ್ವತವನ್ನೇ ಬಿಲ್ಲನ್ನಾಗಿಯೂ ಮಾಡಿಕೊಂಡಿದ್ದನು. ॥೫೧-೫೨॥

ಯಾರಿಂದಲೂ ಚಲಿಸಲಸಾಧ್ಯನಾಗಿ ಶಾಶ್ವತನಾಗಿ ನೆಲಸಿರುವ ಸ್ಥಾಣುವೆನಿಸಿ, ಬ್ರಹ್ಮನಿಂದಲೂ ಹುಡುಕಲಸಾಧ್ಯವಾದ ಕಿರೀಟದ ಮಹಿಮೆಯುಳ್ಳ ಆ ಶಂಕರನ ಶಿರಸ್ಸನ್ನು ಭಕ್ತಿರಸಭರಿತನಾದ ಈ ಕಲಾನಾಥನು ರಾಜನ ಮುಂದೆ ನೆಟ್ಟಗೆ ಮಾಡಿದನು. ಈ ಕೆಲಸವು ಭಕ್ತನಿಂದಲ್ಲದೇ ಮತ್ತಾರಿಂದ ಸಾಧ್ಯವಾದೀತು? ಆ ಚೋಲ ರಾಜನೂ ಭಕ್ತಿಪೂರ್ಣನಾಗಿ ಶಿವಧ್ಯಾನಮಾಡುತ್ತಾ ತನ್ನ ಪಟ್ಟಣಕ್ಕೆ ಹೋದನು. ಇತ್ತ ಈ ಕಲಾನಾಥನು ಆಗ ಅಲ್ಲಿಯೇ ನಿಂತನು. ॥೫೩-೫೪॥

ಆಗ ಕಲಾನಾಥನು ತಾಲವನಾಧಿಪತಿಯಾದ ಶ್ರೀಮಹಾದೇವನನ್ನು ಶ್ರೇಷ್ಠವಾದ ಗುಗ್ಗುಲುವಿನ ಧೂಪದಿಂದ ಸೇವಿಸುತ್ತಾ ಸಂತುಷ್ಟಾಂತರಂಗನಾಗಿ

॥ ಸೂತ ಉವಾಚ ॥

ಕಲಾಧಿನಾಥಃ ಸ ಘಟೇಶಸನ್ನಿಧೌ
ಸ್ಥಿತ್ವಾ ಪ್ರಯಾತೋ ರಜತಾದ್ರಿಮೌಳಿಂ ।
ಸ ಗುಗ್ಗುಲೂದ್ದಾಮ ಸುಧೂಪಸೌರಭ್ಯೈಃ
ಸುಧೂಪಯಿತ್ವಾ ಭವದೀಶಸನ್ಮುಖಃ ॥೫೭॥

ಚೋಲೇಶ್ವರೋಽಪೀಶಕೃಪಾಭರೇಣ
ಪ್ರಾಜ್ಯಂ ಸ ರಾಜ್ಯಂ ಪ್ರಶಶಾಸ ಭೂಮೌ ।
ದೇಹಾಂತಿಮೇಽಭೂಚ್ಛಿವಧಾಮಕಿಂಕರಃ
ಸದೈವ ಕೈಂಕರ್ಯರತಃ ಸ ಶಾಂಕರಃ ॥೫೮॥

ಇತಿ ಶ್ರೀಶಿವರಹಸ್ಯೇ ಸದಾಶಿವಾಖ್ಯೇ ನವಮಾಂಶೇ
ಕಲಾನಾಥಚೋಲೇಂದ್ರಚರಿತ್ರವರ್ಣನೇ ಷಟ್ತ್ರಿಂಶೋಽಧ್ಯಾಯಃ

---

ಕೆಲವು ದಿವಸ ಅಲ್ಲಿಯೇ ವಾಸಮಾಡಿಕೊಂಡಿದ್ದನು. ಆಮೇಲೆ ತನ್ನ ಮನೆಗೆ ಹೋಗಿ ಶಿವಭಕ್ತರನ್ನು ಉತ್ತಮವಾದ ತುಪ್ಪ, ಅನ್ನ ಮುಂತಾದವುಗಳಿಂದ ಉಪಚರಿಸುತ್ತಾ, ಕೊನೆಗೆ ಈ ಶರೀರ ನಾಶವಾದಮೇಲೆ ತನ್ನ ಹೆಂಡತಿಮಕ್ಕಳೊಡನೆ ಆ ಪರಶಿವನ ಸ್ಥಾನವನ್ನೇ ಹೊಂದಿದನು. ॥೫೫-೫೬॥

ಆ ಕಲಾನಾಥನು ಶ್ರೀ ಘಟೇಶ್ವರನ ಸನ್ನಿಧಿಯಲ್ಲಿ ಗುಗ್ಗುಲುವಿನಿಂದ ವಿಶೇಷವಾಗಿ ಧೂಪಹಾಕಿ ದಿವ್ಯ ಧೂಪಪರಿಮಳದಿಂದ ಈಶ್ವರನನ್ನು ಸಂತೋಷಪಡಿಸಿ ಈಶ್ವರನ ಕೃಪಾಪಾತ್ರನಾಗಿ ಕೊನೆಗೆ ರಜತಾಚಲ ಶಿಖರವಾದ ಕೈಲಾಸಪರ್ವತಕ್ಕೆ ಹೋದನು, ಎಂದು ಸೂತರು ವಾಜಶ್ರವಸಾದಿಗಳಿಗೆ ಹೇಳಿದರು. ॥೫೭॥

ಇತ್ತ ಚೋಲರಾಜನೂ ಸಹ ಈಶ್ವರನ ದಯೆಯಿಂದ ತನ್ನ ದೊಡ್ಡ ರಾಜ್ಯವನ್ನು ಧರ್ಮದಿಂದ ಆಳುತ್ತಾ ಯಾವಾಗಲೂ ಶಿವಸೇವಾನಿರತನಾಗಿ ಕೊನೆಗೆ ದೇಹಾವಸಾನದಲ್ಲಿ ಆ ರಾಜಶ್ರೇಷ್ಠನು ಶಿವನ ಕೈಲಾಸವನ್ನು ಪಡೆದನು ಎಂದು ಕುಮಾರಸ್ವಾಮಿಯು ಜೈಗೀಷವ್ಯನಿಗೆ ಹೇಳಿದನು. ॥೫೮॥

ಇಲ್ಲಿಗೆ ಶ್ರೀಶಿವರಹಸ್ಯದಲ್ಲಿ ಸದಾಶಿವಸಂಜ್ಞಕವಾದ ಒಂಬತ್ತನೆಯ ಅಂಶದಲ್ಲಿ
ಕಲಾನಾಥ ಮತ್ತು ಚೋಲರಾಜರ ಚರಿತ್ರೆಯ ವರ್ಣನೆಯೆಂಬ
ಮೂವತ್ತಾರನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀ ಶಿವರಹಸ್ಯೇ

## ಸದಾಶಿವಾಖ್ಯೇ

## ನವಮಾಂಶೇ

## ಸಪ್ತತ್ರಿಂಶೋಽಧ್ಯಾಯಃ

॥ ಶ್ರೀಸ್ಕಂದ ಉವಾಚ ॥

ಆಸ್ಪದಂ ಸಂಪದಾಮಸ್ತಿ ಶ್ರೀಮತ್ಕಂಜನದೀಪುರಂ ।
ಸ್ವರ್ಗಂಗಾಮೌಳಿಸಾನ್ನಿಧ್ಯಂ ಸಾಂಗವೇದವಿದಾಶ್ರಿತಂ ॥೧॥

ಹಲಾಜೀವವಧೂಲೂನಶೇಷಕಲ್ಹಾರಸೌರಭಂ ।
ಆಘ್ರಾತುಮಿವ ನಮ್ರಾಗ್ರಾ ಯತ್ರ ಪಾಕೇನ ಶಾಲಯಃ ॥೨॥

ಯತ್ರ ಶೂದ್ರಕುಲೋದ್ಭೂತಾ ಗೃಹಸ್ಥಾಶ್ರಮಧರ್ಮಿಣಃ ।
ನಾರೀನೃತ್ತಾನಕಸ್ವಾನೈರ್ವಿಲೀಢ್ಯಾಂ ಚ ಮುಖರಾಂತರಾಃ ॥೩॥

---

## ಮೂವತ್ತೇಳನೆಯ ಅಧ್ಯಾಯ

ಅಯ್ಯ ಜೈಗೀಷವ್ಯನೇ! ಸಕಲೈಶ್ವರ್ಯಗಳಿಗೂ ಆಶ್ರಯವಾಗಿ ದೇವಗಂಗಾ ನದಿಯನ್ನು ತಲೆಯಲ್ಲಿ ಧರಿಸಿರುವ ಶಂಕರನ ಸಾನ್ನಿಧ್ಯವನ್ನು ಪಡೆದು ಸಾಂಗವಾಗಿ (ಶಿಕ್ಷಾ, ವ್ಯಾಕರಣ, ಛಂದಸ್ಸು, ನಿರುಕ್ತ, ಜ್ಯೋತಿಷ ಮತ್ತುಕಲ್ಪಗಳೊಡನೆ) ಋಗ್ಯಜುಸ್ಸಾಮಾಥರ್ವಣಗಳೆಂಬ ವೇದವನ್ನಭ್ಯಾಸಮಾಡಿರುವ ಬ್ರಾಹ್ಮಣರಿಂದ ಆಶ್ರಯ ಪಡೆದಿರುವ ಕಂಜನದೀಪುರವೆಂಬುದು ಪ್ರಕೃತಿಸೌಂದರ್ಯದಿಂದ ಬೆಳಗುತ್ತಿದ್ದಿತು. ಆ ಊರಿನಲ್ಲಿ ರೈತರ ಹೆಂಗಸರು ಕುಯ್ದು ಉಳಿದಿರುವ ಕಲ್ಹಾರಪುಷ್ಪಗಳ ಸೌರಭವನ್ನು ಆಘ್ರಾಣಿಸುವುದಕ್ಕೋ ಏನೋ ಎಂಬಂತೆ ಪಕ್ವವಾದ ಬತ್ತತತೆನೆಗಳು ತಲೆಬಾಗಿರುವುವು. ॥೧-೨॥

ಅದೇ ಊರಿನಲ್ಲಿ ಗೃಹಸ್ಥಾಶ್ರಮಧರ್ಮವನ್ನಾಶ್ರಯಿಸಿದ್ದ ಒಬ್ಬ ಶೂದ್ರನ

ಮಾನಕಂಜನದೀ ಚಾಖ್ಯಂ ತಸ್ಮಿನ್ಕಂಜನದೀಪುರೇ ।
ಕೋಽಪಿ ಶೂದ್ರಕುಲೋತ್ಪನ್ನಶ್ಚಾಸೀಚ್ಚೋಲಚಮೂಪತಿಃ ॥೪॥

ಚಿಂತನಾವಂದನಾಭ್ಯರ್ಚ್ಯಾವರ್ತನಾಭಾವನಾನಿ ಸಃ ।
ನಿಯತಂ ನೀಲಕಂಠಸ್ಯ ನಿದಧೇ ಪಾದಪದ್ಮಯೋಃ ॥೫॥

ಬಾಲೇಂದು ಮೌಳೌ ವಿನ್ಯಸ್ಯ ನ್ಯಾಸ್ಯೇ ಕಲಯುತಾಂ ಮತಿಂ ।
ಶುಶ್ರೂಷಾಲಗ್ನಧೀಶ್ಚಾಸೀದ್ಭಕ್ತಾನಾಂ ಭಕ್ತಿನಿರ್ಭರಃ ॥೬॥

ನಿಜಸಂಪದಮೀಶಾನಭಕ್ತಾನಾಮೇವ ಭಾವಯನ್ ।
ಪ್ರಾಗೇವಾಭ್ಯರ್ಚಯನ್ನಾಸೌ ವಾಂಛಾಪೂರಣಮಾತನೋತ್ ॥೭॥

ತತೋಽನಪತ್ಯತಾಖೇದಾತ್ಸೋಽಭಜತ್ಪರಮೇಶ್ವರಂ ।
ತದೀಯದಯಯಾ ಪುತ್ರೀಂ ಪ್ರಸೂತಾಸ್ಯ ಕುಟುಂಬಿನೀ ॥೮॥

---

ವಂಶದಲ್ಲಿ ಜನಿಸಿದ ನಾರಿಯೊಬ್ಬಳು ನಾಟ್ಯ, ತಮಟೆಧ್ವನಿ, ಮುಂತಾದವುಗಳಿಂದ ಬೀದಿಯನ್ನೆಲ್ಲಾ ಶಬ್ದಾಯಮಾನವನ್ನಾಗಿ ಮಾಡುತ್ತಿದ್ದಳು. ಆದೇ ಕಂಜನದೀಪುರದಲ್ಲಿ ಶೂದ್ರಕುಲದಲ್ಲಿ ಹುಟ್ಟಿ ಮಾನಕಂಜನದೀ ಎಂಬ ಹೆಸರಿನಿಂದ ಪ್ರಸಿದ್ಧನಾದ ಒಬ್ಬ ಚೋಲದೇಶದ ಸೈನ್ಯಾಧಿಪತಿಯಿದ್ದನು. ॥೩-೪॥

ಆತನು ನಿಯಮಪೂರ್ವಕವಾಗಿ ಶಂಕರನ ಪಾದಕಮಲಗಳ, ಧ್ಯಾನ, ನಮಸ್ಕಾರ, ಪೂಜೆ, ಸೇವೆ ಮತ್ತು ಭಾವನೆಗಳನ್ನು ನಡೆಸುತ್ತಿದ್ದನು. ಈ ಶೂದ್ರವರ್ಯನು ಬಾಲಚಂದ್ರಮೌಳಿಯಾದ ಶಂಕರನಲ್ಲಿ ತನ್ನ ಮನಸ್ಸಿಟ್ಟು, ಆ ದೇವನ ಸೇವೆಯಲ್ಲಿಯೇ ತನ್ನ ಧೈರ್ಯವನ್ನು ಉಪಯೋಗಿಸುತ್ತಾ ಈಶ್ವರಭಕ್ತರನ್ನು ಭಕ್ತಿಪೂರ್ಣವಾದ ಮನದಿಂದ ಸೇವೆಮಾಡುವುದರಲ್ಲಿ ನಿರತನಾಗಿದ್ದನು. ೫-೬॥

ಅವನು ತನ್ನ ಐಶ್ವರ್ಯವನ್ನು ಶಾಂಭವರ ಸೇವೆಗೆ ಎಂದು ಭಾವಿಸಿ ಮೊದಲಿಂದಲೂ ಅವರನ್ನು ಪೂಜಿಸುತ್ತಾ, ಅವರ ಇಷ್ಟಾರ್ಥಗಳನ್ನು ಪೂರ್ಣಗೊಳಿಸುತ್ತಿದ್ದನು. ಹೀಗೆಯೇ ಅವನು ಕಾಲಕಳೆಯುತ್ತಿರಲು ಕಾಲಕ್ರಮದಲ್ಲಿ ಮಕ್ಕಳಿಲ್ಲದೇ ಹೋಗಲು ಮಾನಕಂಜನದೀ ಎಂಬ ಆತನು ದುಃಖದಿಂದ ಪರಮೇಶ್ವರನನ್ನು ಭಜಿಸಿದನು. ಪರಶಿವನ ದಯೆಯಿಂದ ಈತನ ಪತ್ನಿಯು ಒಂದು ಹೆಣ್ಣುಕೂಸನ್ನು ಹಡೆದಳು. ॥೭-೮॥

ಚತುರ್ಥವಂಶವಾರಾಶೇಶ್ಚಂದ್ರಿಕಾಂ ರತಿಸೋದರೀಂ ।
ಚತುರ್ಮುಖಕರಾಂಭೋಜಸೃಷ್ಟಿಕೌಶಲಸಂಪದಾಂ ॥೯॥

ಆಸೀಜ್ಜನ್ಮೋತ್ಸವಂ ತಸ್ಯಾ ಭೂಯಾನ್ಮಂಗಲಸಂಭ್ರಮಂ ।
ದದೌ ಶಂಕರಭಕ್ತೇಭ್ಯೋ ಯಥೇಪ್ಸಿತಮಸೌ ಧನಂ ॥೧೦॥

ಭೃತ್ಯೇಂದ್ರಪೂರ್ಣಸಂಘೋಷೈರ್ಮಂಗಲಸ್ನೇಹಧಾರಯಾ ।
ಭಕ್ತಾನಾಂ ಸಮುದಂ ಕುರ್ವನ್ಸ ಚಕಾರ ಮಹೋತ್ಸವಂ ॥೧೧॥

ಸ ತದಾ ಪೋಷಯಾಮಾಸ ಭಾಗಧೇಯಸ್ಯ ಕಂದಲೀಂ ।
ಮೂರ್ತಾಮಿವೇಂದಿರಾಂ ಸಾಥ ಮಂದಿರೇ ಸುಂದರಾಽಭವತ್ ॥೧೨॥

ಸಾಕ್ರಮೇಣಾಂಗಣೇ ಚಕ್ರೇ ಜಾನುಭ್ಯಾಂ ಪರಿರಾಖಣಂ ।
ಸಾಜಾನಹಂಸಕಾಮಂಜುವಾಚಾಲಮಣಿಕಂಕಣಾಂ ॥೧೩॥

---

ಅವಳು ಶೂದ್ರವಂಶವೆಂಬ ಸಮುದ್ರಕ್ಕೆ ಬೆಳದಿಂಗಳಿನಂತೆ ಆನಂದಪ್ರದಳಾಗಿ ರತಿಯಂತೆ ಸುಂದರಿಯಾಗಿದ್ದಳು. (ರತಿಯ ಸಹೋದರಿಯಂತೆ ಕಂಗೊಳಿಸುತ್ತಿದ್ದಳು.) ಅವಳನ್ನು ನೋಡಿದರೆ ಬ್ರಹ್ಮನ ಕರಕಮಲಸೃಷ್ಟಿಕೌಶಲದ ಸಂಪತ್ತೆಲ್ಲವೂ ಇವಳಲ್ಲಿಯೇ ಅಡಗಿದ್ದಂತೆ ತೋರುತ್ತಿದ್ದಿತು. ಈ ಸುಂದರಿಯ ಜನ್ಮದಿವಸದಲ್ಲಿ ತುಂಬಾ ವೈಭವದಿಂದ ಉತ್ಸವವು ನಡೆಸಲ್ಪಟ್ಟಿತು. ತಂದೆಯು ಆ ದಿನ ಈಶ್ವರ ಭಕ್ತರಿಗೆ ಬೇಕಾದಷ್ಟು ಹಣವನ್ನು ದಾನಮಾಡಿದನು. ॥೯-೧೦॥

ಆ ಸೇನಾಧಿಪತಿಯು ತನ್ನ ಸೇವಕವರ್ಗ್ಯರ ಸಂಪೂರ್ಣ ಘೋಷಗಳೊಡನೆ, ಮಂಗಳವೆಂಬ ಸ್ನೇಹದ ಧಾರೆಯಿಂದ ಶಿವಭಕ್ತರಿಗೆ ಪ್ರೀತಿ (ಸಂತೋಷ) ಯನ್ನುಂಟು ಮಾಡುತ್ತಾ ದೊಡ್ಡದಾಗಿ ಉತ್ಸವನಡೆಸಿದನು. ಆಮೇಲೆ ತನ್ನ ಅದೃಷ್ಟದ ಮೊಳಕೆಯೂ, ಮೂರ್ತಿಮತ್ತಾದ ಲಕ್ಷ್ಮಿಯಂತಿರುವವಳೂ ಆದ ಮಗಳನ್ನು ಕಾಪಾಡುತ್ತಿರಲು ಅವಳು ತನ್ನ ಮನೆಯಲ್ಲಿ ದಿನದಿನಕ್ಕೆ ಬೆಳೆಯುತ್ತಾ ಸುಂದರಿ ಯೆನಿಸಿದಳು. ॥೧೧-೧೨॥

ಅವಳು ಕ್ರಮವಾಗಿ ಹಂಸದಂತೆ ಮನೋಹರವಾಗಿ ಧ್ವನಿಮಾಡುವ ರತ್ನ ಕಂಕಣವನ್ನು ಧರಿಸಿ, ಮೊಳಕಾಲುಗಳಿಂದ ಅಂಗಳದಲ್ಲಿ ಈಜುತ್ತಾ ಅಂಬೆಗಾಲಿಟ್ಟಳು. ಆಮೇಲೆ ತನ್ನ ಜತೆಗಾರರೊಡನೆ ಮಣ್ಣಾಟ ಮುಂತಾದವುಗಳಲ್ಲಿ ತೊಡಗಿ, ಬೀದಿ

ಧೂಲೀಪಾಲಿಭಿರಾಲೀನಾಂ ನಿಕುರಂಬಕರಂಬಿತಾಂ ।
ಕೇಲೀಂ ವಿತನ್ವತೀಂ ವೀಥ್ಯಾಂ ಚೂಲೀವೇಲಿತಭಲ್ಲಕಾ ॥೧೪॥

ಮಣಿಪಾಂಚಾಲಿಕಾದ್ವಂದ್ವಕೃತೋದ್ವಾಹೋತ್ಸವಾಃ ಕ್ರಮಾತ್ ।
ಅಕ್ಷಿಬಂಧನಲೀಲಾಭಿರಾತತಾನ ಮುದಂ ಪಿತುಃ ॥೧೫॥

ವೈಡೂರ್ಯ್ಯಾಘಾಂತರೇ ನ್ಯಸ್ತಂ ಪದ್ಮರಾಗಶಿಖಾವಲಂ ।
ಹರಿನ್ಮಣಿದ್ಯುತಿಭ್ರಾಜಿಕ್ಷಿಪ್ತಮೌಕ್ತಿಕಕುಂಡಲಾಂ ॥೧೬॥

ಸಖೀಹಸ್ತಸಮಾಲಂಬವಿಹಿತಭ್ರಮವಿಭ್ರಮಾ ।
ಡೋಲಾಕಂತುಕಲೀಲಾಭೀರೇಮೇ ಚಿತ್ರರಥೋಕ್ತಿಭಿಃ ॥೧೭॥

ಮಾಣಿಕ್ಯಮೇಖಲಾಬದ್ಧನಾನಾಚಿತ್ರದುಕೂಲಿಕಾ ।
ಪುಷ್ಪಾಪಚಿತಮಾತಾನೀದಾರಾಮೇಷು ಸಖೀಯುತಾ ॥೧೮॥

---

ಯಲ್ಲಿ ಕಪೋಲದ ಮೇಲೆ ಹರಡಿರುವ ಕೂದಲುಳ್ಳವಳಾಗಿ ಆಟವಾಡುತ್ತಿದ್ದಳು. ॥೧೩-೧೪॥

ಇವಳು ರತ್ನದಬೊಂಬೆಗಳಜೊತೆಯನ್ನಿಟ್ಟುಕೊಂಡು, ಅವುಗಳಿಗೆ ಪರಸ್ಪರ ಮದುವೆಮಾಡುತ್ತಲೂ, ಉತ್ಸವಗಳನ್ನು ನಡೆಸುವವಳಾಗಿಯೂ, ಕಣ್ಣುಮುಚ್ಚಾಲೆ ಮುಂತಾದ ಮಕ್ಕಳ ಆಟಗಳಿಂದಲೂ ಕ್ರಮವಾಗಿ ತಂದೆತಾಯಿಗಳಿಗೆ ಸಂತೋಷವನ್ನುಂಟುಮಾಡಿದಳು. ವೈಡೂರ್ಯಗಳಗುಂಪಿನ ಮಧ್ಯದಲ್ಲಿ ಇರಿಸಿರುವ ಪದ್ಮರಾಗ ಮಣಿಯುಳ್ಳ ಆಭರಣವನ್ನು ತಲೆಯಲ್ಲಿಯೂ, ಹಸರುಪಚ್ಚೆಮಣಿಗಳ ಕಾಂತಿಯಿಂದ ಹೊಳೆಯುವ ಮುತ್ತಿನ ಕುಂಡಲಗಳನ್ನು ಕಿವಿಗಳಲ್ಲಿಯೂ ಧರಿಸಿದ್ದಳು. ॥೧೫-೧೬॥

ಸಖಿಯರ ಕೈಹಿಡಿದು ವಿಲಾಸದಿಂದ ಸಂಚರಿಸುತ್ತಾ ಉಯ್ಯಾಲೆ, ಚೆಂಡು, ಚಿತ್ರಬಣ್ಣದ ರಥ ಮುಂತಾದವುಗಳ ಆಟದಿಂದಲೂ ಸವಿನುಡಿಗಳ ಲೀಲೆಯಿಂದಲೂ ವಿಹರಿಸಿದಳು. ಬಗೆಬಗೆಯ ಚಿತ್ರವರ್ಣದ ಪಟ್ಟೆವಸ್ತ್ರಗಳನ್ನುಟ್ಟು ಮಾಣಿಕ್ಯ ಖಚಿತವಾದ ಒಡ್ಯಾಣವನ್ನು ಹಾಕಿಕೊಂಡು ಸಖಿಯರೊಡನೆ ಉದ್ಯಾನವನಗಳಲ್ಲಿ ಹೂಗಳನ್ನು ಕೊಯ್ಯುತ್ತಿದ್ದಳು. ॥೧೭-೧೮॥

ಪೂರಿತೇ ಮಧುನಾ ಪದ್ಮೇ ನಿಜಾಕಾರಂ ವಿಲೋಕ್ಯ ಸಾ ।
ಮಮ ಶ್ರೀರಾವಿರಾಸೇತಿ ಮೌಗ್ಧ್ಯೇನಾನತಿಮಾತನೋತ್ ॥೮೯॥

ಶಾರಿಕಾಶುಕಕೇಕೀಭಿಃ ಕ್ರೀಡಾಹರಿಣಪೋಷಿಣೀ ।
ವಿಲಾಸಕಲಿಕಾವಲ್ಲೀ ಮತಲ್ಲೀಸೇಕಕಾರಿಣೀ ॥೨೦॥

ಅನಂಗಶೃಂಗಸರ್ವಸ್ವಮಿವಾಂಕುರಿತತಚ್ಛುಚೌ ।
ತದ್ಧ್ರುಶ್ಯತೇ ಶಿರೋಗುಂಭೇ ಕ್ರಿಯಮಾಣಂ ಹಿ ನಾಗಜಂ ॥೨೧॥

ಆಸ್ವದೇತಾಂ ಭ್ರುವೌ ತಸ್ಯಾಃ ಕಟಾಕ್ಷಸ್ಯ ಭಾಗಮುಸ್ಪೃಶತ್ ।
ಗಂಡಬಿಂಬಿತತಾಟಂಕಛಲಾತ್ತಾಲಸ್ತನದ್ವಯೀ ॥೨೨॥

ನಟಂತ್ಯಾಸ್ತನ್ಮುಖೇ ಲಕ್ಷ್ಮ್ಯಾ ರತಿಕಾಮನಟೋದ್ಧೃತಾ ।
ಲಾವಣ್ಯರಸಸಂಪೂರ್ಣಾ ತಾರುಣ್ಯಕುಲದೇವತಾ ॥೨೩॥

---

ವಸಂತ ಋತುವಿನ ಅರಳಿದ ಕಮಲಗಳ ಆಕಾರವನ್ನು ನೋಡಿಕೊಂಡು, ನನ್ನ ಲಕ್ಷ್ಮಿಯು ಆವಿರ್ಭವಿಸಿದಳೆಂದು ಮುಗ್ಧಳಾಗಿ ಅದಕ್ಕೆ ನಮಸ್ಕಾರಮಾಡುತ್ತಿದ್ದಳು. ಶಾರಿಕೆ, ಗಿಳಿ, ನವಿಲು, ಮತ್ತು ಜಿಂಕೆಗಳನ್ನು ವಿಹಾರಕ್ಕೋಸ್ಕರ ಸಾಕುತ್ತಿದ್ದಳು. ವಿಲಾಸವೆಂಬ ದಳಗಳುಳ್ಳ ಉತ್ತಮವಾದ ತನ್ನ ದೇಹವೆಂಬ ಲತೆಯನ್ನು ಅಲುಗಿಸುತ್ತಾ ಸಂಚರಿಸುತ್ತಿದ್ದಳು. ||೧೯-೨೦||

ಮನ್ಮಥನ ಶೃಂಗಗಳೇ ಇಲ್ಲಿ ಸಂಪೂರ್ಣವಾಗಿ ಆವಿರ್ಭವಿಸಿರುವುವೋ ಎಂಬಂತೆ ಅವಳ ಸ್ತನಗಳು ಉನ್ನತವಾಗಿ ಕಾಣುತ್ತಿದ್ದವು. ತಲೆಯಲ್ಲಿ ನಾಗಭೂಷಣವು ಅಲಂಕೃತವಾಗಿ ತಾನೇತಾನಾಗಿ ಗೋಚರಿಸುತ್ತಿದ್ದಿತು. ಎರಡು ಹುಬ್ಬುಗಳೂ ಇವಳ ಕಟಾಕ್ಷಭಾಗವನ್ನು ಮುಟ್ಟಿ ಅದರ ರಸವನ್ನು ಆಸ್ವಾದನೆಮಾಡುವಂತೆ ಕಾಣುತ್ತಿದ್ದವು. ಕಪೋಲಭಾಗದಲ್ಲಿ ಪ್ರತಿಬಿಂಬಿಸಿರುವ ಕರ್ಣಭೂಷಣವಾದ ಓಲೆಯನ್ನು ನೋಡಲು ಎರಡು ಕುಚಗಳೂ ಎತ್ತರವಾಗಿ ಬೆಳೆಯುತ್ತಿರುವುವೋ ಎಂಬಂತಿದ್ದುವು. ||೨೧-೨೨||

ನಾಟ್ಯವಾಡುತ್ತಿರುವ ಆ ಲಕ್ಷ್ಮಿಯ ಮುಖದಲ್ಲಿ ರತಿ ಮತ್ತು ಮನ್ಮಥರ ನಾಟ್ಯಕ್ಕೋಸ್ಕರ ಉದ್ಧೃತವಾಗಿರುವ ಯೌವ್ವನಕುಲಾಭಿಮಾನ ದೇವತೆಯು ಸೌಂದರ್ಯ ರಸಭರಿತಳಾಗಿ ನಲಿಯುತ್ತಿದ್ದಳು. ಮದುವೆಗೆ ಯೋಗ್ಯವಾದ ವಯಸ್ಸನ್ನು ಪಡೆದಿರುವ ಆ ಕುಮಾರಿಯನ್ನು ನೋಡಿ ತಂದೆಯು ಅವಳ ವಿವಾಹಕಾರ್ಯದಲ್ಲಿ

ಸಾ ವಿವಾಹೋಚಿತಾಂ ಪ್ರಾಪ್ಯ ದಶಾಂ ಪ್ರೀತಿಂ ಪಿತುರ್ವ್ಯಧಾತ್ ।
ರಮಾಭಿಮುಖಿನೀಮೇನಾಂ ಸಂಚಾರೇ ಮಣಿದೀಪಿಕಾಂ ॥೨೪॥

ಉದ್ವೋಢುಮಾಭಿಜಾತ್ಯಾದ್ಯೈರುಚಿತಸ್ತಾಮಯಾಚಯತ್ ।
ವೃದ್ಧೈಃಸಂಚಿಂತ್ಯ ಸಂಮಂತ್ರ್ಯ ಕುಲಕ್ರಮಗಲದ್ವ್ರತೀ ॥೨೫॥

ಉದ್ವಾಹಮನುಮೇನೇಽಸ್ಯಾ ಮಾನಕಂಜನದೀಶ್ವರಃ ।
ಉಕ್ತಾಯಾಂ ಸಮತೋ ದೂತೈರೇನನಾಥೋವರಃ ಸುಧೀಃ ॥೨೬॥

ಅಂತರಾನಂದಮಾಧತ್ತಮುಹೂರ್ತೇ ದ್ವಿಜಕಲ್ಪಿತೇ ।
ಮಾನಕಂಜನದೀಶೋಽಪಿ ಬಂಧೂನಾಹೂಯ ಸರ್ವತಃ ॥೨೭॥

ನಗರೇಽಲಂಕೃತೇ ಸ್ತ್ರೀಭಿರಂಕುರಾರ್ಪಣಮಾದಧೇ ।
ಆಹೂಯ ನಿಖಿಲಾನ್ಬಂಧೂಂಶ್ಚ ತುರಂಗಬಲಾನ್ವಿತಃ ॥೨೮॥

---

ಪ್ರಯತ್ನಮಾಡತೊಡಗಿದನು. ಮಗಳು ವಿಹಾರಾಭಿಮುಖಳಾದ ಕಾಲದಲ್ಲೆಲ್ಲಾ ಆಕೆಯು ಸಂಚಾರಮಾಡಲು ರತ್ನದ ದೀವಟಿಗೆಗಳನ್ನು ಹಿಡಿದು ನಡೆಯುವಂತೆ ಏರ್ಪಡಿಸಿದನು. ಅಂದರೆ ಪ್ರಾಪ್ತವಯಸ್ಕಳಾದ ಮಗಳು ಮರ್ಯಾದೆಯಿಂದ ಬಾಳಲೆಂಬುದೇ ಅವನ ಉದ್ದೇಶವಾಗಿದ್ದಿತು. ॥೨೩-೨೪॥

ವಂಶಪಾರಂಪರ್ಯವಾದ ನಿಯಮವನ್ನುಬಿಡದೆ ನಡೆಸುವ ಈ ಮಾನಕಂಜನದೀಶ್ವರನು ಕುಲಶೀಲಾದಿಗಳಿಂದ ಯೋಗ್ಯರಾದ ದೊಡ್ಡವರೊಡನೆ, ಮಗಳ ಮದುವೆಯ ವಿಚಾರವನ್ನು ಚೆನ್ನಾಗಿ ಆಲೋಚನೆಮಾಡಿ, ಮಗಳನ್ನು ಮದುವೆಗೆ ಒಪ್ಪಿಸಿ, ಆ ವಿಷಯವನ್ನು ದೇಶದೇಶಗಳಲ್ಲೆಲ್ಲಾ ಪ್ರಚಾರಪಡಿಸಿದನು. ದೂತರಿಂದ ಈ ವಿಷಯವನ್ನರಿತ ಏನನಾಥನೆಂಬ ಬುದ್ಧಿಶಾಲಿಯೊಬ್ಬನು ಆವಳನ್ನು ತಾನು ಮದುವೆಯಾಗಲು ಸಮ್ಮತಿಸಿದನು. ॥೨೫-೨೬॥

ಮಾನಕಂಜನದೀಶ್ವರನೂ ಸಹ ಆ ಸಂಬಂಧಕ್ಕೆ ಸಮ್ಮತಿಸಿ, ಮದುವೆಗಾಗಿ ಎಲ್ಲ ಕಡೆಯಿಂದಲೂ ತನ್ನ ಬಂಧುಗಳನ್ನು ಕರೆಸಿ, ಬ್ರಾಹ್ಮಣರು ನಿಶ್ಚಯಿಸಿದ ಶುಭಮುಹೂರ್ತದಲ್ಲಿ ತನ್ನ ಮನಸ್ಸಿಗೆ ಆನಂದವನ್ನುಂಟುಮಾಡುವ ವಿವಾಹವನ್ನು ನಡೆಸಲು ತೀರ್ಮಾನಿಸಿದನು. ಆದಕ್ಕಾಗಿ ಪಟ್ಟಣವೆಲ್ಲವೂ ಸಿಂಗರಿಸಲ್ಪಡಲು, ಮೊದಲು ಹೆಂಗಸರಿಂದ ಅಂಕುರಾರ್ಪಣಕರ್ಮವನ್ನು ಮಾಡಿಸಿದನು. ಆ ಕಡೆ

ಮಾನಕಂಜಪುರಾಧೀಶಮಾಯಯಾಸೀದೇನನಾಯಕಃ ।
ಏತಸ್ಮಿನ್ನಂತರೇ ಶಂಭುರ್ಮಾನಕಂಜನದೀಶಿತುಃ ॥೨೯॥

ಭವನಂ ಪ್ರಾಪ ವೇಷೇಣ ಮಹಾವ್ರತಿಕಯೋಗಿನಃ ।
ಜಟಾಚಂಚನ್ಮಣೀನಾಗಕೃತಕುಂಡಲಮಂಡಿತಃ ॥೩೦॥

ರುದ್ರಾಕ್ಷಭೂತಿಧವಳೋ ಯೋಗಪಟ್ಟೋಪವೀತವಾನ್ ।
ಕೌಪೀನಪಾದುಕೋಲ್ಲಾಸಿಮದದ್ವಿರದ ಸದ್ಗತಿಃ ॥೩೧॥

ಏಕಪ್ರಕೋಷ್ಠವ್ಯಾನದ್ಧಸ್ಫಾಟಿಕಾಕ್ಷ ಸ್ರಗುಜ್ವಲಃ ।
ಮಾನಕಂಜನದೀಶೇನ ಕೌತುಕೋಲ್ಲಾಸಿಚೇತಸಾ ॥೩೨॥

ಸವಂದಿತೋ ಬಭೂವಾಂತರ್ಭವನೇ ಭಿಕ್ಷುಶೇಖರಃ ।
ಇತ್ಯಾಹ ತಂ ನತಂ ಭಿಕ್ಷುರ್ಮಂಗಳಂ ಕಿಂ ಭವದ್ಗೃಹೇ ॥೩೩॥

---

ಏನನಾಯಕನೂ ಸಹ ತನ್ನ ಬಂಧುಗಳೊಡನೆ ಆನೆ, ಕುದುರೆ, ರಥ ಮತ್ತು ಕಾಲಾಳುಗಳೆಂಬ ಚತುರಂಗಬಲದೊಡನೆ ಹೊರಟು ಮಾನಕಂಜಪುರಕ್ಕೆ ರಾಜನಾದ ಈ ಮಾನಕಂಜನದೀಶನ ಸಮೀಪಕ್ಕೆ ಬಂದನು. ॥೨೭-೨೮॥

ಅದೇ ಸಮಯದಲ್ಲಿ ಪರಮೇಶ್ವರನು ನಿಯಮಬದ್ಧನಾದ ಯೋಗಿಯ ವೇಷವನ್ನು ಧರಿಸಿ ಆ ಮಾನಕಂಜನದೀಶ್ವರನ ಮನೆಗೆ ಬಂದನು. ಅವನು ಜಡೆಗಳಿಂದ ಕಂಗೊಳಿಸುವವನಾಗಿಯೂ, ಮಣಿಯುಕ್ತವಾದ ಸರ್ಪವನ್ನೇ ಕುಂಡಲವನ್ನಾಗಿ ಅಲಂಕರಿಸಿಕೊಂಡವನಾಗಿಯೂ, ರುದ್ರಾಕ್ಷ ಮತ್ತು ಭಸ್ಮಗಳನ್ನು ಧರಿಸಿ, ಯೋಗವಟ್ಟ, ಯಜ್ಞೋಪವೀತವುಳ್ಳವನಾಗಿಯೂ, ಕೌಪೀನ, ಪಾದುಕೆಗಳಿಂದ ಕೂಡಿದವನಾಗಿಯೂ ಶೋಭಿಸುತ್ತಾ ಮದಗಜದಂತೆ ಮೆಲ್ಲಗೆ ಅಲ್ಲಿಗೆ ನಡೆದು ಬಂದನು. ॥೨೯-೩೦-೩೧॥

ಯತಿವೇಷಧಾರಿಯಾಗಿದ್ದ ಪರಶಿವನ ಮುಂಗೈ ಸ್ಫಟಿಕಮಣಿಮಾಲೆಯಿಂದ ಶೋಭಿಸುತ್ತಾ ಇದ್ದಿತು. ಇಂತಹ ಯೋಗಿಯನ್ನು ಕಂಡೊಡನೆಯೇ ಕುತೂಹಲದಿಂದ ಅರಳಿದ ಮನಸ್ಸುಳ್ಳ ಮಾನಕಂಜನದೀಶ್ವರನು, ಯೋಗಿಗೆ ಮನಃಪೂರ್ವಕವಾಗಿ ವಂದಿಸಿ, ಭಕ್ತಿಭಾರಾವನತನಾಗಿ ಅವನ ಜೊತೆಯಲ್ಲಿಯೇ ತನ್ನ ಮನೆಯೊಳಕ್ಕೆ ಪ್ರವೇಶಿಸಿದನು. ಆಗ ಭಿಕ್ಷುವರ್ಯನು ರಾಜನನ್ನು ಕುರಿತು ಎಲೈ ಭಕ್ತನೇ!

ಇತ್ಯುಕ್ತೋಽಸೌ ವಿನೀತಃ ಸನ್ಪ್ರಾಹ ಪ್ರಾಂಜಲಿರೇವ ಹಿ ॥೩೪॥
ಸ್ವಾಮಿನ್ಮತ್ತನಯೋದ್ವಾಹೋ ಭವಿಷ್ಯತ್ಯದ್ಯ ಮೇ ಗೃಹೇ।

॥ ಮಾನಕಂಜ ಉವಾಚ ॥

ಅಸ್ತಿ ಕಲ್ಯಾಣಮಿತ್ಯುಕ್ತ್ವಾ ಕಲ್ಯಾಣಾಚಲಕಾರ್ಮುಕಂ ॥೩೫॥
ಪ್ರಣಿಪತ್ಯ ಸ್ವಯಂ ಪುತ್ರ್ಯಾ ತನ್ನತಿಂ ಕಾರಯತ್ತದಾ।

ಪ್ರಣಿಪತ್ಯೋತ್ಥಿತಾಮೇನಾಮುದ್ವಾಹಾಲಂಕೃತೋಜ್ಜ್ವಲಾಂ ॥೩೬॥

ಆಲೋಕ್ಯ ಚಿಕುರೇ ತಸ್ಯಾಂ ಕಪೋಲಮುಕುರೇ ತದಾ।
ಭಿಕ್ಷುರ್ಬಬಂಧ ತಾಂ ದೃಷ್ಟಿಮಿಷುಸಾರಾಧರೇ ತಥಾ ॥೩೭॥

ಮುಹುರಾಲೋಕ್ಯ ತನ್ವಂಗ್ಯಾ ಧಮ್ಮಿಲ್ಲಂ ಧೃತಮಲ್ಲಕಂ।
ಕೃತಾಂಜಲಿಪುಟೇ ಚಕ್ರೇ ತಸ್ಮಿನ್ನಕ್ಷಿ ಸ ತಾಪಸಃ ॥೩೮॥

---

ನಿನ್ನ ಮನೆಯಲ್ಲಿ ಇದೇನು ಮಂಗಳ ಸಂರಂಭವೆಂದು ಪ್ರಶ್ನೆಮಾಡಿದನು. ಆಗ ಮಾನಕಂಜನದೀಶನು ವಿನಯದಿಂದ ಕೈಮುಗಿದುಕೊಂಡು ಭಿಕ್ಷುಕನನ್ನು ಕುರಿತು, ಇಂತೆಂದನು. ॥೩೨-೩೩॥

ಸ್ವಾಮಿ! ಇಂದು ನನ್ನ ಮಗಳ ಮದುವೆಯ ಸಂಭ್ರಮವು ನಮ್ಮಮನೆಯಲ್ಲಿ ನಡೆಯುತ್ತಿರುವುದು. ಈ ಮದುವೆಯು ಮಂಗಳಕರವಾಗಿ ನಡೆಯುವಂತೆ ತಾವು ಅನುಗ್ರಹಿಸಬೇಕು. ಎಂದು ಮೇರುಪರ್ವತವನ್ನೇ ಬಿಲ್ಲನ್ನಾಗಿ ಮಾಡಿಕೊಂಡಿದ್ದ ಶಿವನಿಗೆ ತಿಳಿಸಿ, ತಾನೂ ಆ ಭಿಕ್ಷುವಿಗೆ ನಮಸ್ಕಾರಮಾಡಿ, ಮಗಳಿಂದಲೂ ಆ ಭಿಕ್ಷು ವೇಷಧಾರಿಯಾದ ಶಿವನಿಗೆ ನಮಸ್ಕಾರಮಾಡಿಸಿದನು. ॥೩೪-೩೫॥

ತನಗೆ ನಮಸ್ಕಾರಮಾಡಿ ಮದುವೆಗಾಗಿ ಅಲಂಕರಿಸಿಕೊಂಡು ಶೋಭಿಸುತ್ತಾ ನಿಂತುಕೊಂಡಿರುವ ಆ ಕುಮಾರಿಯನ್ನು ನೋಡಿ, ಮನೋಹರವಾದ ಅವಳ ಮುಂಗುರುಳು, ಕನ್ನಡಿಯಂತೆ ಹೊಳೆಯುತ್ತಿರುವ ಕಪೋಲಗಳು, ಮನ್ಮಥನ ಸಾರವತ್ತಾದ ಬಾಣದಂತಿರುವ ಕೆಳದುಟಿ ಇವುಗಳಲ್ಲಿ ತನ್ನ ದೃಷ್ಟಿಯನ್ನು ಬೀರಿದನು. ಸುವಾಸನೆಯುಳ್ಳ ಮಲ್ಲಿಗೆಹೂವನ್ನು ಮುಡಿದಿರುವ ಆ ಕೃಶಾಂಗಿಯ ತಲೆಯ ಗಂಟನ್ನೇ ನೋಡುತ್ತಾ, ವಿನಯದಿಂದ ಕೈಮುಗಿದು ನಿಂತುಕೊಂಡಿರುವ ಅವಳಲ್ಲಿಯೇ ತನ್ನ ಮನಸ್ಸನ್ನೆಲ್ಲಾ ನಿಲ್ಲಿಸಿದನು. ಹಾಗೆ ಲತಾಂಗಿಯಾದ ತನ್ನ ಮಗಳಲ್ಲಿಯೇ

ತದ್ದೃಷ್ಟಿಯಷ್ಟಿಂ ವೀಕ್ಷೈವ ಭಿಕ್ಷುಂ ಪ್ರಾಂಜಲಿರಬ್ರವೀತ್ ॥೩೯॥

॥ ಕಂಜನದೀ ಉವಾಚ ॥

ಸ್ವಾಮಿನ್ಕಿಂ ಕರವಾಣೀತಿ ವಾಣ್ಯಾಮೇಣೀದೃಶೇಕ್ಷಣಂ ।
ತದೀಕ್ಷಣಂ ಚ ಸ್ವಪದೇ ಕ್ಷಣಮಕ್ಷೀಣಪದ್ಧತಿಃ ॥೪೦॥

ಉವಾಚ ಭಿಕ್ಷುಸ್ತಂ ತತ್ರ ತಸ್ಮಿನ್ವೈವಾಹಿಕೇಂಗಣೇ ॥೪೧॥

॥ ಭಿಕ್ಷುರುವಾಚ ॥

ಕರ್ತುಂ ಪಂಚವಟೀಮೇತಚ್ಛಿಕುರೋ ದೀಯತಾಮಿತಿ ।
ಮಾನಕಂಜನದೀನಾಥಸ್ತಥಾಸ್ತ್ವಿತಿ ಮುದಂ ವ್ಯಧಾತ್ ॥೪೨॥

ಛಿತ್ವಾ ಕ್ಷುರಿಕಯಾ ತಸ್ಯಾಃ ಕೇಶಾನಸ್ಮೈ ಸಮರ್ಪಯತ್ ।
ಆಮೂಲಲೂನತತ್ಕೇಶಾನ್ಸ್ಪೃಹಯಾಲುರಿವೇಶ್ವರಃ ॥೪೩॥

---

ದೃಷ್ಟಿಯಿಟ್ಟಿರುವ ಆ ಭಿಕ್ಷುವನ್ನು ನೋಡಿ ಮಾನಕಂಜನದೀಶನು ಕೈಮುಗಿದು ಕೊಂಡು ಪ್ರಾರ್ಥಿಸುತ್ತಾ, ॥೩೬-೩೭-೩೮-೩೯॥

ಸ್ವಾಮಿಯೇ, ಈಗ ತಮಗೆ ಏನಾಗಬೇಕೆಂಬುದಾಗಿ ಮಾನಕಂಜನದೀಶನು ಭಿಕ್ಷುವನ್ನು ಕೇಳಲು, ಜಿಂಕೆಯಂತೆ ಕಣ್ಣುಳ್ಳ ಅವಳ ಕಣ್ಣನ್ನೇ ನೋಡುತ್ತಾ ಇದ್ದ ಅವನು, ಎಡಬಿಡದೇ ತನ್ನ ಪಾದಗಳನ್ನೇ ನೋಡುತ್ತಿರುವ ಆ ಮಾನಕಂಜನದೀಶನಿಗೆ ಮದುವೆಯ ಅಂಗಳದಲ್ಲಿ ಇಂತೆಂದನು. ॥೪೦-೪೧॥

ಪಂಚವಟಿಯನ್ನು (?) ಮಾಡಲು ಈಕೆಯ ತಲೆಯ ಕೂದಲು (ಮುಂಗುರುಳು) ಬೇಕಾಗಿದೆ. ಅದನ್ನು ಕೊಡೆಂದು ಕೇಳಲು, ಆಗ ಮಾನಕಂಜನದೀಶ್ವರನು ಮರುಮಾತನಾಡದೇ ಹಾಗೆಯೇ ಆಗಲೆಂದು ಪ್ರೀತಿಯಿಂದ ಕತ್ತಿಯನ್ನು ತೆಗೆದುಕೊಂಡು ಅವಳ ಕೂದಲನ್ನು ಕತ್ತರಿಸಿ ಭಿಕ್ಷುವಿಗೆ ಕೊಟ್ಟನು. ಬುಡಸಮೇತವಾಗಿ ಕತ್ತರಿಸಿಕೊಟ್ಟ ಆ ತಲೆಗೂದಲನ್ನು ತೆಗೆದುಕೊಳ್ಳಲು ನಿಜವಾಗಿಯೂ ಇಚ್ಛೆಯುಳ್ಳವನೋ ಎಂಬಂತೆ ಭಿಕ್ಷುವೇಷಧಾರಿಯಾಗಿದ್ದ ಈಶ್ವರನು ಸ್ವಸ್ವರೂಪವನ್ನು ತೋರ್ಪಡಿಸುತ್ತಾ ಪಾರ್ವತಿಯೊಡನೆ ವೃಷಭವನ್ನೇರಿ ಪ್ರತ್ಯಕ್ಷನಾದನು. ॥೪೨-೪೩॥

ಅಂತರ್ಧಾಯೋಮಯಾ ಸಾರ್ಧಮಾವಿರಾಸೀದ್ವೃಷೋಪರಿ ।
ಪ್ರಾಣಂಸೀತ್ಕಂಜನಾಥೋಽಪಿ ಪ್ರಾವರ್ಷನ್ಕುಸುಮಂ ಸುರಾಃ ॥೪೪॥

ಚಕ್ರುರಪ್ಸರಸೋ ನೃತ್ಯಂ ನೇದುರ್ದುಂದುಭಯೋ ದಿವಿ ।
ಭಕ್ತಿನಿರ್ಭರಜಾನಂದಭರಿತಂ ಭೂರಿತೇಜಸಂ ॥೪೫॥

ಅಭಿವಂದ್ಯ ನಿಜಂಧಾಮ ನಯನೀಶಸ್ತಿರೋದಧೇ ।
ಮಾನಕಂಜನದೀಶೋಽಪಿ ಕೃತ್ವಾ ವೈವಾಹಿಕಂ ವಿಧಿಂ ॥೪೬॥

ಬಂಧುಭಿಃ ಸ್ವಸುತಾಯಾಶ್ಚ ಪೌರೈರೀರಿತವೈಭವಃ ।
ವಿಧಾಯಾಂತೇ ಸ ಕೈಲಾಸಮಯಾಸೀದ್ಭಕ್ತಿಭಾವಿತಃ ॥೪೭॥

ಯಯೇನನಾಥಕಲಿಕಾಂ ಮಲಿಕಾಂ ತದಾತ್ರೀಂ
ಮಿತ್ರೀಕೃತಾಖಿಲಜಗತ್ ಪ್ರಣನಾಮ ಶಂಭುಂ ।
ಕೌತುಕೇನ ಕೃತಕಂತುಕಲೀಲಾಂ
ತ್ರ್ಯಕ್ಷಜಾತಮಹಿಮಾಂ ಮೃಗಲೋಲಾಂ ॥೪೮॥

---

ಇತ್ತ ಮಹಾದೇವನ ದಿವ್ಯರೂಪವನ್ನು ನೋಡಿ ಕಂಜನಾಥನೂ ಆಶ್ಚರ್ಯ ಚಕಿತನಾಗಿ ನಮಸ್ಕಾರಮಾಡಿದನು. ಕೂಡಲೇ ದೇವತೆಗಳು ಹೂಮಳೆಗರೆದರು. ಅಪ್ಸರೆಯರು ನಾಟ್ಯವಾಡಿದರು. ದೇವನಗಾರಿಗಳು ಅಂಬರದಲ್ಲಿ ಮೊಳಗಿದವು. ಪೂರ್ಣವಾದ ತನ್ನ ಭಕ್ತಿಯೆಂಬ ಆನಂದದಿಂದ ಯುಕ್ತವಾಗಿ ದಿವ್ಯತೇಜಶ್ಶಾಲಿಯಾದ ಮಾನಕಂಜನದೀಶ್ವರನಿಗೆ ತನ್ನ ನಿಜಲೋಕವನ್ನು ಅನುಗ್ರಹಮಾಡಿ ಆ ನಯನೀಶ್ವರನು ಮರೆಯಾದನು. ॥೪೪-೪೫॥

ಆ ಮೇಲೆ ಮಾನಕಂಜನದೀಶ್ವರನೂ ಸಹ ತನ್ನ ಮಗಳಿಗೆ, ಪ್ರಜೆಗಳಿಗೆ ಸಂತೋಷವಾಗುವ ವೈಭವದೊಡನೆ, ನೆಂಟರಿಷ್ಟರೊಡಗೂಡಿ ವಿವಾಹವನ್ನು ಸಾಂಗವಾಗಿ ನೆರವೇರಿಸಿ, ಕೊನೆಗೆ ಭಕ್ತಿಪೂರ್ಣಚಿತ್ತನಾಗಿ ತಾನು ಶಿವನ ಅನುಗ್ರಹದಿಂದ ಕೈಲಾಸಕ್ಕೆ ತೆರಳಿದನು. ॥೪೬-೪೭॥

ಆ ಏನನಾಥನು ಗುಂಗುರುಕೂದಲುಗಳಿಂದಲೂ, ಒಳ್ಳೆಯ ಅವಯವಗಳಿಂದಲೂ, ಸೌಂದರ್ಯದ ಮೊಗ್ಗಿನಂತಿರುವ ಪತ್ನಿಯನ್ನು ವಿವಾಹಮಾಡಿಕೊಂಡು, ಅವಳೊಡನೆ ಸಕಲ ಪ್ರಪಂಚದ ಜನಗಳಲ್ಲಿಯೂ ಮಿತ್ರನಂತೆ ವರ್ತಿಸುತ್ತಾ, ಶಿವ

ಶ್ರೀಮಾನಕಂಜತಟಿನೀಶಚರಿತ್ರಮೇತ
ದತ್ಯದ್ಭುತಂ ಪಠತಿ ಯೋ ಭುವಿ ಯಃ ಶೃಣೋತಿ ।
ಏತೌ ಮಹೇಶಪದಭಕ್ತಿವಿಧೂತಮಾಯೌ
ಕೈಲಾಸಧಾಮ ವಿಶತಃ ಸ್ವಕಲೇವರಾಂತೇ ॥೪೯॥

ಇತಿ ಶ್ರೀ ಶಿವರಹಸ್ಯೇ ನವಮಾಂಶೇ ಮಾನಕಂಜನದೀಶಭಕ್ತಚರಿತ್ರ
ವರ್ಣನಂ ನಾಮ ಸಪ್ತತ್ರಿಂಶೋಽಧ್ಯಾಯಃ

---

ಧ್ಯಾನದಲ್ಲಿ ನಿರತನಾಗಿದ್ದನು. ಆ ಮೇಲೆ ಮುಕ್ಕಣ್ಣನಿಂದುಂಟಾದ ಮಹಿಮೆಯುಳ್ಳ, ವಳೂ, ಜಿಂಕೆಯಂತೆ ಚಂಚಲಳೂ ಆದ ತನ್ನ ಪ್ರೇಯಸಿಯೊಡನೆ ಚೆಂಡಾಟವೇ ಮೊದಲಾದವುಗಳನ್ನಾಡಿಕೊಂಡು ಸಂತೋಷದಿಂದ ಕಾಲಕಳೆಯುತ್ತಿದ್ದನು. ॥೪೮॥

ಅತ್ಯದ್ಭುತವಾದ ಈ ಮಾನಕಂಜನದೀಶನ (ಚರಿತ್ರೆಯನ್ನು) ಕಥೆಯನ್ನು ಭೂಮಿಯಲ್ಲಿ ಓದುವವನೂ, ಕೇಳುವವನೂ ಆ ಮಹೇಶ್ವರನ ಪಾದಭಕ್ತಿಯಿಂದ (ಅಜ್ಞಾನವನ್ನು) ಪಾಪಗಳನ್ನು ತೊರೆದು, ಕೊನೆಗೆ ಈ ದೇಹಾವಸಾನದಲ್ಲಿ ಕೈಲಾಸವನ್ನು ಸೇರುವರು, ಎಂದು ಕುಮಾರಸ್ವಾಮಿಯು ಜೈಗೀಷವ್ಯನಿಗೆ ಹೇಳಿದನು. ॥೪೯॥

ಇಲ್ಲಿಗೆ ಶ್ರೀಶಿವರಹಸ್ಯದಲ್ಲಿ ಸದಾಶಿವಸಂಜ್ಞಕವಾದ ಒಂಬತ್ತನೆಯ ಅಂಶದಲ್ಲಿ
ಮಾನಕಂಜನದೀಶ್ವರನೆಂಬ ಶಿವಭಕ್ತನ ಚರಿತ್ರವರ್ಣನೆಯೆಂಬ
ಮೂವವತ್ತೇಳನೆಯ ಅಧ್ಯಾಯವು ಮುಗಿಯಿತು.



॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಸದಾಶಿವಾಖ್ಯೇ

## ನವಮಾಂಶೇ

## ಅಷ್ಟತ್ರಿಂಶೋಽಧ್ಯಾಯಃ

॥ ಶ್ರೀಸ್ಕಂದ ಉವಾಚ ॥

ಕಾವೇರೀ ಶುಕ್ತಿನಿರ್ಮುಕ್ತ ಮುಕ್ತಾಸೈಕತಮಂಡಿತಂ ।
ಕಣಮಂಗಲನಾಮಾಸ್ತಿ ನಗರಂ ಚೋಲಮಂಡಲೇ ॥೧॥

ಚರಿತ್ವಾ ಸರ್ವತೋ ಯತ್ರ ಶಂಖೇಷ್ವಗ್ರಾಧಿರೋಹಿಷು ।
ಪಾಂಚಜನ್ಯಕರೋ ವಿಷ್ಣುರ್ಗೋಪುರೇಣ ವಿಡಂಬ್ಯತೇ ॥೨॥

ಯತ್ರ ಸೌಧವಿಟಂಕೇಷು ಚಕರ್ಷೇ ಚಂದ್ರಮಂಡಲೇ ।
ಚಕೋರಮಿಥುನಂ ಮಾಧ್ವೀಸವೀಟೇಂ ಕುರುತೇ ನಿಶಿ ॥೩॥

---

## ಮೂವತ್ತೆಂಟನೆಯ ಅಧ್ಯಾಯ

ಅಯ್ಯ ಜೈಗೀಷವ್ಯನೇ, ಚೋಲದೇಶದಲ್ಲಿ ಕಣಮಂಗಳವೆಂಬ ಒಂದು ಪಟ್ಟಣವಿರುವುದು. ಅದು ಕಾವೇರೀನದಿಯ ದಡದಲ್ಲಿ ನಿರ್ಮಿತವಾಗಿ, ಕಾವೇರೀ ನದಿಯ ಕಪ್ಪೆಚಿಪ್ಪು (ಮುತ್ತಿನಚಿಪ್ಪು) ಗಳಿಂದ ಸಿಡಿದ ಮುತ್ತುಗಳಿಂದ ಅಲ್ಲಿಯ ಮರಳದಿಣ್ಣೆಗಳನ್ನೆಲ್ಲಾ ಅಲಂಕರಿಸಿಕೊಂಡು, ನಗರಕ್ಕೆ ಅಲಂಕಾರಪ್ರಾಯವಾಗಿರುವುದು. ವಿಷ್ಣುವು ಎಲ್ಲೆಡೆಯಲ್ಲಿಯೂ ಶುಭ್ರವಾಗಿ ಕಂಗೊಳಿಸುವ ಶಂಖಗಳನ್ನು ನೋಡುವ ನಿಮಿತ್ತದಿಂದ ಸಂಚರಿಸಿ, ಕೊನೆಗೆ ಪಾಂಚಜನ್ಯವೆಂಬ ಶಂಖದ ಸಾಮ್ಯವನ್ನು ಪಡೆದಿರುವ ಈ ಊರಿನ ದೇವಾಲಯದ ಗೋಪುರವೊಂದನ್ನು ಕಂಡು ಬೆರಗಾದನು. ॥೧-೨॥

ಆ ಊರಿನಲ್ಲಿರುವ, ಚಂದ್ರಮಂಡಲದ ವರೆಗೂ ಎತ್ತರವಾಗಿ ಹಬ್ಬಿರುವ

ತತ್ರ ದಾಯಾಭಿಧಃ ಕಶ್ಚಿಚ್ಚತುರ್ಥಾನ್ವಯಶೇಖರಃ ।
ಮೃಣಾಳೀತಿ ಯಶೋ ಯಸ್ಯ ಮರಾಳೀ ಲೇಖಿವೇಧಸಃ ॥೪॥

ಭೂಮಿನ್ಯಾಸಾಯುತಃ ಶಂಭುಂ ಶಿವಭಕ್ತೀವ ಮೂರ್ತಯಃ ।
ಸರ್ವಥಾರಾಧಯಾಮಾಸ ತಥೈವ ಹರಕಿಂಕರಾನ್ ॥೫॥

ಹಲಬಾಹುಲ್ಯಮಾತತ್ಯ ಸರ್ವಂಕರ್ಷಧನಾಗಮಃ ।
ಮಹಾಭಿಷೇಕಪೂಜಾಭಿಸ್ತೋಷಯಾಮಾಸ ಧೂರ್ಜಟಿಂ ॥೬॥

ಸಶಕ್ತಶಾಲಿನೀ ಭೂತಶಲಾಟುಸಹಿತಂ ಸದಾ ।
ಶಂಭೋರ್ನಿವೇದಯಾಮಾಸ ನವೀನಂ ಶಾಲಿತಂಡುಲಂ ॥೭॥

ಸಂಕಲ್ಪ್ಯ ಸ ದಿಶಂಭಂಭೋರ್ನಿಯಮೇನ ದಿನೇ ದಿನೇ ।
ಶಾಕಿನೀ ಚೂತಶಾಲ್ಯನ್ನಂ ಪರಾಂ ಪ್ರೀತಿಮುವಾಹ ಸಃ ॥೮॥

---

ಉಪ್ಪರಿಗೆಗಳ ಮೇಲಿನ ಪಂಜರಗಳಲ್ಲಿ ರಾತ್ರಿಯವೇಳೆ ಚಕ್ರವಾಕಪಕ್ಷಿಗಳ ಜೊತೆಯು (ಗಂಡುಹೆಣ್ಣು) ಮೃದುವಾಗಿ ತಾಂಬೂಲಚರ್ವಣಮಾಡುತ್ತಿರುವುವು. ಇಂತಹ ಕಣಮಂಗಳದಲ್ಲಿ 'ದಾಯ' ಎಂಬ ಹೆಸರುಳ್ಳ ಒಬ್ಬ ಶೂದ್ರಶ್ರೇಷ್ಠನು ವಾಸಮಾಡುತ್ತಿದ್ದನು. ಆವನಿಗೆ ಮೃಣಾಲೀ ಎಂಬ ಹೆಸರಿನ ಪತ್ನಿಯೊಬ್ಬಳು, ಪತಿವ್ರತಾಧರ್ಮದಿಂದ ಗಂಡನಿಗೆ ಕೀರ್ತಿಪ್ರಾಯಳಾಗಿ ಕಾಣುತ್ತಿದ್ದಳು. ॥೩-೪॥

ಪತ್ನೀಯುಕ್ತನಾದ ಆತನು ಮೂರ್ತಿಮಂತರಾದ ಶಿವಭಕ್ತಿಯೋ ಎಂಬಂತೆ ಶಂಭುವನ್ನೂ ಹಾಗೆಯೇ ಶಿವಕಿಂಕರರನ್ನೂ ಭಕ್ತಿಯಿಂದ ಪೂಜಿಸುತ್ತಿದ್ದನು. ಅನೇಕ ನೇಗಿಲುಗಳನ್ನಿಟ್ಟುಕೊಂಡು ಕೃಷಿಕಾರ್ಯದಲ್ಲಿ ನಿರತನಾಗಿ ನಾನಾಮುಖದಿಂದ ದ್ರವ್ಯಾರ್ಜನೆಮಾಡುತ್ತಿದ್ದನು. ಸ್ವಾರ್ಜಿತವಾದ ಆ ಹಣದಿಂದ ಉತ್ತಮವಾದ ಶಿವಾಭಿಷೇಕ, ಶಿವಪೂಜೆ ಮೊದಲಾದವುಗಳನ್ನು ಮಹೇಶ್ವರನಿಗೆ ನಡೆಸುತ್ತಾ ಶಂಕರನನ್ನು ಸಂತೋಷಪಡಿಸುತ್ತಿದ್ದನು. ॥೫-೬॥

ಆವನು ಕೆಂಪುಬತ್ತದ ಅಕ್ಕಿಯ ಅನ್ನ, ಮಾವಿನಕಾಯಿಯ ಚಟ್ನಿ, ಅಥವಾ ಇನ್ನೇನಾದರೂ ವ್ಯಂಜನಗಳೊಡನೆ ಯಾವಾಗಲೂ ಹೊಸ ಅಕ್ಕಿಯ ಅನ್ನವನ್ನೇ ಶಂಭುವಿಗೆ ನಿವೇದನಮಾಡುತ್ತಿದ್ದನು. ನಿತ್ಯವೂ ಸಂಕಲ್ಪಮಾಡಿ ನಿಯಮದಿಂದ ಮಾವಿನಕಾಯಿನ ಅನ್ನವನ್ನು ಸಮರ್ಪಿಸುತ್ತಾ ಅದರಿಂದ ಶಿವಪ್ರೀತಿಯಾಯಿತೆಂದು ತಿಳಿದು ಆನಂದಪಡುತ್ತಿದ್ದನು. ॥೭-೮॥

ಏವಂ ಗತೇಷ್ವನೇಕೇಷು ವತ್ಸರೇಷು ಮಹೇಶ್ವರಃ ।
ತಸ್ಯ ಸಂಶೋಧಯನ್ಭಕ್ತಿಂ ವಿತತಾನ ದರಿದ್ರತಾಂ ॥೯॥

ಪೂಜಾಂ ಪೂರ್ವಾದ್ವಿಶೇಷೇಣ ತಥಾಪಿ ಕಲಯನ್ವಿಭೋಃ ।
ವೃತ್ತ್ಯರ್ಥಂ ಕೃಷಿವಾನಾಸೀತ್ಪರೇಷಾಮುವಸತ್ಸುಖೀ ॥೧೦॥

ನ ಕಿಂಚಿದಾತ್ಮನೇ ಕುರ್ವನ್ಭೃತಿಪ್ರಾಪ್ತೇಷು ಶಾಲಿಷು ।
ಶಿವಾಯೈವ ದಿಶಂತ್ಸರ್ವಂ ನಿನಾಯ ದಿವಸಾನ್ಬಹೂನ್ ॥೧೧॥

ಪ್ರಾಪ್ಯತೇ ಕೃಷಿತಸ್ತೇನ ಭೃತಿತ್ವೇನ ಶಿವಾಶಯಾ ।
ಕೇವಲಂ ಶಾಲಯಸ್ತೇಷು ನ್ಯವೇದಿಷತ ಶಂಭವೇ ॥೧೨॥

ಸ್ವಕೀಯನಿಷ್ಕುಟೇ ಶಾಕಾನ್ಸ ಸಂಪಾದ್ಯ ಗೃಹೇ ತದಾ ।
ಪ್ರದದೌ ಸೋಽಪಿ ತೈರೇವ ಕ್ರಮಾದಾತ್ಮಸ್ಥಿತಿಂ ವ್ಯಧಾತ್ ॥೧೩॥

ಕ್ರಮೇಣ ನಿಷ್ಕುಟೇ ಶಾಕಪ್ರಭೇದೇ ಕ್ಷೀಣತಾಂ ಗತೇ ।
ಕೇವಲಂ ವಾರಿ ತದ್ದತ್ತಂ ಪೀತ್ವಾ ದೇಹಂ ದಧಾರ ಸಃ ॥೧೪॥

---

ಹೀಗೆಯೇ ಅನೇಕ ವರ್ಷಗಳು ಕಳೆಯಲು ಮಹೇಶ್ವರನು ಇವನ ಭಕ್ತಿಯನ್ನು ಪರೀಕ್ಷೆಮಾಡಬೇಕೆಂದು ಯೋಚಿಸಿ ಇವನಿಗೆ ಬಡತನವನ್ನುಂಟು ಮಾಡಿದನು. ಆದರೆ ಆ ಶೂದ್ರನು ತನಗೆ ಬಡತನ ಬಂದರೂ ಮೊದಲಿಗಿಂತಲೂ ಹೆಚ್ಚಾಗಿಯೇ ಪರಮೇಶ್ವರನಿಗೆ ಪೂಜೆ ನಡೆಸುತ್ತಾ, ತನ್ನ ಜೀವನಕ್ಕೋಸ್ಕರ ಮತ್ತೊಬ್ಬರ ಕ್ಷೇತ್ರದಲ್ಲಿ ವ್ಯವಸಾಯಮಾಡತೊಡಗಿ ಆಗಲೂ ಸುಖವಾಗಿಯೇ ಇದ್ದನು. ॥೯-೧೦॥

ಕೂಲಿಮಾಡಿ ಬಂದ ಬತ್ತದಲ್ಲಿ ಸ್ವಲ್ಪವನ್ನೂ ತನ್ನ ಸ್ವಂತಕ್ಕೆ ಉಪಯೋಗಿಸಿ ಕೊಳ್ಳದೇ, ಎಲ್ಲವನ್ನೂ ಶಿವನಿಗೇ ಸಮರ್ಪಣೆಮಾಡುತ್ತಾ, ಅವನು ಅಲ್ಲಿ ಅನೇಕ ದಿವಸಗಳನ್ನು ಕಳೆದನು. ಶಿವಪೂಜಾದಿಗಳಿಗೋಸ್ಕರ ಮತ್ತೊಬ್ಬರ ಭೂಮಿಯಲ್ಲಿ ವ್ಯವಸಾಯಮಾಡಿ ಅದರಿಂದ ಲಬ್ಧವಾದ ಬತ್ತವನ್ನು ಶಂಕರನ ಪೂಜಾದಿಗಳಿಗಾಗಿ ನಿವೇದಿಸುತ್ತಿದ್ದನು. ॥೧೧-೧೨॥

ಕಾಲಕ್ರಮದಲ್ಲಿ ಅವನಿಗೆ ಕೂಲಿಯೂ ದೊರೆಯದೆ ಹೋಗಲು ತನ್ನ ಮನೆಯ ಕೈದೋಟದಲ್ಲಿ ತರಕಾರಿಗಳನ್ನು ಬೆಳೆದು ಅವುಗಳನ್ನು ಮಾರಿ ಆದನ್ನೇ ತಿನ್ನುತ್ತ

ಏವಂ ಕೇವಲಮಂಭೋಭಿರ್ದೇಹಯಾತ್ರಾಂ ಪ್ರವರ್ತಯನ್ ।
ಶಾಕಿನೀಂ ಶಂಕರಾಯಾದಾಚ್ಛಾಲಿಂ ಚೂತಶಲಾಟುಭಿಃ ॥೧೫॥

ಸ ಕದಾಚಿನ್ಮಹೇಶಾರ್ಥಮಖಂಡಿತಮಹಾವ್ರತಃ ।
ಶಾಕಿನೀನವಚೂತಾಭ್ಯಾಂ ಶಾಲಿತಂಡುಲಮಾವಹತ್ ॥೧೬॥

ಮಹಾಭಿಷೇಕಹೇತೋಸ್ತದ್ಗೃಹಿಣೀ ಪೂಜನಾನ್ವಿತಂ ।
ವಹಂತೀ ಶನಕೈಃ ಪಶ್ಚಾದ್ಯಯೌ ಚಾರಿತ್ರದೇವತಾ ॥೧೭॥

ಚಂಡಭಾನುಕರಾಘಟ್ಟಜಾತಸ್ಫೋಟವಿಲೇ ಪಥಿ ।
ಚಚಾಲ ತತ್ತದಾ ರಂಧ್ರೇ ತತ್ಸರ್ವಂ ನ್ಯಪತತ್ಕರಾತ್ ॥೧೮॥

ಶಾಲಿತಂಡುಲಮಾಲೋಕ್ಯ ಶಾಕಿನೀಚೂತಸಂಯುತಂ ।
ರಂಧ್ರೇ ನಿಪತಿತಂ ಖೇದಾದಂತಸ್ತಾಪಮವಾಪ ಸಃ ॥೧೯॥

---

ಕ್ರಮವಾಗಿ ತನ್ನ ಜೀವನ ನಡೆಸುತ್ತಿದ್ದನು. ಕ್ರಮವಾಗಿ ಕೈದೋಟದಲ್ಲಿ ತರಕಾರಿಗಳ ಬೆಳೆಯೂ ಕಡಿಮೆಯಾಗಲು, ಆಗ ಆ ಗೃಹಸ್ಥನು ಕೇವಲ ದೈವದತ್ತವಾದ ನೀರನ್ನು ಕುಡಿದೇ ದೇಹಧಾರಣೆಮಾಡತೊಡಗಿದನು. ॥೧೩-೧೪॥

ಹೀಗೆ ಕೇವಲ ಜಲಪಾನದಿಂದಲೇ ಜೀವನಯಾತ್ರೆ ನಡೆಸುತ್ತಿದ್ದರೂ ಆ ಭಕ್ತನು ತಾನು ತಿನ್ನುವ ತರಕಾರಿ ಮತ್ತು ಮಾವಿನ ಕಾಯಿಗಳನ್ನು ಶಂಕರನಿಗೆ ಸಮರ್ಪಿಸಬೇಕೆಂದು ನಿಶ್ಚಯಿಸಿದನು. ಒಂದು ದಿನ ಅದರಂತೆ ಬಹು ಪ್ರಯಾಸದಿಂದ ಸ್ವಲ್ಪ ಬತ್ತವನ್ನೂ, ತರಕಾರಿಯನ್ನೂ ಹೇಗೋ ಸಂಪಾದಿಸಿ, ಮಹಾದೇವನಿಗೆ ಸಮರ್ಪಿಸುವುದಕ್ಕಾಗಿ ತರಕಾರಿ, ಸೊಪ್ಪು, ಹೊಸ ಮಾವಿನಕಾಯಿಗಳು ಮತ್ತು ಹೊಸಬತ್ತದ ಅಕ್ಕಿ, ಇವನ್ನು ಹೊತ್ತು ಹೊರಟನು. ॥೧೬॥

ಮಹಾದೇವನಿಗೆ ಮಹಾಭಿಷೇಕಮಾಡುವ ಕಾರಣದಿಂದ ಪತಿವ್ರತೆಯಾದ ಆತನ ಹೆಂಡತಿಯು ಪೂಜಾಸಾಮಗ್ರಿಗಳನ್ನು ಹೊತ್ತು ಮೆಲ್ಲಗೆ ಅವನ ಹಿಂದೆಯೇ ನಡೆದಳು. ಚಂಡಸೂರ್ಯನ ಕಿರಣಗಳ ಘರ್ಷಣೆಯಿಂದ ಭೂಮಿಯು ಒಡೆದು ದಾರಿಯಲ್ಲಿ ಬಿಲವಾಗಿರಲು, ಆಗ ಆಕೆಯ ಕೈಯಲ್ಲಿದ್ದ ಪೂಜಾಸಾಮಗ್ರಿಗಳೆಲ್ಲವೂ ಜಾರಿ ಆ ಬಿಲದಲ್ಲಿ ಬಿದ್ದುಹೋದುವು. ॥೧೭-೧೮॥

ಹೀಗೆ ತಾನು ಕಷ್ಟಪಟ್ಟು ಸಂಪಾದಿಸಿದ್ದ ಮಾವಿನಕಾಯಿನೊಡನಿದ್ದ ಹೊಸ ಬತ್ತದಕ್ಕಿಯೆಲ್ಲವೂ ಬಿಲದಲ್ಲಿ ಬಿದ್ದದ್ದನ್ನು ನೋಡಿ, ಆತನು ಖೇದದಿಂದ ಒಳಗೇ

ಭಾರ್ಯಾಕರಂ ಸಮಾಲಂಬ್ಯ ಪ್ರಸ್ಖಲನ್ಸ ಬಿಲಾಂತರೇ ।
ಪೂಜಾದ್ರವ್ಯಂ ಸಮುದ್ಧರ್ತುಂ ನ ಶಶಾಕ ಕರಾದಪಿ ॥೨೦॥

ಇತಃ ಪರಂ ಕಿಮೇತೇನ ಪೂಜಾರ್ಥಂ ಗಮನೇನ ಮೇ ।
ವ್ರತಹಾನೇರ್ವರಂ ಕಾಯಂ ತ್ಯಕ್ತುಮಿಚ್ಛಾಮಿ ವೇಗತಃ ॥೨೧॥

ಇತಿ ನಿಶ್ಚಿತಕರ್ತವ್ಯಃ ಕಂಠಂ ಶಂಕುಲಯಾ ಹಠಾತ್ ।
ದಲಯನ್ ಸಂಸೃತೇರ್ಮೂಲಮಿವ ರೇಜೇತಿಕೌತುಕೀ ॥೨೨॥

ತದಾ ಬಿಲಾಂತರೇ ಶಂಭುಃ ಪಾಣಿಮೇಕಂ ಪ್ರದರ್ಶಯತ್ ।
ಚಕರ್ಷ ದಶನೈಶ್ಚೂತಂ ವಿಲೇಢಿತರವೋದ್ಭಟಂ ॥೨೩॥

ಭಕ್ತಪ್ರೀತ್ಯಾ ಮಹಾಪೂಜಾ ಸ್ವೀಕೃತೇತಿ ಪ್ರದರ್ಶಯನ್ ।
ಅಂತರೇವ ಬಿಲೇಚೂತಂ ದಶನ್ನಾವಿರ್ಬಭೂವ ಸಃ ॥೨೪॥

---

ಕೊರಗಿದನು. ಹಾಗೆಯೇ ತೂರಾಡುತ್ತಾ ಅಲ್ಲಲ್ಲಿ ಎಡೆವುತ್ತಾ ಬಿಲದೊಳಗೆ ಬೀಳು ವಷ್ಟರಲ್ಲಿ, ತನ್ನ ಹೆಂಡತಿಯ ಕೈಹಿಡಿದು ನಿಂತುಕೊಂಡನು. ಅನಂತರ ತಾನೆಷ್ಟು ಪ್ರಯತ್ನಿಸಿದರೂ ಪೂಜಾಸಾಮಗ್ರಿಗಳನ್ನು ಬಿಲದಿಂದ ಮೇಲಕ್ಕೆ ತೆಗೆಯಲು ಶಕ್ತ ನಾಗಲಿಲ್ಲ. ॥೧೯-೨೦॥

ಹಾಗೆ ಆಶಾಭಂಗವನ್ನು ಪಡೆದ ಆತನು ಪೂಜೆಯ ಸಾಮಗ್ರಿಗಳೊಂದೂ ನಿಲ್ಲದೇ ಸುಮ್ಮನೆ ಪೂಜೆಮಾಡಲು ಹೋಗುವುದರಿಂದೇನು ಪ್ರಯೋಜನ! ನಿಯಮ ಭಂಗನಾಗಿ ಬಾಳುವುದಕ್ಕಿಂತ ಜಾಗ್ರತೆ ಈ ದೇಹತ್ಯಾಗಮಾಡುವುದೇ ಮೇಲೆಂದು ಇಚ್ಛಿಸುತ್ತೇನೆಂದು ದೃಢನಿಶ್ಚಯಮಾಡಿ, ಆ ದಾಯನು ತನ್ನ ಕುತ್ತಿಗೆಯನ್ನು ಬಲಾತ್ಕಾರವಾಗಿ ಕತ್ತಿಯಿಂದ ಕತ್ತರಿಸುತ್ತಾ, ಈ ಸಂಸಾರದ ಮೂಲವನ್ನೇ ಹೊಡೆ ಯುತ್ತಿರುವನೋ ಎಂಬಂತೆ ಕುತೂಹಲವನ್ನೆಸಗುತ್ತಾ ವಿರಾಜಿಸಿದನು. ॥೨೧-೨೨॥

ಆಗ ಬಿಲದ ಮಧ್ಯದಲ್ಲಿ ಶಿವನು ತನ್ನ ಒಂದು ಕೈಯನ್ನು ತೋರಿಸಿದನು. ಅಲ್ಲದೇ ಮಾವಿನಕಾಯಿಗಳನ್ನು ಎಳೆದುಕೊಂಡು ಹಲ್ಲುಗಳಿಂದ ಚಪ್ಪರಿಸುತ್ತಾ ಅದನ್ನು ಅಗಿದು ರುಚಿ ನೋಡಿ ಆರ್ಭಟಿಸಿದನು. ಭಕ್ತನಲ್ಲಿರುವ ಪ್ರೀತಿಯಿಂದ ವಿಶೇಷಪೂಜೆಯೇ ಸ್ವೀಕರಿಸಲ್ಪಟ್ಟಿತೆಂದು ತೋರಿಸಿಕೊಳ್ಳುವನಂತೆ ಬಿಲದ ಒಳಗೇ ಮಾವಿನ ಕಾಯಿಗಳನ್ನು ಕಡಿಯುತ್ತಾ ಪ್ರತ್ಯಕ್ಷನಾದನು. ॥೨೩-೨೪॥

ವೃಷಭಾರೂಢಮದ್ರೀಂದ್ರಕನ್ಯಯಾ ಸಹ ಶಂಕರಂ ।
ಸಭಾರ್ಯೋ ವೀಕ್ಷ್ಯ ವೀಕ್ಷ್ಯಾಂತರ್ಭಾವಯನ್ಪ್ರಾಂಜಲಿಸ್ಥಿತಃ ॥೨೫॥

ಸ್ವಾಮಿನ್ನಯಜಯೇಶಾನೇತ್ಯೇವ ಸಸ್ತೋತುಮುದ್ಯತಃ ।
ಮೌಗ್ಧ್ಯಾನ್ಮೇ ವೀಕ್ಷ್ಯ ಭೋಜ್ಯಂ ತು ಶ್ವಭ್ರಸ್ಥಂ ಭುಕ್ತವಾನಸಿ॥೨೬॥

ಶಂಭೋ ಪಾಂ ರಕ್ಷ ವಾಮಾಂಕ ವಾಮಭಾಗವಿನೋದಯ ।
ಪ್ರಸೀದ ಪಾರ್ವತೀನಾಥ ಭಕ್ತವತ್ಸಲ ಪಾಹಿ ಮಾಂ ॥೨೭॥

ಇತಿ ಸ್ತುತೋ ದೃಶ್ಯವಪುರ್ವೃಷೇಸ್ಥಿತ
ಸ್ತ್ವಯಾಸ್ಯತಾಂ ದಾರಸುಖೇನ ಮತ್ಪದಂ ।
ಇತಿ ಬ್ರುವಂಸ್ತಾಮಿಷತಾಂ ದಿವೌಕಸಾಂ
ಪರಂ ಪದಂ ಸ್ವಂ ಪರಮೇಶ್ವರೋ ಯಯೌ ॥೨೮॥

---

ಪಾರ್ವತಿಯೊಡನೆ ವೃಷಭವನ್ನೇರಿರುವ ಶಂಕರನನ್ನು ಕಂಡು, ಆ ದಾಯನು ತನ್ನ ಹೆಂಡತಿಯೊಡನೆ ಕೂಡಿ ಮನಸ್ಸಿನಲ್ಲಿ ವಿಶೇಷ ಭಕ್ತಿಯುಳ್ಳವನಾಗಿ ಕೈಮುಗಿದು ಕೊಂಡು, ಸ್ವಾಮಿಯೇ, ಈಶ್ವರನಾದ ನಿನಗೆ ಜಯವಾಗಲಿ; ಎಂದು ಸ್ತೋತ್ರ ಮಾಡಲು ಪ್ರಾರಂಭಿಸಿ, ಪ್ರಭೋ, ಪ್ರೀತಿಯಿಂದ ನಮ್ಮನ್ನು ನೋಡಿ, ಬಿಲದಲ್ಲಿ ಬಿದ್ದಿದ್ದ ಆಹಾರಪದಾರ್ಥಗಳನ್ನೂ ನಮಗೋಸ್ಕರ ಸ್ವೀಕರಿಸಿದೆಯಲ್ಲಾ! ॥೨೫-೨೬॥

ಅರ್ಧನಾರೀಶ್ವರನಾದ ಶಂಭುವೇ ನಮ್ಮನ್ನು ಕಾಪಾಡು; ನಮ್ಮನ್ನು ಆನಂದಗೊಳಿಸು; ಪಾರ್ವತೀರಮಣನೇ, ಭಕ್ತವತ್ಸಲನಾದ ಪ್ರಭುವೇ, ನನ್ನನ್ನು ಅನುಗ್ರಹಿಸಿ ಕಾಪಾಡಿದೆಯಲ್ಲವೆ! ಮಹಾದೇವನೇ ನೀನು ಭಕ್ತವತ್ಸಲನು. ॥೨೭॥

ಹೀಗೆ ವೃಷಭಾರೂಢನಾಗಿ ಪಾರ್ವತಿಯೊಡನೆ ಗೋಚರನಾದ ಪರಮೇಶ್ವರನು ಆ ಶೂದ್ರದಂಪತಿಗಳಿಂದ ಸ್ತೋತ್ರಮಾಡಲ್ಪಟ್ಟವನಾಗಿ, ' ಅಯ್ಯ ಭಕ್ತನೇ, ನಾನು ನಿನ್ನ ಭಕ್ತಿಗೆ ಮೆಚ್ಚಿರುವೆನು. ನೀನು ಈ ಲೋಕದಲ್ಲಿ ನಿನ್ನ ಪತ್ನಿಯೊಡನೆ ಸುಖವಾಗಿ ಸಕಲ ಭೋಗಗಳನ್ನೂ ಅನುಭವಿಸಿ, ಆಮೇಲೆ ನನ್ನ ಸಾಯುಜ್ಯವನ್ನೈದುವನಾಗೆಂದು ಹೇಳಿ ಅನಂತರ ದೇವತೆಗಳೂ ಅಪೇಕ್ಷಿಸುವಂತಹ ತನ್ನ ನಿಜಧಾಮವಾದ ಕೈಲಾಸಕ್ಕೆ ಹೋದನು. ॥೨೮॥

ಯಃ ಶಂಕುಲಾಖಂಡಿತಕಂಠಕಾಂಡ
ಶ್ರೀಕಂಠಕಾರುಣ್ಯಪದಂ ಬಭೂವ ।
ತದಾದಿನಾಮ್ನಾ ಜಗದೀಶಭಕ್ತಾ
ಸ್ತಂ ಶಂಕುಲಾದಾಯ ಇತಿ ಬ್ರುವಂತಿ ॥೨೯॥

ಯಃ ಶಂಕರಾರಾಧನ ಭಕ್ತಿಯುಕ್ತಾಂ
ಶ್ರೀಶಂಕುಲಾದಾಯಕಥಾಂ ಶೃಣೋತಿ ।
ಸಂಸಾರಬಂಧಂ ಸ ವಿಧೂಯ ಸರ್ವಂ
ಸಾಕ್ಷಾತ್ಪದಂ ಶಾಶ್ವತಮೇತಿ ಶಂಭೋಃ ॥೩೦॥

॥ ಶ್ರೀಸ್ಕಂದ ಉವಾಚ

ಚೋಲೇಷು ಶುಭಕಾವೇರೀ ಸ್ರೋತೋವರ್ಧಿತಶಾಲಿಷು ।
ಶ್ರೀವಿಲಾಸಪದೋದ್ದೇಶೋ ದೃಶೋರಾನಂದದಾಯಕಃ ॥೩೧॥

ಹಂಸಾಃ ಸ್ವಪಂತಿ ಪದ್ಮಾಂತಃ ಕೋಕಿಲಾಶ್ಚೂತಪಲ್ಲವೇ ।
ಹಲ್ಲಕೀಕುಡ್ಮಲೇ ಭೃಂಗಾ ಯತ್ರ ಮೀನಾಶ್ಚ ಶೈವಲೇ ॥೩೨॥

---

ಅವನು ಕತ್ತಿಯಿಂದ ಕತ್ತರಿಸಲ್ಪಟ್ಟ ಕುತ್ತಿಗೆಯುಳ್ಳವನಾಗಿ, ಶ್ರೀಕರನೆನಿಸಿದ ಮಹೇಶ್ವರನ ದಯೆಗೆ ಆಶ್ರಯನಾದ ಕಾರಣ ಅದು ಮೊದಲು ಜಗದೀಶ್ವರನ ಭಕ್ತರೆಲ್ಲರೂ ಅವನನ್ನು 'ಶಂಕುಲಾದಾಯ' ಎಂಬ ಹೆಸರಿನಿಂದ ಕರೆಯ ತೊಡಗಿದರು. ॥೨೯॥

ಶಂಕರನ ಪೂಜೆಯಲ್ಲಿ ಭಕ್ತಿಪೂರ್ಣನಾಗಿ ಮೆರೆದು ಆ ಮೂಲಕ ಶಿವಾನುಗ್ರಹವನ್ನು ಪಡೆದ ಈ ಶಂಕುಲಾದಾಯನ ಕಥೆಯನ್ನು ಕೇಳುವವರು, ಈ ಸಂಸಾರ ಬಂಧನದಿಂದ ಮುಕ್ತರಾಗಿ ಸಕಲ ಶಾಶ್ವತ ಸುಖಗಳಿಗೂ ಆಶ್ರಯವಾದ ಶಿವನ ಕೈಲಾಸವನ್ನು ಪಡೆಯುತ್ತಾರೆಂದು ಕುಮಾರಸ್ವಾಮಿಯು ಜೈಗೀಶವ್ಯನಿಗೆ ಹೇಳಿದನು. ॥೩೦॥

ಅಯ್ಯ ಜೈಗೀಷವ್ಯನೇ, ಮಂಗಳಕರವಾದ ಕಾವೇರೀನದಿಯ ಪ್ರವಾಹಗಳಿಂದ ಹುಲುಸಾಗಿ ಬೆಳೆದಿರುವ ಗದ್ದೆಗಳುಳ್ಳ ಚೋಲದೇಶಗಳಲ್ಲಿ ಕಣ್ಣಿಗೆ ನೋಡಲು ಆನಂದವನ್ನುಂಟುಮಾಡುತ್ತಾ, ಲಕ್ಷ್ಮೀವಿಲಾಸಕ್ಕೆ ಆಶ್ರಯಪ್ರದವಾದ ಮನೋಹರವಾದ ಅನೇಕ ಪ್ರದೇಶಗಳಿರುವುವು. ಅಲ್ಲಿ ಹಂಸಗಳು ತಾವರೆಗಳಲ್ಲಿಯೂ ಕೋಗಿಲೆ

ಸಹ್ಯಜಾಂಭೋರವೋತ್ಕ್ಷಿಪ್ತಾಃ ಶಾಖಾರಂಭಾಫಲೋದ್ಧೃತಾಃ ।
ಪೂಗಾಗ್ರರೂಢಸಚ್ಛಾಯ ನಾಗವಲ್ಲೀವಿರಾಜಿತೇ ॥೩೩॥

ತಸ್ಮಿನ್ದೇಶೇ ಮಂಗಲಾಖ್ಯೇ ಗ್ರಾಮೇ ನಿಯತಮಂಗಲೇ ।
ಗೋನಾಥ ಇತ್ಯಭೂತ್ಕಶ್ಚಿದ್ಗೋಪಾಲಕುಲಪಾಲಕಃ ॥೩೪॥

ಭವೇ ಭಕ್ತಿಂ ಸ್ಥಿರಾಂ ಬಿಭ್ರದ್ಭೂತಿಲೇಪನ ಭೂಷಣಃ ।
ವೃಭಾವಯತ್ಸಗೋನಾಥೋ ಗಾವಃ ಶತಸಹಸ್ರಶಃ ॥೩೫॥

ಸಂಚಾರ್ಯ ಶಾದ್ವಲವನೇ ಪಾಯಯಿತ್ವಾ ನದೀಪಯಃ ।
ರಕ್ಷನ್ದುಷ್ಟಮೃಗೇಭ್ಯಶ್ಚ ಗವಾಂಕುಲಮಪಾಲಯತ್ ॥೩೬॥

---

ಗಳು ಮಾವಿನ ಚಿಗುರಿನಲ್ಲಿಯೂ, ದುಂಬಿಗಳು ಕೆಂದಾವರೆಯ ಮೊಗ್ಗುಗಳಲ್ಲಿಯೂ ಮೀನುಗಳು ಪಾಚಿಗಳ ಮೇಲೆಯೂ ಆನಂದದಿಂದ ಮಲಗಿ ನಿದ್ರಿಸುತ್ತಿರುವುವು. ||೩೧-೩೨||

ಕಾವೇರೀನದಿಯ ಪ್ರವಾಹದ ನೀರು ಎರಡುದಡಗಳಲ್ಲಿಯೂ ಹರಿಯುವಾಗ ದಡದಲ್ಲಿದ್ದ ಮರದ ಕೊಂಬೆಗಳ ಮೇಲೆಯೂ, ಬಾಳೆಯ ಎಲೆಗಳ ಮೇಲೆಯೂ ಬಿದ್ದು ಹನಿಹನಿಗಳಾಗಿ ನಿಂತಿರುವುವು. ಉದ್ದವಾಗಿ ಬೆಳೆದಿರುವ ಅಡಿಕೆಮರಗಳಿಗೆ ವೀಳೆಯದೆಲೆಗಳ ಹಂಬುಗಳು ಹಬ್ಬಿ ತಾನೇತಾನಾಗಿ ವಿರಾಜಿಸುತ್ತಿರುವುವು. ಇಂತಹ ಚೋಲದೇಶದಲ್ಲಿ ನಿತ್ಯಮಂಗಳೋತ್ಸವವು ನಡೆಯುತ್ತಿದ್ದ 'ಮಂಗಳ' ವೆಂಬ ಒಂದು ಗ್ರಾಮದಲ್ಲಿ ಒಬ್ಬ ಗೋನಾಥನೆಂಬ ದನಕಾಯುವ ಗೊಲ್ಲನಿದ್ದನು. ||೩೩-೩೪||

ಶಿವನಲ್ಲಿ ದೃಢಭಕ್ತಿಯನ್ನಿರಿಸಿ ವಿಭೂತಿಯನ್ನು ಲೇಪನಮಾಡಿ ಅದನ್ನೇ ಹಣೆಗೆ ಅಲಂಕರಿಸಿಕೊಂಡು, ಈ ಗೋನಾಥನು ಸಾವಿರಾರು ಹಸುಗಳನ್ನು ಕಾಯುತ್ತಿದ್ದನು. ಅವನು ಈ ಹಸುಗಳನ್ನು ಹಸುರು ಹುಲ್ಲಿರುವ ಕಾಡುಗಳಲ್ಲಿ ಚೆನ್ನಾಗಿ ಮೇಯಿಸಿ, ಹೊಳೆಯ ನೀರನ್ನು ಕುಡಿಸಿ, ಹುಲಿ, ಕಿರುಬ ಮುಂತಾದ ದುಷ್ಟ ಪ್ರಾಣಿಗಳಿಂದ ಈ ಹಸುಗಳಿಗೆ ಯಾವ ಬಾಧೆಯೂ ಬರದಂತೆ ಕಾಪಾಡುತ್ತಿದ್ದನು. ||೩೫-೩೬||

ಗಾಃ ಸ ವತ್ಸಾಃ ಪಯೋಹೀನಾಃ ಗರ್ಭವತ್ಯಶ್ಚ ದೋಹಿನೀಃ ।
ಯೂಥಾಪೋತವೃಷೈರ್ಯುಕ್ತೋ ವೃದ್ಧಾಶ್ಚತರುಣಾಸ್ತಥಾ ॥೩೭॥

ತಾಃ ಸ ಪಾಲಯಿತುಂ ಗೋಪಾನ್ಗೋಷ್ಠೇ ಗೃಷ್ಟೀಃ ಪೃಥಕ್ ಪೃಥಕ್ ।
ನಿಯುಜ್ಯ ದೇವನಾಮಾನಿ ವೇಣುನಾ ಗಾತುಮುದ್ಯತಃ ॥೩೮॥

ವೇಣೌ ಸುಷಿರಶಾಸ್ತ್ರೋಕ್ತರಂಧ್ರಾಣ್ಯಷ್ಟ ವಿಧಾಯ ಸಃ ।
ಆದಿರಂಧ್ರಂ ಮುಖೇ ನ್ಯಸ್ಯ ರಂಧ್ರೇಷ್ವನ್ಯೇಷು ಚಾಂಗುಲೀಃ ॥೩೯॥

ವ್ಯಾಸಾರಯನ್ಯಥಾಸ್ಥಾನಂಸ್ಥಿತಾನಸಪ್ತಸ್ವರಾನ್ವಿತಂ ।
ದೇವೇಶಂ ಮನಸಾ ಧ್ಯಾಯನ್ನಗೌ ಪಂಚಾಕ್ಷರಂ ಮನುಂ ॥೪೦॥

ಭಾವಾವೇಶವಶಂ ವಿಶ್ವಂ ಕೃತ್ವಾ ಸ್ಥಾವರಜಂಗಮಂ ।
ತೋಷಯಾಮಾಸ ದೇವೇಶಂ ವೇಣುನಾದಾಮೃತೇನ ಸಃ ॥೪೧॥

---

ಕರುಗಳೂ, ಜೊತೆಯಲ್ಲಿ ಕರುಗಳುಳ್ಳ ಹಸುಗಳೂ, ಹಾಲುಕೊಡದಿರುವುವೂ, ಗಬ್ಬವಾಗಿರುವುವೂ ಮತ್ತು ಹಾಲು ಕರೆಯುತ್ತಿರುವುವೂ, ಎತ್ತು, ಹೋರಿ ಮತ್ತು ಗೂಳಿಗಳುಳ್ಳವೂ, ಮುದಿ ಎಳಕು ಮುಂತಾದ ಎಲ್ಲಾ ಬಗೆಯ ಹಸುಗಳನ್ನೂ ಸೇರಿಸಿಕೊಂಡು ಅವುಗಳನ್ನು ಜೋಪಾನವಾಗಿ ಕಾಯುವುದಕ್ಕೋಸ್ಕರ ಅಲ್ಲಲ್ಲೇ ತಂಡತಂಡವಾಗಿ ಗೊಲ್ಲರನ್ನು ನಿಯಮಿಸಿ, ತಾನು ಒಂದೆಡೆ ನಿಂತು ಮಹೇಶನ ದಿವ್ಯನಾಮಗಳನ್ನು ಕೊಳಲಿನಿಂದ ಪಾಡಲು ಉದ್ಯುಕ್ತನಾಗುತ್ತಿದ್ದನು. ॥೩೭-೩೮॥

ಬಿದಿರಿನಲ್ಲಿ ಸೂಕ್ಷ್ಮವಾಗಿ ಶಾಸ್ತ್ರೋಕ್ತವಾದ ಎಂಟು ರಂಧ್ರಗಳನ್ನು ಮಾಡಿಕೊಂಡು, ಮೊದಲಿನ ರಂಧ್ರದಲ್ಲಿ ಬಾಯನ್ನಿಟ್ಟು, ಉಳಿದುವುಗಳಲ್ಲಿ ಬೆರಳನ್ನಿಟ್ಟು ನುಡಿಸುತ್ತಾ ಸ್ಥಾನವನ್ನು ಮೀರದೇ ತಾನದೊಡನೆ, ಸ, ರಿ, ಗ, ಮ, ಪ, ದ, ನಿ, ಗಳೆಂಬ ಸಪ್ತಸ್ವರಗಳೊಡನೆ ದೇವತೋತ್ತಮನಾದ ಶಂಕರನನ್ನು ಮನಸ್ಸಿನಲ್ಲಿ ನೆನೆಯುತ್ತಾ ಶಿವಪಂಚಾಕ್ಷರ ಮಂತ್ರವನ್ನು ಹಾಡಿದನು. ॥೩೯-೪೦॥

ಅಮೃತಪ್ರಾಯವಾದ ತನ್ನ ಕೊಳಲಿನ ಧ್ವನಿಯಿಂದ ಚರಾಚರಾತ್ಮಕವಾದ ಪ್ರಪಂಚವನ್ನೆಲ್ಲಾ ಅವನು ಭಕ್ತಿಭಾವಪೂರ್ಣವನ್ನಾಗಿ ಮಾಡುತ್ತಾ, ಮಹೇಶ್ವರನನ್ನೂ ಧ್ಯಾನಿಸಿ ಸಂತೋಷಪಡಿಸಿದನು. ಅವನು ಒಂದುಸಲ ಕರುವಿನ ಹಗ್ಗದಿಂದ

ಸ ಕದಾಚಿದ್ವತ್ಸ ರಜ್ಜುರ್ವಲ್ಲಿನೀಕೇಶರಜ್ಜುಭಿಃ ।
ನವ್ಯದೇತಸ್ಯ(?)ಕುಸುಮಮೇಕಪಾರ್ಶ್ವೆ ಸಮುನ್ನತಂ ॥೪೨॥

ಚುಲಿಕಾ ಬಂಧನೇ ರಮ್ಯೇ ನಿವೇಶ್ಯಾಹ್ವಾನ ಶೃಂಗಕಂ ।
ಕಂದಲಂ ಕುಸುಮಂ ಕರ್ಣೇ ವಹನ್ಫಾಲೇ ತ್ರಿಪುಂಡ್ರಕಂ ॥೪೩॥

ವಕ್ಷೋಲಸತ್ಕುಂದಮಾಲಾ ಭೃಂಗಗೀತ ಮಹಾಭುಜಃ ।
ವಲ್ಕಲೋಪರಿ ಸಂವೀತ ವ್ಯಾಲಂಬಿ ಕ್ಷ್ಮಾಮಪಲ್ಲವಃ ॥೪೪॥

ವೇಣುಯಷ್ಟಿಲಸತ್ಪಾಣಿಃ ಸ ಪಾದುಕಪದದ್ವಯಂ ।
ಗೋಪೈರ್ಗೋಭಿಃ ಸವತ್ಸಾಭಿರ್ಗೋನಾಥೋ ನಿರ್ಯಯೌ ಬಹಿಃ॥೪೫॥

ಇಂದ್ರಗೋಪಾಧರಾ ಚಂಚದ್ವಿದ್ಯುದ್ದಾಮ ಪಯೋಧರಾ ।
ಭೃಂಗಾಲಕಾ ಕುಂದಹಾಸಾ ವನಂ ವರ್ಷಾ ವಧೂರಗಾತ್ ॥೪೬॥

---

ತನ್ನ ಕೇಶಪಾಶವನ್ನು ಬಿಗಿದುಕಟ್ಟಿ ಎಳೆಬಳ್ಳಿಯಿಂದ ಹೂವನ್ನು ಕಟ್ಟಿಕೊಂಡು ಅದನ್ನು ಮುಡಿದುಕೊಂಡನು. ॥೪೧-೪೨॥

ಸುಂದರವಾದ ಆ ತನ್ನ ತಲೆಯ ಗಂಟಿನಲ್ಲಿ ಗೊಲ್ಲರನ್ನು ಕರೆಯಲು ಮಾಡಿಕೊಂಡಿದ್ದ ಕೊಂಬಿನ ಶಿಲ್ಪಿಯನ್ನು ಸಿಕ್ಕಿಸಿಕೊಂಡು, ಸಣ್ಣ ಚಿಗುರು ಮತ್ತು ಹೂಗಳನ್ನು ಕಿವಿಯಲ್ಲಿ ಧರಿಸಿ, ಹಣೆಯಲ್ಲಿ ಭಸ್ಮತ್ರಿಪುಂಡ್ರವನ್ನಿಟ್ಟು, ವಕ್ಷಸ್ಥಳವನ್ನು ಮಲ್ಲಿಗೆಯ ಹಾರದಿಂದ ಅಲಂಕರಿಸಿ, ಭುಜಪ್ರದೇಶದಲ್ಲಿ ಈ ಹೂವಿನ ಪರಿಮಳಕ್ಕಾಗಿ ಬಂದು ಮುತ್ತಿ ಹಾಡುತ್ತಿರುವ ದುಂಬಿಗಳಿಂದ ಯುಕ್ತನಾಗಿ ಈ ಗೋನಾಥನು ತಾನು ಉಟ್ಟಿದ್ದ ನಾರುಮಡಿಯಮೇಲೆ ಅಡ್ಡಡ್ಡಲಾಗಿ ಸೂಕ್ಷ್ಮವಾದ ಚಿಗುರುಗಳನ್ನು ಕಟ್ಟಿಕೊಂಡನು. ॥೪೩-೪೪॥

ಕೊಳಲು ಮತ್ತು ಬಿದಿರುಕೋಲನ್ನು ಕೈಗಳಲ್ಲಿ ಧರಿಸಿ ಪಾದುಕೆಗಳಿಂದ ಶೋಭಿಸುವ ಎರಡು ಕಾಲ್ಗಳುಳ್ಳವನಾಗಿ, ಗೊಲ್ಲರು ಮತ್ತು ಕರುಗಳೊಡಗೂಡಿದ ಹಸುಗಳೊಡನೆ ಗೋನಾಥನು ಹೊರಗೆ ಹೊರಟನು. ಆಗ ಕಾಮನಬಿಲ್ಲೆಂಬ ತುಟಿಯಿಂದಲೂ, ಚಂಚಲವಾದ ಮಿಂಚಿನಿಂದ ಉನ್ನತವಾಗಿರುವ ಮೇಘಗಳೆಂಬ ಸ್ತನಗಳಿಂದಲೂ, ದುಂಬಿಗಳೆಂಬ ಮುಂಗುರುಳಿನಿಂದಲೂ ಮಲ್ಲಿಗೆಯೆಂಬ ಮುಗುಳು ನಗೆಗಳಿಂದಲೂ, ಶೋಭಿಸುತ್ತಾ ಮಳೆಗಾಲವೆಂಬ ವಧುವು ಆ ವನಕ್ಕೆ ಬಂದಳು. (ಅಂದರೆ ಮಳೆಗಾಲ ಬಂದಿತು.) ॥೪೫-೪೬॥

ಗೋಷ್ಮೇ ತತ್ರ ಚರಂತೀಷು ಗೋಪ್ಯೈಃ ಸಂಭೃತಯಷ್ಟಿಷು ।
ಪಾರ್ಶ್ವೇ ಚರನ್ಸಗೋನಾಥಃ ಕೃತಮಾಲವನಂ ಯಯೌ ॥೪೭॥

ತತ್ರ ದೃಷ್ಟ್ವಾ ಜಟಾದೀರ್ಘಲಂಬಪುಷ್ಪಾವಲಿಂ ಸುಧೀಃ ।
ಆರಗ್ವಧಂ ಶಿವಂ ಮತ್ವಾ ತಸ್ಥೌ ತಲ್ಲಗ್ನಮಾನಸಃ ॥೪೮॥

ಬಿಲ್ವೈರ್ನಲ್ವಪ್ರಮಾಣೈಸ್ತೈಸ್ತತ್ಫಲೈಶ್ಚ ಪಚೇಲಿಮೈಃ ।
ಕುರ್ವನ್ನೋದರಪೂರ್ತಿಂ ಸ ಗೋಪಃ ಕ್ಷೌದ್ರಾಪ್ಲುತೇಷು ಚ ॥೪೯॥

ಗೋನಾಥೋ ಭೂತನಾಥಸ್ಯ ಗಾಯನ್ಪಂಚಾಕ್ಷರಂ ಮನುಂ ।
ವೇಣುನಾದಾಹೃತಂ ವಿಶ್ವಂ ಗವಾಂಗಣಮತಂದ್ರಿತಃ ॥೫೦॥

ಸ್ತಬ್ಧಕರ್ಣೇ ಧೃತಂ ಪುಚ್ಛಂ ತೃಣವಕ್ತ್ರಸುತಸ್ರವಂ ।
ವತ್ಸಾನಪ್ಯುಜ್ಝಿಹಂತ್ಯಸ್ತಾಸ್ತಮೇವಾನುಪರಿಸೃತಾಃ ॥೫೧॥

---

ಹಸುಗಳ ಹಿಂಡಿನಲ್ಲಿ ಗೊಲ್ಲರು ದೊಣ್ಣೆಗಳನ್ನು ಹಿಡಿದು ಮಧ್ಯದಲ್ಲಿ ಸಂಚಾರಮಾಡುತ್ತಿರಲು, ಆ ಗೋನಾಥನು ಪಕ್ಕದಲ್ಲಿ ಸಂಚರಿಸುತ್ತಾ, ಕಕ್ಕೆಯ ಮರದ ಕಾಡಿಗೆ ಹೋದನು. ಅಲ್ಲಿ ಉದ್ದವಾದ ಜಡೆಯಂತಿರುವ ರೆಂಬೆಗಳಲ್ಲಿ ಜೋಲುಬಿದ್ದಿರುವ ಕಕ್ಕೆಹೂಗಳ ಸಮೂಹವನ್ನು ಕಂಡು ಜ್ಞಾನಿಯಾದ ಆತನು ಕಕ್ಕೇಗಿಡವನ್ನೇ ಶಿವನೆಂದು ಭಾವಿಸಿ ಆದರಲ್ಲಿಯೇ ನೆಟ್ಟಮನಸ್ಸುಳ್ಳವನಾದನು. ॥೪೭-೪೮॥

ಆ ಗೋನಾಥನು ನಲ್ವಪ್ರಮಾಣವುಳ್ಳ (೪೦೦ ಹಸ್ತಪ್ರಮಾಣವುಳ್ಳ) ಬಿಲ್ವದಳಗಳಿಂದಲೂ, ಮಾಗಿದ ಕಕ್ಕೇಹಣ್ಣುಗಳಿಂದಲೂ ಪೂಜಿಸಿ ಜೇನುತುಪ್ಪದಲ್ಲಿ ನೆನಸಿದ ಆ ಹಣ್ಣುಹಂಪಲನ್ನು ತಿಂದು ತನ್ನ ಹೊಟ್ಟೆಯ ಹಸಿವನ್ನು ಪರಿಹರಿಸಿಕೊಂಡು ಪ್ರಾಣಿಗಳಿಗೊಡೆಯನಾದ ಮಹಾದೇವನ ಶಿವಪಂಚಾಕ್ಷರವನ್ನು ಹಾಡುತ್ತಾ, ತನ್ನ ಕೊಳಲಿನ ಧ್ವನಿಯಿಂದ ಸಕಲ ಪ್ರಪಂಚವನ್ನೂ ಮತ್ತು ಗೋಸಮೂಹವನ್ನೂ ತನ್ನ ಕಡೆಗೆ ಆಕರ್ಷಿಸಿಬಿಟ್ಟನು. ॥೪೯-೫೦॥

ಕಿವಿಗಳನ್ನು ನೆಟ್ಟಗೆ ಮಾಡಿಕೊಂಡು, ಬಾಲವನ್ನು ಮೇಲಕ್ಕೆತ್ತಿ, ಬಾಯಲ್ಲಿ ಹುಲ್ಲುಕಚ್ಚಿದ್ದನ್ನು ಹಾಗೆಯೇ ಕೆಳಗೆ ಬೀಳಿಸುತ್ತಾ, ತಮ್ಮತಮ್ಮ ಕರುಗಳನ್ನೂ ಬಿಟ್ಟು, ಹಸುಗಳು ಆ ಗೋನಾಥನನ್ನೇ ಸುತ್ತುವರಿದು ನಿಂತುಕೊಂಡವು. ಆ

ಸ ಸಪ್ತಸ್ವರತತ್ಕಾಲರಾಗೈಃ ಪಂಚಾಕ್ಷರಂ ಮನುಂ ।
ಗಾಯನ್ನಿಗಾಯ ಗೋನಾಥಃ ಸರ್ವಾನ್ವೈಣವಿಕಾನ್ಭುವಿ ॥೫೩॥

ಮಹದ್ಭಿರ್ಮಧ್ಯಮೈಃ ಕಾಂತೈರ್ಮಾಧುರ್ಯಪರಿಬೃಂಹಿತೈಃ ।
ವರ್ಣಭೇದೈರ್ಮನೋಹಾರಿರಾಗತಾಲಕ್ರಮಾನ್ವಿತಂ ॥೫೪॥

ವ್ಯಕ್ತಂ ಮಾನಾದಿವಿನ್ಯಾಸಗತಿವೈಚಿತ್ರ್ಯಸಂಭೃತಂ ।
ವಿಶ್ವಗ್ವಿಸ್ತಾರಯಾಮಾಸ ರಾಗಮಾನಂ ಗತಿಕ್ರಮಂ ॥೫೫॥

ಪ್ರಾರಬ್ಧಂ ತತ್ರ ರೋಮಂಥಂ ಪ್ರಸ್ಮರಂತಿ ಸ್ಮ ಧೇನವಃ ।
ಛಾಯಾಂ ವೃಕ್ಷೇಷು ದಿಗ್ವಾತಾವಧೂತೇಷು ಪಯೋಧಿಷು ॥೫೬॥

ಸಂವಿಶಂತೀಷು ಮಧ್ಯಾಹ್ನೇ ಮಧ್ಯೇ ವತ್ಸಾವೃತಾಸು ಚ ।
ವತ್ಸಾ ಮಾತುಸ್ತನಂ ಹಿತ್ವಾ ಕ್ಷರಂ ಕ್ಷೀರಂ ಮುಖಸ್ಥಿತಂ ॥೫೭॥

---

ಗೋನಾಥನು 'ಸ ರಿ ಗ ಮ ಪ ದ ನಿ' ಗಳೆಂಬ ಸಪ್ತಸ್ವರಗಳಿಂದ ಆ ಕಾಲದಲ್ಲಿ ಉಚಿತವಾದ ರಾಗವನ್ನಾಶ್ರಯಿಸಿ ಪಂಚಾಕ್ಷರಮಂತ್ರವನ್ನು ಹಾಡುತ್ತಾ ಈ ಭೂಮಿಯಲ್ಲಿರುವ ಎಲ್ಲಾ ವೈಣಿಕರನ್ನೂ (ಕೊಳಲುಬಾರಿಸುವರನ್ನೂ) ಗೆದ್ದನು. ॥೫೧-೫೩॥

ಕೆಲವು ವೇಳೆ ಉಚ್ಚಸ್ವರದಿಂದಲೂ, ಇನ್ನು ಕೆಲವು ವೇಳೆ ಮಧ್ಯಮಸ್ವರದಿಂದಲೂ, ಮನೋಹರವೂ, ಮಧುರವೂ ಆದ ವರ್ಣಭೇದಗಳಿಂದ ಕೂಡಿ, ರಮ್ಯವಾದ ರಾಗತಾಲಗಳಿಗನುಗುಣವಾಗಿ, ಸ್ಫುಟವಾಗಿ ಎಲ್ಲರಿಗೂ ತಿಳಿಯುವಂತೆ ಮಾನವೇ ಮೊದಲಾದ ವಿನ್ಯಾಸಗತಿಗಳ ವೈಚಿತ್ರ್ಯಗಳೊಡನೆ, ತನ್ನ ರಾಗಪ್ರಮಾಣ, ಮತ್ತು ಗತಿಕ್ರಮಗಳನ್ನು ಎಲ್ಲಾ ಕಡೆಯಲ್ಲೂ ಹರಡುವಂತೆ ಮಾಡಿದನು. ॥೫೪-೫೫॥

ಈ ಗೋನಾಥನ ವೇಣುಗಾನಶ್ರವಣಮಾಡಿ ಹಸುಗಳು ತಾವು ಮೆಲುಕು ಹಾಕುವುದನ್ನೂ ಕೆಲವು ವೇಳೆ ಮರೆಯುತ್ತಿದ್ದವು. ಮಧ್ಯಾಹ್ನದ ಹೊತ್ತಿನಲ್ಲಿ ಮೇಘಗಳು ದಿಙ್ಮಾರುತಗಳಿಂದ ಹೊಡೆದು ತರುತ್ತಿರಲು ಈ ಹಸುಗಳು ಮರದ ನೆರಳಿನಲ್ಲಿ ಮಧ್ಯೇ ಕರುಗಳಿಂದ ಸುತ್ತುವರಿಯಲ್ಪಟ್ಟು ನಿಲ್ಲುತ್ತಿದ್ದವು. ಆಗ ಕರುಗಳೂ ತಾಯಿಯ ಹಾಲುಕುಡಿಯುವುದನ್ನೂ ಸಹ ಮರೆತು, ತಾವು ಕುಡಿದಿದ್ದ ನೊರೆಹಾಲನ್ನು ಹಾಗೆಯೇ ನೆಲಕ್ಕೆ ಜೋಲಿಸುತ್ತಾ ನಿಲ್ಲುತ್ತಿದ್ದವು. ॥೫೬-೫೭॥

ಮೃಗಾಸ್ತೃಣಾನಿ ವಿಜಿಹುಸ್ತಾಂಡವಾನಿ ಶಿಖಂಡಿನಃ ।
ವಿಶ್ವಂ ತದ್ಗಾನವಿವಶಂ ಚಿತ್ರಾರ್ಪಿತಮಿವಾಭವತ್ ॥೫೭॥

ಪಾತಾಳಗಾ ಪಾರ್ವತೀಯಾ ನಾಕಿನಶ್ಚ ನಭಶ್ಚರಾಃ ।
ತದ್ಗಾನಶ್ರವಣಾತ್ಸರ್ವೇ ವಿವಶಾ ವಿಸ್ಮಯಂ ಯಯುಃ ॥೫೮॥

ಏಕಾತ್ಮಭಾವಾ ತದ್ವೇಣುನಿನಾದೇನ ಹೃತಾಶಯಾಃ ।
ಸಹಜಂ ವೃಷಮುತ್ಸೃಜ್ಯ ಗಾವೋ ಗೋಪಂ ಸಮನ್ವಯುಃ ॥೫೯॥

ಮಂದವಾಯುರ್ದ್ರುತಸ್ತಬ್ಧಾ ನದ್ಯಸ್ತಿಮಿತರಂಹಸಃ ।
ನಿಸ್ತರಂಗಾಃ ಸಮುದ್ರಾಶ್ಚ ತದ್ವೇಣುನಿನದಶ್ರವಾತ್ ॥೬೦॥

ಏಕರೂಪೇಂದ್ರಿಯಗ್ರಾಮವೃತ್ತಿವೈಚಿತ್ರ್ಯಮೀಕ್ಷ್ಯತಾಃ ।
ಅಗಮ್ಯಸ್ವಾತ್ಮಜಸ್ನೇಹವಿವಶಾಗೋಪಕನ್ಯಕಾಃ ॥೬೧॥

---

ಜಿಂಕೆಗಳು ಹುಲ್ಲುಮೇಯುವುದನ್ನು ನಿಲ್ಲಿಸಿದವು. ನವಿಲುಗಳು ನರ್ತನವನ್ನು ತ್ಯಜಿಸಿದವು. ಪ್ರಪಂಚವೆಲ್ಲವೂ ಆ ಗೋನಾಥನ ಗಾನಕ್ಕೆ ಅಧೀನವಾಗಿರುವಂತೆ ಆಯಿತು. ಪಾತಾಳಲೋಕವಾಸಿಗಳೂ, ಪರ್ವತನಿವಾಸಿಗಳೂ, ಸ್ವರ್ಗವಾಸಿಗಳೂ ಅಲ್ಲದೇ, ಅಂತರಿಕ್ಷದಲ್ಲಿ ಸಂಚರಿಸುವ ಗಂಧರ್ವ, ಕಿಂನರಾದಿಗಳೂ ಸಹ ಆ ಗೋನಾಥನ ಸಂಗೀತಶ್ರವಣದಿಂದ ಭ್ರಾಂತರಾಗಿ ವಿಸ್ಮಯಹೊಂದಿದರು. ॥೫೭-೫೮॥

ಆ ಗೋನಾಥನ ಕೊಳಲಿನ ಧ್ವನಿಯಿಂದ ಎಳೆಯಲ್ಪಟ್ಟ ಅಂತರಂಗವುಳ್ಳವಾಗಿ ತಾದಾತ್ಮ್ಯಭಾವನೆಯನ್ನೈದಿ ಹಸುಗಳು ಸ್ವಭಾವಸಿದ್ಧವಾದ ತಮ್ಮ ಗೂಳಿಗಳ ಜೊತೆಯನ್ನು ಬಿಟ್ಟು ಗೊಲ್ಲರನ್ನು ಸುತ್ತುವರಿದು ನಿಂತವು. ಮಂದವಾತದ ಬೀಸುವಿಕೆಯಿಂದ ಅಲ್ಲೋಲಕಲ್ಲೋಲವಾಗಿದ್ದ ನದಿಗಳ ವೇಗವು ಅಡಗಿ ಶಾಂತವಾಗಿ ಹರಿಯತೊಡಗಿದವು. ಆ ಗೋನಾಥನ ಕೊಳಲಿನ ಧ್ವನಿಯನ್ನು ಕೇಳಿ ಸಮುದ್ರಗಳಲ್ಲಿಯೂ ಅಲೆಗಳ ಉಬ್ಬರವಿಳಿತಗಳಿಲ್ಲದೆ ಶಾಂತವಾಯಿತು. ॥೫೯-೬೦॥

ಒಂದೇರೀತಿಯಲ್ಲಿರುವ ಆರೋಹಾವರೋಹ ವ್ಯಾಪಾರವುಳ್ಳ ಆ ದಿವ್ಯ ಗಾನವನ್ನು ಕೇಳಿ ಆ ಗೋಪಕನ್ಯೆಯರೆಲ್ಲರೂ ತಮ್ಮ ತಮ್ಮ ಪುತ್ರಸ್ನೇಹದಿಂದ ಅಧೀನವಾಗಿ ಓಡಿಬರುವಂತೆ ಅಲ್ಲಿಗೆ ಬಂದರು. ಆ ಗೋನಾಥನ ವೇಣುನಾದವು

ತದ್ವೇಣುನಾದೋ ದೇವಸ್ಯ ಶ್ರವಣಾಂತಿಕಮಾಗಮತ್ ।
ದೇವ್ಯಾ ಸಹೃದಯೋಲ್ಲಾಸೀ ಕೈಲಾಸಸ್ಥೋಽಪಿ ಶೃಣ್ವತೇ ॥೬೨॥

ಇಂದುನಂದಿಜಟಾಚೂಡೋ ವಿಯತೋಽವತರಂ ಭುವಂ ।
ತದ್ವೇಣುನಾದೈಕಚಿತ್ತೈರೇಣೈರ್ನಿರ್ಮಲಿತವೀಕ್ಷಣೈಃ ॥೬೩॥

ಸೇವಿತೋ ಗಾಯತಸ್ತಸ್ಯ ಪಂಚಾಕ್ಷರಮನೋಹರಂ ।
ಗೋನಾಥಸ್ಯ ಪುರಸ್ತಸ್ಥೌ ಸ್ತುವತೋ ನಟನಾಯಕಃ ॥೬೪॥

ದೇವೋ ದಯಾರಸೈಃ ಸಿಂಚನ್ಸಾಂಜಲಿಂ ಭಕ್ತಮಾಗತಃ ॥೬೫॥

॥ ಈಶ್ವರ ಉವಾಚ ॥

ಗೋನಾಥ ವೇಣುನಾದೇನ ತವ ಪಂಚಾಕ್ಷರಶ್ರವಾತ್ ।
ಆಗತೋಽಸ್ಮ್ಯದ್ಯ ಕೈಲಾಸಾದಗಳನ್ಯಾಯುತೋಽಸ್ಮ್ಯಹಂ ॥೬೬॥

---

ಮಹಾದೇವನ ಕಿವಿಯವರೆಗೂ ಮುಟ್ಟಿತು. ಪಾರ್ವತಿಯೊಡನೆ ಮನೋಹರವಾಗಿ ಉಲ್ಲಾಸದಿಂದ ವಿಹರಿಸುತ್ತಿದ್ದ ಶಿವನು ಕೈಲಾಸದಲ್ಲಿದ್ದುಕೊಂಡೆ ಅದನ್ನು ಕೇಳುತ್ತಿದ್ದನು. ॥೬೧-೬೨॥

ಆಗ ಚಂದ್ರಚೂಡನಾದ ಮಹಾದೇವನು ತಾನೂ ಇದನ್ನು ಕೇಳಿ ಆನಂದಿತನಾಗಿ ಅಂತರಿಕ್ಷದಿಂದ ಭೂಮಿಗಿಳಿದನು. ಆಗ ಆ ಗೋನಾಥನ ವೇಣುನಾದ ಶ್ರವಣವನ್ನು ಒಂದೇ ಮನಸ್ಸಿನಿಂದ ಮಾಡುತ್ತಾ, ಗುಂಪಾಗಿ ಜಿಂಕೆಗಳು ಅವನನ್ನು ಸೇವಿಸುತ್ತಿದ್ದವು. ಇತ್ತ ಈ ಗೋನಾಥನಾದರೋ ಮನೋಹರವಾಗಿ ಶಿವಪಂಚಾಕ್ಷರ ಮಂತ್ರವನ್ನು ಹಾಡುತ್ತಿದ್ದನು. ನಾಟ್ಯಶೇಖರನಾದ ಮಹಾದೇವನು, ತನ್ನನ್ನು ಸ್ತೋತ್ರಮಾಡುತ್ತಾ ಕೈಮುಗಿದು ಹಾಡುತ್ತಿರುವ ಆ ಗೋನಾಥನ ಮುಂದೆ ನಿಂತುಕೊಂಡು ಅವನನ್ನು ದಯಾರಸಗಳಿಂದ ಸೇಚನೆಮಾಡುತ್ತಾ ಪ್ರತ್ಯಕ್ಷನಾದನು. ॥೬೩-೬೪-೬೫॥

ಎಲೈ ಗೋನಾಥನೇ! ನಿನ್ನ ವೇಣುನಾದಪೂರ್ವಕವಾದ ಪಂಚಾಕ್ಷರ ಮಂತ್ರಶ್ರವಣದಿಂದ ಸಂತುಷ್ಟನಾಗಿ ನಾನು ಕೈಲಾಸದಿಂದ ಪಾರ್ವತಿಯೊಡನೆ ಈಗ ಇಲ್ಲಿಗೆ ಬಂದಿರುವೆನು. ಯಾವಾಗಲೂ ನಿನ್ನ ಈ ವೇಣುಗಾನವನ್ನು ನಾನು ಕೈಲಾಸದಲ್ಲಿ ಕೇಳುವುದಕ್ಕೋಸ್ಕರ ನೀನು ಈ ನಿನ್ನ ಗೋವುಗಳೊಡನೆಯೂ ಮತ್ತು

ಗೋಭಿಃ ಸಹೈಭಿರ್ಗೋಽಪ್ಯೈಸ್ತ್ವಂ ಸಮುಯಾಹಿ ಮದಂತಿಕಂ ।
ಸದಾ ಶ್ರೋತುಮಿಮಂ ವೇಣುಂ ಮಮ ಧಾಮ್ನೀತಿ ವೈ ದಿಶಂ ॥೬೭॥

ಗೋನಾಥಃ ಪ್ರಾಂಜಲಿಸ್ತಸ್ಥೌ ಗೋಭಿಸ್ಸಹ ಶಿವಾಗ್ರತಃ ॥೬೮॥

ದೇವೇಷು ದೇವಂ ವಿಕಿರತ್ಸು ಪುಷ್ಪಾ-
ಣ್ಯಧೀತವೇದೇಷು ಪಠತ್ಸು ವೇದಂ ।
ಗೋನಾಥವೇಣುಕ್ವಣಿತಂ ಸ ಶೃಣ್ವ-
ನ್ವಿಶ್ವಾಧಿಕೋ ಹೇಮಸಭಾಂ ವಿವೇಶ ॥೬೯॥

ವೇಣುನಾದವಿವಶೀಕೃತೇಶ್ವರಂ
ಗೋಪತೇಶ್ಚರಿತಮೇತದಾದೃತಃ ।
ಯಃ ಶೃಣೋತಿ ಪಠತಿ ಸ್ಮರತ್ಯಸೌ
ಶಾಂಭವಂ ಪದಮುಪೈತಿ ಶಾಶ್ವತಂ ॥೭೦॥

---

ಗೊಲ್ಲರೊಡನೆಯೂ ನನ್ನ ಸಮೀಪಕ್ಕೆ ಬಂದುಬಿಡೆಂದು ಪರಮೇಶ್ವರನು ಗೋನಾಥನಿಗೆ ಅಪ್ಪಣೆಮಾಡಿದನು. ಈ ಶಿವಾಜ್ಞೆಯನ್ನು ಕೇಳಿ ಗೋನಾಥನು ತನ್ನ ಹಸುಗಳೊಡನೆ ಶಿವನ ಮುಂದೆ ಕೈಮುಗಿದು ನಿಂತುಕೊಂಡನು. ||೬೬-೬೭-೬೮||

ದೇವತೆಗಳು ಆಕಾಶದಲ್ಲಿ ಮಹಾದೇವನಮೇಲೆ ಪುಷ್ಪವೃಷ್ಟಿಯನ್ನು ಸುರಿಸುತ್ತಿರಲು, ವೇದವನ್ನರಿತವರು ವೇದಪಠನ ಮಾಡುತ್ತಿರಲು, ಜಗಚ್ಛ್ರೇಷ್ಠನಾದ ಮಹೇಶನು ಆ ಗೋನಾಥನ ವೇಣುನಾದವನ್ನು ಕೇಳುತ್ತಾ ತನ್ನ ಹೇಮಸಭೆಯನ್ನು ಪ್ರವೇಶಿಸಿದನು. ||೬೯||

. ಕೊಳಲಿನ ನಾದದಿಂದ ಈಶ್ವರನನ್ನೇ ತನ್ನ ಸ್ವಾಧೀನಮಾಡಿಕೊಂಡ ಈ ಗೋನಾಥನ ದಿವ್ಯ ಚರಿತ್ರೆಯನ್ನು ಆದರದಿಂದ ಶ್ರವಣಮಾಡುವವರೂ, ಓದುವವನೂ, ಅಲ್ಲದೆ ಸ್ಮರಣೆಮಾಡುವವರೂ ಸಹ ಆ ಪರಶಿವನ ಶಾಶ್ವತವಾದ ಪದವಿಯನ್ನು (ಅಂದರೆ ಕೈಲಾಸವನ್ನು) ಪಡೆಯುವರೆಂದು ಕುಮಾರಸ್ವಾಮಿಯು ಜೈಗೀಷವ್ಯನಿಗೆ ಹೇಳಿದನು. ||೭೦||

ಇತಿ ಶ್ರೀಶಿವರಹಸ್ಯೇ ಸದಾಶಿವಾಖ್ಯೇ ನವಮಾಂಶೇ ಶಂಕುಲಾದಾಯ
ಗೋನಾಥವಿಚಿತ್ರಚರಿತ್ರವರ್ಣನೇ
ಅಷ್ಟತ್ರಿಂಶೋಽಧ್ಯಾಯಃ

---

ಇಲ್ಲಿಗೆ ಶ್ರೀಶಿವರಹಸ್ಯದಲ್ಲಿ ಸದಾಶಿವಸಂಜ್ಞಕವಾದ ಒಂಬತ್ತನೆಯ ಅಂಶದಲ್ಲಿ ಶಂಕುಲಾದಾಯ ಮತ್ತು ಗೋನಾಥರ ವಿಚಿತ್ರವಾದ ಕಥೆಯ ವರ್ಣನೆಯೆಂಬ ಮೂವತ್ತೆಂಟನೆಯ ಅಧ್ಯಾಯವು ಮುಗಿಯಿತು.



॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀ ಶಿವರಹಸ್ಯೇ

## ಸದಾಶಿವಾಖ್ಯೇ

## ನವಮಾಂಶೇ

## ಅಥೈಕೋನಚತ್ವಾರಿಂಶೋಽಧ್ಯಾಯಃ

॥ ಶ್ರೀಸ್ಕಂದ ಉವಾಚ ॥

ಸುಕೀರ್ತೇರ್ಮೂರ್ತಿನಾಥಸ್ಯ ವರ್ತನಂ ಕಥಯಾಮಿ ವಃ ।
ಯಃ ಶ್ರೀಮಾನ್ಪಾಂಡ್ಯದೇಶೋಽಸ್ತಿ ತತ್ತದ್ವಂಶಕ್ರಮೋಕ್ತ್ತತಃ ॥೧॥

ಬಹುಶ್ರುತಜನಾವಾಸೋ ಯಃ ಪ್ರತ್ಯಕ್ಷಸುರಾಲಯಃ ।
ಯತ್ರ ವೇಣುಷು ವನ್ಯೇಷು ತಾಮ್ರಪರ್ಣೀಯುತಾರ್ಣವೇ ॥೨॥

ಶ್ರೀಮುಖೇಷು ಚ ಮುಗ್ಧೇಷು ಮೌಕ್ತಿಕಾನಿ ಚಕಾಸತಿ ।
ಮದಾನಿಲಂ ಚಂದನಾದ್ರಿಬಂಧುಭೃಂಗಾನುಸಂತತಂ ॥೩॥

---

## ಮೂವತ್ತೊಂಬತ್ತನೆಯ ಅಧ್ಯಾಯ

ಶಿವಕಥಾಶ್ರವಣಕುತೂಹಲಿಗಳಾದ ಮುನಿಗಳಿರಾ! ಲೋಕದಲ್ಲಿ ಕೀರ್ತಿಶಾಲಿಯಾದ ಮೂರ್ತಿನಾಥನ ಕಥೆಯನ್ನು ನಿಮಗೆ ಹೇಳುತ್ತೇನೆ ಕೇಳಿ; ಆಯಾ ವಂಶಕ್ರಮಾನುಗುಣವಾಗಿ ಬಂದಿರುವ ವಿದ್ವಾಂಸರಿಂದಲೂ, ಚಿರಸ್ಥಿರವಾದ ಐಶ್ವರ್ಯದಿಂದಲೂ ತುಂಬಿ ಕಂಗೊಳಿಸುತ್ತಿರುವ ಪಾಂಡ್ಯದೇಶವೊಂದಿರುವುದು. ಆ ಪಾಂಡ್ಯದೇಶವು ಸಕಲಶಾಸ್ತ್ರಪಾರಂಗತರಾದ ಜನರಿಗೆ ಆವಾಸಸ್ಥಾನವಾಗಿ, ಪ್ರತ್ಯಕ್ಷವಾದ ದೇವಲೋಕದಂತೆಯೇ ಪ್ರಕಾಶಿಸುತ್ತಿರುವುದು. ಅಲ್ಲಿ ಹರಿಯುವ ತಾಮ್ರಪರ್ಣೀನದಿಯ ಎರಡು ದಡದಲ್ಲಿಯೂ ಬಿದಿರುಮೆಳೆಗಳು ತಾನೇತಾನಾಗಿಬೆಳೆದಿರುವುವು. ॥೧-೨॥

ಬಿದಿರುಮೆಳೆಗಳು ಸದಾ ಗೆಜ್ಜಲುಹುಳುಗಳಿಗೆ ಆಶ್ರಯವಿತ್ತಿದ್ದರೂ, ಆ ಬಿದಿರುಗಳಲ್ಲಿ ಮುತ್ತುಗಳು ಅಸಂಖ್ಯಾತವಾಗಿ ಪ್ರಕಾಶಿಸುತ್ತಿರುವುವು. ಚಂದನ ವೃಕ್ಷಗಳಿಂದ

ಸುಪೇಯಂ ಸುಖದಂ ತಚ್ಚ ದ್ರಾವಿಡಂ ವಾಙ್ಮಯಾಮೃತಂ ।
ತತ್ರಾಸ್ತಿ ಮಧುರಾನಾಮಪುರೀ ಪಾಂಡ್ಯಪರಿಶ್ರಯಾ ॥೪॥

ಯಸ್ಯಾಂ ಪರಿಹರಂತಿ ಶ್ರೀಲಾವಣ್ಯಂ ಹರಿಣೀದೃಶಃ ।
ಯತ್ರ ಸೌಧೇ ಚರಂತೀನಾಂ ಸುಭ್ರುವಾಂ ತಟಿತಾಮಪಿ ॥೫॥

ತಾರಲ್ಯೇ ನೈವ ಭೂತೇ ಯಃ ಭೇದಪಾದಪರೀಯಸಾ ।
ಯತ್ರಸತ್ಫಲಕಾಸ್ತತ್ರ ಕವೀಂದ್ರಚಯಸೂಕ್ತಯಃ ॥೬॥

ಲೀಲಾಯುತಾ ಲಲದ್ವಾಣೀ ಕಬರೀಗಂಧಬಂಧವಃ ।
ತತ್ರ ಕಶ್ಚಿದ್ವಣಿಗ್ವಂಶೇ ಮುಕ್ತಾಮಣಿರಭೂನ್ಮಹಾನ್ ॥೭॥

ಮೂರ್ತಿನಾಥಾಭಿಧೋ ಯಸ್ಯ ಬ್ರಹ್ಮಸೌಧಸುಧಾಶಯಃ ।
ಶ್ರೀಮೂರ್ತಿಕುಲಧೌರೇಯಃ ಶಂಭುಪಾದಾಂಬುಜಂ ಪರಂ ॥೮॥

---

ತುಂಬಿದ ಬೆಟ್ಟಗಳ ಸುತ್ತಲೂ ಮದಿಸಿದ ದುಂಬಿಗಳು ಅನವರತವೂ ಮುತ್ತಿಕೊಂಡು ಮೊರೆಯುತ್ತಿರುವುವು. ಅಲ್ಲಿನ ಜನರು ಸುಲಭೋಚ್ಚಾರಣೆಯಿಂದ ಶ್ರಾವ್ಯವಾಗಿ ಕೇಳಿಬರುವ ದ್ರಾವಿಡಭಾಷೆಯೆಂಬ ಅಮೃತವನ್ನು ಸದಾ ಪಾನಮಾಡುತ್ತಿರುವರು. ಅಂತಹ ಪಾಂಡ್ಯದೇಶದಲ್ಲಿ ' ಮಧುರಾ ' ಎಂಬ ಪಟ್ಟಣವು ಸಕಲೈಶ್ವರ್ಯಭರಿತವಾಗಿ ರಾಜಿಸುತ್ತಿದ್ದಿತು. ॥೩-೪॥

ಮಧುರಾಪಟ್ಟಣದ ಹರಿಣಾಕ್ಷಿಯರಾದ ಸುಂದರಿಯರು, ತಮ್ಮ ಸೌಂದರ್ಯದಿಂದ ಲಕ್ಷ್ಮಿಯ ಲಾವಣ್ಯವನ್ನೂ ಧಿಕ್ಕರಿಸುತ್ತಿರುವರು. ಅವರ ಉತ್ತಮವಾದ ಹುಬ್ಬುಗಳು ಧನುಸ್ಸಿನ ಸಾಮ್ಯವನ್ನು ಪಡೆದಿದ್ದುವು. ಈ ರಮಣಿಯರು ಉಪ್ಪರಿಗೆಯಲ್ಲಿ ಸಂಚರಿಸುತ್ತಿರುವಾಗ ಇವರಿಗೂ ಮಿಂಚುಗಳಿಗೂ ಚಾಂಚಲ್ಯದಲ್ಲಿ ಭೇದವೇ ಕಾಣುತ್ತಿರಲಿಲ್ಲ. ಮಹಾಕವಿಗಳು ತಮ್ಮ ಕಾವ್ಯಗಳಲ್ಲಿ ಯಾವ ಯಾವ ರೀತಿಯಲ್ಲಿ ಸ್ತ್ರೀಯರನ್ನು ವರ್ಣಿಸಿರುವರೋ, ಆ ಎಲ್ಲ ಲಕ್ಷಣಗಳೂ ಆ ಊರಿನ ಸ್ತ್ರೀಯರಲ್ಲಿ ಕಂಡುಬರುತ್ತಿರುವುವು. ॥೫-೬॥

ಆ ನಗರದ ರಮಣಿಯರು ವಿಲಾಸಯುಕ್ತರಾಗಿ, ಇಂಪಾದ ಮಾತುಗಳನ್ನಾಡುತ್ತಾ ಕೂದಲಿಗೆ ಸುಗಂಧದ್ರವ್ಯಗಳನ್ನು ಧರಿಸುತ್ತಿದ್ದರು. ಇಂತಹ ಮಧುರಾ ಪಟ್ಟಣದಲ್ಲಿ ವರ್ತಕರ ವಂಶಕ್ಕೆಲ್ಲಾ ಮುತ್ತಿನಂತಿರುವ ಒಬ್ಬ ಮಹಾತ್ಮನು

ದೃಢವಮಾಲಂಬ್ಯ ಚಿತ್ತೇನ ಕೈಂಕರ್ಯೇಣ ಮುದಾತನೋತ್ ।
ಯೋ ಹಾಲಾಸ್ಯದೇವಸ್ಯ ಪೂಜಾರ್ಥಂ ದಿವ್ಯಸೌರಭಂ ॥೯॥

ದ್ವೀಪಾಂತರಾತ್ಸಮಾನೀತಮರ್ಪಯಾಮಾಸ ಚಂದನಂ ।
ಏವಂ ದಿಶತಿ ಪಾಟೀರಂ ಭಾಸ್ವತ್ಪರಿಮಲೋರ್ಮಿಲಂ ॥೧೦॥

ಶಫರಾಕ್ಷೀಸನಾಥಸ್ಯ ಮೂರ್ತಿನಾಥೋ ಮಹೇಶಿತುಃ ।
ಕಶ್ಚಿದಾಂಧ್ರಮಹೀನಾಥಃ ಕಂಡೂಕೇಲಿಜಮ್ಯೈಡಿತಃ ॥೧೧॥

ಸೇವಿತುಂ ಸಹ ಸೇನಾಭಿರಯಾಸೀನ್ಮಧುರಾಂ ಪ್ರತಿ ।
ತತ್ಸೇನಾರಜಸಾ ಸಪ್ತಸಮುದ್ರಾಃ ಶೋಷಿತಾಃ ಪುನಃ ॥೧೨॥

---

ಹುಟ್ಟಿದನು. ಅವನು ಮೂರ್ತಿನಾಥನೆಂಬ ಹೆಸರಿನಿಂದ ಪ್ರಖ್ಯಾತನಾಗಿ ಬ್ರಹ್ಮ ಜ್ಞಾನವೆಂಬ ಸೌಧಕ್ಕೆ ಅಮೃತಪ್ರಾಯನಾಗಿದ್ದನು. ಶ್ರೀಮೂರ್ತಿಯುವಂಶಕ್ಕೆ ಮುಖ್ಯನಾದ ಇವನು ಶ್ರೇಷ್ಠವಾದ ಶಿವನ ಪಾದಕಮಲವನ್ನೇ ಧ್ಯಾನಿಸುತ್ತಾ, ಮನಃಪೂರ್ವಕವಾಗಿ ಮಹಾದೇವನನ್ನು ಆರಾಧಿಸಿ ಸಂತೋಷದಿಂದ ಸೇವೆಮಾಡುತ್ತಿದ್ದನು. ||೭-೮||

ಆ ವರ್ತಕನು ವಿಷಕಂಠನಾದ ಶಂಕರನ ಪೂಜೆಗೋಸ್ಕರ, ದ್ವೀಪಾಂತರಗಳಿಂದ ತರಿಸಲ್ಪಟ್ಟ ದಿವ್ಯಪರಿಮಳಭರಿತವಾದ ಚಂದನವನ್ನು ಸಮರ್ಪಣೆಮಾಡುತ್ತಿದ್ದನು. ಹೀಗೆ ಈ ಮೂರ್ತಿನಾಥನು ಮೀನಾಕ್ಷೀಸಮೇತನಾದ ಮಹೇಶ್ವರನಿಗೆ ದಿವ್ಯಪರಿಮಳದಿಂದ ವ್ಯಾಪ್ತವಾದ ಚಂದನವನ್ನು ಸಮರ್ಪಣೆಮಾಡುತ್ತಾ ಸೇವೆ ಸಲ್ಲಿಸುತ್ತಿರಲಾಗಿ, ||೯-೧೦||

ಒಂದುಸಾರಿ ಒಬ್ಬ ಆಂಧ್ರರಾಜನು ದಿಗ್ವಿಜಯಮಾಡಿಕೊಂಡು ಮಧುರಾ ಪಟ್ಟಣವನ್ನು (ಮಹೇಶ್ವರನನ್ನು) ಗೆಲ್ಲಬೇಕೆಂದಾಲೋಚಿಸಿ, ರಣತೀಟಿಯಿಂದ ತನ್ನ ಸೇನೆಯೊಡನೆ ಮಧುರಾಪಟ್ಟಣಕ್ಕೆ ಬಂದನು. ಅವನ ಸೈನ್ಯದ ಧೂಳುಗಳಿಂದ ಏಳು ಸಮುದ್ರಗಳೂ ಒಣಗಿಹೋಗಿ, ಆಮೇಲೆ ಕೊಬ್ಬಿದ ಸೈನ್ಯದಾನೆಗಳ ಗಂಡಸ್ಥಳದಲ್ಲಿ ಸುರಿಯುವ ನೀರಿನಿಂದ ಪುನಃ ಪೂರ್ಣವಾಗುತ್ತಿದ್ದವು. (ಸೈನ್ಯವು ಅಷ್ಟು ಅಪರಿಮಿತ ವಾಗಿತ್ತೆಂದು ಭಾವವು). ||೧೧-೧೨||

ಗಂಧದ್ವಿರದಗಂಡಾಂತರ್ಗಲದ್ದಾನೇನ ಪೂರಿತಾಃ ।
ತದ್ಧಾಟೀವಿಘಟಿಲ್ಪ್ಯೋಟೀಚಂಚತ್ಸ್ಫುರಪಟೀರಜಃ ॥೧೩॥

ಪಂಕೇರುಹತ್ವಮಾನೀತನಭೋಗಂಗಾಪಯೋರುಹಾಂ ।
ಯತ್ಪದಾತಿಪದಾಕ್ರಾಂತಂ ಕ್ಷ್ಮಾಮಂಡಲಮಹೀಶ್ವರಃ ॥೧೪॥

ಉದ್ಘೋಢುಮಕ್ಷಮಃ ಕ್ರೀಡಾಕಮಠೇತ್ಯಸ್ಯ ಮೂರ್ಛಿತಃ ।
ಮಧುರಾಂ ಸ ಹಠಾತ್ಕುರ್ವನ್ನಗೃಹೀದಾಂಧ್ರಭೂಪತಿಃ ॥೧೫॥

ಚತುರಂಗಮಹೀಪಾಲಚೂಡಾಚುಂಬಿತಪಾದುಕಃ ।
ಸೋಮಂ ತಜ್ಜನ್ಮಸಂಭೂತಪಾಪಪಿಂಜರಿತಾಶಯಃ ॥೧೬॥

ಸೇನಾಶಾಸ್ತ್ರಪ್ರವೃದ್ಧೋಽಭೂತ್ಪೀಡಯನ್ಪಾಂಡ್ಯಮಂಡಲಂ ।
ಪಂಚಾಸ್ತಿಕಾಯ ಷಡ್ದ್ರವ್ಯಸತ್ಯಸತ್ವ ನವಾರ್ಥವಿತ್ ॥೧೭॥

---

ಶ್ರೀಗಂಧದ ವನದಲ್ಲಿ ಸಾಲಾಗಿ ಬರುತ್ತಿರುವ ಕುದುರೆ ಸೈನ್ಯದಲ್ಲಿ, ಕುದುರೆಗಳ ಕಾಲು ತುಳಿತದಿಂದ ಮೇಲೆದ್ದ ಶ್ರೀಗಂಧದ ರಜವು ಆಕಾಶಕ್ಕೆ ಹಾರಿಹೋಗಿ, ಅಲ್ಲಿನ ಗಂಗಾನದಿಯ ಕಮಲಗಳಮೇಲೆ ಹರಡಿ ಮಕರಂದದ ಭ್ರಾಂತಿಯನ್ನುಂಟುಮಾಡುತ್ತಿದ್ದಿತು. ಆ ರಾಜನ ಕಾಲಾಳುಗಳ ತುಳಿತದಿಂದ ಭೂಮಿಯು ಕುಗ್ಗಿಹೋಗಿ, ಆ ಪದಾತಿಸೈನ್ಯದ ಭಾರವನ್ನು ತಾಳಲಾರದೆ, ಆದಿಶೇಷನು ಅನೇಕ ವೇಳೆ ಮೂರ್ಛೆ ಹೋಗುತ್ತಿದ್ದನು. ಮತ್ತು ಈ ಭಾರಕ್ಕೆ ಭೂಮಿಯನ್ನು ಹೊತ್ತಿದ್ದ ಆದಿಕೂರ್ಮನೂ ಎಷ್ಟೋಸಾರಿ ಆಟದ ಆನೆಯಂತೆ ಕಾಣುತ್ತಿರುವನು. ॥೧೩-೧೪॥

ಆ ಆಂಧ್ರರಾಜನು ಬಲಾತ್ಕಾರವಾಗಿ ಮಧುರಾಪಟ್ಟಣವನ್ನು ಆಕ್ರಮಿಸಿ ಸ್ವಾಧೀನಪಡಿಸಿಕೊಂಡನು. ಹಸ್ತ್ಯಶ್ವರಥಪದಾತಿಗಳೆಂಬ ಚತುರಂಗಬಲಸಮೇತರಾದ ರಾಜರ ತಲೆಗೂದಲಿಂದ ತಾಗುತ್ತಿರುವ ಪಾದುಕೆಗಳುಳ್ಳವನಾಗಿ ಈ ರಾಜನು, ತನ್ನ ಹಿಂದಿನ ಜನ್ಮದಲ್ಲಿ ಮಾಡಿದ ಪಾಪಗಳಿಂದ ಕಲುಷಿತಚಿತ್ತನಾಗಿ ಉಮಾಕಾಂತನನ್ನು ಸೇವಿಸದೇ ತನ್ನ ಘೋರವಾದ ಸೈನ್ಯ ಮತ್ತು ಶಸ್ತ್ರಗಳಿಂದ ಕೊಬ್ಬಿದವನಾಗಿ ಪಾಂಡ್ಯದೇಶವನ್ನೇ ಹಿಂಸಿಸಲು ಪ್ರಾರಂಭಿಸಿದನು. ॥೧೫-೧೬॥

ಜೀವಾಸ್ತಿಕಾಯ, ಧರ್ಮಾಸ್ತಿಕಾಯ, ಅಧರ್ಮಾಸ್ತಿಕಾಯ, ಆಕಾಶಾಸ್ತಿಕಾಯ, ಪುದ್ಗಲಾಸ್ತಿಕಾಯವೆಂದು ಐದು ಅಸ್ತಿಕಾಯಗಳನ್ನೂ (ಬಹುಪ್ರದೇಶವುಳ್ಳ

ರತ್ನತಂತ್ರಪರಾಮರ್ಶೀ ಜೈನತಂತ್ರರತೋಽಭವತ್ ।
ಸ ಪಂಚಪರಮೇಷ್ಠಿಶ್ರೀಚರಣಾಂಭೋರುಹಾರ್ಚಕಃ ॥೧೮॥

ಸಪ್ತಭಂಗೀ ಪ್ರತ್ಯುಜ್ಞಾನೋ ವಂಚಯಾಮಾಸ ವೇದಕಾನ್ ।
ಭೇದಾಭೇದಕಥಾಪ್ರಾಸಸರ್ವಸಂಕರವಿಭ್ರಮಃ ॥೧೯॥

ಖಲೀಚಕಾರ ಪಾಷಂಡೋ ವೇದಮಾರ್ಗಂ ಸ ವಂಚಕಃ ।
ಹರಿಶಂಕರಪೂಜಾಯಾಮಂತರಾಯಪರಂಪರಾಂ ॥೨೦॥

---

ವಸ್ತು) ಜೀವ, ಧರ್ಮ, ಅಧರ್ಮ, ಆಕಾಶ, ಕಾಲ ಮತ್ತು ಪುದ್ಗಲವೆಂಬ ಆರು ದ್ರವ್ಯಗಳನ್ನೂ, ಇವುಗಳ ಜೊತೆಗೆ ದ್ರವ್ಯ, (ಅದ್ರವ್ಯದ ಭಾಗವಾದ) ಗುಣ ಮತ್ತು ಪರ್ಯಾಯಗಳನ್ನು ಸೇರಿಸಿಕೊಂಡು ಒಂಬತ್ತು ತತ್ವಗಳನ್ನೂ ಅರಿತು, ಸಮ್ಯಗ್ದರ್ಶನ, ಸಮ್ಯಕ್ಜ್ಞಾನ, ಸಮ್ಯಕ್ಚಾರಿತ್ರವೆಂಬ ರತ್ನತ್ರಯಗಳನ್ನು ಪರಾಮರ್ಶೆಮಾಡುವನಾಗಿ, ಜೈನತಂತ್ರನಿರತನಾದನು. ಇವನು ಜೈನಮತಸಂಪ್ರದಾಯದಂತೆ ಐದುಮಂದಿ ಬ್ರಹ್ಮರ ಪಾದಕಮಲಪೂಜಕನಾಗಿ [1]ಸಪ್ತಭಂಗಿಯೆಂಬ ತಮ್ಮ ವಾದ ಸರಣಿಯನ್ನಾಶ್ರಯಿಸಿ ಭೇದ ಮತ್ತು ಅಭೇದ ಸಂಬಂಧವಾದ ಕಥೆಗಳ ಸಂಬಂಧದಿಂದ ಸಾಂಕರ್ಯವಿಭ್ರಮಗಳನ್ನು ಕಲ್ಪಿಸಿ, ವೇದಮಾರ್ಗನಿರತರನ್ನು ವಂಚನೆಗೊಳಿಸಿದನು. ॥೧೭-೧೮-೧೯॥

ವಂಚಕನಾದ ಆ ನಾಸ್ತಿಕನು (ಪಾಷಂಡನು) ವೇದಮಾರ್ಗವನ್ನೆಲ್ಲಾ ದೂಷಿಸಿ ಕಲಕಿಬಿಟ್ಟನು. ವಿಷ್ಣು ಶಂಕರರ ಪೂಜೆಯಲ್ಲಿ ವಿಘ್ನಪರಂಪರೆಗಳನ್ನುಂಟುಮಾಡಿ, ವೇದಬಾಹ್ಯರೆನಿಸಿದ ದುಷ್ಟರನ್ನು ಪೂಜಿಸುತ್ತಿದ್ದನು. ಮಧುರಾನಗರದಲ್ಲಿದ್ದ ಮೂರ್ತಿನಾಥನು, ಇಷ್ಟಾದರೂ ತಾನು ನಡೆಸುತ್ತಿರುವ ಹಾಲಾಸ್ಯೇಶನ ಪೂಜೆಯನ್ನು

---

1. ಸಪ್ತಭಂಗೀ ನ್ಯಾಯವೆಂದರೆ ವಾದಕಾಲದಲ್ಲಿ ಸಕಲ ವಾದಿಗಳನ್ನೂ ಸುಧಾರಿಸುವುದು ಎಂದರ್ಥ. ಈ ಪ್ರಪಂಚದಲ್ಲಿ ತತ್ವ ವಿಚಾರದಲ್ಲಿರುವ ಅಭಿಪ್ರಾಯಗಳು ಏಳೇರಾಶಿಯಾಗುವುವು. ಪ್ರಪಂಚಕ್ಕೆ ಸತ್ವವನ್ನು ಹೇಳುವರು ಕೆಲವರು, ಅಸತ್ವವನ್ನು ಕೆಲವರು, ಉಭಯವನ್ನು ಕೆಲವರು, ಉಭಯವೂ ಅಲ್ಲವೆಂದು ಕೆಲವರು, ಹೀಗೆ ನಾಲ್ಕು ರಾಶಿಯಾದವು ಅನಿರ್ವಚನೀಯವಾದಲ್ಲಿ ಕಾಲಭೇದದಿಂದ ಸತ್ವಮಾತ್ರವುಂಟೆಂದು ಕೆಲವರು, ಅಸತ್ವಮಾತ್ರವುಂಟೆಂದು ಕೆಲವರೂ, ಉಭಯವೂ ಉಂಟೆಂದು ಕೆಲವರೂ ವಾದಿಸುತ್ತಾ ಒಟ್ಟು ಏಳು ಪಕ್ಷಗಳಾದವು. ಈ ನ್ಯಾಯವು ತತ್ವವು ನಿತ್ಯವೇ, ಅನಿತ್ಯವೇ, ಭಿನ್ನವೇ, ಅಭಿನ್ನವೇ, ಕ್ಷಣಿಕವೇ, ಸ್ಥಿರವೇ, ಸತ್ಯವೇ, ಮಿಥ್ಯೆಯೇ ಎಂಬ ಸಕಲವಿವಾದದಲ್ಲೂ ಸಂಚರಿಸಬಹುದು. ಇದರಿಂದ ಸರ್ವವಿವಾದಗಳಲ್ಲೂ ವಿಜಯವೆಂದು ತಾತ್ಪರ್ಯ.

ಆವಿಷ್ಕುರ್ವನ್ತ್ರಯೀ ಬಾಹ್ಯಾನರ್ಚಯಾಮಾಸ ದುರ್ಮತೀನ್ ।
ಹಾಲಾಸ್ಯಪೂಜಾಮಾಲೋಕ್ಯ ಮೂರ್ತಿನಾಥಪ್ರವರ್ತಿತಾಂ ॥೨೦॥

ನಿಜಾಜ್ಞಾಲಂಘನಂ ಪಶ್ಯನ್ತಂ ವಿಹಂತುಂ ಪ್ರಚಕ್ರಮೇ ।
ಪಟೀರವಿಕ್ರಯೋ ನಾಸ್ಮತ್ಪಟ್ಟಣೇ ಕ್ರಿಯತಾಮಿತಿ ॥೨೨॥

ಪ್ರತಿವೀಥೀಂ ಸಮುದ್ಘುಷ್ಯ ಜೈತ್ರಘಂಟಾಮತಾಡಯತ್ ।
ಏವಂ ದುರ್ಮೇಧಸಾ ತೇನ ಪಾಲ್ಯಮಾನೇ ನಿಜಾಧ್ವನಿ ॥೨೩॥

ಮೂರ್ತಿನಾಥೋ ನ ಕುತ್ರಾಪಿ ಲಬ್ಧವಾನ್ಚಂದನಂ ವಿಭೋಃ ।
ಪರ್ಯಟನ್ಪರಿತಃ ಕ್ರೇತುಂ ಪಾಟೀರಂ ಪಣ್ಯವೀಥಿಕಾಂ ॥೨೪॥

ಶಾಂತೋ ಭೂತ್ವಾ ವಿಭಾವರ್ಯಾಂ ಪ್ರವಿಶದ್ಗಿರಿಶಾಲಯಂ ।
ಚಂದನಾಲಾಭಖೇದೇನ ತತ್ರ ಶಾಣೋಪಲೇ ಕರಂ ॥೨೫॥

ಪೇಷಯಾಮಾಸ ಸಂಕ್ಷುಣ್ಣತ್ವಗಸ್ಥಿ ಮಧ್ಯಭಾಗತಃ ।
ಸಮ್ಯಕ್ಸಂಕ್ಷುಬ್ಧಮಾನೋಽಂತರ್ಧಾರಾಲರುಧಿರೇ ಕರೇ ॥೨೬॥

---

ನೋಡಿ ತನ್ನ ಅಪ್ಪಣೆಯನ್ನು ಮೀರಿ ನಡೆಯುತ್ತಿರುವುದರಿಂದ ಅವನನ್ನೂ ಹಿಂಸಿಸಲು ಪ್ರಾರಂಭಿಸಿದನು. ॥೨೦-೨೧॥

ನನ್ನ ಪಟ್ಟಣದಲ್ಲಿ ಸುವಾಸನಾದ್ರವ್ಯವಾದ ಶ್ರೀಗಂಧವನ್ನು ಮಾರಕೂಡದೆಂದು ಪ್ರತಿಯೊಂದು ಬೀದಿಯಲ್ಲಿಯೂ ರಾಜಘೋಷಣೆಯಿಂದ ಸಾರಿಸಿದನು. ಹೀಗೆ ಈ ದುಷ್ಟನಾದ ಆಂಧ್ರರಾಜನು ತನ್ನ ಮಾರ್ಗಕ್ಕೆ ಅನುಗುಣವಾಗಿ ರಾಜ್ಯಭಾರ ಮಾಡುತ್ತಿರಲು ಮೂರ್ತಿನಾಥನು ಅಂಗಡೀಬೀದಿಯಲ್ಲಿ ಎಲ್ಲಾ ಅಂಗಡಿಗಳನ್ನೂ ಸುತ್ತಿ ಎಲ್ಲೂ ಚಂದನವು ಮಾರಲ್ಪಡದಿರುವುದನ್ನು ಕಂಡು ಕೊನೆಗೆ ನಿರಾಶನಾಗುತ್ತಿದ್ದನು. ॥೨೨-೨೩-೨೪॥

ಮಹಾದೇವನಿಗೆ ನಿವೇದಿಸಲು ಎಲ್ಲಿಯೂ ಚಂದನವು ದೊರೆಯದಿರಲು ಆ ಮೂರ್ತಿನಾಥನು ರಾತ್ರಿ ಶಿವದೇವಾಲಯಕ್ಕೆ ಹೋಗಿ, ಅಲ್ಲಿ ಪೂಜೆಗೆ ಚಂದನ ದೊರೆಯದಿರುವುದರಿಂದ ಖಿನ್ನನಾಗಿ ಸಾಣೆಯ ಕಲ್ಲಿನಲ್ಲಿ ತನ್ನ ಕೈಯನ್ನೇ ಬಲವಾಗಿ ರಕ್ತಮಾಂಸಮೂಳೆಗಳು ದೃಢವಾಗಿರುವ ಭಾಗದಲ್ಲಿ ತೆಯ್ದು, ಅದನ್ನೇ ಸಮರ್ಪಿಸ

ದಯಾಲೋರಾಜ್ಞಯಾ ಶಂಭೋರ್ವಾಗಾಸೀದಶರೀರಿಣೀ ॥೨೭॥

॥ ವಾಣ್ಯುವಾಚ ॥

ಹೇ ಮೂರ್ತಿನಾಥ ಮಾಮೈವಂ ನೀಯತಾಂ ಸಾಹಸಂ ಭವಾನ್ ।
ಮದಾಜ್ಞಯಾ ತ್ವಮೇವಾಸ್ಯ ಪಾಂಡ್ಯದೇಶಸ್ಯ ಭೂಪತಿಃ ॥೨೮॥

ಭೂತ್ವಾ ಜೈನಾನ್ನಿರಾಕೃತ್ಯ ಪ್ರತಿಷ್ಠಾಪ್ಯ ತ್ರಯೀಕೃತಂ ।
ಶೈವಸಿದ್ಧಾಂತಮುದ್ದೀಪ್ಯ ಮತ್ಪೂಜಾಕ್ರಿಯತಾಂ ತ್ವಯಾ ॥೨೯॥

ಅಧುನೈವ ದುರಾತ್ಮಾಸೌ ಪಂಚಕಾಯಪತಿಪ್ರಿಯೈಃ ।
ನಿರುದ್ಧಂ ಸನ್ನಮುಂ ಜೈನೈರ್ನಿರಯಾನ್ವಿಶತಾದಿತಿ ॥೩೦॥

ಶ್ರುತ್ವಾ ಶರೀರಿಣೀಂ ವಾಣೀಂ ವಿಸ್ಮಯೇ ಹೃದಯೇ ಸತಿ ।
ತಸ್ಮಿನ್ನಾರುರುಧೇ ಶತ್ರುರ್ಬಲೇನ ಮಧುರಾಪುರೀಂ ॥೩೧॥

---

ಬೇಕೆಂದು ಯತ್ನಿಸಿದನು. ಈರೀತಿ ಕೈಯನ್ನು ತೇದುದರಿಂದ ಒಳಗಡೆ ರಕ್ತವು ಧಾರಾಕಾರವಾಗಿ ಕೈಯಿಂದ ಸುರಿಯಲಾರಂಭಿಸಿತು. ಕೂಡಲೇ ದಯಾಳುವಾದ ಶಂಕರನ ಅಪ್ಪಣೆಯಂತೆ ಹೀಗೆ ಅಶರೀರವಾಣಿಯಾಯಿತು. ॥೨೬-೨೭॥

"ಅಯ್ಯಾ ಮೂರ್ತಿನಾಥನೇ, ನೀನು ಇಂತಹ ಸಾಹಸಕಾರ್ಯಗಳನ್ನೆಸಗಬೇಡ ; ನನ್ನ ಅಪ್ಪಣೆಯಂತೆ ನೀನೇ ಈ ಪಾಂಡ್ಯದೇಶಕ್ಕೆ ರಾಜನಾಗಿ ಜೈನರನ್ನೆಲ್ಲಾ ನಿರಾಕರಿಸಿ ವೈದಿಕಮಾರ್ಗವನ್ನು ಪ್ರತಿಷ್ಠೆಗೊಳಿಸಿ, ಶೈವಸಿದ್ಧಾಂತವನ್ನು ಅಭಿವೃದ್ಧಿಗೊಳಿಸಿ ಶಾಂತಿಯಿಂದ ನನ್ನ ಪೂಜೆಮಾಡು. ಈಗಲೇ ಈ ದುಷ್ಟನಾದ ಆಂಧ್ರರಾಜನು ಐದು ಕಾಮವ್ಯೂಹಗಳನ್ನು ಹೇಳುವ ಜೈನರೊಡನೆ ಹಿಂಸಿಸಲ್ಪಟ್ಟು ನರಕವನ್ನು ಪ್ರವೇಶಿಸುವನು." ॥೨೮-೨೯-೩೦॥

ಈ ಆಕಾಶವಾಣಿಯನ್ನು ಕೇಳಿ ಮೂರ್ತಿನಾಥನಿಗೆ ಮನಸ್ಸಿನಲ್ಲಿ ಆಶ್ಚರ್ಯವಾಯಿತು. ಆಗಲೇ ಶತ್ರುವು ತನ್ನ ಬಲದೊಡನೆ ಮಧುರಾಪಟ್ಟಣವನ್ನು ಮುತ್ತಿದನು. ಆ ಪಾಷಂಡರಾಜನಾದರೋ ಹೀಗೆ ತನಗೆ ಉಂಟಾದ ಮುತ್ತಿಗೆಯನ್ನು

ಸತಿರೋಧಾಸಹಿಷ್ಣೂ ಸನ್ಪಾಷಂಡಧರಣೀಪತಿಃ ।
ಸೈನ್ಯೈರ್ನಿರ್ಯಯೌತ್ತೃಣೋದ್ಯೋಗೋ ನಿಜಾನ್ನಿರಗಮತ್ಪುರಾತ್॥೩೨॥

ಶಿವಭಕ್ತದ್ವಿಷಾಂ ಪುಂಸಾಂ ಸ್ಥಿತಿಂವಿದ್ಯಾಡಿವೇತಿ ಸಃ ।
ತತ್ಪ್ರದರ್ಶಯಿತುಂ ಪ್ರಾಪ ಸಂಕುಲಂ ಸಮರಾಜಿರಂ ॥೩೩॥

ವಂಚಕಸ್ಯ ಮಹೀಶಸ್ಯ ಶತ್ರುರುದ್ಧಸ್ಯ ತಸ್ಯ ಸಃ ।
ನಿರ್ದಿಷ್ಟಾ ತಸ್ಯ ಕಾಲಸ್ಯ ಪೂರ್ಣಾಸ್ಥಿತಿರಭೂನ್ನಿಶಿ ॥೩೪॥

ನಿರಯಂ ಪತತೋ ದುಃಖಾಚ್ಛಿವಭಕ್ತಿಜನಾಯ ಸಃ ।
ಇತಿ ಶೇಪುರ್ಜನಾ ಭೂಪಂ ಪಾಂಸುವರ್ಷೇಣ ಶಾಂಕರಾಃ ॥೩೫॥

ನರಕೇ ಪತಿತೇ ತಸ್ಮಿನ್ನೇಕಾರ್ತಸ್ತತ್ಸುಹೃದ್ಗಣೇ ।
ಸಾಕ್ಷಾದಕ್ಷೀಯತ ತದಾ ತದ್ವೃತ್ತಿರಿವ ತಾಮಸೀ ॥೩೬॥

---

ಸಹಿಸಲಾರದೇ ತೃಣಪ್ರಾಯನಾಗಿ ತನ್ನ ಪಟ್ಟಣದಿಂದ ಸೈನ್ಯಗಳೊಡನೆ ಯುದ್ಧ ಭೂಮಿಗೆ ಹೋದನು. ||೩೧-೩೨||

ಆ ಆಂಧ್ರಭೂಪತಿಯು ಶಿವನ ಭಕ್ತರಿಗೆ ಶತ್ರುಗಳಾಗಿರುವವರ ಸ್ಥಿತಿಯನ್ನು ತಿಳಿಯಿರಿ ಎಂದು ತೋರಿಸುವುದಕ್ಕೋ ಎನ್ನುವಂತೆ ಸೈನ್ಯದಿಂದ ಕಿಕ್ಕಿರಿದ ಯುದ್ಧ ಭೂಮಿಯನ್ನೈದಿದನು. ವಂಚಕನಾದ ಆ ರಾಜನು ಶತ್ರುಗಳಿಂದ ಮುತ್ತಲ್ಪಟ್ಟು ಸಾಯಂಕಾಲದವರೆಗೂ ಯುದ್ಧಮಾಡಿ ಕೊನೆಗೆ ರಾತ್ರಿಯಲ್ಲಿ ತನಗೆ ಯಮನಿಂದ ಗೊತ್ತಾಗಿದ್ದ ಮರಣಾವಸ್ಥೆಯನ್ನು ಪಡೆದನು. ||೩೩-೩೪||

ಶೈವಜನಗಳಿಗೆ ಕಬ್ಬಿಣದಂತೆ ಕಠಿಣಪ್ರಾಯನಾಗಿದ್ದ ಈ ರಾಜನು ದುಃಖದಿಂದ ನರಕಕ್ಕೆ ಬೀಳುತ್ತಿರಲು, ಶಾಂಕರರು ಆ ರಾಜನಮೇಲೆ ಮರಳನ್ನು ಮೇಲೆರಚುತ್ತಾ ಶಪಿಸಿದರು. ಇವನು ದುಃಖಿತನಾಗಿ ನರಕದಲ್ಲಿ ಬೀಳುತ್ತಿರಲು, ಅವನ ಅನುಯಾಯಿಗಳ ಗುಂಪಿನಲ್ಲಿ ಅವನಂತೆ ಆ ತಾಮಸವೃತ್ತಿಯೂ (ನಾಸ್ತಿಕಧರ್ಮವು) ಪ್ರತ್ಯಕ್ಷವಾಗಿಯೇ ನಾಶವಾಯಿತು. (ಅಂದರೆ ಎಲ್ಲರೂ ಪಾಷಂಡಮತಧರ್ಮಾವಲಂಬನೆಯನ್ನು ತ್ಯಜಿಸಿದರೆಂದು ಭಾವವು.) ||೩೫-೩೬||

ಅಹ್ನಾಯಾಹ್ನಾಮಧಿಪತೌ ಪೂರ್ವಾದ್ರಿಂ ಭೂಷಯತ್ಯದಾ ।
ಕೃತೋರ್ಧ್ವದೈಹಿಕಾ ರಾಜ್ಞಃ ಸಚಿವಾಃ ಸಮಚಿಂತಯನ್ ॥೩೭॥

ಭೂನಾಥೇನ ವಿನಾ ಲೋಕಃ ಕಾಯೋ ಜೀವಾತ್ಮನಾ ಯಥಾ ।
ಕ್ಷೀಯತೇ ಹ್ಯಸ್ಯ ರಾಜ್ಯಸ್ಯ ರಕ್ಷಿತಾ ಕೋ ಭವೇದಿತಿ ॥೩೮॥

ಬದ್ಧನೇತ್ರಂ ಚ ಕರಟೀಂ ಮುಕ್ತ್ವಾ ಯಸ್ಸ್ಕಂಧಗೋ ಭವೇತ್ ।
ಸ ವೈ ಮಹೇಶದತ್ತೇನ ಪಾಲ್ಯತಾಮವನೀತಲಂ ॥೩೯॥

ಗಜೇನ ಸ್ಕಂಧಮಾರೋಪ್ಯೋ ಸಭೂಪಃ ಪೃಥಿವೀಪತಿಃ ।
ಇತಿ ನಿಶ್ಚಯಸಿದ್ಧಾರ್ಥಾ ಮಂತ್ರಿಣಸ್ತೇ ಮಿಥೋಽಬ್ರುವನ್ ॥೪೦॥

ಸಿತಾಭ್ರಚಯಸಂಕಾಶಂ ಭದ್ರಾಕಾರಂ ಮಹಾಗಜಂ ।
ಸಮಾನೀಯ ಕುಥಾಸ್ತೀರ್ಣಂ ಪಥಾ ತೇನಾಪ್ಯವಾಸೃಜತ್ ॥೪೧॥

ಊಚುಸ್ತೇ ಮಂತ್ರಿಣಸ್ತಸ್ಯ ಮಂತ್ರಿತಾಃ ಸಿಂಧುರೇಶಿತಃ ॥೪೨॥

---

ಸೂರ್ಯನು ಉದಯಾಚಲದಲ್ಲಿ ಗೋಚರಿಸಿದ ಕೂಡಲೇ ಮಂತ್ರಿಗಳು ರಾಜನಿಗೆ ವಿಧಿವತ್ತಾಗಿ ಅಪರಕ್ರಿಯೆಗಳನ್ನು ನಡೆಸಿದರು. ಆಮೇಲೆ ಸಚಿವರೆಲ್ಲರೂ ಜೀವಾತ್ಮನಿಲ್ಲದ ದೇಹದಂತೆ ರಾಜನಿಲ್ಲದ ದೇಶವು ಶೋಭಿಸಲಾರದೆಂದು ಭಾವಿಸಿ, ಈ ರಾಜ್ಯವನ್ನು ರಕ್ಷಿಸಲು ಮುಂದೆ ಯಾರು ಯೋಗ್ಯರಾಗುವರೆಂದು ಯೋಚಿಸ ತೊಡಗಿದರು. ಕೊನೆಯಲ್ಲಿ ಅವರೆಲ್ಲರೂ ಈ ರೀತಿ ತೀರ್ಮಾನಿಸಿದರು. ॥೩೭-೩೮॥

ಒಂದು ಹೆಣ್ಣಾನೆಗೆ ಕಣ್ಣುಕಟ್ಟಿ ಬಿಟ್ಟು, ಅದು ಯಾರನ್ನು ತನ್ನ ಹೆಗಲ ಮೇಲೆ ಕೂರಿಸಿಕೊಂಡು ಬರುವುದೋ ಅವನನ್ನೇ ರಾಜನನ್ನಾಗಿ ಮಾಡೋಣ. ಮಹೇಶನು ಕರುಣಿಸುವ ಅವನಿಂದಲೇ ಈ ಭೂಮಂಡಲವು ಕಾಪಾಡಲ್ಪಡಲಿ; ಆನೆಯ ಹೆಗಲನ್ನೇರಲು ಯೋಗ್ಯನಾದವನೇ ನಮಗೆ ರಾಜನಾಗಿರಲಿ. ಹೀಗೆ ಯೋಚಿಸಿ ಮಂತ್ರಿಗಳೆಲ್ಲರೂ ಮುಂದಿನ ಕಾರ್ಯಾರಂಭಕ್ಕೆ ಸಿದ್ಧಮಾಡತೊಡಗಿದರು. ॥೩೯-೪೦॥

ಬಿಳಿಯ ಮೋಡದಂತೆ ಶುಭ್ರವಾಗಿರುವ ಮತ್ತು ಸುಂದರಾಕಾರವುಳ್ಳ ಒಂದು ದೊಡ್ಡ ಆನೆಯನ್ನು ತರಿಸಿ, ಅದರ ಮೇಲೆ ಮೃದುವಾದ ಅಂಬಾರಿಯನ್ನು ಹಾಕಿಸಿ,

॥ ಮಂತ್ರಿಣ ಊಚುಃ ॥

ಭದ್ರಾನಯ ಭುವೋ ಭದ್ರ ಗೋಪ್ತಾರಂ ಗುಣವತ್ತರಂ ।
ಇತಿ ತನ್ನೇತ್ರಮಾಬಧ್ಯ ಇಭಂ ಗಿರಿನಿಭಂ ಶುಭಂ ॥೪೩॥

ಸ ದ್ವಿಪಃ ಕ್ಷಾಮುಬದ್ಧಾಕ್ಷಃ ಕ್ಷರಗಂಡಶ್ಚರನ್ಪುರೀಂ ।
ಸಿಂಚನ್ಪುಷ್ಕರಜಾಸಾರಂ ಮದಗಂಧಿತ ದಿಕ್ಪಥಃ ॥೪೪॥

ವಿಶೃಂಖಲಃ ಶೃಂಖಲಾಭಿರ್ಘೋಷಯನ್ರೋದಸೀ ತಥಾ ।
ಪ್ರಾಪ ಹಾಲಾಸ್ಯನಾಥಸ್ಯ ಗೋಪುರಂ ದ್ಯೋತಿತಾಂಬರಂ ॥೪೫॥

ಮೂರ್ತಿನಾಥೋಽಸಿ ದೇವಸ್ಯ ನಿಶಿ ಪ್ರೋಕ್ತಾಂ ಸ್ಮರನ್ಗಿರಂ ।
ರಕ್ಷಿತಾ ಸ್ಯಾಂ ಗಿರೇರಸ್ಯ ತ್ರ್ಯಕ್ಷಾಜ್ಞಾ ಮೇ ಗರೀಯಸೀ ॥೪೬॥

ಶಿವಾಲಯೇ ಸ್ಥಿರಂ ತತ್ರ ಸ್ಥಾಣುಮೂರ್ತಿಮಿವಾಸ್ಥಿತಂ ।
ಸ ಪ್ರವಿಶ್ಯ ಗಜೇಂದ್ರೋಽಪಿ ಭುವೋ ಭಾಗ್ಯೇನ ಭೂಯಸಾ ॥೪೭॥

---

ಅದನ್ನು ಹೋದ ದಾರಿಯಲ್ಲಿ ಬಿಟ್ಟರು. ಆಗ ಮಂತ್ರಿಗಳೆಲ್ಲರೂ ಒಟ್ಟಾಗಿ ಆ ಗಜರಾಜನನ್ನು ಈ ರೀತಿ ಪ್ರಾರ್ಥಿಸಿದರು. ॥೪೧-೪೨॥

ಓ ಮಂಗಳಕರನೇ, ಗಜರಾಜನೇ, ಗುಣವಂತನಾಗಿ ಈ ಭೂಮಿಯನ್ನು ಆಳುವ ಯೋಗ್ಯರಾಜನನ್ನು ನೀನು ಕರೆದುಕೊಂಡು ಬಾ ' ಎಂದು ಹೇಳಿ ಅದರ ಕಣ್ಣನ್ನು ಕಟ್ಟಿ ಪರ್ವತಾಕಾರವುಳ್ಳ ಆ ಆನೆಯನ್ನು ವೈಭವದಿಂದ ಕಳುಹಿಸಿ ಬಿಟ್ಟರು. ಪಟ್ಟೆಯ ವಸ್ತ್ರದಿಂದ ಕಣ್ಣುಕಟ್ಟಿ ಬಿಟ್ಟ ಆ ಆನೆಯಾದರೋ ಗಂಡಸ್ಥಳದಲ್ಲಿ ಮದೋದಕವನ್ನು ಸುರಿಸುತ್ತಾ ಪಟ್ಟಣದಲ್ಲೆಲ್ಲಾ ಅಲೆದು ತನ್ನ ಮದೋದಕದಿಂದ ದಿಗಂತಗಳನ್ನೆಲ್ಲಾ ಸುಗಂಧಭರಿತವನ್ನಾಗಿ ಮಾಡುತ್ತಾ ಸ್ವೇಚ್ಛೆಯಾಗಿ ಅಲೆಯುತ್ತಾ ತನ್ನ ಕೊರಳಿಗೆ ಸರಪಳಿಯಲ್ಲಿ ಕಟ್ಟಿರುವ ಗಂಟೆಗಳ ಶಬ್ದದಿಂದ ಭೂಮ್ಯಾಕಾಶಗಳನ್ನೂ ಧ್ವನಿಮಾಡುತ್ತಾ, ಅಂಬರದಲ್ಲಿ ಬೆಳಗುತ್ತಿರುವ ಗೋಪುರವುಳ್ಳ ಹಾಲಾಸ್ಯೇಶ್ವರನ ದೇವಾಲಯಕ್ಕೆ ಬಂದಿತು. ॥೪೩-೪೪-೪೫॥

ಅಲ್ಲಿದ್ದ ಮೂರ್ತಿನಾಥನಾದರೋ ಮಹಾದೇವನು ಹಿಂದಿನ ರಾತ್ರಿ ಅಶರೀರ ವಾಣಿಯ ಮೂಲಕ ಹೇಳಿದ ಮಾತನ್ನೇ ಸ್ಮರಿಸಿಕೊಳ್ಳುತ್ತಾ ನಾನು ಈ ಪಾಂಡ್ಯ ದೇಶಕ್ಕೆ ಹೇಗೆ ರಾಜನಾಗುವೆನೋ ! ಈಶ್ವರನ ಅಪ್ಪಣೆಯು ಪ್ರಪಂಚದಲ್ಲಿ ದೊಡ್ಡದು,

ಪ್ರಾಪ ಕಕ್ಷ್ಯಾಮಣಿಂ ಸ್ಪೃಷ್ಟ್ವಾ ಕ್ಷಿತಿಸ್ಥಂ ಸ್ಕಂಧಮಾನಯತ್ ।
ಉದಯಸ್ಥರವಿಪ್ರಖ್ಯಂ ಮೂರ್ತಿಮಂತಮಿವಾನಲಂ ॥೪೮॥

ಗಜಸ್ಕಂಧಸ್ಥಿತಂ ನೇಮುಃ ಪೌರಾ ಹೃಷ್ಟಾಶ್ಚ ಮಂತ್ರಿಣಃ ।
ಶೃಂಗದುಂದುಭಿಶಂಖಾಶ್ಚ ಪಟಹಾಶ್ಚಾಪಿ ದಧ್ವನುಃ ॥೪೯॥

ಪರೇ ಶುಶ್ರುವಿರೇ ಶ್ರಾವ್ಯಾ ವಾಚೋ ಮಾಂಗಲ್ಯಸಂಯುತಾಃ ।
ವವೃಷುಃ ಸುಮನೋಲಾಜೈರ್ನಾರ್ಯಃ ಸೌಧಗತಾಸ್ತದಾ ॥೫೦॥

ದ್ವಿಪೇಂದ್ರಾದವತಾರ್ಯೈನಂ ಮಂತ್ರಿಣೋ ಮಾನ್ಯದರ್ಶನಂ ।
ತೇನ ತೇ ವಿವಿಶುಃ ಸಾರ್ಧಂ ಮಕುಟಾರ್ಪಣಮಂಡಪಂ ॥೫೧॥

ತತ್ರ ಸಿಂಹಾಸನೇ ದಿವ್ಯೇ ರತ್ನಮಾಲಾಪರಿಷ್ಕೃತೇ ।
ಆರೇಭಿರೇಽಭಿಷೇಕ್ತುಂ ತಮಾನತಂ ನೀತಿಮತ್ತರಂ ॥೫೨॥

---

ಅಂತೂ ಆದರಂತೆ ನಡೆಯಲೇಬೇಕೆಂದು ನಿಶ್ಚಯಿಸಿ ಶಿವದೇವಾಲಯದಲ್ಲಿ ಮೂರ್ತಿವಂತನಾದ ಶಿವನಂತೆಯೇ ಸ್ಥಿರವಾಗಿ ಕುಳಿತಿದ್ದನು. ಆ ಸಲಗನಾದರೋ ಈ ಭೂಮಿಯ ಮಿಗಿಲಾದ ಭಾಗ್ಯದಿಂದಲೋ ಎಂಬಂತೆ ದೇವಾಲಯದ ಪ್ರಾಕಾರವನ್ನು ಪ್ರವೇಶಿಸಿ, ಅಲ್ಲಿದ್ದ ರತ್ನವನ್ನು ಮುಟ್ಟಿ ನೆಲದ ಮೇಲೆ ಶಿವನ ಬಳಿ ಕುಳಿತಿದ್ದ ಮೂರ್ತಿನಾಥನನ್ನು ಹೆಗಲ ಮೇಲೆ ಕೂರಿಸಿಕೊಂಡಿತು. ॥೪೭-೪೮॥

ಒಡನೆಯೇ ಆ ಮೂರ್ತಿನಾಥನು ಉದಯವಾಗುತ್ತಿರುವ ಸೂರ್ಯನಂತೆಯೂ, ಮೂರ್ತಿಮತ್ತಾಗಿರುವ ಅಗ್ನಿಯಂತೆಯೂ, ಮಹಾತೇಜಸ್ವಿಯಾಗಿ ಆನೆಯ ಮೇಲೆ ಬರುತ್ತಿರಲು ಆ ಅದ್ಭುತವನ್ನು ಪ್ರಜೆಗಳೂ ಮಂತ್ರಿಗಳೂ ನೋಡಿ ಸಂತುಷ್ಟರಾಗಿ ಅವನಿಗೆ ಮರ್ಯಾದೆಯಿಂದ ನಮಸ್ಕಾರಮಾಡಿದರು. ಕೊಂಬು, ನಗಾರಿ, ಶಂಖ, ತಮಟೆ ಮುಂತಾದ ವಾದ್ಯಗಳೂ ಮೊಳಗಿದವು. ಕೆಲವರು ಇಂಪಾದ ಕೀರ್ತನೆಗಳನ್ನು ಮಂಗಳವಾದ್ಯಗಳೊಡನೆ ಹೇಳಿದರು. ಉಪ್ಪರಿಗೆಯ ಮೇಲಿರುವ ನಾರಿಯರು, ಹೂವು ಮತ್ತು ಅರಳುಗಳನ್ನು ಸಂತೋಷದಿಂದ ಅವನ ಮೇಲೆ ಎರಚಿ ತಮ್ಮ ಸಂತೋಷವನ್ನು ವ್ಯಕ್ತಪಡಿಸಿದರು. ॥೪೮-೪೯-೫೦॥

ಅನಂತರ ಮಂತ್ರಿಗಳು ಗಂಭೀರನಾಗಿ ಕುಳಿತಿದ್ದ ಈ ಮೂರ್ತಿನಾಥನನ್ನು ಆನೆಯ ಮೇಲಿನಿಂದ ಕೆಳಕ್ಕೆ ಇಳಿಸಿ ಅವನೊಡನೆ ತಾವೂ ಕಿರೀಟಧಾರಣೆಯಾಗುವ

ಕುಂಡೇಷು ಮಂಡಿತಾಂತೇಷು ಸಮ್ಯಕ್ಪ್ರಜ್ವಲಿತೇಽನಲೇ ।
ಜುಹುವುರ್ಮಂಗಲಂ ದಿವ್ಯಂ ಮಂತ್ರಪೂತಂ ಮಹೀಸುರಾಃ ॥೫೩॥

ನದತ್ಸು ಭದ್ರವಾದ್ಯೇಷು ಸೋಽಭಿಷಿಕ್ತೋ ವಿಧಾನತಃ ।
ಆಲೋಕ್ಯ ಸಚಿವಾನ್ಪೌರಾನ್ಮೂರ್ತಿನಾಥೋ ವಚೋಽಬ್ರವೀತ್ ॥೫೪॥

ಹಿತ್ವಾಘಪರ್ವತಂ ಶೈವಂ ಶಾಸನಂ ಪಾಲ್ಯತಾಮಿತಿ ।
ತೇ ಸ್ವಾಮಿನ್ಯತ್ತ್ವಯಾ ದಿಷ್ಟಂ ತತ್ಕಾರ್ಯಮಿತಿ ಚಾಬ್ರುವನ್ ॥೫೫॥

ಗೋಪ್ತಾ ಸ್ಯಾಂ ಲೋಕತಂತ್ರಸ್ಯ ಯದ್ಯಹಂ ದೀಪ್ತಭೂಷಣಂ ।
ಕೋಟೀರಂ ಶಿವಮುದ್ರಾಂಕಜಟಾಕೋಟೀರಮೇವ ಮೇ ॥೫೬॥

---

ಮಂಟಪವನ್ನು ಹೊಕ್ಕರು. ಅಲ್ಲಿ ರತ್ನಮಾಲೆಗಳಿಂದ ಪರಿಷ್ಕೃತವಾಗಿರುವ ದಿವ್ಯವಾದ ಸಿಂಹಾಸನದಲ್ಲಿ ವಿನಯವಂತನೂ ನೀತಿಜ್ಞರಲ್ಲಿ ಅಗ್ರೇಸರನೂ ಆದ ಆ ಮೂರ್ತಿನಾಥನನ್ನು ಕೂರಿಸಿ, ಪಟ್ಟಾಭಿಷೇಕಮಾಡಲು ಪ್ರಾರಂಭಿಸಿದರು. ॥೫೦-೫೨॥

ಅಲಂಕರಿಸಲ್ಪಟ್ಟಿರುವ ಕುಂಡಗಳಲ್ಲಿ ಅಗ್ನಿಯು ಪ್ರದಕ್ಷಿಣಾಕಾರವಾಗಿ ಪ್ರಜ್ವಲಿಸುತ್ತಿರಲು, ಬ್ರಾಹ್ಮಣೋತ್ತಮರು ಮಂತ್ರಪೂತವಾದ ದಿವ್ಯಮಂಗಳಾಹುತಿಗಳಿಂದ ಹೋಮಮಾಡಿದರು. ಮಂಗಳವಾದ್ಯಗಳು ಮೊಳಗುತ್ತಿರಲು ಆ ಮೂರ್ತಿನಾಥನು ವಿಧಿಪೂರ್ವಕವಾಗಿ ಪಟ್ಟಾಭಿಷಿಕ್ತನಾದನು. ಹೀಗೆ ಅಭಿಷೇಕಹೊಂದಿದ ಮೇಲೆ ಮೂರ್ತಿನಾಥನು ಮಂತ್ರಿಗಳನ್ನೂ ಪ್ರಜೆಗಳನ್ನೂ ನೋಡಿ ಈ ರೀತಿ ಮಾತನಾಡಿದನು. ॥೫೩-೫೪॥

ಓ ಮಂತ್ರಿ ಮತ್ತು ಪ್ರಜೆಗಳಿರಾ, ಪಾಪವೆಂಬ ಪರ್ವತದ ಸಹವಾಸವನ್ನು ತೊರೆದು ಪರಶಿವನ ಅಪ್ಪಣೆಯನ್ನು ನೀವೆಲ್ಲರೂ ಪಾಲಿಸಿರಿ ಎಂದು ನುಡಿಯಲು, ಅವರು ಸ್ವಾಮಿ! ತಾವು ಅಪ್ಪಣೆಮಾಡಿದಂತೆ ನಡೆಯುವುದೇ ನಮ್ಮ ಕರ್ತವ್ಯ ಎಂದು ಪ್ರತಿಜ್ಞೆಮಾಡಿದರು. ಆಗ ಆ ಮೂರ್ತಿನಾಥನು ಪ್ರಜೆಗಳಿರಾ, ನಾನು ಈ ರಾಜ್ಯತಂತ್ರವನ್ನು ಕಾಪಾಡುವುದಾದರೆ ಶಿವನ ಲಾಂಛನಗಳಾದ ಭಸ್ಮಲೇಪನ ಜಟಾಧಾರಣೆಯೇ ನನಗೆ ಆಭರಣಗಳಿಂದ ಪ್ರಜ್ವಲಿಸುವ ಕಿರೀಟವೆಂದು ತಿಳಿಯಿರಿ. ॥೫೫-೫೬॥

ಇತ್ಯುಕ್ತಾ ಮಂತ್ರಿಣಸ್ತೇತು ಪ್ರಣಮ್ಯೇನಂ ತ್ವಯಾ ಪ್ರಭೋ ।
ಸಮ್ಯಗಾದಿಷ್ಟ ಏವಾಯಂ ಕ್ರಮ ಇತ್ಯನುಮೇನಿರೇ ॥೫೭॥

ಸ ಭದ್ರವಾದ್ಯೋ ಮೂರ್ತಿಶೋ ಜಟಾಮುಕುಟಮಂಡಿತಃ ।
ಸ್ತೋತುಂ ಶ್ರೀತಾಲಚಕ್ರೇಶಂ ಗಜಾರೂಢಃ ಸ ನಿರ್ಯಯೌ ॥೫೮॥

ವಿಷ್ಣುನಾ ವಿಧಿನಾ ಚಾದ್ಯಾಪ್ಯದೃಶ್ಯಂ ಚಂದ್ರಶೇಖರಂ ।
ನತ್ವಾ ಶಿವಂ ಮೂರ್ತಿನಾಥಃ ಶುಭವೀಥ್ಯಾಂ ಯಯೌ ಪುನಃ ॥೫೯॥

ಪ್ರಾಪ್ಯ ರಾಜಗೃಹದ್ವಾರಂ ಯುಕ್ತಂ ಕಲ್ಯಾಣಲಕ್ಷಣೈಃ ।
ಗಲನ್ಮದಝುರೀಗಂಡಾದ್ಗಜಾದವತತಾರ ಸಃ ॥೬೦॥

ಭಾಸ್ವಾನಿವೋದಯಂ ಭಾಸ್ವನ್ಮಹಾರ್ಹಮಣಿಮಂಡಪಂ ।
ಸ ಸಿಂಹಾಸನಮಧ್ಯಸ್ಥೋ ರಾಮಾಚಾಮರವೀಜಿತಃ ॥೬೧॥

ಭುಜೇನ ವಲಯಂ ಭೂಮೇಃ ಛತ್ರಛಾಯೇ ದಧೌ ಚ ಸಃ ।
ಜಹುಃ ಸರ್ವೇಚ ದುರ್ದಾಂತಂ ಸಿದ್ಧಿಂ ಶ್ರೀ ಭಸ್ಮಫಾಲಕಃ ॥೬೨॥

---

ಎಂಬುದಾಗಿ ರಾಜನಿಂದ ಹೇಳಲ್ಪಟ್ಟ ಆ ಮಂತ್ರಿಗಳು ಅವನಿಗೆ ನಮಸ್ಕರಿಸಿ ಪ್ರಭೋ, ತಾವು ಅಪ್ಪಣೆಕೊಡಿಸಿದುದು ಯುಕ್ತವಾಗಿದೆ. ಈ ಕ್ರಮವೇ ಶೈವಸಂಪ್ರದಾಯಸ್ಥರಿಗೆ ಉಚಿತವಾದುದು ಎಂದು ಒಪ್ಪಿಕೊಂಡರು. ಅನಂತರ ಆ ಮೂರ್ತಿನಾಥನು ಮಂಗಳವಾದ್ಯಗಳೊಡನೆ ಜಟಾಮುಕುಟಭೂಷಿತನಾಗಿ ಶ್ರೀತಾಲಚಕ್ರೇಶ್ವರನಿಗೆ ನಮಸ್ಕರಿಸಿ ಬರಲು ಆನೆಯನ್ನೇರಿ ಹೊರಟನು. ॥೫೭-೫೮॥

ಶಿವಲಿಂಗದ ಆದ್ಯಂತಗಳನ್ನು ಹುಡುಕಲು ಹೋದ ವಿಷ್ಣುಬ್ರಹ್ಮರಿಗೆ ಕೊನೆಯವರೆಗೂ ಗೋಚರಿಸದಿರುವ ಮಹಿಮೆಯುಳ್ಳ ಚಂದ್ರಶೇಖರನಾದ ಶಿವನನ್ನು ಈ ಮೂರ್ತಿನಾಥನು ಒಲಿಸಿಕೊಂಡು, ನಮಸ್ಕರಿಸಿ ರಾಜಬೀದಿಯಲ್ಲಿ ವೈಭವದಿಂದ ಆನೆಯ ಮೇಲೆಯೇ ಹೊರಟನು. ಮಂಗಳಚಿಹ್ನೆಗಳಿಂದ ಕೂಡಿದ ಅರಮನೆಯ ಬಾಗಿಲಿಗೆ ಬಂದು ಅಲ್ಲಿ ಗಂಡಸ್ಥಳದಿಂದ ಅವಿರಳವಾಗಿ ಮದೋದಕವನ್ನು ಸುರಿಸುತ್ತಿರುವ ಆನೆಯಿಂದ ಗಂಭೀರವಾಗಿ ಕೆಳಗಿಳಿದನು. ॥೫೯-೬೦॥

ಅಮೂಲ್ಯರತ್ನಕಾಂತಿಯಿಂದ ಜಾಜ್ವಲ್ಯಮಾನವಾಗಿರುವ ದಿವ್ಯಸಿಂಹಾಸನದ ಮಧ್ಯದಲ್ಲಿ ಉದಯಿಸುತ್ತಿರುವ ಸೂರ್ಯನಂತೆ ರಾಜಿಸುತ್ತಾ ಕುಳಿತಿರುವ, ಈ ಮೂರ್ತಿ

ಜಗತೋ ಮೂರ್ತಿನಾಥೋಽಯಂ ಭೂಮಿನಾಥ ಇತಿಸ್ಮೃತಃ ।
ಸ ರಾಮಾಭೋಗವಿಮುಖೋ ವಿಹಿತೇಂದ್ರಿಯನಿಗ್ರಹಃ ॥೬೩॥

ಶಾಸನಂ ವರ್ಧಯಂಛೈವಂ ಶಶಾಸ ಸುಧಿಯಾಂ ಮಹೀಂ ।
ಪಾದಾನತೈಃ ಪರನೃಪೈಃ ಪರಿಸೇವ್ಯಮನೋರಥಃ ॥೬೪॥

ಸಂಕ್ಷಿಪ್ತ ಲೋಕದುರಿತೋ ವೃಜಕಂ ಜನಕಾತ್ಮಜಃ (?) ॥೬೫॥

ಕಾಮಾರಿದಾಸ್ಯಪರಿಪೂರ್ಣಕೃಪಾಧಿಪತ್ಯಃ ।
ಕಾಲೇ ಜಗಾಮ ಶಿವಧಾಮ ಸ ಮೂರ್ತಿನಾಥಃ ॥
ಮೂರ್ತಿನಾಥಚರಿತಂ ಸ್ಮರಂತಿ ಯೇ ।
ಕೀರ್ತಯಂತಿ ಶಿವಭಕ್ತಿಪೂರ್ತಯಃ ॥೬೬॥

---

ನಾಥನು ಪಾರ್ಶ್ವದಲ್ಲಿ ಸುಂದರಿಯರ ಚಾಮರಗಳಿಂದ ಸೇವಿಸಲ್ಪಡುತ್ತಾ ತನ್ನ ಭುಜ ದಂಡದಿಂದ ಭೂಮಂಡಲವನ್ನೇ ಧರಿಸಿ ಶ್ವೇತಚ್ಛತ್ರಿಯನ್ನು ಹಿಡಿಸಿಕೊಂಡಿದ್ದನು. ಪ್ರಜೆಗಳೆಲ್ಲರೂ ಸಿದ್ಧಿಸಂಪತ್ಸಮೃದ್ಧವಾದ ಭಸ್ಮವನ್ನು ಹಣೆಯಲ್ಲಿ ಧರಿಸಿರುವ ಈತ ನನ್ನು ನೋಡಿ, ಈ ರಾಜನು ನಿಜವಾಗಿಯೂ ಜಗನ್ಮೂರ್ತಿನಾಥನೇ ಆಗಿರುವನೆಂದು ಹೇಳುತ್ತಾ ತಮ್ಮ ದುರಭಿಪ್ರಾಯವನ್ನೆಲ್ಲಾ ತೊರೆದರು. ||೬೧-೬೨||

ಆ ಮೂರ್ತಿನಾಥನು ರಾಜನಾದರೂ ರಮಣಿಯರ ಭೋಗದಲ್ಲಿ ಆಸಕ್ತಿ ಯನ್ನಿಡದೆ ಇಂದ್ರಿಯಗಳನ್ನು ನಿಗ್ರಹಿಸಿ ಶಿವನ ಅಪ್ಪಣೆಯನ್ನು ಅನುಸರಿಸಿ ಅವನ ಆಜ್ಞೆಯಂತೆ ಶೈವಧರ್ಮವನ್ನೇ ಪರಿಪಾಲಿಸುತ್ತಾ ಈ ಭೂಮಿಯನ್ನು ಧೈರ್ಯದಿಂದ ಆಳುತ್ತಿದ್ದನು. ಆ ಕಾಲದಲ್ಲಿ ಅನೇಕ ಶತ್ರುರಾಜರು ತಾವಾಗಿಯೇ ಬಂದು ಮೂರ್ತಿ ನಾಥನ ಪಾದಾಕ್ರಾಂತರಾಗುತ್ತಿದ್ದರು. ಮೂರ್ತಿನಾಥನ ಉಪದೇಶದಂತೆ ಸದ್ಧರ್ಮ ದಲ್ಲಿ ನಡೆಯುತ್ತಾ, ಸಮಸ್ತ ಪ್ರಜಾವರ್ಗವೂ ತಮ್ಮ ಪಾಪರಾಶಿಯನ್ನು ಕಡಿಮೆ ಮಾಡಿಕೊಳ್ಳುತ್ತಿದ್ದಿತು. ರಾಜನಾಗಿದ್ದ ಈತನು ತನ್ನ ಪ್ರಜೆಗಳಿಗೆ ಅನೇಕವೇಳೆ ತಂದೆಯಂತೆ ಮಗನಂತೆ ಹಿತಚಿಂತಕನಾಗಿರುತ್ತಿದ್ದನು. ಹೀಗೆ ಶಿವಾನುಗ್ರಹದಿಂದ ಮೂರ್ತಿನಾಥನು ತನ್ನ ರಾಜ್ಯವನ್ನು ಬಹು ವಿಚಕ್ಷಣೆಯಿಂದ ಆಳುತ್ತಲಿದ್ದನು. ||೬೩-೬೪-೬೫||

ಹೀಗೆ ಮನ್ಮಥಾಂತಕನಾದ ಪರಶಿವನ ಸೇವೆಯಿಂದ ಪರಶಿವನ ದಯೆಯನ್ನು ಸಂಪಾದಿಸಿ ಆದರಿಂದ ರಾಜ್ಯಾಧಿಪತಿಯಾದ ಆ ಮೂರ್ತಿನಾಥನು ಕ್ರಮೇಣ ತನ್ನ

ಮೂರ್ತಿಲೇಶರಹಿತಾ ವಸಂತಿ ತೇ ।
ಕಾರ್ತಿಕೇಯಜನಕಾಂತಿಕೇ ಸದಾ ॥೬೭॥

ಇತಿ ಶ್ರೀಶಿವರಹಸ್ಯೇ ಸದಾಶಿವಾಖ್ಯೇ ನವಮಾಂಶೇ ಮೂರ್ತಿನಾಥಚರಿತ್ರ ವರ್ಣನಂ ನಾಮ್ನೈಕೋನಚತ್ವಾರಿಂಶೋಽಧ್ಯಾಯಃ

---

ಅವಸಾನಕಾಲದಲ್ಲಿ ಕೈಲಾಸವನ್ನೈದಿದನು. ಜೈಗೀಷವ್ಯಾದಿಮುನಿಗಳಿರಾ ! ಶಿವಭಕ್ತಿ ಪೂರ್ಣರಾಗಿ ಈ ಮೂರ್ತಿನಾಥನ ಚರಿತ್ರೆಯನ್ನು ಸ್ಮರಿಸುವವರೂ ಹೇಳುವವರೂ ಸಹ ಮುಂದೆ ಯಾವ ಕ್ಷುದ್ರಜನ್ಮವನ್ನೂ ಪಡೆಯದವರಾಗಿ ಯಾವಾಗಲೂ ಮಹೇಶ್ವರನ ಸಮೀಪದಲ್ಲಿಯೇ ವಾಸಮಾಡುತ್ತಾರೆಂದು ಕುಮಾರಸ್ವಾಮಿಯು ಜೈಗೀಷವ್ಯಾದಿಮುನಿಗಳಿಗೆ ಹೇಳಿದನು. ॥೬೬-೬೭॥

ಇಲ್ಲಿಗೆ ಶ್ರೀಶಿವರಹಸ್ಯದಲ್ಲಿ ಸದಾಶಿವಸಂಜ್ಞಕವಾದ ಒಂಬತ್ತನೆಯ ಅಂಶದಲ್ಲಿ ಮೂರ್ತಿನಾಥನ ಕಥಾವರ್ಣನೆಯೆಂಬ ಮೂವತ್ತೊಂಬತ್ತನೆಯ ಅಧ್ಯಾಯವು ಮುಗಿಯಿತು.



|| ಶ್ರೀಃ ||

|| ಶ್ರೀ ಶಿವಾಯನಮಃ ||

# ಅಥ ಶ್ರೀಶಿವರಹಸ್ಯೇ

## ಸದಾಶಿವಾಖ್ಯೇ

## ನವಮಾಂಶೇ

## ಚತ್ವಾರಿಂಶೋಽಧ್ಯಾಯಃ

|| ಶ್ರೀ ಸ್ಕಂದ ಉವಾಚ ||

ಸ್ಕಂದನಾಥಸ್ಯ ಚರಿತಂ ನಿಬೋಧ ಮುನಿಸತ್ತಮ ।
ಜ್ಯೋತಿಃಸ್ಫುರದ್ರತ್ನಮೌಳಿಶ್ಚೋಲೇಷು ಪ್ರಥಿತೋಽಭವತ್ ॥೧॥

ವಿಷಯೇ ಸಹ್ಯಜಾ ಕುಲ್ಯಾ ಸಂಭವತ್ಯಸ್ಯ ಸಂಪದಿ ।
ಶರಣ್ಯಗ್ರಾಮ ಇತ್ಯಸ್ತಿ ಸಾಲೋಚ್ಚಾಶ್ರಯಸಮನ್ವಿತಃ ॥೨॥

ಪುಷ್ಪೋದ್ಯಾನಸ್ಫುರತ್ಪಾರ್ಶ್ವೇ ದೀರ್ಘದೀರ್ಘಿಕಯಾ ವೃತಃ ।
ಯತ್ರ ಸಂಚಿತವಿಪುಲಪ್ರಭಾಭಸ್ಮಪ್ರಬೋಧನೈಃ ॥೩॥

---

## ನಲವತ್ತನೆಯ ಅಧ್ಯಾಯ

ಮುನಿಪುಂಗವನೇ, ಸ್ಕಂದನಾಥನೆಂಬ ಮತ್ತೊಬ್ಬ ಭಕ್ತನ ಚರಿತ್ರೆಯನ್ನು ಹೇಳುತ್ತೇನೆ ಕೇಳು; ಇವನು ಚೋಳದೇಶದಲ್ಲಿ ತೇಜೋಮಯವಾದ ತನ್ನ ಕಿರೀಟಧಾರಿಯಾಗಿ ಶ್ರೀಮಂತನೆಂದು ಪ್ರಖ್ಯಾತನಾಗಿದ್ದನು. ಈತನ ವಾಸಸ್ಥಳವು ಶರಣ್ಯಗ್ರಾಮವೆಂಬ ಒಂದು ನಗರ. ಅದು, ಸಸ್ಯಸಂಪತ್ಸಮೃದ್ಧವಾದ ಪ್ರದೇಶದಲ್ಲಿದ್ದು ಎತ್ತರವಾದ ಸಾಲುಮರಗಳಿಂದ ಮೆರೆಯುತ್ತಿದ್ದಿತು. ||೧-೨||

ಆ ಊರಿನ ಎರಡು ಪಕ್ಕಗಳೂ ಮನೋಹರವಾದ ಹೂದೋಟಗಳಿಂದ ಶೋಭಿಸುತ್ತಿದ್ದವು. ದೊಡ್ಡ ದೊಡ್ಡ ಕೊಳಗಳೂ ಸರಸ್ಸುಗಳೂ ಅಲ್ಲಲ್ಲಿ ಕಾಣುತ್ತಿದ್ದುವು. ಅಲ್ಲಿ ದಿವ್ಯತೇಜಸ್ಸು, ಭಸ್ಮಧಾರಣೆ, ಸದ್ಜ್ಞಾನ ಇವುಗಳಿಂದ ಭರಿತರಾದ

ನ ಪರಂ ತಿಮಿರಂ ನೈಶಂ ಧವಲಂ ಭ್ರಮವಾನಪಿ ।
ಭೃಂಗಾಕ್ರಾಂತಂ ಪುಷ್ಪಮುಖಂ ಮಧು ಯತ್ರ ನ ಕೇವಲಂ ॥೪॥

ಮುಂಚಂತಿ ಪಂಚಮೋದ್ಗೀತಕೇಕೀಶುಕ ಮುಖೋದ್ಗತಂ ।
ಯತ್ರಾಬ್ಜಮಕರಂದಾಶ್ಚ ಭೃಂಗಗಾನೇನ ಕೇವಲಂ ॥೫॥

ತದ್ಗಾನಾಕರ್ಣನೋನ್ಮುಕ್ತ ಮೃಗರೋಮಂಥ ಮಂಥಿತಂ ।
ತಸ್ಮಿಂಛ್ರೀಶರಣಗ್ರಾಮೋ ಸ್ಕಂದಾಖ್ಯೋಽಭೂದ್ದ್ವಿಜೋತ್ತಮಃ ॥೬॥

ಫಣಿಭೂಷಪದೇ ಭಕ್ತಃ ಪ್ರಬೋಧಾಂಭೋಧಿಚಂದ್ರಮಾಃ ।
ಸರೋಜಪತ್ರನಿದ್ರಾಣಕುಲೀರೋದ್ಬೋಧಕಾರಿಭಿಃ ॥೭॥

ಮೀನೋದ್ಘಟ್ಟೈಃ ಸ್ಫುರತ್ಕ್ಷೇತ್ರಸೇತೌ ತಸ್ಮಿನ್ಕೃತಸ್ಥಿತೇ ।
ವೃಷವಾಹಸ್ಯ ದೇವಸ್ಯ ಪಾದಾದಸ್ಯ ತಪೋನಿಧೇಃ ॥೮॥

---

ಜನಗಳೇ ಇದ್ದುದರಿಂದ ಅಜ್ಞಾನ ಲೇಶಕ್ಕೂ ಆಸ್ಪದವೇ ಇರಲಿಲ್ಲ. ಕತ್ತಲೆಯ ರಾತ್ರಿಯಲ್ಲಿಯೂ ಭಸ್ಮಕಾಂತಿಯು ಸರ್ವತ್ರಪ್ರಸರಿಸಿ ಸರ್ವದಾ ಬೆಳಕನ್ನುಂಟು ಮಾಡುತ್ತಾ ಹಗಲಿನ ಭ್ರಾಂತಿಯನ್ನು ಜನರಿಗೆ ಉಂಟುಮಾಡುತ್ತಿದ್ದಿತು. ವಿಧವಿಧ ಗಳಾದ ಪುಷ್ಪಗಳ ಮುಂದೆ ಮಕರಂದವು ಪೂರ್ಣವಾಗಿ ರಾಜಿಸುತ್ತಾ ದುಂಬಿಗಳಿಂದ ಅಲಂಕೃತವಾಗಿದ್ದಿತು. ॥೩-೪॥

ಆ ನಗರದಲ್ಲಿ ನವಿಲುಗಳೂ, ಗಿಳಿಗಳೂ ಪಂಚಮಸ್ವರಗಳನ್ನು ಇಂಪಾಗಿ ಹಾಡುತ್ತಿರುವುವು. ದುಂಬಿಗಳ ಝೇಂಕಾರ ಧ್ವನಿಗಳಿಂದ ತಾವರೆಹೂಗಳಲ್ಲಿರುವ ಮಕರಂದವು ಯಥೇಚ್ಛವಾಗಿರುವಂತೆ ತೋರುತ್ತಿದ್ದವು. ಆ ದುಂಬಿಗಳ ಗಾನವನ್ನು ಕೇಳಿ ಜಿಂಕೆಗಳೂ ಆನಂದದಿಂದ ಮೆಲಕುಮಾಡುವುದನ್ನೂ ನಿಲ್ಲಿಸಿ ಆಲಿಸುತ್ತಿದ್ದುವು. ಅಂತಹ ಶ್ರೀಶರಣ್ಯಗ್ರಾಮದಲ್ಲಿ ಸ್ಕಂದನಾಥನೆಂಬ ಹೆಸರಿನ ಬ್ರಾಹ್ಮಣೋತ್ತಮನಿದ್ದನು. ॥೫-೬॥

ಮಹಾದೇವನ ಪಾದಭಕ್ತನೂ, ಜ್ಞಾನಾಂಬುಧಿಚಂದ್ರನೂ, ಆದ ಈ ಸ್ಕಂದ ನಾಥನು, ಸರ್ವದಾ ಪರಶಿವಪೂಜಾಸಕ್ತನಾಗಿ ಕಾಲಕಳೆಯುತ್ತಿದ್ದನು. ಆ ಕ್ಷೇತ್ರವಾದರೋ ತಾವರೆಯ ಎಲೆಗಳ ಮೇಲೆ ಮಲಗಿರುವ ಏಡಿಗಳನ್ನು ಎಚ್ಚರಗೊಳಿಸುವ ಮೀನುಗಳಿಂದಲೂ, ದೊಡ್ಡ ದೊಡ್ಡ ಮೀನುಗಳಿಂದ ಕಂಗೊಳಿಸುವ ಸರೋವರಗಳಿಂದಲೂ ಶೋಭಿಸುತ್ತಿರುವುದು. ಅಂತಹ ಕ್ಷೇತ್ರದಲ್ಲಿ ವಾಸಮಾಡುತ್ತಾ ವೃಷಭ

ತತ್ಪುಷ್ಪೈಸ್ತಜ್ಜಟಾಜೂಟಯೋಗ್ಯೈಃ ಸ್ಕಂದಃ ಸದಾರ್ಚಯತ್ ।
ಪುಷ್ಪಾಣಿ ಗಂಗೇಂದುಲಸತ್ತತ್ಕಪರ್ದೋರ್ಚಿತಾನಿ ಸಃ ॥೯॥

ಪೃಥಕ್ಪೃಥಕ್ಸಮಾಹೃತ್ಯ ನ್ಯಸ್ಯ ಪುಷ್ಪಕರಂಡಕೇ ।
ಸ ಪ್ರಾಪ ಮಾಲಾಗ್ರಥನಭವನಂ ಭುವನೇಶಿತುಃ ॥೧೦॥

ಫಲಕೇ ಪುರತಃ ಶುದ್ಧೇ ಆಸೀನೋ ನಿಯತಃ ಕ್ವಚಿತ್ ।
ಸ ಪುಷ್ಪಾಣಿ ವಿಭಜ್ಯಾಥ ಮಾಲಾಃ ಕರ್ತುಂ ಪ್ರಚಕ್ರಮೇ ॥೧೧॥

ಸವೃಂತಕೇಸರದಲೋದ್ದಂಡನದ್ಧಾನಿ ಕುಂಠಿತಾಃ ।
ಲಂಬಿನೀಶ್ಚ ಯಥಾಶಿಲ್ಪಂ ಸ್ರಜೋ ಬದ್ಧ್ವಾ ದ್ವಿಜೋತ್ತಮಃ ॥೧೨॥

ಸ ತಾಭಿಃ ಸ್ರಗ್ಭಿರಾತ್ಮೇಶ ಮೌಲಿಸಂಗತ ಹರ್ಷಭೂಃ ।
ಭಕ್ತ್ಯಾನರ್ಚ್ಯ ಶಿವಂ ಜಿಹ್ವಾನ್ಯಸ್ತಪಂಚಾಕ್ಷರೀಮನುಃ ॥೧೩॥

---

ವಾಹನನೂ, ತಪೋನಿಧಿಯೂ, ಭಕ್ತಸಂರಕ್ಷಕನೂ ಆದ ಮಹಾದೇವನಿಗೆ ಭಕ್ತನಾಗಿ ಜೀವಿಸುತ್ತಿದ್ದನು. ॥೭-೮॥

ಆ ಕ್ಷೇತ್ರದಲ್ಲಿ ಸುಗಂಧಮಯವಾಗಿ ಬೆಳೆಯುವ ಮಹಾದೇವನ ಜಡೆಗೆ ಯೋಗ್ಯವಾದ ಹೂವುಗಳಿಂದ ಸ್ಕಂದನಾಥನು ಯಾವಾಗಲೂ ಪೂಜೆಮಾಡುತ್ತಿದ್ದನು. ಒಂದುದಿನ ಗಂಗೆ ಮತ್ತು ಚಂದ್ರರಿಂದ ಶೋಭಿಸುವ ಜಟಾಭಾರಕ್ಕೆ ಉಚಿತವಾಗಿರುವ ಹೂಗಳನ್ನೇ ಅವನು ಪ್ರತ್ಯೇಕ ಪ್ರತ್ಯೇಕವಾಗಿ ಹೂಬುಟ್ಟಿಯಲ್ಲಿ ಇರಿಸಿ, ಆ ಜಗದೊಡೆಯನಿಗೆ ಹೂಮಾಲೆ ಕಟ್ಟಲು ತಾನು ಮಾಡಿಕೊಂಡಿದ್ದ ಮನೆಗೆ ಹೋದನು. ॥೯-೧೦॥

ತಾನು ಆ ಮನೆಯಲ್ಲಿ ಒಂದುಕಡೆ ನಿಯಮಬದ್ಧನಾಗಿ ಕುಳಿತು, ತನ್ನ ಮುಂದಿರುವ ಪರಿಶುದ್ಧವಾದ ಹಲಗೆಯ ಮೇಲೆ ಹೂವುಗಳನ್ನೆಲ್ಲಾ ಬೇರೆ ಬೇರೆ ವಿಂಗಡಿಸಿಕೊಂಡು, ಮಾಲೆಯನ್ನಾಗಿ ಕಟ್ಟಲು ಆರಂಭಿಸಿದನು. ತೊಟ್ಟುಳ್ಳ ಪುಷ್ಪಗಳು, ದೊಡ್ಡ ಕೇಸರದಳಗಳು, ತುಂಡಾದ ಹೂವು, ಉದ್ದವಾದ ಕುಸುಮಗಳು ಮುಂತಾದವುಗಳನ್ನು ಚಾತುರ್ಯಕ್ಕನುಗುಣವಾಗಿ ಆರಿಸಿ, ಆ ಬ್ರಾಹ್ಮಣೋತ್ತಮನು ಮಾಲೆಗಳನ್ನು ಕಟ್ಟಿ ಶಿವಾರ್ಚನೆಗೆ ಸಿದ್ಧಮಾಡಿದನು. ॥೧೧-೧೨॥

ಆ ಸ್ಕಂದನಾಥನು ತಾನು ಕಟ್ಟಿದ ಹೂವಿನಹಾರಗಳನ್ನು ಮಹೇಶ್ವರನ ತಲೆಯ ಮೇಲಿಟ್ಟು ಪೂಜಿಸಿ ಸಂತುಷ್ಟನಾಗಿ ಭಕ್ತಿಯಿಂದ ಶಿವನನ್ನು ಆರಾಧಿಸಿ ನಾಲಿಗೆಯಲ್ಲಿ

ಹೇಮಪಾತ್ರೇ ದ್ವಿಜನ್ಮಸ್ತವಮಾಸ್ವಾದಿತವತಃ ಪ್ರಭೋ ।
ಜ್ಞಾನಸಂಬಂಧನಾಮ್ನೋಽಥ ಭಕ್ತಸ್ಯಾಭೂದ್ದ್ವಿಜಃ ಸಖಾ ॥೧೪॥

ವಿರಿಂಚಿಮಾಧವಾದೃಷ್ಟಮೌಲಿಮೂಲಾರ್ಚನೇ ರತಃ ।
ನಮಃ ಶಿವಾಯೇತಿ ಜಪನ್ನ್ಯವರ್ತತ ಶಿವಾಶ್ರಮೇ ॥೧೫॥

ಸ್ತೋತ್ರೇಣ ಸ್ತೋತ್ರವಿನ್ಮುಖ್ಯ ಶ್ರೀಪಂಚಾಕ್ಷರಲಕ್ಷ್ಮಣಾ ।
ಶಿವಮಾನರ್ಚ್ಯ ಹೃಷ್ಟಾತ್ಮಾ ತುಷ್ಟಾವಾಭೀಷ್ಟದಾಯಿನಂ ॥೧೬॥

॥ ಶ್ರೀಸ್ಕಂದ ಉವಾಚ

ನಮಃ ಶಿವಾಯ ನಿರ್ಗುಣಾಯ ನಿಷ್ಕಲಾಯ ತ್ರಿಶೂಲಿನೇ
ನಮಃ ಶಿವಾಯ ಶಕ್ತ್ಯತೀತಗೋಚರಾಯ ಶಂಭವೇ ।

ನಮಃ ಶಿವಾಯ ನಿಷ್ಕ್ರಿಯಾಯ ನಿರ್ಮಲಾಯ ಯೋಗಿನೇ
ನಮಃ ಶಿವಾಯ ಸಿದ್ಧಿಮುಕ್ತಿಹೇತವೇ ಚಿದಾತ್ಮನೇ ॥೧೭॥

---

ಶಿವಪಂಚಾಕ್ಷರಮಂತ್ರವನ್ನುಚ್ಚರಿಸುತ್ತಾ, ಸುವರ್ಣಪಾತ್ರೆಯಲ್ಲಿ ಪ್ರಭುವಿಗೆ ಬ್ರಾಹ್ಮಣರು ನಿವೇದನಮಾಡಿಟ್ಟಿದ್ದ ಪ್ರಸಾದವನ್ನು ತಿಂದನು. ಈ ಸ್ಕಂದನಾಥನಿಗೆ ಜ್ಞಾನಸಂಬಂಧನೆಂಬ ಬ್ರಾಹ್ಮಣನು ಸ್ನೇಹಿತನಾಗಿದ್ದನು. ॥೧೩-೧೪॥

ಬ್ರಹ್ಮ, ವಿಷ್ಣುಗಳಿಗೆ ಗೋಚರಿಸದಿರುವ ಕಿರೀಟದ ಆದ್ಯಂತವುಳ್ಳ ಮಹಾದೇವನ ಪೂಜೆಯಲ್ಲಿ ಆಸಕ್ತನಾಗಿ ಆತನು ಶಿವಾಶ್ರಮದಲ್ಲಿ 'ನಮಃ ಶಿವಾಯ' ಎಂಬ ಮಂತ್ರವನ್ನು ಜಪಮಾಡುತ್ತಿದ್ದನು. ಸ್ತೋತ್ರಜ್ಞನಾದ ಈ ಸ್ಕಂದನಾಥನು ಮುಖ್ಯವಾದ ಶ್ರೀ ಪಂಚಾಕ್ಷರ ಮಂತ್ರಚಿಹ್ನೆಯುಳ್ಳ ಸ್ತೋತ್ರದಿಂದ ಶಿವನನ್ನು ಪೂಜಿಸಿ, ಸಂತುಷ್ಟಾಂತರಂಗನಾಗಿ ಇಷ್ಟಾರ್ಥದಾಯಕನಾದ ಆ ಮಹಾದೇವನನ್ನು ಹೀಗೆ ಸ್ತೋತ್ರಮಾಡಿದನು. ॥೧೫-೧೬॥

ಯೋಗಿಗಳ ಮನದಲ್ಲಿ ನೆಲಸಿರುವವನೂ, ಗುಣರಹಿತನೂ, ಕಲಂಕಶೂನ್ಯನೂ ತ್ರಿಶೂಲಧಾರಿಯೂ ಆದ ದೇವನಿಗೆ ನಮಸ್ಕಾರ. ಶಕ್ತಿಮೀರಿ ನಡೆಯುವವರ ಭಕ್ತ್ಯಾದಿಗಳಿಗೆ ಗೋಚರಿಸುವ ಸುಖಕರನಾದ ಶಿವನಿಗೆ ನಮಸ್ಕಾರ ಮಾಡುತ್ತೇನೆ. ವ್ಯಾಪಾರರಹಿತನೂ, ಪರಿಶುದ್ಧನೂ, ಯೋಗಿಯೂ ಆದ ಶಿವನಿಗೆ ಪ್ರಣಾಮಗಳು.

ನಮಃ ಶಿವಾಯ ಶಾಶ್ವತಾಯ ಕಾಮಕಾಲಮೃತ್ಯವೇ
ನಮಃ ಶಿವಾಯ ನಾರಸಿಂಹಹಸ್ತಿಕೃತ್ತಿವಾಸಸೇ ।
ನಮಃ ಶಿವಾಯ ವಿಷ್ಣುನೇತ್ರಪಂಕಜಾರ್ಚಿತಾಂಘ್ರಯೇ
ನಮಃ ಶಿವಾಯ ಸೋಮಸೂರ್ಯವಹ್ನ್ಯತೀತತೇಜಸೇ ॥೧೮॥

ನಮಃ ಶಿವಾಯ ವೇದವಾಗಗೋಚರಾಯ ವಾಙ್ಮಯಾ-
ಯ ತೇ ನಮಃ ಶಿವಾಯ ಸಹ್ಯಕೃತ್ಯಸಾಕ್ಷಿಣೇ ಮಹಾತ್ಮನೇ ।
ನಮಃ ಶಿವಾಯ ಶಂಕರಾಯ ಶಕ್ತಿಬೀಜಹೇತವೇ
ನಮಃ ಶಿವಾಯ ಚಂದ್ರಶೇಖರಾಯ ತೇ ಕಪರ್ದಿನೇ ॥೧೯॥

ನಮಃ ಶಿವಾಯ ಭೂತಿಭೂಷಣಾಯ ಭೂತಿಹೇತವೇ
ನಮಃ ಶಿವಾಯ ನಿತ್ಯಶುದ್ಧಸತ್ಯಬುದ್ಧತೇಜಸೇ ।
ನಮಃ ಶಿವಾಯ ಭಕ್ತಭಂಜಮೋಚಕಾಯ ಶಂಭವೇ
ಶಿವಾಯ ಬಿಂದುನಾದವಾಚ್ಯವಾಚಕಾತ್ಮನೇ ನಮಃ ॥೨೦॥

---

ಸಿದ್ಧಿ ಮತ್ತು ಮುಕ್ತಿಗಳಿಗೆ ಕಾರಣಭೂತನೂ, ಚಿತ್ಸ್ವರೂಪನೂ ಆದ ಶಿವನಿಗೆ ನಮಸ್ಕಾರಮಾಡುವೆನು. ॥೧೭॥

ನಿತ್ಯನೂ, ಮನ್ಮಥ ಮತ್ತು ಯಮರಿಗೆ ಮೃತ್ಯುಸ್ವರೂಪನಾಗಿರುವ ಶಿವನಿಗೆ ನಮಸ್ಕಾರ. ನರಸಿಂಹ ಮತ್ತು ಆನೆಯ ಚರ್ಮವನ್ನು ಧರಿಸಿದ ಶಿವನಿಗೆ ಪ್ರಣಾಮವು. ವಿಷ್ಣುವಿನ ಕಣ್ತಾವರೆಯಿಂದ ಪೂಜಿಸಲ್ಪಟ್ಟ ಪಾದವುಳ್ಳ ಶಿವನಿಗೆ ವಂದನೆಯು. ಚಂದ್ರ, ಸೂರ್ಯ, ಅಗ್ನಿಗಳನ್ನೂ ಮೀರಿಸಿರುವ ತೇಜಸ್ಸುಳ್ಳ ಶಿವನಿಗೆ ಪ್ರಣಾಮಗಳು. ॥೧೮॥

ವೇದವಾಕ್ಯಗಳಿಗೆ ಗೋಚರವಾಗದೇ ವಾಙ್ಮಯಸ್ವರೂಪನಾಗಿರುವ ಶಿವನಿಗೂ, ಸಹ್ಯವಾದ ಕಾರ್ಯಗಳಿಗೆಲ್ಲಾ ಸಾಕ್ಷಿಯಾಗಿ ಮಹಾತ್ಮನೆನಿಸಿರುವ ಮಹಾದೇವನಿಗೂ, ಮಂಗಳಕರನೂ, ಶಕ್ತಿಗೂ ಬೀಜಭೂತವಾದ ವಸ್ತುಗಳಿಗೆಲ್ಲಾ ಮೂಲಕಾರಣನೂ, ಆದ ಶಿವನಿಗೂ ಭಕ್ತಿಪೂರ್ವಕವಾದ ಪ್ರಣಾಮವಿರಲಿ. ಚಂದ್ರಶೇಖರನೂ, ಜಟಾಧಾರಿಯೂ ಆದ ಮಹಾದೇವನೇ, ನಿನಗೆ ನಮಸ್ಕಾರಮಾಡುತ್ತೇನೆ. ॥೧೯॥

ವಿಭೂತಿಯನ್ನಲಂಕರಿಸಿರುವವನೂ, ಐಶ್ವರ್ಯಕಾರಣನೂ, ಆಗಿರುವ ಶಿವನಿಗೆ ನಮಸ್ಕಾರ. ನಿತ್ಯಶುದ್ಧನೂ, ಸತ್ಯ, ಜ್ಞಾನ ಮತ್ತು ತೇಜಸ್ಸ್ವರೂಪನೂ ಆದ

ನಮಃ ಶಿವಾಯ ನಿತ್ಯಸಾಂದ್ರಸೌಖ್ಯಸೀಮಭೂಮತೇಜಸೇ
ನಮಃ ಶಿವಾಯ ದಿವ್ಯಬೋಧರೂಪಿಣೇ ಪರಾತ್ಮನೇ ।
ನಮಃ ಶಿವಾಯ ಸತ್ಯವಾಗಗೋಚರಾಯ ಬಂಧವೇ
ನಮಃ ಶಿವಾಯ ಭಕ್ತಲೋಕವಾಂಛಿತಪ್ರದಾಯಿನೇ ॥೨೧॥

ನಮಃ ಶಿವಾಯ ವಿಷ್ಣುವೇಧಸಾಪ್ಯದೃಶ್ಯಮೂಲಮೌಲಯೇ
ನಮಃ ಶಿವಾಯ ಭಕ್ತಿಮುಕ್ತಿದಾಯಿನೇ ಮಹಾತ್ಮನೇ ।
ನಮಃ ಶಿವಾಯ ಶಕ್ತಿಹಸ್ತಶಸ್ತ್ರತಾರಕಾಸುರಾರಿ ಮುಖ್ಯಸೂನವೇ
ನಮಃ ಶಿವಾಯ ಪರ್ವತೇಂದ್ರಜಾರ್ಧದೇಹಭಾಗಿನೇ ॥೨೨॥

---

ಮಹಾದೇವನಿಗೆ ನಮಸ್ಕಾರ. ಭಕ್ತರ ಬಂಧನವನ್ನು ಬಿಡಿಸಿ, ಜಗನ್ಮಂಗಳವನ್ನುಂಟುಮಾಡುವ ಶಿವನಿಗೆ ಪ್ರಣಾಮವು. ಓಂಕಾರವೆಂಬ ಬಿಂದುವಿನ ನಾದಕ್ಕೆ ವಾಚ್ಯನೂ ಮತ್ತು ವಾಚಕಸ್ವರೂಪನೂ ಆಗಿರುವ ಶಿವನಿಗೆ ಪ್ರಣಾಮವು. (ಶಿವನು ಸರ್ವರೂಪಿಯಾದುದರಿಂದ ಬಿಂದುರೂಪನೂ ಅವನೇ ಆದರಿಂದ ಗೋಚರಿಸುವ ಅರ್ಥರೂಪನೂ ಆಗಿರುತ್ತಾನೆ). ॥೨೦॥

ನಿತ್ಯವೂ ನಿರತಿಶಯವಾದ ಸುಖಕ್ಕೆ ಆಶ್ರಯನೂ, ಮಹಾತೇಜಸ್ವಿಯೂ ಆದ ಶಿವನಿಗೆ ನಮಸ್ಕಾರವು. ದಿವ್ಯಜ್ಞಾನರೂಪಿಯೂ, ಪರಮಾತ್ಮನೂ ಆದ ಶಿವನಿಗೆ ಸಾಷ್ಟಾಂಗವು. ಸತ್ಯವಾಣಿಯಾದ ವೇದಗಳಿಗೂ ಗೋಚರನಾಗದೆ ಜಗದ್ಬಂಧುವೆನಿಸಿರುವ ಶಿವನಿಗೆ ಪ್ರಣಾಮವು. ಭಕ್ತಜನಗಳ ಇಷ್ಟಾರ್ಥಗಳನ್ನು ಸಲ್ಲಿಸುವ ಶಿವನಿಗೆ ನಮಸ್ಕಾರ ಮಾಡುತ್ತೇನೆ. ॥೨೧॥

ವಿಷ್ಣುಬ್ರಹ್ಮರಿಂದಲೂ ಗೋಚರನಾಗದಿರುವ ಕಿರೀಟಮೂಲವುಳ್ಳ ಶಿವನಿಗೆ ನಮಸ್ಕಾರ. ಭಕ್ತಿ, ಮೋಕ್ಷಗಳನ್ನು ಕೊಡುವವನೂ, ಮಹಾತ್ಮನೂ ಆದ ಶಿವನಿಗೆ ಪ್ರಣಾಮವು. ಶಕ್ತ್ಯಾಯುಧವನ್ನು ಕೈಯ್ಯಲ್ಲಿ ಹಿಡಿದು ತಾರಕನೇ ಮೊದಲಾದ ರಾಕ್ಷಸರನ್ನು ಸಂಹರಿಸಿದ ಕುಮಾರಸ್ವಾಮಿಯೇ ಮುಖ್ಯಕುಮಾರನಾಗಿರುವ ಶಿವನಿಗೆ ಪ್ರಣಾಮವು. ಪಾರ್ವತೀದೇವಿಯ ಅರ್ಧದೇಹವನ್ನು ಧರಿಸಿ 'ಅರ್ಧನಾರೀಶ್ವರ'ನೆಂದು ಪ್ರಖ್ಯಾತನಾಗಿರುವ ಶಿವನಿಗೆ ನಮಸ್ಕಾರವು. ॥೨೨॥

ನಮಃ ಶಿವಾಯ ಸಿಂಧುರೇಂದ್ರಮುಖ್ಯವಕ್ತ್ರಸೂನವೇ ।
ಸದಾ ನಮಃ ಶಿವಾಯ ತೇ ಸದಾಶಿವಾಯ ಶಂಭವೇ ॥೨೩॥

ಏವಂ ದೇವಂ ಸ್ತುವನ್ನುಕ್ತ್ವಾ ಪಂಚಾಕ್ಷರಮಯಂ ಪ್ರಭುಂ ।
ಶಿವಾಗ್ರತಸ್ತವಮಿದಂ ಭಕ್ತ್ಯಾ ದೇವಸ್ಯ ಯಃ ಪಠೇತ್ ॥೨೪॥

ಸ ಯಾತು ತ್ವತ್ಪದಮಿತಿ ಭಕ್ತೇನ ಪ್ರಾರ್ಥಿತಸ್ತದಾ ॥೨೫॥

ಹೃದ್ಯಃ ಸದಾ ಶಂಭುಸಮರ್ಚನೇನ
ಸ್ಕಂದಃ ಸ ಪಂಚಾಕ್ಷರಮಂತ್ರಸಿದ್ಧಃ ।
ತತ್ಪ್ರಾಪ ಯತ್ಪ್ರಾಪ ಮಹೇಶಧಾಮ
ಸ ಸ್ಕಂಧನಾಥಃ ಸ ವಿವಾಹವೇಷಃ ॥೨೬॥

ಇಂದುಮೌಳಿಪದಕಿಂಕರಾಮೃತಂ
ಸ್ಕಂಧನಾಥಚರಿತಂ ಶುಭಾವಹಂ ।
ಚಿಂತಯಂತಿ ಪರಿಕೀರ್ತಯಂತಿ ಯೇ
ಸಂತತಂ ಶಿವಪದೇ ವಸಂತಿ ತೇ ॥೨೭॥

---

ಗಜಮುಖನಾದ ಗಣಪತಿಯೇ ಪ್ರಧಾನಕುಮಾರನಾಗಿ ಉಳ್ಳ ಶಿವನಿಗೆ ನಮಸ್ಕಾರವು. ಜಗನ್ಮಂಗಳಸ್ವರೂಪನೂ, ಯಾವಾಗಲೂ ಯೋಗಿಮನಗಮ್ಯನೂ ಆದ ಶಿವನಿಗೆ ಪ್ರಣಾಮಮಾಡುವೆನು. ॥೨೩॥

ಹೀಗೆ ಪಂಚಾಕ್ಷರಮಯನಾದ ಮಹಾದೇವನನ್ನು ಭಕ್ತಿಯಿಂದ ಸ್ತೋತ್ರ ಮಾಡುತ್ತಾ, ಪ್ರಭೋ! ' ಶಿವನೆನಿಸಿದ ನಿನ್ನ ಮುಂದೆ ನಿಂತುಕೊಂಡು ಈ ನಿನ್ನ ಸ್ತೋತ್ರವನ್ನು ಭಕ್ತಿಯಿಂದ ಸ್ತುತಿಸುವವನು ನಿನ್ನ ಸ್ಥಾನವಾದ ಕೈಲಾಸವನ್ನು ಹೊಂದಲಿ. ಎಂದು ಸ್ಕಂದನಾಥನು ಮಹಾದೇವನನ್ನು ಪ್ರಾರ್ಥಿಸಿದನು. ॥೨೪-೨೫॥

ಯಾವಾಗಲೂ ಈ ರೀತಿ ಶಂಭುವಿನ ಪೂಜೆಯಿಂದ ಮನೋಹರನೆನಿಸಿ, ಶಿವಪಂಚಾಕ್ಷರಮಂತ್ರದಿಂದಲೇ ಸಿದ್ಧಿಪಡೆದ ಆ ಸ್ಕಂದನಾಥನು ಮದುವೆಯ ವೇಷ ವನ್ನು ಧರಿಸಿದವನಾಗಿ ಮಹೇಶ್ವರನ ದಿವ್ಯಕೈಲಾಸವನ್ನು ಅತಿ ವೈಭವದಿಂದ ಪಡೆ ದನು. ॥೨೬॥

ಚಂದ್ರಮೌಳಿಯಾದ ಶಂಕರನ ಪಾದಸೇವಕನಾದ ಸ್ಕಂದನಾಥನ ಅಮೃತ ಸ್ವರೂಪವೂ ಮಂಗಳಪ್ರದವೂ ಆದ ಚರಿತ್ರೆಯನ್ನು ಅನವರತವೂ ಚಿಂತಿಸುವವರೂ

|| ಸ್ಕಂದ ಉವಾಚ ||

ಪ್ರವಕ್ಷ್ಯೇಽಹಂ ಪಶುಪತೇರ್ವ್ರತಂ ಪಶುಪತಿಪ್ರಿಯಂ ।
ಕಾವೇರೀವಾರಿಪೂರೇಣ ವರ್ಧಿತಕ್ಷೇತ್ರಶಾಲಿಷು ||೨೮||

ಚೋಲೇಷು ದ್ವಿಜಧಾಮಾಸ್ತಿ ಪುರಂ ಶ್ರೀಮುಖಸಂಜ್ಞಕಂ ।
ತಸ್ಮಿನ್ಗ್ರಾಮೋ ಪಶುಪತಿರಿತಿ ಕಶ್ಚಿದ್ದ್ವಿಜೋಽಭವತ್ ||೨೯||

ಸಚ್ಚರಿತ್ರಪರಿಷ್ಕಾರ ಚತುರ್ವೇದಿ ಕುಲೋದ್ಭವಃ ।
ಸದಾ ಶಾಕ್ವರವಾಹಸ್ಯ ವಾಮಾಂಗೇ ವಹತಃ ಶಿವಾಂ ||೩೦||

ಪ್ರಮಥೇಶಸ್ಯ ಪಾದಾಬ್ಜಚಂಚರೀಕೋ ಬಭೂವ ಸಃ ।
ರುದ್ರಸೂಕ್ತೇನ ತಂ ರುದ್ರಮಧೀತೇನ ಮಹೀಯಸಾ ||೩೧||

---

ಹಾಡುವವರೂ ಸಹ ಯಾವಾಗಲೂ ಶಿವನ ಸಾಯುಜ್ಯವನ್ನು ಸೇರುತ್ತಾರೆಂಬುದರಲ್ಲಿ ಸಂಶಯವಿಲ್ಲ. ||೨೭||

ಅಯ್ಯ ಜೈಗೀಷವ್ಯನೇ! ಮಹೇಶನಿಗೆ ಪ್ರಿಯವಾದ ಪಶುಪತಿಯೆಂಬ ಭಕ್ತನ ಚರಿತೆಯನ್ನು ನಿನಗೆ ನಾನು ಹೇಳುತ್ತೇನೆ ಕೇಳು; ಎಂದು ಕುಮಾರಸ್ವಾಮಿಯು ಇಂತೆಂದನು:—ಕಾವೇರೀನದಿಯ ನೀರಿನ ಪ್ರವಾಹದಿಂದ ಚೆನ್ನಾಗಿ ಬೆಳೆದ ಗದ್ದೆಗಳಿಂದ ಕೂಡಿದ ಚೋಲದೇಶಗಳಲ್ಲಿ ಬ್ರಾಹ್ಮಣರ ಬೀಡಾದ 'ಶ್ರೀಮುಖ' ವೆಂಬ ಪಟ್ಟಣವಿದ್ದಿತು. ಆ ಪಟ್ಟಣದಲ್ಲಿ ಪಶುಪತಿಯೆಂಬ ಒಬ್ಬ ಬ್ರಾಹ್ಮಣನಿದ್ದನು. ||೨೮-೨೯||

ಸಚ್ಚರಿತ್ರೆಗಳಿಗೆ (ಒಳ್ಳೆಯ ನಡತೆಗಳಿಗೆ) ಭೂಷಣಪ್ರಾಯನಾದ, ಋಗ್ಯಜುಸ್ಸಾಮಾಥರ್ವಣಗಳೆಂಬ ನಾಲ್ಕು ವೇದಗಳನ್ನೂ ಅಧ್ಯಯನ ಮಾಡಿದವರ ವಂಶದಲ್ಲಿ ಹುಟ್ಟಿದ ಈ ಪಶುಪತಿಯು, ವೃಷಭವಾಹನನೂ, ಅರ್ಧನಾರೀಶ್ವರನೂ ಆದ ಮಹಾದೇವನ ಪಾದಕಮಲದಲ್ಲಿ ವಿಹರಿಸುವ ದುಂಬಿಯಂತಿದ್ದನು. ಯಾವಾಗಲೂ ಅವನು ಶ್ರೇಷ್ಠವಾದ ರುದ್ರಸೂಕ್ತಮಂತ್ರದಿಂದ ರುದ್ರದೇವನಿಗೆ ಅಭಿಷೇಕ ಮಾಡುತ್ತಿದ್ದನು. ||೩೦-೩೧||

ಸಕಲಾಶ್ರುತಿಸಾರೇಣ ಸಂತುಷ್ಟಾವಾತಿಭಕ್ತಿಮಾನ್ ।
ಭಸ್ಮರುದ್ರಾಕ್ಷಸಂಪನ್ನೋ ದೀಪ್ತಮಾಲಾತ್ರಿಪುಂಡ್ರಕಃ ॥೩೨॥

ವ್ರಜನ್ತಿಷ್ಠನ್ಸ್ವಯಾನೋಽಪಿ ದಿವಾನಕ್ತಮನನ್ಯಧೀಃ ।
ಕರ್ಮಾಂತರಾಳೇಷು ಸದಾ ರುದ್ರಸೂಕ್ತಜಪಾದರಃ ॥೩೩॥

ಸ ಕದಾಚಿತ್ಸರಃ ಪ್ರಾಪ್ಯ ಮೃಗಪಕ್ಷಿಸಮಾಕುಲಂ ।
ಉತ್ಫುಲ್ಲಾಬ್ಜಮರಂದೋದ್ಯ ಭೃಂಗಸಂಬಂಧಗಂಧಿಲಂ ॥೩೪॥

ಕಂಠದಘ್ನ ಜಲೇ ತಿಷ್ಠನ್ಪಶ್ಯನ್ಭಾನುಸ್ಥಿತಂ ಹರಂ ।
ಮೌಲಿನ್ಯಸ್ತಾಂಜಲಿಃ ಪ್ರೇಮ್ಣಾ ಪ್ರಸ್ಫುರತ್ಪುಲಕಾಂಕುರಃ ॥೩೫॥

ಸ್ವಚ್ಛಗಂಗಾತರಂಗೌಘಾ ಹ್ಯರ್ಧೇಂದುಧರ ಭಕ್ತಿಮಾನ್ ।
ದ್ರಾವಿತಾದ್ಯ ಸಮೂಹೇನ ರುದ್ರಸೂಕ್ತೇನ ತುಷ್ಟುವೇ ॥೩೬॥

---

ಭಸ್ಮರುದ್ರಾಕ್ಷಗಳನ್ನು ಧರಿಸಿ, ಪ್ರಜ್ವಲಿಸುವ ಮಾಲೆಯಂತಿರುವ ಭಸ್ಮ ತ್ರಿಪುಂಡ್ರಗಳಿಂದ ಶೋಭಿಸುತ್ತಾ, ಸಕಲ ವೇದಗಳ ಸಾರಭೂತವಾದ ಮಂತ್ರದಿಂದ ತುಂಬಾ ಭಕ್ತಿಪೂರ್ವಕವಾಗಿ ಮಹೇಶನನ್ನು ಸ್ತೋತ್ರಮಾಡುವನು. ನಡೆಯು ವಾಗಲೂ, ನಿಂತಿರುವಾಗಲೂ, ಮಲಗಿರುವಾಗಲೂ ಹಗಲಿರುಳು ಎಡಬಿಡದೇ ಅನನ್ಯಮನಸ್ಕನಾಗಿ ಶಿವನನ್ನು ನೆನೆಯುತ್ತಾ, ತಾನು ಮಾಡುತ್ತಿದ್ದ ಕೆಲಸಗಳ ಮಧ್ಯದಲ್ಲಿ ವಿರಾಮವಿದ್ದಾಗ ಯಾವಾಗಲೂ ರುದ್ರಸೂಕ್ತಜಪಮಾಡುವುದರಲ್ಲಿ ಆದರವುಳ್ಳವನಾಗಿದ್ದನು. ॥೩೨-೩೩॥

ಅವನೊಂದು ದಿನ ಮೃಗಪಕ್ಷಿಗಳಿಂದ ವ್ಯಾಪ್ತವಾಗಿ ಅರಳಿದ ಕಮಲಗಳ ಮಕರಂದಕ್ಕೋಸ್ಕರ ಮುತ್ತಿಕೊಂಡಿರುವ ದುಂಬಿಗಳಿಂದ ಮತ್ತು ದುಂಬಿಗಳ ಸಂಬಂಧ ದಿಂದ ಸುಗಂಧಿತವಾಗಿರುವ ಸರಸ್ಸನ್ನು ಹೊಂದಿ ಕುತ್ತಿಗೆ ಮುಳುಗುವಷ್ಟು ನೀರಿನಲ್ಲಿ ನಿಂತು, ಸೂರ್ಯನಲ್ಲಿ ನೆಲಸಿರುವ ಶಿವನನ್ನು ನೋಡುತ್ತಾ ತಲೆಯಮೇಲೆ ಕೈಜೋಡಿಸಿ ಪ್ರೀತಿಯಿಂದ ರೋಮಾಂಚಹೊಂದಿ ಸ್ತೋತ್ರಮಾಡಿದನು. ॥೩೪-೩೫॥

ಸ್ವಚ್ಛವಾದ ಗಂಗಾನದಿಯ ಅಲೆಗಳ ಸಮೂಹವನ್ನೂ, ಆದಿಶೇಷ ಮತ್ತು ಅರ್ಧಚಂದ್ರನನ್ನೂ ತಲೆಯಲ್ಲಿ ಧರಿಸಿರುವ ಪರಮೇಶ್ವರನಲ್ಲಿ ಭಕ್ತಿಯುಳ್ಳವನಾಗಿ

ಭೂಸುರಃ ಶ್ರುತಿಸಾರೇಣ ರುದ್ರಸೂಕ್ತೇನ ಶಂಕರಂ ॥೩೭॥

॥ ಪಶುಪತಿರುವಾಚ ॥

ನಮಸ್ತೇ ರುದ್ರ ತ್ವಾಂ ಶ್ರುತಿಶಿರಗ ಮನ್ಯೋಽಹಮಿಷುಮ-
ನ್ನಮಸ್ತೇ ಬಾಹುಭ್ಯಾಂ ತವ ಶಿವಶರೇಷೂದ್ಯತಕರ ।
ಶರವ್ಯಾ ಹೇತಿಭ್ಯಾಂ ತವ ವರದ ಸಂಕ್ಷುಬ್ಧಧನುಷೇ
ತವಾಶಾಸ್ಯಾ ಹೃದ್ಯಾ ತನುರಪಿ ಮನಸ್ತೇಽದ್ಯ ಪದಯೋಃ ॥೩೮॥

ಹಿರಣ್ಯೋ ದೇವಸ್ತ್ವಂ ನಖಶಿಖಮುಖಾತ್ತೇ ನಯನಯೋ-
ಸ್ತ್ವಸುಂ ಸಂಪಶ್ಯನ್ನೈ ಭವ ಶಿವ ನಮಃ ಸೋಮವಪುಷೇ ।
ಅತೋಽಣೀಯಾನ್ಜ್ಯಾಯಾಂಛ್ರುತಿಗದಿತವಾಕ್ಯಾರ್ಥಕಲನೈ
ರ್ನಮಃ ಶೇಷೀ ದೇವಃ ಶ್ರುತಿಗತಪಂಚಾಕ್ಷರಮನೋಃ ॥೩೯॥

---

ಸಕಲ ಶ್ರುತಿಸಾರಭೂತವಾದ ರುದ್ರಸೂಕ್ತದಿಂದ ಆ ಬ್ರಾಹ್ಮಣೋತ್ತಮನು ಶಂಕರನನ್ನು ಹೀಗೆ ಸ್ತೋತ್ರಮಾಡಿದನು. ॥೩೬-೩೭॥

ಓ ರುದ್ರದೇವನೇ, ವೇದಾಂತಪ್ರತಿಪಾದ್ಯನೂ, ಕೋಪರೂಪನೂ, ದಿವ್ಯಬಾಣಗಳನ್ನುಳ್ಳವನೂ ಆದ ನಿನಗೆ ನಮಸ್ಕಾರವು. ಶಿವನೇ, ಎರಡು ಬಾಹುಗಳಿಂದಲೂ ಬಾಣಪ್ರಯೋಗಮಾಡುವುದರಲ್ಲಿ ನಿರತವಾದ ಕೈಯುಳ್ಳ ನಿನಗೆ ನಮಸ್ಕಾರಮಾಡುತ್ತೇನೆ. ಎಲೈ ವರಪ್ರದನಾದ ಸ್ವಾಮಿಯೇ! ನಿನ್ನ ಧನುರ್ವಿದ್ಯಾಪ್ರಭಾವದಿಂದ ಬಿಲ್ಲುಗಳೇ ಸಂಕ್ಷೋಭಹೊಂದಿರುವುವು. ಈ ನನ್ನ ಸುಂದರವಾದ ದೇಹವೂ, ನಿನ್ನ ಪಾದಕಮಲದಲ್ಲಿ ಸದಾ ನಿರತವಾಗಿರುವ ನನ್ನ ಮನಸ್ಸೂ ನಿನ್ನ ಆಶಂಸನೆಯನ್ನು ಬಯಸುತ್ತಿದೆ. ॥೩೮॥

ದೇವಾ! ಕಾಂತಿಮಯವಾದ ನಿನ್ನ ಉಗುರು, ತಲೆಗೂದಲು, ಮೊಗ, ಕಣ್ಣು ಮತ್ತು ದೇಹವನ್ನು ನೋಡುತ್ತಾ ಹೋದರೆ ನೀನು ಹಿರಣ್ಯರೂಪನಾದ ಸ್ವಾಮಿಯೇ ಆಗಿರುವೆಯೆಂದು ತೋರುವುದು. ಜಗದುತ್ಪತ್ತಿಕಾರಣವಾದ ಸ್ವಾಮಿಯೇ, ಉಮಾರ್ಧದೇಹಿಯಾದ ನಿನಗೆ ನಮಸ್ಕಾರವು. ಆದ್ದರಿಂದಲೇ ನಿನ್ನನ್ನು ಎಲ್ಲದಕ್ಕಿಂತಲೂ ಸೂಕ್ಷ್ಮವೆಂದೂ, ಎಲ್ಲರಿಗಿಂತಲೂ ದೊಡ್ಡವನೆಂದೂ ವೇದವಾಕ್ಯಗಳು ಹೇಳುತ್ತಿರುವುವು. ವೇದವಾಕ್ಯಗಳನ್ನೆಲ್ಲಾ ವಿಚಾರಮಾಡಿನೋಡಿದರೆ ವೇದೋಕ್ತಪಂಚಾಕ್ಷರಮಂತ್ರಕ್ಕೆ ಒಡೆಯನಾದ ನೀನೇ ಸಾರವತ್ತಾದ ದೈವವು, ನಿನಗೆ ನಮಸ್ಕಾರಮಾಡುವೆನು. ॥೩೯॥

ತಸ್ಯ ತಾದೃಕ್ತಪೋನಿಷ್ಠಾ ಶ್ರೀರುದ್ರಜಪವಾಸನಾಂ।
ಅಂಗೀಕೃತ್ಯಾಥ ತದ್ಭಾವಮಾನಿನಾಯಾಥ ತಂ ಸದಾ ॥೪೦॥

ತಥಾ ಸಂಸಾರಕುಹರಾಪಥಾ ಸಂದರ್ಶಿತೋ ದ್ವಿಜಃ।
ಶಿವೇನೋತ್ತಾರಿತಃ ಶೈವೀಂ ಸುರಾಪ್ರಾಪ್ಯಾಂ ಪುರೀಂ ಯಯೌ॥೪೧॥

ರುದ್ರಸೂಕ್ತಜಪೇನೈವ ಸದಾ ಪಶುಪತಿರ್ದ್ವಿಜಃ।
ಪಶುಪಾಶೈರ್ವಿಮುಕ್ತೋಽಭೂಚ್ಛಿವಪ್ರೇಮಾಸ್ಪದೋಽಭವತ್ ॥೪೨॥

ಶ್ರೋತುಂ ಜನಸ್ಯ ಶುಭದಂ ಪ್ರಥಿತಸ್ಯ ರುದ್ರ
ಭಕ್ತಸ್ಯ ಯಃ ಪಶುಪತೇಶ್ಚರಿತಂ ಶೃಣೋತಿ।
ಲೋಕೈಕನಾಯಕಮಹೇಶಕೃಪಾನಿಧಿಃ ಸಂ
ನಾಕೌಕಿನಾಮಪಿ ದುರಾಸದಮೇತಿ ಲೋಕಂ ॥೪೩॥

ಇತಿ ಶ್ರೀಶಿವರಹಸ್ಯೇ ಸದಾಶಿವಾಖ್ಯೇ ನವಮಾಂಶೇ ಸ್ಕಂದನಾಥಪಶುಪತಿ
ಚರಿತ್ರವರ್ಣನಂ ನಾಮ ಚತ್ವಾರಿಂಶೋಽಧ್ಯಾಯಃ

---

ಆ ಪಶುಪತಿಯು ಈರೀತಿಯಾದ ತಪಶ್ಚರ್ಯೆಯನ್ನೂ ಶ್ರೀರುದ್ರಮಂತ್ರ ಜಪದಲ್ಲಿನ ಆಸಕ್ತಿಯನ್ನೂ ಮಹೇಶನು ಅಂಗೀಕರಿಸಿ, ಮುಂದೆಯೂ ಅವನು ಯಾವಾಗಲೂ ಆದೇಭಾವದಲ್ಲಿರುವಂತೆ ಮಾಡಿದನು. ಹಾಗೆ ಸಂಸಾರವೆಂಬ ಗುಹೆಯನ್ನು ದಾಟಲು ಮಹೇಶ್ವರನಿಂದ ದಾರಿತೋರಿಸಲ್ಪಟ್ಟ ಆ ಪಶುಪತಿದ್ವಿಜನು ಶಿವನಿಂದ ಉದ್ಧಾರಮಾಡಲ್ಪಟ್ಟು ದೇವತೆಗಳಿಂದ ಪಡೆಯಲಸಾಧ್ಯವಾದ ಕೈಲಾಸಪಟ್ಟಣವನ್ನೈದಿದನು. ॥೪೦-೪೧॥

ಈ ಪಶುಪತಿಯೆಂಬ ಬ್ರಾಹ್ಮಣನು ಯಾವಾಗಲೂ ರುದ್ರಸೂಕ್ತಜಪ ಮಾಡುವುದರಿಂದಲೇ ಈ ಪಾಶವೀಯ ಸಂಸಾರ ಬಂಧನದಿಂದ ಮುಕ್ತನಾಗಿ ಶಿವನ ಪ್ರೇಮಕ್ಕೆ ಆಸ್ಪದನಾದನು. ॥೪೨॥

ಕೇಳುವ ಜನಗಳಿಗೆ ಶುಭಕರವೂ ಪ್ರಖ್ಯಾತವೂ ಆದ ಈ ಪಶುಪತಿಯೆಂಬ ಮಹೇಶಭಕ್ತನ ಕಥೆಯನ್ನು ಕೇಳುವವನು ಸಕಲ ಲೋಕಗಳಿಗೂ ಒಬ್ಬನೇ ಒಡೆಯನಾದ ಮಹೇಶ್ವರನ ದಯೆಗೆ ಆಶ್ರಯನಾಗಿ ದೇವತೆಗಳಿಗೂ ಹೊಂದಲಸಾಧ್ಯ

ವಾದ ಕೈಲಾಸಲೋಕವನ್ನು ಹೊಂದುತ್ತಾನೆಂದು ಜೈಗೀಷವ್ಯನಿಗೆ ಸ್ಕಂದನು ನಿರೂಪಿಸಿದನು. ||೪೩||

ಇಲ್ಲಿಗೆ ಶ್ರೀಶಿವರಹಸ್ಯದಲ್ಲಿ ಸದಾಶಿವಸಂಜ್ಞಕವಾದ ಒಂಬತ್ತನೆಯ ಅಂಶದಲ್ಲಿ
ಸ್ಕಂದನಾಥ ಮತ್ತು ಪಶುಪತಿ ಇವರ ಕಥಾವರ್ಣನೆಯೆಂಬ
ನಲವತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಸದಾಶಿವಾಖ್ಯೇ

## ನವಮಾಂಶೇ

## ಏಕಚತ್ವಾರಿಂಶೋಽಧ್ಯಾಯಃ

॥ ಶ್ರೀಸ್ಕಂದ ಉವಾಚ ॥

ಶ್ವೋೀಗಂತುನಾಮ್ನೋ ಭಕ್ತಸ್ಯ ವೈಭವಂ ತೇ ವದಾಮ್ಯಹಂ ।
ಊರ್ಧ್ವಾಂಘ್ರಿಸಂಜ್ಞಕೇ ದೇಶೇ ಲೋಕಾಭಿಷ್ಟುತಕೀರ್ತಿಮತ್॥೧॥

ಧಾಮ ದ್ವಿಜನ್ಮನಾಂ ಶ್ಲಾಘ್ಯಮತ್ಯಾನಂದಪುರಂ ಮಹತ್।
ಆದದಾನೇ ಶುಭೇ ಭಾತಿ ಯಂಗೋಲೇ ವಾಹಿನೀತಟೇ ॥೨॥

ಪಲ್ಲವಾನ್ಪಾತಯನ್ಮ್ಲಾನಾನ್ಯತ್ರ ಸಿಂಚಂತಿ ಭೂರುಹಾಃ ।
ಮಧುವರ್ಷೈಸ್ತದಗ್ರಸ್ಥಾಂ ವಾರಿವರ್ಷೈಶ್ಚ ವಾರಿದಾಃ ॥೩॥

---

## ನಲವತ್ತೊಂದನೆಯ ಅಧ್ಯಾಯ

ಅಯ್ಯ ಜೈಗೀಷವ್ಯನೇ, 'ಶ್ವೋೀಗಂತು' ಎಂಬ ಹೆಸರಿನ ಶೈವಭಕ್ತನೊಬ್ಬನ ವೈಭವವನ್ನು ನಿನಗೆ ನಾನು ಹೇಳುತ್ತೇನೆ ಕೇಳು. 'ಊರ್ಧ್ವಾಂಘ್ರಿ' ಎಂಬ ಸಂಜ್ಞೆಯುಳ್ಳ ದೇಶವು ಬಹು ಜನಗಳ ಆದರಾತಿಶಯಕ್ಕೆ ಪಾತ್ರವಾಗಿದೆ. ಅದರಲ್ಲಿ ನಿಷ್ಠರಾದ ಬ್ರಾಹ್ಮಣರಿಗೆ ಆವಾಸಸ್ಥಳವಾಗಿ ಶ್ಲಾಘನೀಯವೆನಿಸಿರುವ ಅತ್ಯಾನಂದ ವೆಂಬ ಪಟ್ಟಣವಿರುವುದು. ಆ ದೊಡ್ಡ ಪಟ್ಟಣವು 'ಯಂಗೋಲ' ಎಂಬ ನದಿಯ ದಡದಲ್ಲಿ ಮಂಗಳಕರವಾಗಿ ವಿರಾಜಿಸುತ್ತಿರುವುದು. ॥೧-೨॥

ಆ ಪಟ್ಟಣದಲ್ಲಿ ವಿಶಾಲವಾಗಿ ಬೆಳೆದಿರುವ ಮರಗಳು ತಮ್ಮ ಬಾಡಿದ ಚಿಗುರುಗಳನ್ನು ನದಿಯ ನೀರಿನಲ್ಲಿ ತೇಲಿಸುತ್ತಾ ನೀರನ್ನು ದಡದಲ್ಲಿರುವವರ ಮೇಲೆ

ದ್ವಿರದಾ ವಾರಿದಾಕಾರಾ ಯತ್ಪ್ರಾಂತೋಪವನೇಷ್ವಪಿ ।
ಧಾವತ್ಕರೇಣು ಪಾದೋತ್ಥರೇಣುಭಿರ್ಮದಜಸ್ರವೈಃ ॥೪॥

ಭುವೋ ಯತ್ರ ವಿರಾಜಂತೇ ಪಂಕಿಲಾ ಭಾವಿತಾಃ ಸದಾ ।
ಕೇದಾರಾಸ್ಸಸ್ಯಸನ್ನದ್ಧಮೌಳಯೋ ವಿನಯಾನತಾಃ ॥೫॥

ಪ್ರಸಾದೇನ ಮಹೇಶಸ್ಯ ಪ್ರಾಸಾದತಲಚಾರಿಣಃ ।
ಏಧಂತೇ ಯತ್ರ ನಿಯತಂ ಸದೈವ ಗೃಹಮೇಧಿನಃ ॥೬॥

ಪುರಸ್ಯ ತಸ್ಯಾಸ್ಯ ಬಹಿಃ ಕೇದಾರಾಂತೋಚ್ಚಸೇತುಷು ।
ಕಾಚಿತ್ಪ್ರಕಾಶತೇ ಶ್ರೋಣೀ ನಿಶ್ರೇಣೀ ಸ್ವರ್ಗಮಾರ್ಗಿಣಾಂ ॥೭॥

ದ್ವಿಜಾನಾಂ ಪ್ರಾಜ್ಯವೇದಾನಾಂ ತದಂತೇ ನಿಷ್ಕುಟಾ ಬಹಿಃ ।
ಶ್ವಕುಕ್ಕುಟೈರ್ವಿಚರಿತಮಂತ್ಯಜಾನಾಂ ಗೃಹಾವಲಿಃ ॥೮॥

---

ಎರೆಚುತ್ತಿರುವುವು. ಮರದ ತುದಿಯಲ್ಲಿರುವ ಚಿಗುರುಗಳ ಮೇಲೆ ಮೋಡಗಳು ಮಳೆಗರೆಯುತ್ತಿರುವುವು. ಆ ನದಿಯ ದಡದಲ್ಲಿರುವ ಕಾಡುಗಳಲ್ಲಿರುವ ಆನೆಗಳು ಮೋಡಗಳಂತೆ ಸಂಚರಿಸುತ್ತಾ ಇರುವುವು. ಓಡಾಡುವ ಆನೆಗಳ ಕಾಲುಗಳಿಂದುಂಟಾದ ಧೂಳಿಯಿಂದಲೂ, ಮದೋದಕಗಳ ಸುರಿಸುವಿಕೆಯಿಂದಲೂ ಆ ವನದ ಭೂಮಿಯೆಲ್ಲಾ ಯಾವಾಗಲೂ ಕೆಸರಾಗಿ ಕಾಣುತ್ತಿರುವುದು. ॥೩-೪॥

ಗದ್ದೆಗಳೆಲ್ಲವೂ ಪೈರುಗಳಿಂದ ಪೂರ್ಣವಾದ ಶಿರೋಭಾಗಗಳುಳ್ಳವುಗಳಾಗಿ, ತೆನೆಗಳ ಭಾರವನ್ನು ತಾಳಲಾರದೇ ವಿನಯದಿಂದ ತಲೆಬಾಗಿಸಿರುವಂತೆ ತೋರುತ್ತಿರುವುವು. ಅಲ್ಲಿ ಮಹೇಶ್ವರನ ದೇವಾಲಯದ ಉಪ್ಪರಿಗೆಯ ಬುಡದಲ್ಲಿ ಸಂಚರಿಸುವ ಭಕ್ತರು ಯಾವಾಗಲೂ ನಿಯಮದಿಂದ ಗೃಹಸ್ಥಾಶ್ರಮಧಾರಿಗಳಾಗಿ ಶೋಭಿಸುತ್ತಿರುವರು. ಈ ಪಟ್ಟಣದ ಹೊರಗೆ ಗದ್ದೆಗಳ ಸಮೀಪದಲ್ಲಿರುವ ಪೈರುಗಳಲ್ಲಿ ಸ್ವರ್ಗವನ್ನು ಬಯಸುವವರಿಗೆ ತೆಗೆದಿಟ್ಟಿರುವಂತೆ ಒಂದು ಸೋಪಾನ ಮಾರ್ಗವು ಮನೋಹರವಾಗಿ ತೋರುತ್ತಿರುವುದು. ॥೫-೬-೭॥

ಸಂಪೂರ್ಣ ವೇದಾಧ್ಯಯನ ನಿರತರಾದ ಬ್ರಾಹ್ಮಣರ ಕೈದೋಟಗಳು ಅದರ ಸಮೀಪದಲ್ಲಿ ರಾಜಿಸುತ್ತಿರುವುವು. ಆ ಊರಿನ ಹೊರಭಾಗದಲ್ಲಿ ನಾಯಿ, ಕೋಳಿ ಮುಂತಾದ ಪ್ರಾಣಿಗಳ ಸಂಚಾರಭೂಯಿಷ್ಠವಾದ ಪಂಚಮರ ಮನೆಗಳ ಸಾಲು

ತೃಣಾಂಚಿತೈರ್ಜೀರ್ಣಗೃಹೈರಲಾಬು ತಿಲಕಾತತೈಃ ।
ಸೂಕರಸ್ರಾಂತಚರಿತೈಃ ಕುಟೀರೈಃ ಸಾರಮೇಯಯುಕ್ತೈಃ ॥೯॥

ದೃಶ್ಯಾದೃಶ್ಯಮನುಷ್ಯೇಽಪಿ ಸಾರಮೇಯರವಾಕುಲೈಃ ।
ಸಾಸೃಕ್ಪಂಕೇಷ್ವಂಕಣೇಷು ವಿಕ್ರಯಕ್ರಯವೃತ್ತಿಷು ॥೧೦॥

ಉಪರಿ ಭ್ರಾಂತಗೃಧ್ರೇಷು ಸಮ್ಯದ್ಧೋದ್ರೇಕಗಂಧಿಷು ।
ನಿಶಾವಸಾನೇ ನಿದ್ರಾಣೇ ಚರ್ಮಣಾಸ್ತೃತಭೂತಲೇ ॥೧೧॥

ಭವಂತಿ ಬೋಧಿತಾ ಯತ್ರ ಶಿವಾಕುಕ್ಕುಟಕೂಜಿತೈಃ ।
ಮಧು ಪೀತ್ವಾಂತ್ಯಜಾ ಮತ್ತಾ ಗಾಯಂತೋ ಯತ್ರ ನಿರ್ಭಯಂ ॥೧೨॥

---

ಕಾಣುತ್ತಿರುವುದು. ಹಾಗೆಯೇ ಅಲ್ಲಿ ಹುಲ್ಲು ಹೊದಿಸಿದ ಹಳೆಯ ಮನೆಗಳೂ, ಸೋರೆ ಬುರುಡೆಗಳ ಗುಂಪುಗಳೂ, ಹಂದಿ, ನಾಯಿ ಮುಂತಾದ ಪ್ರಾಣಿಗಳಿಂದ ತುಂಬಿದ ಅಂಗಳವೂ, ಅವುಗಳ ನಿವಾಸಸ್ಥಾನವೂ, ಬೇಟೆನಾಯಿಗಳ ಗುಂಪೂ ಅಲ್ಲಲ್ಲಿ ಕಾಣುತ್ತ ಲಿದ್ದು ಎಲ್ಲೆಲ್ಲಿಯೂ ಅನೇಕ ಗುಡಿಸಿಲುಗಳು ನಾನಾರೀತಿಯಿಂದ ನೋಡುವವರಿಗೆ ಅಚ್ಚರಿಯನ್ನುಂಟುಮಾಡುತ್ತಿದ್ದುವು. ॥೮-೯॥

ಚಂಡಾಲನಿವಾಸಸ್ಥಾನವಾದ ಒಂದು ಬೀದಿಯಲ್ಲಿ ನೋಡಲು ಯೋಗ್ಯರಾಗಿ ಕಾಣುವವರೂ, ನೋಡಲು ಯೋಗ್ಯರೆನಿಸಿ ಘೋರರೂಪಿಗಳಾಗಿರುವವರೂ, ಸುಂದ ರರೂ ಆದ ಕೆಲವರು ಮಾಂಸಾಪೇಕ್ಷೆಯಿಂದ ಓಡಾಡುವರು. ಅಲ್ಲಿ ಬೇಟೆನಾಯಿ ಗಳು ಧ್ವನಿಗೈಯುತ್ತ ಕೋಲಾಹಲವನ್ನೆಬ್ಬಿಸುವುವು. ರಕ್ತದಿಂದ ತೊಯ್ದ ಅಂಗ ಡಿಯ ಅಂಗಣಗಳಲ್ಲಿ ಜನರು ಮಾಂಸವನ್ನು ಕೊಂಡುಕೊಳ್ಳುವುದು, ಮಾರುವುದು, ಮುಂತಾದ ಕಾರ್ಯಗಳಲ್ಲಿ ತತ್ಪರರಾಗುವರು. ಅಂಬರದಲ್ಲಿ ಹದ್ದುಗಳು ಮಾಂಸದಾಸೆ ಯಿಂದ ಹಾರಾಡುವುವು. ಎಲ್ಲೆಲ್ಲಿಯೂ ದುರ್ಗಂಧವೇ ವ್ಯಾಪಿಸಿರುವುದು. ರಾತ್ರಿಯ ಕೊನೆಯಲ್ಲಿ ಆ ಜನರು ಚರ್ಮದಿಂದ ವ್ಯಾಪ್ತವಾದ ನೆಲದ ಮೇಲೆ ಮಲಗಿ ನರಿ, ಕೋಳಿ ಮುಂತಾದ ಪ್ರಾಣಿಗಳ ಕೂಗುಗಳಿಂದ ಎಚ್ಚರಗೊಳ್ಳುತ್ತಿದ್ದರು. ॥೧೦-೧೧॥

ಪಂಚಮರು ಅಲ್ಲಿ ಹೆಂಡಕುಡಿದು ಮತ್ತರಾಗಿ ಕೊಂಚವೂ ಹೆದರಿಕೆಯೇ ಇಲ್ಲದೇ ಹಾಡುತ್ತಿರುವರು. ಚರ್ಮಗಳಿಂದ ಮುಚ್ಚಲ್ಪಟ್ಟ ಎಲ್ಲೋ ಕೆಲವು ಹರಳು ಮರದ ನೆರಳುಗಳಲ್ಲಿ ಹುಡುಗರು ಕಾಡುಧಾನ್ಯವನ್ನು ಕುಟ್ಟಲು ತೆಗೆದುಕೊಂಡು

ಕ್ವಚಿಚ್ಛಾಯಾಸು ಏರಂಡವೃಕ್ಷಾಣಾಂ ಚರ್ಮಣಾಸ್ತೃತೇ ।
ವನ್ಯಧಾನ್ಯಾವಹನನೈರ್ನಯಂತಿ ಕಿಲ ಬಾಲಕಾಃ ॥೧೩॥

ಶುಷ್ಕಮತ್ಸ್ಯಾವೃತತಲೇ ಮಕ್ಷಿಕಾಯೂಥಭೂಷಿತೇ ।
ಪಕ್ಕಣೇ ನಿಕ್ವಣಂ ನಾದ ಭೃಂಗವೇಣುಕೃತಸ್ವನೈಃ ॥೧೪॥

ಪಲಲಾರುಣಿತಾನಮ್ರವಾಲಕೈರ್ಹಸ್ತಭೂಷಿತೈಃ ।
ಗ್ರಾಮಚರ್ಮಕರಃ ಕಶ್ಚಿತ್ತತ್ರಾನಂದಾಹ್ವಯೋಽಂತ್ಯಜಃ ॥೧೫॥

ಜಾತಮಾತ್ರಸಮುತ್ಪನ್ನಭವಪಾದಾಬ್ಜಭಾವನಃ ।
ನಂದೋಽನ್ಯ ಕರ್ಮಕರ್ತಾಽಪಿ ತ್ಯಕ್ತ್ವಾ ಬಾಹ್ಯಾನ್ಮನೋರಥಾನ್ ॥೧೬॥

ಶಿವಮೇವ ಪರಂ ಮೇನೇ ತದ್ದಾಸ್ಯಾವಶಿತಾಶಯಃ ।
ಕೃತಸ್ಥಿತಿರ್ನೇತನ್ಯೈಶ್ಚ ಪ್ರವರ್ತತ ತದಾಂತ್ಯಜಃ ॥೧೭॥

---

ಹೋಗುತ್ತಿರುವರು. ಒಣಗಿದ ಮೀನುಗಳನ್ನು ಹರವಿರುವ ನೆಲದಲ್ಲಿ ನೊಣಗಳು ಗುಂಪಾಗಿ ಮುತ್ತಿಕೊಂಡಿರುವುವು. ಬೇಡರ ಧ್ವನಿ, ದುಂಬಿಗಳ ಝೇಂಕಾರ, ದನ ಕಾಯುವವರ ಕೊಳಲ ಧ್ವನಿ ಇವುಗಳಿಂದ ಆ ಹೊಲಗೇರಿಯು ಸದಾ ಶಬ್ದಾಯ ಮಾನವಾಗಿರುವುದು. ॥೧೨-೧೩-೧೪॥

ಕೆಂಪುಮಾಂಸಗಳಿಂದ ಯುಕ್ತನಾಗಿ ಬಾಗಿದ ಕೈತುತ್ತೂರಿಯನ್ನು ಸದಾ ಕೈಯಲ್ಲಿ ಹಿಡಿದುಕೊಂಡು ಆನಂದನೆಂಬ ಹೆಸರಿನ ಪಂಚಮನು ಆ ಗ್ರಾಮದ ಚಮ್ಮಾರನಾಗಿ ಎಲ್ಲೆಲ್ಲಿಯೂ ಸಂಚರಿಸುವನು. ಆದರೆ ಅವನು ಹುಟ್ಟಿದ ಕಾಲದಿಂದಲೂ, ಅವನಿಗೆ ಜನ್ಮಾಂತರ ಸಂಸ್ಕಾರವೊದಗಿ ಶಿವಪಾದಕಮಲಭಕ್ತಿಭಾವನೆಯುಳ್ಳವನಾಗಿದ್ದನು. ಈ ನಂದ (ಆನಂದ) ನು ಮತ್ತೊಬ್ಬರ ಸೇವಾಕಾರ್ಯವನ್ನು ಮಾಡುವವನಾದರೂ ಬಾಹ್ಯಮನೋರಥಗಳನ್ನೆಲ್ಲಾ ಬಿಟ್ಟು ಶಿವನನ್ನೇ ಶ್ರೇಷ್ಠನೆಂದು ನಂಬಿ ತನ್ನ ಸೇವೆಯೆಲ್ಲವೂ ಪರಶಿವನ ಸೇವೆಯೆಂಬ ಅಭಿಪ್ರಾಯವುಳ್ಳವನಾಗಿದ್ದನು. ॥೧೫-೧೬॥

ಆ ಅಂತ್ಯಜನು ತನಗೆ ಬರುವ ಅಲ್ಪ ಸಂಬಳದಿಂದಲೇ ಜೀವನಮಾಡುತ್ತಿದ್ದನು. ಆ ಆನಂದನು ಕೀಳುಜಾತಿಯವನಾದರೂ ಬ್ರಾಹ್ಮಣರಿಂದಲೂ ಹೊಂದಲಸಾಧ್ಯವಾದ ಭಕ್ತಿಯನ್ನು ಮಹೇಶ್ವರನಲ್ಲಿ ಹೊಂದಿದ್ದನು. ಅವನು ಈ ಸಂಸಾರ

ಅಂತ್ಯಜೋಽಪಿ ದ್ವಿಜಾಪ್ರಾಪ್ಯಾಂ ಭಕ್ತಿಂ ಲೇಭೇ ಮಹೇಶ್ವರೇ ।
ಭಕ್ತಿಮೇವ ಪರಂ ಮೇನೇ ಭವಸ್ಯ ಭವನುತ್ತಯೇ ॥೧೮॥

ದುಂದುಭೀನಾಂ ಮರ್ದಲಾನಾಂ ಚರ್ಮಯುಸ್ಮುಖಬಂಧನಂ ।
ರಥಾಕರ್ಷಣರಜ್ಜೂನಾಂ ಚರ್ಮಣಾಮಪಿ ದಾಯಕಃ ॥೧೯॥

ಶಂಭೋಸ್ತದಾಲಯದ್ವಾರಿ ಪುಲಕಾಂಕಿತಗಾತ್ರಕಃ ।
ಭಕ್ತ್ಯಾ ಸಂಪ್ರಣಮನ್ನಾಯನ್ಭಸ್ಮಫಾಲೋ ಮುದಂ ಯಯೌ ॥೨೦॥

ಸ ಕದಾಚಿದ್ದರಿದ್ರೋಽಪಿ ಶಿವಕೈಂಕರ್ಯಧೂರ್ವಹಃ ।
ಶ್ರೀಕರಂಜವನೇಶಸ್ಯ ದ್ವಾರಿ ದೇವಾಲಯಸ್ಯ ಸಃ ॥೨೧॥

ಗತ್ವಾ ಸ್ತುತ್ವಾ ಶಿವಂ ನತ್ವಾ ಪ್ರಾರ್ಥಯಾಮಾಸ ಭಕ್ತಿಮಾನ್ ॥೨೨॥

॥ ಚಂಡಾಲ ಉವಾಚ ॥

ಶಿವಾಭಿಧಾನರಹಿತಂ ವಂದನಂ ತವ ಮಾಸ್ತ್ವಿತಿ ।
ತಸ್ಮಾನಂದವತೋ ನೃತ್ಯಂ ವೀಕ್ಷಿತುಂ ಶಂಕರಃ ಸ್ವಯಂ ॥೨೩॥

---

ಬಂಧನವನ್ನು ಕಳೆಯುವುದಕ್ಕೆ ಮಹೇಶನ ಭಕ್ತಿಯೇ ಪ್ರಧಾನವಾದದ್ದೆಂದು ತಿಳಿದಿದ್ದನು. ಆ ಆನಂದನು ನಗಾರಿ, ಮದ್ದಲೆ ಮುಂತಾದ ವಾದ್ಯಗಳ ಬಾಯಿಗೆ ಕಟ್ಟುವ ಚರ್ಮವನ್ನೂ ತೇರುಗಳನ್ನೆಳೆಯುವ ಚರ್ಮದ ಹೊರ್ಜಿಗಳನ್ನೂ ಜನರಿಗೆ ಮಾಡಿಕೊಡುತ್ತಿದ್ದನು. ॥೧೭-೧೮-೧೯॥

ಒಂದೊಂದುವೇಳೆ ಆ ಮಹಾದೇವನು ಶಿವದೇವಾಲಯದ ಬಾಗಿಲಿನಲ್ಲಿ ನಿಂತು ರೋಮಾಂಚಗೊಂಡ ಶರೀರವುಳ್ಳವನಾಗಿ ಹಣೆಯಲ್ಲಿ ಭಸ್ಮವನ್ನು ಧರಿಸಿ, ಭಕ್ತಿಯಿಂದ ಶಿವನಿಗೆ ನಮಸ್ಕಾರ ಮಾಡುತ್ತಾ, ಹಾಡುತ್ತಾ ಸಂತೋಷ ಹೊಂದುತ್ತಿದ್ದನು. ಅವನು ಬಡವನಾದರೂ ಎಂದೂ ಶಿವಧ್ಯಾನವನ್ನು ಬಿಟ್ಟವನಲ್ಲ. ಒಂದು ದಿವಸ ಶಿವನ ಸೇವೆಯಲ್ಲಿ ಭಾಗವಹಿಸಿ, ಶ್ರೀಕರಂಜವನೇಶ್ವರನ ದೇವಾಲಯದ ಬಾಗಿಲಿಗೆ ಹೋಗಿ ಅಲ್ಲಿ ಶಿವನಿಗೆ ಭಕ್ತಿಯಿಂದ ನಮಸ್ಕಾರಮಾಡಿ, ಪಾರ್ವತೀಪತಿಯನ್ನು ಸ್ತುತಿಸುತ್ತಾ ಹೀಗೆ ಪ್ರಾರ್ಥನೆಮಾಡಿದನು. ॥೨೦-೨೧-೨೨॥

ದೇವ, ಶಿವ ಎಂಬ ಹೆಸರಿಲ್ಲದ ಅಂದರೆ ನಿನ್ನ ನಾಮ ಮತ್ತು ಧ್ಯಾನ ಇವುಗಳಿಂದ ರಹಿತವಾದ ನಿನ್ನ ನಮಸ್ಕಾರವೇ ನನಗೆ ಉಂಟಾಗದಿರಲಿ. (ಅಂದರೆ

ಉಮಾಪತಿಃಪುರಸ್ಥಂ ತಂ ನಂದಿಕೇಶಂ ತದಾಬ್ರವೀತ್ ॥೨೪॥

ಪಾರ್ಶ್ವೇ ತ್ವಯಾ ಧೇನುಸುತ ಸ್ಥೀಯತಾಮಿತ್ಯಶಾದ್ಧರಃ ।
ತಥಾ ಸ್ಥಿತೇ ದ್ವಿಜೇ ತಸ್ಮಿನ್ದೇವೇಶವ್ಯಜುದರ್ಶನಂ ॥೨೫॥

ನತ್ವಾ ಸ ಹೃಷ್ಟಸ್ತಂ ಭೇರೀಮುಖಚರ್ಮಾದಿಕಂ ದದೌ ।
ಮರ್ದಲಾನಾಂ ಶೃತಿಮಣಿಂ ಧ್ವನಿಪುಷ್ಕಲಮಾತನೋತ್ ॥೨೬॥

ಪುರೋಗತಸ್ಥಲಂ ದೃಷ್ಟ್ವಾ ತಟಾಕಮಖನತ್ತದಾ ।
ಪ್ರದಕ್ಷಿಣಪ್ರಣಾಮಾದ್ಯೈರ್ದೇವಂ ನೃತ್ತೈರತೋಷಯತ್ ॥೨೭॥

ಸ್ವಕೈಃ ಪ್ರತ್ಯುದ್ಗತೋ ವೇಗೈರ್ನಿಜಂ ಪ್ರಾಪ ನಿಕೇತನಂ ।
ಇತಿ ಪ್ರತ್ಯಾಲಯಂ ಶಂಭೋಶ್ಚರ್ಮಪಾದ್ಯಾನ್ಯಥಾತನೋತ್ ॥೨೮॥

---

ಶಿವನಾಮೋಚ್ಚಾರಣಪೂರ್ವಕವಾಗಿಯೇ ಯಾವಾಗಲೂ ನಿನಗೆ ನಾನು ನಮಸ್ಕಾರ ಮಾಡಿಕೊಂಡಿರುವಂತೆ ಅನುಗ್ರಹಿಸು.) ಎಂದು ಪ್ರಾರ್ಥನೆಮಾಡುತ್ತಾ ನಾಟ್ಯವಾಡುತ್ತಿರಲು, ಆಗ ಉಮಾರಮಣನಾದ ಶಂಕರನು ಆನಂದಪೂರ್ಣನಾದ ಈ ಚಂಡಾಲನ ನಾಟ್ಯವನ್ನು ತಾನೇ ಪ್ರತ್ಯಕ್ಷವಾಗಿ ನೋಡಲು ಎದುರಿಗಿದ್ದ ನಂದಿಕೇಶ್ವರನನ್ನು ಕುರಿತು— (೨೩-೨೪)

ಓ ಧೇನುಕುಮಾರನೇ, ನೀನು ನನ್ನ ಪಾರ್ಶ್ವದಲ್ಲಿಯೇ ಸರ್ವದಾ ಇರೆಂದು ಶಿವನು ಅಪ್ಪಣೆ ಮಾಡಿದನು. ನಂದಿಕೇಶ್ವರನು ಹಾಗೆಯೇ ಆಗಲೆಂದು ಒಪ್ಪಿಕೊಂಡನು. ಒಡನೆಯೇ ಮಹಾದೇವನು ನಂದಿಯೊಡನೆ ಈ ಆನಂದನಿದ್ದ ಸ್ಥಳಕ್ಕೆ ಬಂದು ಅದೃಶ್ಯನಾಗಿ ನಿಂತನು. ಇತ್ತ ಆನಂದನು ತನಗೆ ನೆಟ್ಟಗೆ ದರ್ಶನಕೊಟ್ಟ ಶಿವದೇವಾಲಯಕ್ಕೆ ಅತ್ಯಂತ ಭಕ್ತಿಸಂತೋಷಗಳಿಂದ ನಮಸ್ಕರಿಸಿ ತಾನು ಮಾಡಿದ್ದ ನಗಾರಿಯ ಮುಖಭಾಗವೇ ಮೊದಲಾದ ಚರ್ಮದ ತುಂಡುಗಳನ್ನು ಕಾಣಿಕೆಯಾಗಿ ಪರಶಿವನಿಗೆ ಕೊಟ್ಟನು. ಮದ್ದಲೆಯ ಶ್ರುತಿಗಳ ಮಣಿಯನ್ನು ಸರಿಮಾಡಿ ದಿವ್ಯ ಧ್ವನಿ ಬರುವಂತೆ ಮಾಡಿದನು. ॥೨೫-೨೬॥

ತನ್ನ ಮುಂದೆ ಕಂಡುಬರುವ ಮಟ್ಟವಾದ ಪ್ರದೇಶವೊಂದನ್ನು ನೋಡಿ, ಅಲ್ಲಿ ಒಂದು ಬಾವಿಯನ್ನು ತೋಡಿದನು. ಹಾಗೆಯೇ ಆನಂದನು ಪ್ರದಕ್ಷಿಣೆ ನಮಸ್ಕಾರಾದಿಗಳನ್ನೆಸಗುತ್ತಾ, ನಾನಾರೀತಿಯ ನಾಟ್ಯಗಳಿಂದ ಮಹಾದೇವನನ್ನು

ದರ್ಶನೋಲ್ಲಾಸಿಹೃದಯಂ ಶಿವಂ ತಿಲ್ಲಪುರೇಶ್ವರಂ ।
ವಿಧೇರ್ವಶೇನಾಂತ್ಯಜೋಽಪಿ ದ್ರಷ್ಟುಂ ಸಂನಿದಧೇ ಮನಃ ॥೨೯॥

ರಾತ್ರಾವನಾಯಾಸಗತಿಃ ಶ್ವೋಗಂತಾಸ್ಮೀತ್ಯಚಿಂತಯತ್ ।
ಪ್ರಭಾತೇ ಕಾರ್ಯಮಾರ್ಯಾಣಾಂ ಕುರ್ವನ್ರುದ್ಧೋ ಹಿ ಬಂಧುಭಿಃ ॥೩೦॥

ಏಷಃಪ್ರಯಾಣವಿಘ್ನೋಽಹಿ ಶಿವಸ್ಯಾಜ್ಞೇತಿ ಚಿಂತಯನ್ ।
ತಿಲ್ಲೇಶೋ ಭಕ್ತಹೃತ್ಪದ್ಮವಿಲಾಸೋಲ್ಲಾಸಿಮಾನಸಃ ॥೩೧॥

ಶ್ವೋಗಂತಾಸ್ಮೀತಿ ಸಂಚಿಂತ್ಯ ನಿನಾಯ ದಿವಸಾನ್ಬಹೂನ್ ।
ಪ್ರಾಪ್ತೇಶ ಭಕ್ತಿಸಂದೋಹೋ ನಂದೋ ಮುದಿತಮಾನಸಃ ॥೩೨॥

---

ಸಂತೋಷಪಡಿಸಿದನು. ಅನಂತರ ತನ್ನ ಪರಿವಾರದೊಡನೆ ಅಲ್ಲಿಂದ ಹೊರಟು ತನ್ನ ಮನೆಗೆ ಬಂದು ಸೇರಿದನು. ಚಂಡಾಲನಾದ ಈ ಆನಂದನು ಶಂಭುವಿನ ಪ್ರತಿಯೊಂದು ದೇವಾಲಯದಲ್ಲಿಯೂ ಚರ್ಮವಾದ್ಯಗಳನ್ನು ಸಿದ್ಧಗೊಳಿಸಿ ಕೊಡುತ್ತಿದ್ದನು. ॥೨೭-೨೮॥

ಶಿವದರ್ಶನದಲ್ಲಿ ಉತ್ಸುಕತೆಹೊಂದಿದ ಮನಸ್ಸಿನಿಂದ ಆ ಆನಂದನು ತಾನು ಪಂಚಮನಾದರೂ ತಿಲ್ಲಪುರೇಶ್ವರನನ್ನು ಅದೃಷ್ಟವಶದಿಂದ ನೋಡಲು ದೃಢಮನಸ್ಸು ಮಾಡಿದನು. ರಾತ್ರಿಯವೇಳೆ ಪ್ರಯಾಣಹೊರಟು ನಾಳೆಯ ದಿನ ಖಂಡಿತವಾಗಿಯೂ ಮಹೇಶ್ವರನ ದರ್ಶನಕ್ಕೆ ಹೊರಡುವೆನೆಂದು ಯೋಚಿಸಿದನು. ಆದರೆ ಬೆಳಗ್ಗೆ ಊರಿನ ಗಣ್ಯರ ಕೆಲವು ಕೆಲಸಗಳನ್ನು ಮಾಡಬೇಕಾಗಿ ಬಂದು, ಬಂಧುಗಳಿಂದ ಹೊರಡದಂತೆ ತಡೆಯಲ್ಪಟ್ಟನು. ॥೨೯-೩೦॥

ಆಗ ಅವನು ಶಿವಕ್ಷೇತ್ರಪ್ರಯಾಣಕ್ಕೆ ಅಡಚಣೆಬಂದುದೂ ಶಿವನ ಅಪ್ಪಣೆಯೇ ಇರಬೇಕೆಂದು ಯೋಚಿಸುತ್ತಾ, ಆದರೆ ತಿಲ್ಲವನೇಶ್ವರನು ಭಕ್ತರ ಹೃದಯಕಮಲವನ್ನು ವಿಲಾಸಗೊಳಿಸುವುದರಲ್ಲಿ ಉಲ್ಲಾಸಭರಿತವಾದ ಮನಸ್ಸುಳ್ಳವನೆಂದು ನಂಬಿದನು. ಅಂತು ಆ ಚಂಡಾಲನಾದ ಆನಂದನೂ ಸಹ ನಾಳೆ ನಾಳೆ ಹೊರಡುತ್ತೇನೆಂದು ಅನೇಕ ದಿನಗಳನ್ನು ತಳ್ಳಿದನು. ಆ ಮೇಲೆ ಒಂದು ಸಲ ತನಗೆ ಉಂಟಾದ ಈಶ್ವರನ ಭಕ್ತ್ಯತಿಶಯದಿಂದ ಸಂತುಷ್ಟಾಂತರಂಗನಾಗಿ ಆನಂದನು, ॥೩೧-೩೨॥

ತತಃ ಸ ತಿಲ್ಲನಾಥಸ್ಯ ಪ್ರಣಾಮೋಲ್ಲಾಸಿಮಾನಸಃ ।
ಅವಿಚಾರ್ಯ ನಿಜಾಪತ್ಯದಾರಾನ್ಬಂಧೂನಥಾಂತ್ಯಜಃ ॥೩೩॥

ನಿರಗಾತ್ಕಂಜನಗರಾನ್ಮನೋ ಮಾರುತರಂಹಸಾ ।
ಆದೂರತಃ ಶಿವೋತ್ತುಂಗಗೋಪುರಾಣಿ ದದರ್ಶ ಸಃ ॥೩೪॥

ಸಹ್ಯಜಾಯಾಂ ತತಃ ಸ್ನಾತ್ವಾ ಚಿತಾಭಸ್ಮವಿಭೂಷಿತಃ ।
ತ್ರ್ಯಕ್ಷಸ್ಯ ಪುರಮದ್ರಾಕ್ಷೀದ್ವಿಸ್ಮಯಾನಾಂ ಸ್ಮಯಾವಹಂ ॥೩೫॥

ಮಲ್ಲೀಮಲ್ಲೀ ಸುಮಲ್ಲೀಭಿರ್ವೇಷ್ಟಿತಂ ತಿಲ್ಲಭೂರುಹೈಃ ।
ಅನ್ಯೈಃ ಶಾಖಿಸಮೂಹೈಶ್ಚ ಮೃಗಪಕ್ಷಿಗಣೋಜ್ವಲಂ ॥೩೬॥

ಅತ್ಯಂತದೃಪ್ತಶಫರೀವಾಪೀಶತವಿರಾಜಿತಂ ।
ಶ್ರೀತಿಲ್ಲನಗರೋಪಾಂತಂ ಪ್ರಾಪ ಶಂಕರಕಿಂಕರಃ ॥೩೭॥

---

ಆ ತಿಲ್ಲೇಶ್ವರನ ಪ್ರಣಾಮದಲ್ಲಿ ಉತ್ಸಾಹಗೊಂಡ ಮನಸ್ಸುಳ್ಳವನಾಗಿ ತನ್ನ ಸ್ವಂತ ಮಕ್ಕಳು, ಹೆಂಡತಿ, ನೆಂಟರು ಮುಂತಾದವರೆಲ್ಲರನ್ನೂ ಬಿಟ್ಟು ಯಾರಿಗೂ ಅದನ್ನು ತಿಳಿಸದೆ ಆ ಚಂಡಾಲನು ಮನೋವಾಯುವೇಗದಿಂದ ತಾನಿದ್ದ ಕಂಜನಗರದಿಂದ ಹೊರಟನು. ದೂರದಲ್ಲಿ ಬರುತ್ತಿರುವಾಗಲೇ ಶಿವನ ದೇವಾಲಯದ ಎತ್ತರವಾದ ಗೋಪುರಗಳನ್ನು ಅವನು ಕಂಡನು. ॥೩೩-೩೪॥

ದಾರಿಯಲ್ಲಿ ಅವನು ಕಾವೇರೀನದಿಯಲ್ಲಿ ಸ್ನಾನಮಾಡಿದನು. ಶವಭಸ್ಮವನ್ನು ಭಸ್ಮವನ್ನಾಗಿ ಧರಿಸಿಕೊಂಡನು. ಆಶ್ಚರ್ಯಪಡುತ್ತಾ, ನಗುವಂತೆ ಕಾಣುತ್ತಿರುವ ಮುಕ್ಕಣ್ಣನ ಪಟ್ಟಣವನ್ನು ಪ್ರತ್ಯಕ್ಷವಾಗಿ ಕಂಡನು. ಮಲ್ಲೆ, ಮಲ್ಲಿಗೆ, ಮಲ್ಲಿಗೆಯ ಬಳ್ಳಿಯು, ಜಾತಿಯ ಲತೆಗಳು ಇವುಗಳಿಂದ ಸುತ್ತುವರಿಯಲ್ಪಟ್ಟಿರುವ ತಿಲ್ಲವೃಕ್ಷಗಳಿಂದಲೂ, ಇತರ ಮರಗಳ ಗುಂಪಿನಿಂದಲೂ ವ್ಯಾಪ್ತವಾಗಿ ಮೃಗಗಳೂ, ಪಕ್ಷಿಗಳೂ ಇವುಗಳ ಗುಂಪಿನಿಂದ ಆ ಪಟ್ಟಣವು ವಿರಾಜಿಸುತ್ತಿದ್ದಿತು. ॥೩೫-೩೬॥

ಅಲ್ಲಲ್ಲಿ ದಪ್ಪದಪ್ಪನಾಗಿ ಕೊಬ್ಬಿದ ಮೀನುಗಳಿಂದ ಕೂಡಿದ ನೂರಾರು ಕೊಳಗಳಿಂದ ವಿರಾಜಮಾನವಾಗಿರುವ ಶ್ರೀ ತಿಲ್ಲಪಟ್ಟಣದ ಸಮೀಪಕ್ಕೆ ಆ ಶಿವಕಿಂಕರನು ಬಂದನು. ಅಲ್ಲಿಯೇ ನಿಂತು ಮಹೇಶನಿಗೆ ನಮಸ್ಕಾರಮಾಡಿ ಹಾಗೆಯೇ ಆ ಪಟ್ಟಣದ ಪ್ರದೇಶವನ್ನೆಲ್ಲಾ ನಿದಾನವಾಗಿ ನೋಡಿದನು. ದಕ್ಷಿಣಾಗ್ನಿ, ಗಾರ್ಹ

ತತ್ರೈವ ನತ್ವಾ ಚೋತ್ಥಾಯ ಸ್ಥಿತ್ವೋಪಾಂತಂ ದದರ್ಶ ಸಃ ।
ತ್ರೇತಾಗ್ನಿಧೂಮಪಟಲೀವೇದಘೋಷಾನ್ಮಠೇ ಯತೀನ್ ॥೩೮॥

ಪುರಸ್ಯ ತಸ್ಯ ಮಾಹಾತ್ಮ್ಯಂ ಸ್ವಕುಲಂ ಚ ಸಮೀಕ್ಷ್ಯ ಸಃ ।
ಭೀತಃ ಪ್ರವೇಷ್ಟುಂ ಸಹಸಾ ಸಾಹಸಾದೇವ ದೂರತಃ ॥೩೯॥

ಪುರಾದ್ಬಹಿಃ ಸ್ಥಿತೋ ನಿತ್ಯಂ ಪುರಂ ಚಕ್ರೇ ಪ್ರದಕ್ಷಿಣಂ ।
ಸ್ಥಿತಿಂ ಶ್ರುತ್ವಾಹಿತಾಗ್ನೀನಾಂ ತ್ರಿಸಹಸ್ರ ದ್ವಿಜನ್ಮನಾಂ ॥೪೦॥

ಪ್ರವೇಷ್ಟುಂ ನ ಮಯಾ ಶಕ್ಯಮಿತ್ಯವರ್ತತ ಸೋ ಬಹಿಃ ।
ಕೃತವಾಸಃ ಸ್ಮರನ್ದೇವಂ ಗೋಪುರಂ ತದ್ವಿಲೋಕಯನ್ ॥೪೧॥

ಇತಿ ತತ್ರ ದಿವಾಸಕ್ತಂ ಪುರಂ ಚಕ್ರೇ ಪ್ರದಕ್ಷಿಣಂ ।
ಕುರ್ವನ್ಖಿನ್ನಮನಾಃ ಶಿಕ್ಯೇ ಧಿಗ್ಜನ್ಮೇತಿ ವಿಚಿಂತಯನ್ ॥೪೨॥

---

ಪತ್ಯ ಮತ್ತು ಆಹವನೀಯುಗಳೆಂಬ ತ್ರೇತಾಗ್ನಿಸಂಬಂಧವಾದ ಹೊಗೆಯ ಸಮೂಹವನ್ನೂ ವೇದಘೋಷಗಳನ್ನೂ ಹಾಗೆಯೇ ಮಠಗಳಲ್ಲಿರುವ ಯತಿಪುಂಗವರನ್ನೂ ಅವನು ದೂರದಿಂದಲೇ ನೋಡಿ ಹರ್ಷಿಸಿದನು. ॥೩೭-೩೮॥

ಆ ಪಟ್ಟಣದ ಮಹಿಮೆಯನ್ನೂ ತನ್ನ ನೀಚವಾದ ಕುಲವನ್ನೂ ನೋಡಿಕೊಂಡು ಆನಂದನು ಕೂಡಲೇ ಆ ಪಟ್ಟಣವನ್ನು ಪ್ರವೇಶಿಸಲು ಹೆದರಿ ದೂರದಲ್ಲಿಯೇ ಇರುತ್ತಾ, ನಿತ್ಯವೂ ಆ ಪಟ್ಟಣವನ್ನೇ ಪ್ರದಕ್ಷಿಣೆಮಾಡುತ್ತಿದ್ದನು. ಅವನು ಆಹಿತಾಗ್ನಿಗಳಾದ ಮೂರುಸಾವಿರ ಬ್ರಾಹ್ಮಣೋತ್ತಮರ ವಾಸಭೂಮಿಯೇ ಆ ಪಟ್ಟಣವಾಗಿರುವುದೆಂದರಿತುಕೊಂಡನು. ॥೩೯-೪೦॥

ಅವನು ಈ ಪಟ್ಟಣವನ್ನು ಹೊಗಲು ನನ್ನಿಂದ ಸಾಧ್ಯವಿಲ್ಲವೆಂದರಿತು, ಹೊರಗೇ ವಾಸಮಾಡುತ್ತಾ ಮಹಾದೇವನನ್ನು ಸ್ಮರಿಸುತ್ತಾ ಮಹೇಶನ ಗುಡಿಯ ಆ ಗೋಪುರವನ್ನೇ ನೋಡುತ್ತಾ ನಿಂತನು. ಹೀಗೆಯೇ ಅವನು ಹಗಲಿರುಳೂ ಒಂದೇ ಸಮನಾಗಿ ಆ ಪಟ್ಟಣವನ್ನು ಪ್ರದಕ್ಷಿಣೆಮಾಡುತ್ತಾ ಅಯ್ಯೋ! ನನ್ನ ಈ ನೀಚಜನ್ಮವನ್ನು ಸುಡಲಿ ಎಂದು ಖಿನ್ನಮನಸ್ಕನಾಗಿ ಚಿಂತಿಸುತ್ತಿದ್ದನು. ॥೪೧-೪೨॥

ನೃತ್ಯೇಶದರ್ಶನೋತ್ಕಂಠೋ ಕುಂಠಿತಾತ್ಮಜನುಸ್ತದಾ ।
ತಂ ದುಃಖಿತಂ ಮಹಾದೇವೋ ಭವೋ ಭಕ್ತಾರ್ತಿನಾಶನಃ ॥೪೩॥

ಸ್ವಪ್ನೇ ಪ್ರಾಹಾಂತ್ಯಜಂ ಗತ್ವಾ ತ್ಯಜ ತ್ವಂ ವೈ ಕಲೇಬರಂ ।
ಲೋಕೋಽಪಚಾರ್ಯತೇ ಯೇನ ಜನ್ಮನಾ ಕೇತಸುಂ ತ್ಯಜ ॥೪೪॥

ಭಕ್ತೋಽಸಿ ನೃತ್ಯಂ ಮೇಽದ್ಯ ತ್ವಂ ಸುವಿಲೋಕಯ ಮಾಚಿರಂ ।
ಸ ಹೇಮಸಭೋಷ್ಮೀನಿಸ್ಮಂ ಸ್ವನೃತ್ಯಂ ತಸ್ಮೈ ಪ್ರದರ್ಶಯನ್ ॥೪೫॥

ದ್ವಿಜಾಂಸ್ತಥಾಗತಃ ಸ್ವಪ್ನೇ ಹರಃ ಪ್ರಾಹ ದಯಾಘನಃ ॥೪೬॥

॥ ಶಿವ ಉವಾಚ ॥

ಕಶ್ಚಿತ್ಪ್ರವೇಕ್ಷ್ಯತ್ಯನಿಲಂ ತದ್ಭವಂತೋಽದ್ಯ ಪಶ್ಯತ ।
ಶ್ರುತ್ವಾ ಶಿವಾಜ್ಞಾಂ ತೇ ಪ್ರಾತರ್ದೃಷ್ಟ್ವಾಂತ್ಯಜಮಥ ದ್ವಿಜಾಃ ॥೪೭॥

---

ಆತನು ನಾಟ್ಯೇಶ್ವರನನ್ನು ನೋಡುವುದರಲ್ಲಿ ವಿಶೇಷ ಆಸೆಯುಳ್ಳವನಾದರೂ ಅದಕ್ಕೆ ಸಾಧ್ಯವಿಲ್ಲದೇ ತಡೆಯಾಗಿರುವ ತನ್ನ ಕೀಳುಜನ್ಮದಿಂದ ಉತ್ಸಾಹಹೀನ ನಾಗಿದ್ದನು. ಭಕ್ತರ ದುಃಖವನ್ನು ಪರಿಹರಿಸುವ ಜಗದುತ್ಪತ್ತಿಕಾರಣನಾದ ಮಹಾ ದೇವನು ತನ್ನ ಭಕ್ತನಾದ ಚಂಡಾಲನು ದುಃಖಿತನಾಗಿರುವುದನ್ನು ಕಂಡು, ಅವನ ಕನಸಿನಲ್ಲಿ ಕಾಣಿಸಿಕೊಂಡು, ಭಕ್ತನೇ, ಜನಗಳ ನಿಂದೆಗೂ ಅಪಚಾರಕ್ಕೂ ಕಾರಣ ಭೂತವಾಗಿರುವ ಈ ದೇಹವನ್ನು ನೀನು ತ್ಯಜಿಸು. ॥೪೩-೪೪॥

ಓ ನಂದನೇ, ನೀನು ನನ್ನ ಭಕ್ತನಾಗಿರುವೆ; ನನ್ನ ಈ ನಾಟ್ಯವನ್ನು ಜಾಗ್ರತೆಯಾಗಿ ಚಿರಕಾಲದವರೆಗೂ ನೋಡುವನಾಗೆಂದು ಶಿವನು ಹೇಮ ಸಭೆಯಲ್ಲಿ ರುವ ತನ್ನ ನಾಟ್ಯವನ್ನು ಅವನಿಗೆ ತೋರಿಸುತ್ತಾ ಹಾಗೆಯೇ ಆ ಊರಿನಲ್ಲಿದ್ದ ಬ್ರಾಹ್ಮಣರ ಕನಸಿನಲ್ಲಿ ಕಾಣಿಸಿಕೊಂಡು ದಯಾಮಯನಾದ ಶಂಕರನು ಅವರಿಗೆ ಇಂತೆಂದನು. ॥೪೫-೪೬॥

ಓ ಬ್ರಾಹ್ಮಣೋತ್ತಮರಿರಾ, ನಾಳೆ ಒಬ್ಬ ಚಂಡಾಲನು ಅಗ್ನಿಪ್ರವೇಶಮಾಡು ತ್ತಾನೆ. ಅದನ್ನು ನೀವೆಲ್ಲರೂ ನೋಡಿರೆಂದು ಶಿವನು ಅಪ್ಪಣೆಮಾಡಲು ಆ ಬ್ರಾಹ್ಮಣ ರೆಲ್ಲರೂ ಶಿವನ ಆಜ್ಞೆಯನ್ನು ಕೇಳಿ, ಬೆಳಗಾಗುತ್ತಲೇ ಎದ್ದು ತಮ್ಮ ಊರಿನ ಹೊರಗಿದ್ದ ಅಂತ್ಯಜನನ್ನು ಕಂಡು ಇಂತೆಂದರು. ॥೪೭॥

॥ ದ್ವಿಜಾ ಊಚುಃ ॥

ರೇರೇ ಶಿವಾಜ್ಞಯಾ ಸಾಧೋ ತ್ವತ್ಕೃತೇ ಜ್ವಾಲ್ಯತೇಽನಲಃ ।
ಪ್ರವೇಷ್ಟುಮರ್ಹಸ್ಯಚಿರಾದ್ದೇಹಮುನ್ಮುಚ್ಯ ಪಾಪಜಂ ॥೪೮॥

ಪುರೇಽಸ್ಮಿನ್ಭಕ್ತವರ್ಯಾಢ್ಯ ತ್ವಂ ಚ ಜೀರ್ಣ ಇವೋರಗಃ ।
ಇತಿ ತೈಃ ಸ ಸಮಾದಿಷ್ಟೋ ಹರ್ಷೋತ್ಕರ್ಷಾಶ್ರುಲೋಚನಃ ॥೪೯॥

ಕೃತಾರ್ಥೋಽಸ್ಮೀತಿ ತಾನುಕ್ತ್ವಾ ಪ್ರವಿಷ್ಟೋಽಗ್ನಿಂ ಮಹೇಶ್ವರಂ ।
ವಿಚಿಂತಯಂಶ್ಚ ಮನಸಾ ಸ ನೃತ್ತೇಶಪದಾಂಬುಜಂ ॥೫೦॥

ಪ್ರವೇಷ್ಟಮಾತ್ರೇ ವಹ್ನೌ ಸ ಉತ್ಪಪಾತೋಪವೀತವಾನ್ ।
ದ್ವಿಜವರ್ಯವಪುರ್ಧೃತ್ವಾ ಭಸ್ಮರುದ್ರಾಕ್ಷಭೂಷಣಃ ॥೫೧॥

ಪುಷ್ಪಾಣಿ ವವೃಷುರ್ದೇವಾ ನೇದುರ್ದುಂದುಭಯೋ ದಿವಿ ।
ತಿಲ್ಲದ್ವಿಜಾ ವನೇಮುಸ್ತೇ ದ್ವಿಜಂ ತಂ ಹರ್ಷನಿರ್ಭರಾಃ ॥೫೨॥

---

ಓ ಸಾಧುವೇ, ಶಿವನ ಅಪ್ಪಣೆಯಿಂದ ನಿನಗಾಗಿ ಬೆಂಕಿಯನ್ನು ಹತ್ತಿಸುವೆವು. ಜಾಗ್ರತೆಯಾಗಿ ನೀನು ಈ ಅಗ್ನಿಯನ್ನು ಪ್ರವೇಶಿಸಲು ಯೋಗ್ಯನಾಗಿರುವೆ ; ಈ ಪಾಪಜನ್ಯವಾದ ಚಂಡಾಲದೇಹವನ್ನು ಬಿಟ್ಟು ಪೊರೆಬಿಟ್ಟ ಹಾವಿನಂತೆ ಈ ಪಟ್ಟಣದಲ್ಲಿ ನೀನೂ ಈಗ ಶಿವನ ಭಕ್ತಶ್ರೇಷ್ಠನೆನಿಸುವೆ ; ಎಂದು ಬ್ರಾಹ್ಮಣರಿಂದ ಸ್ತೋತ್ರಮಾಡಲ್ಪಟ್ಟ ಚಂಡಾಲನಾದ ನಂದನು ಸಂತೋಷಾತಿಶಯದಿಂದ ಆನಂದಬಾಷ್ಪವನ್ನು ಸುರಿಸುತ್ತಾ, ತಮ್ಮಿಂದ ನಾನು ಧನ್ಯನಾದೆನೆಂದು ಹೇಳಿ ನಾಟ್ಯೇಶ್ವರನಾದ ಮಹಾದೇವನ ಪಾದಕಮಲಗಳನ್ನು ಸ್ಮರಿಸುತ್ತಾ ಅಗ್ನಿಪ್ರವೇಶಮಾಡಿದನು. ॥೪೮-೪೯-೫೦॥

ಅವನು ಅಗ್ನಿಯನ್ನು ಪ್ರವೇಶಮಾಡಿದ ಕ್ಷಣಮಾತ್ರದಿಂದಲೇ ಯಜ್ಞೋಪವೀತವನ್ನು ಧರಿಸಿ ಶುದ್ಧಬ್ರಾಹ್ಮಣನ ದೇಹಹೊಂದಿ, ಭಸ್ಮರುದ್ರಾಕ್ಷಗಳಿಂದಲಂಕೃತನಾಗಿ ಹೊರಗೆ ನೆಗೆದುಬಿಟ್ಟನು. ಆಗ ಆಕಾಶದಲ್ಲಿ ದೇವತೆಗಳು ಹೂಮಳೆಗರೆದರು. ದೇವನಗಾರಿಗಳು ಮೊಳಗಿದವು. ಆ ತಿಲ್ಲವನದ ಬ್ರಾಹ್ಮಣರೆಲ್ಲರೂ ಸಂತೋಷಭರಿತರಾಗಿ ಆ ಬ್ರಾಹ್ಮಣನಿಗೆ ನಮಸ್ಕಾರಮಾಡತೊಡಗಿದರು. ॥೫೧-೫೨॥

ಬ್ರಾಹ್ಮಣನೂ ಸಹ ಇತರ ಬ್ರಾಹ್ಮಣರೊಡನೆ ಹೇಮಸಭಾಪತಿಯ ಪಟ್ಟಣಕ್ಕೆ

ಸ ದ್ವಿಜೋಽಪಿ ದ್ವಿಜೈಃ ಸಾರ್ಧಂ ಪುರಮಾಗಾತ್ಸಭಾಪತಿಂ ।
ದೃಷ್ಟ್ವಾ ಸಂತುಷ್ಟ ಹೃದಯೋ ನನರ್ತಾನಂದನಿರ್ಭರಃ ॥೫೩॥

ಯಂ ಹೀಶಾನ ದಯಾನಿಧಾನ ಭಗವನ್ಹೇಮೋತ್ತಮಾಂಗೋಲ್ಲಸ
ನ್ನಾಟ್ಯಾಡಂಬರ ನಿರ್ಜಿತಾಖಿಲ ಜಗತ್ತ್ರಾಟ್ಯಸ್ಮಹೋಡುಚ್ಛಟಂ ।
ತ್ವಾಂ ದೃಷ್ಟ್ವಾ ಮುನಯಃ ಸುರಾಸುರನರಾಃ ಪ್ರಾಪುರ್ವಿಮುಕ್ತಿಂ ಪರಾಂ
ನೋ ಜನ್ಮಾದಿಕವಿಭ್ರಮಂ ಭವತು ಮೇ ತ್ವತ್ಪಾದಪದ್ಮಂ ವಿಭೋ ॥೫೪॥

ಮಚ್ಚಿತ್ತಭ್ರಮರಃ ಪಿಪಾಸತಿ ಹೃದಾ ತ್ವತ್ಪಾದಪಂಕೇರುಹಂ ।
ಇತ್ಯುಕ್ತ್ವಾ ಸ ತಿರೋಧತ್ತ ತಸ್ಮಿನ್ಹೇಮಸಭಾಂತರೇ ॥೫೫॥

ಭಕ್ತೇಷ್ವಾನಂದಮಗ್ನೇಷು ಸಾಶ್ಚರ್ಯೇಷು ದ್ವಿಜೇಷು ಚ ।
ಸ್ತುವತ್ಸು ಸುರವೃಂದೇಷು ಹರ್ಷಸ್ರೋತೋಪ್ಲುತೇಷು ಚ ॥೫೬॥

---

ಹೋಗಿ ಅಲ್ಲಿ ದೇವನನ್ನು ಕಂಡು ಸಂತುಷ್ಟಾಂತರಂಗನಾಗಿ ಆನಂದದಿಂದ ಮೈಮರೆತು ನರ್ತನಮಾಡಿದನು. ॥೫೩॥

ದಯಾನಿಧಿಯೂ ಷಡ್ಗುಣೈಶ್ವರ್ಯಭರಿತನೂ ಆದ ಪರಮೇಶ್ವರನೇ! ಹೇಮ ಸಭೆಯಲ್ಲಿ ದಿವ್ಯದೇಹದಿಂದ ನಾಟ್ಯವಾಡಿ ಆ ನಾಟ್ಯದ ಆಡಂಬರದಿಂದ ಮೂರು ಲೋಕಗಳನ್ನೂ ಗೆದ್ದು, ಆ ನಿನ್ನ ನಾಟ್ಯಕಾಲದಲ್ಲಿ ನಿನ್ನ ಶಿರಃಕಂಪದಿಂದ ಉದುರುವ ದೊಡ್ಡನಕ್ಷತ್ರ ಸಮೂಹವನ್ನು ನೋಡಿ, ಮಹಾಮಹಾಮುನಿಗಳೂ, ದೇವರಾಕ್ಷಸ ಮಾನವರೂ ಸಹ ಉತ್ತಮವಾದ ಮೋಕ್ಷವನ್ನು ಹೊಂದಿದರು. ಪುನಃ ಅಂತಹ ಜನ್ಮವೇ ಮೊದಲಾದ ಬಂಧನವನ್ನು ಅವರು ತಾಳಲಿಲ್ಲ. ಅಂತಹ ನಿನ್ನ ಪಾದಕಮಲ ಸ್ಮರಣೆಯಲ್ಲಿ ನಮಗೆ ಯಾವಾಗಲೂ ಮರೆವುಂಟಾಗದಂತೆ ಸಲಹು, ಎಂದು ಸ್ತೋತ್ರಮಾಡಿದನು. ॥೫೪॥

ಪ್ರಭೋ, ನನ್ನ ಮನಸ್ಸೆಂಬ ಭ್ರಮರವು ಮನಃಪೂರ್ವಕವಾಗಿ ನಿನ್ನ ಅಡಿದಾವರೆಗಳಲ್ಲಿರುವ ಮಕರಂದಪಾನಮಾಡಲಿಚ್ಛಿಸುತ್ತದೆ, ಎಂದು ಹೇಳಿ ಆ ಚಂಡಾಲನಾದ ನಂದನು ಅದೇ ಹೇಮಸಭೆಯ ಮಧ್ಯದಲ್ಲಿ ಮರೆಯಾದನು. (ಶಿವನಲ್ಲಿ ಐಕ್ಯನಾದನು). ॥೫೫॥

ಭಕ್ತರೆಲ್ಲರೂ ಆನಂದಮಗ್ನರಾಗಿ, ಬ್ರಾಹ್ಮಣರು ಆಶ್ಚರ್ಯಭರಿತರಾಗಿರಲು, ದೇವಸಮೂಹವೂ ಸಂತೋಷಾಶ್ರುಪ್ರವಾಹದಿಂದ ತೊಯ್ದಿರಲು ಆ ಶ್ವೋಗೆಂತು

ಸ ತದಾ ಪ್ರಾಪ ಸಾಯುಜ್ಯಮಿಜ್ಯಾದ್ಯೈರಪಿ ದೂರಗಂ ।
ಆಕಾಶೇ ಭಾಸತಃ ಶಂಭೋಃ ಶಾತಕುಂಭಸಭಾಪತೇಃ ॥೫೭॥

ಶ್ವೋಗಂತುನಾಮ್ನಶ್ಚರಿತಂ ವಿಚಿತ್ರಂ
ತ್ರಿನೇತ್ರಭಕ್ತಿಪ್ರದ ಮುಕ್ತಿಸಾರಂ ।
ಶೃಣೋತಿ ಯಃ ಸಂತತಮಾದರೇಣ
ಸಭಾನಟೇಶಸ್ಯ ಪದಂ ಸ ಯಾತಿ ॥೫೮॥

ಇತಿ ಶ್ರೀಶಿವರಹಸ್ಯೇ ಸದಾಶಿವಾಖ್ಯೇ ನವಮಾಂಶೇ ಶ್ವೋಗಂತುಭಕ್ತ
ಚರಿತ್ರವರ್ಣನಂ ನಾಮೈಕ ಚತ್ವಾರಿಂಶೋಧ್ಯಾಯಃ

---

ವೆಂಬ ಹೆಸರಿನ ಚಂಡಾಲನು, ಯಜ್ಞಯಾಗಾದಿಗಳಿಂದಲೂ ದೊರೆಯಲಸಾಧ್ಯನಾಗಿ ಯಾರಿಗೂ ಸಾಧ್ಯವಾಗದಿರುವ ಆಕಾಶದಲ್ಲಿ ಹೊಳೆಯುವ ಹೇಮಸಭಾಪತಿಯಾದ ಶಂಕರನ ಸಾಯುಜ್ಯವನ್ನಾಗ ಪಡೆದನು. ॥೫೬-೫೭॥

ಇಂತಹ ಮುಕ್ಕಣ್ಣನ ಭಕ್ತಿಯ ಮಹಿಮೆಯನ್ನು ವಿವರಿಸುವುದೂ ಮೋಕ್ಷ ಸಾರವೂ ಆದ 'ಶ್ವೋಗಂತು'ವೆಂಬ ಹೆಸರಿನ ಭಕ್ತನ ವಿಚಿತ್ರ ಚರಿತ್ರೆಯನ್ನು ಆದರ ದಿಂದ ಅನವರತವೂ ಕೇಳುವವನು ಹೇಮಸಭಾನೃತ್ಯಕಾರನಾದ ಮಹೇಶನ ಪದ ವನ್ನು ಹೊಂದುತ್ತಾನೆಂದು ಕುಮಾರಸ್ವಾಮಿಯು ಜೈಗೀಷವ್ಯನಿಗೆ ಹೇಳಿದನು. ॥೫೮॥

ಇಲ್ಲಿಗೆ ಶ್ರೀ ಶಿವರಹಸ್ಯದ ಸದಾಶಿವಸಂಜ್ಞಕವಾದ ಒಂಬತ್ತನೆಯ ಅಧ್ಯಾಯದಲ್ಲಿ
ಶ್ವೋಗಂತುವೆಂಬ ಹೆಸರಿನ ಭಕ್ತನ ಚರಿತ್ರೆಯ ವರ್ಣನೆಯೆಂಬ
ನಲವತ್ತೊಂದನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಸದಾಶಿವಾಖ್ಯೇ

## ನವಮಾಂಶೇ

## ದ್ವಿಚತ್ವಾರಿಂಶೋಽಧ್ಯಾಯಃ

॥ ಶ್ರೀಸ್ಕಂದ ಉವಾಚ ॥

ಉಕ್ತಂ ವಿಚಾರಭಕ್ತಸ್ಯ ಕಥ್ಯತೇಽದ್ಯ ಮಯಾ ಕಥಾ ।
ಜನನೀವ್ಯಸ್ತಶಸ್ತಶ್ರೀವಸ್ತುಮತ್ಸ್ಯಾದ್ಯ(?)ವಿಸ್ಮೃತಿಃ ॥೧॥

ಪಾಪಾನಾಂ ಖಂಡನಂ ಯತ್ರ ಮಂಡನಂ ಚ ಭುವೋ ದ್ವಿಜ ।
ಡಿಂಡಿರಾನಿಭಮ್ಯತ್ಸಾರಮಸ್ತಿ ಕೌಂಡೀರಮಂಡಲಂ ॥೨॥

ಜನನೀ ಜೀವನಾನಾಮ ಸರ್ವೇಷಾಂ ಸರ್ವಮಂಗಳಾ ।
ಪರಿರಬ್ಧುಂ ಶಿವಾ ಯತ್ರ ಚಕಾರ ಸುಮಹತ್ತಪಃ ॥೩॥

---

## ನಲವತ್ತೆರಡನೆಯ ಅಧ್ಯಾಯ

ಅಯ್ಯ, ಜೈಗೀಷವ್ಯನೇ, ಹಿಂದೆ ಸೂಚಿಸಿದ ವಿಚಾರ ಭಕ್ತನ ಕಥೆಯನ್ನು ಈಗ ನಾನು ನಿನಗೆ ಹೇಳುತ್ತೇನೆ ಕೇಳು, ಜಗಜ್ಜನನಿಯಾದ ಪಾರ್ವತೀದೇವಿಯಿಂದ ಸ್ತೋತ್ರಮಾಡಲ್ಪಟ್ಟ ಪ್ರಶಸ್ತವೆನಿಸಿರುವ ಐಶ್ವರ್ಯ, ಮತ್ತು ಇತರ ವಸ್ತುಗಳುಳ್ಳ ಈ ಕೌಂಡೀರಮಂಡಲವು ಎಂದಿಗೂ ಮರೆಯುವಂತಿಲ್ಲ. ಅಯ್ಯ ವಿಪ್ರನೇ, ಯಾವ ಈ ರಾಷ್ಟ್ರದ ಭೂಭಾಗದಲ್ಲಿ ಸಕಲ ಪಾಪಕರ್ಮಗಳ ಖಂಡನೆಯೂ, ಇತರ ಪುಣ್ಯ ಕರ್ಮಗಳಿಂದ ಭೂದೇವಿಯ ಅಲಂಕಾರವೂ ರಾರಾಜಿಸುತ್ತಿರುವುದೋ, ಅಂತಹ ಕೌಂಡೀರಮಂಡಲವು ಸಮುದ್ರದ ನೊರೆಗೆ ಸಮಾನವಾದ ಸಾರಭೂಯಿಷ್ಟವಾಗಿದೆ. ॥೧-೨॥

ಸಕಲರಿಗೂ ಸಕಲ ವಿಧವಾದ ಮಂಗಳವನ್ನೂ ಉಂಟುಮಾಡುವ ಜಗಜ್ಜನನಿಯಾದ ಪಾರ್ವತಿಯು 'ಜೀವನಾ' ಎಂಬ ಹೆಸರಿನಿಂದ ಶಿವನನ್ನು ಆಲಿಂಗನ

ತಾದೃಗ್ದೇವ್ಯಾ ಸ್ತವಸ್ಥಾನಂ ಭವಿತಂ ಯತ್ತಪೋವ್ಯಥಾತ್ ।
ಯತ್ರ ಸರ್ವೇಽಪಿ ಮಧ್ಯಸ್ಥಾ ಮಧ್ಯಾಚಾರಾಃ ಪ್ರತಿಷ್ಠಿತಾಃ ॥೪॥

ಯತ್ರೈವ ಕೃತಿನಃ ಸರ್ವೇ ಸುಕೃತಾಂ ರಾಶಯೋ ದ್ವಿಜಾಃ ।
ಭವಂತಿ ಗೃಹಿಣೋ ಯತ್ರ ಸದೈವ ಬ್ರಹ್ಮಿಣೋಪಮಾಃ ॥೫॥

ದಶನಾನಾವಿಧೋದ್ದಾಮಧಾಮಪ್ರಾಕಾರಸಂವೃತಾಃ ।
ಕಾಲಿಕೋಜ್ವಲಕಂಠಶ್ರೀ ಶ್ರೀಕಂಠೋತ್ಕಂಠಯಾ ಶಿವಾ ॥೬॥

ದ್ವಾತ್ರಿಂಶದ್ಧರ್ಮಗೋಪ್ತ್ರೀತಿ ಗಾಥಾ ಯತ್ರ ಚ ವಿಶ್ರುತಾ ।
ಯತ್ರ ಶ್ರೀಕಾಲಹಸ್ತ್ಯದ್ರೀಶೃಂಗಾರಪುರಯೋಷಿತಾಂ ॥೭॥

ಕೇಶಶೃಂಗಾವ್ಯಾಧವಧೂ ಕಚಲಗ್ನಾ ನ ಯಾತಿ ಚ ।
ವೃಷಾರಣ್ಯೇ ಚ ಪೂಜಾರ್ಥಂ ಸುರಾಶ್ಚಾಪ್ಸರಸೋಽಪಿ ಚ ॥೮॥

---

ಮಾಡಿಕೊಳ್ಳಲು ಇಲ್ಲಿ ಬಹು ದೊಡ್ಡ ತಪಸ್ಸುಮಾಡಿದಳು. ಅಂತಹ ದೇವಿಯ ತಪಸ್ಸಿನ ಮಹಿಮೆಯಿಂದ ಅದು ಆ ಪಾರ್ವತಿಗೆ ಅಂತಹ ವರಪ್ರದವಾಯಿತು. ಅಲ್ಲಿ ವಾಸಿಸುವರೆಲ್ಲರೂ ಮಧ್ಯಸ್ಥರಾಗಿ ನಿರ್ದುಷ್ಟವಾದ ಆಚಾರನಿರತರಾಗಿರುವರು. ॥೩-೪॥

ಅಲ್ಲಿರುವ ಬ್ರಾಹ್ಮಣರೆಲ್ಲರೂ ಪುಣ್ಯವಂತರಾಗಿಯೂ, ಸುಕೃತರಾಶಿಗಳಾಗಿಯೂ ಕಾಣುವರು. ಗೃಹಸ್ಥರೆಲ್ಲರೂ ಯಾವಾಗಲೂ ಬ್ರಹ್ಮವರ್ಚಸ್ಸಿನಿಂದ ತೇಜಸ್ವಿಗಳಾಗಿಯೂ ಕರ್ಮಠರಾಗಿಯೂ ಇರುವರು. ಇವರು ಹತ್ತು ಬಗೆಯ ದೊಡ್ಡ ಪ್ರಾಕಾರವುಳ್ಳ ಮನೆಗಳಿಂದ ಕೂಡಿರುವರು. ಕಾಲಕೂಟವಿಷಭಕ್ಷಣೆಯಿಂದ ಉಜ್ಜ್ವಲವಾದ ಕತ್ತಿನ ಕಾಂತಿಯುಳ್ಳ ಮಹೇಶ್ವರನ ಉತ್ಕಂಠೆಯಿಂದ ಪಾರ್ವತಿಯು ತಪಸ್ಸಿನ ಮೂವತ್ತೆರಡು ಧರ್ಮಗಳನ್ನು ಕಾಪಾಡಿಕೊಂಡು ಇಲ್ಲಿರುವಳೆಂಬ ಗಾದೆಯು ಇಲ್ಲಿ ಪ್ರಸಿದ್ಧವಾಗಿರುವುದು. ॥೫-೬॥

ಶ್ರೀ ಕಾಲಹಸ್ತ್ಯಚಲದ ಸಮೀಪದಲ್ಲಿರುವ ಶೃಂಗಾರಪುರದ ಸ್ತ್ರೀಯರ ನೀಳವೂ ಸಾಂದ್ರವೂ ಆದ ಕೇಶಪಾಶವನ್ನು ನೋಡಿ, ಕೇಶಶೃಂಗಳೆಂಬ ವ್ಯಾಧಕುಮಾರಿಯು ಅಲ್ಲಿಂದ ಹೊರಡದೇ ತಲ್ಲೀನಳಾಗಿರುವಳು. ವೃಷಾರಣ್ಯದಲ್ಲಿ ಮಹೇಶ್ವರನ ಪೂಜೆಗೋಸ್ಕರ ದೇವತೆಗಳೂ, ಅಪ್ಸರೆಯರೂ, ಬೇಡರೂ, ಬೇಡಿತಿಯರೂ

ಶಬರಾಶ್ಚ ಶಬರ್ಯಶ್ಚ ಯತ್ರ ಜಾತಾ ಯಶಸ್ವಿನಃ ।
ಶ್ರೀಕಂಠೇ ಶೈಲಶೃಂಗಾಗ್ರೇ ಸರಸೀಷ್ವಮರೀಗಣಃ ॥೯॥

ವಿಹರಂತಿ ಶಬರ್ಯೋ ಯತ್ರಾಸ ಚ ಕೌಂಡೀರಭೂನ್ನತಿಃ ।
ಗಂಗಾ ಗಂಗಾಧರಸ್ಯೈವ ಮಜ್ಜನಾರ್ಥಂ ಮಹೀತಲಂ ॥೧೦॥

ತಮುದ್ಭಿದ್ಯೋದ್ಯತಾ ಯತ್ರ ನಗರೇ ಕುಲಿಶಾಹ್ವಯೇ ।
ನದ್ಯದ್ರಿವಾರಿಸುರಭಿಸ್ತನಸ್ನುತಪಯೋಪಮಾ ॥೧೧॥

ಯತ್ರ ಕ್ಷೀರಾಪಗಾಪಾರ್ಶ್ವೇ ಹ್ವಯಂತೀವ ಕೃಷೀವಲಾತ್ ।
ಯತ್ರೋದ್ಯಾನವನೇ ಬಾಹ್ಯಾಶ್ಚಂದನಾಮೋದಿವಾಯುವಃ ॥೧೨॥

ರಂಭಾಚಂಪಕಜಂಬೀರ ಹಿಂತಾಲಾಮ್ರಾರ್ಜುನೈರಪಿ ।
ವೇದಶಾಸ್ತ್ರಮಹಾವಾದೈರ್ವರ್ಧಿತೈರ್ವಹ್ನಿಧೂಮಕೈಃ ॥೧೩॥

---

ಬಂದು ಸೇರುವರು. ಯಶಸ್ವಿಯಾದ ಶ್ರೀಕಂಠೇಶ್ವರನ ಬೆಟ್ಟದ ಶಿಖರದ ತುದಿಯಲ್ಲಿರುವ ಸರೋವರಗಳಲ್ಲಿ ದೇವತೆಗಳ ಗುಂಪೂ, ॥೭-೮-೯॥

ಶಬರಾಂಗನೆಯರೂ ವಿಹರಿಸುತ್ತಾ ಕುಳಿತಿದ್ದರು. ಯಾವ ಈ ಭಾಗ್ಯವು ಕೌಂಡೀರಮಂಡಲ ಭೂಮಿಯ ಔನ್ನತ್ಯವನ್ನು ತೋರಿಸುತ್ತಿದ್ದಿತು. ಸಾಕ್ಷಾದ್ದೇವ ಗಂಗಾನದಿಯು ಮಹಾದೇವನ ಸ್ನಾನಸೌಕರ್ಯಕ್ಕೋಸ್ಕರ ಭೂಮಂಡಲಕ್ಕೆ ಆಕಾಶದಿಂದ ಇಳಿದುಬಂದು ಕುಲಿಶವೆಂಬ ಪಟ್ಟಣದಲ್ಲಿ ಹರಿಯುತ್ತಿರುವಳು. ಬೆಟ್ಟದಿಂದ ಹರಿದು ಬರುವ ಆ ಗಂಗಾನದಿಯ ನೀರಾದರೋ ಕಾಮಧೇನುವಿನ ಹಾಲಿಗೆ ಸಮಾನವಾಗಿರುವುದು. ॥೧೦-೧೧॥

ಪಕ್ಕದಲ್ಲಿ ಕ್ಷೀರನದಿಯು ರೈತರ ಪ್ರೀತಿಯ ಆಹ್ವಾನದಿಂದಲೋ ಎಂಬಂತೆ ಪೂರ್ಣವಾಗಿ ಹರಿಯುತ್ತಿರುವುದು. ಆ ಊರಿನ ಉದ್ಯಾನವನಗಳಲ್ಲಿ ಚಂದನದ ಸುಗಂಧಗಳಿಂದ ಪೂರ್ಣವಾದ ವಾಯುವು ಹೊರಗೆಲ್ಲಾ ಬೀಸುತ್ತಿರುವುದು. ಆ ಉದ್ಯಾನದಲ್ಲಿ ಬಾಳೆ, ಸಂಪಿಗೆ, ನಿಂಬೆ, ಹಿಂತಾಲ, ಮಾವು, ಮತ್ತಿ ಮುಂತಾದ ಮರಗಳು ದಟ್ಟವಾಗಿ ಬೆಳೆದಿರುವುವು. ಅಲ್ಲಿ ವೇದಶಾಸ್ತ್ರಗಳಲ್ಲಿ ದೊಡ್ಡ ವಾದಗಳು ಆಗಾಗ ನಡೆಯುತ್ತಿರುವುವು. ಹೋಮಕುಂಡದ ಬೆಂಕಿಯ ಹೊಗೆಗಳು ಧಾರಾಕಾರವಾಗಿ ಅಭಿವೃದ್ಧಿ ಹೊಂದುತ್ತಿರುವುವು. ॥೧೨-೧೩॥

ಆವಿರ್ಭವದ್ವಾರ್ಷಿಕಾದ್ಯಾಗ್ರಾಮಾ ಸಂಗ್ರಾಮವರ್ಜಿತಾಃ ।
ಯತ್ರ ದ್ವಿಜಾತ್ಮಜಾ ಭೂತ್ವಾ ದೇವೀ ವಲ್ಯಾಹ್ವಯೇ ಪುರೇ ॥೧೪॥

ತಪಸಿ ಸ್ಥಿತವತ್ಯಸ್ತಿ ದೈತ್ಯಸಂರಕ್ಷಣಾದುಮಾ ।
ವಹ್ನಿರೂಪಂ ಶಿವಂ ಶಾಂತಂ ಕ್ರೌರ್ಯಂ ಚಕ್ರೇ ದಯಾನಿಧಿಃ ॥೧೫॥

ಶೌರಿಲಾಭಾಹ್ವಯೇ ಶಂಭೋರ್ಯತ್ರ ಧಾಮುಚ ಸಂಮತಂ ।
ಯತ್ರ ಮುಕ್ತಾಮಯಾಕಾರೋ ಶ್ರೀಪಾಶಪುರಶಂಕರಃ ॥೧೬॥

ಜಗತ್ಪ್ರಸೂತೇರ್ಯಸ್ಯಾಸೀಜ್ಜನನೀ ವೇಪ್ಯುವಲ್ಲರೀ ।
ಯತ್ರಾಧಿಪುರಮೇಕಾಂತಂ ಉಮಾಕಾಂತಸ್ಯ ಸಂಮತಂ ॥೧೭॥

ಮಯೂರಪುರವಾಲ್ಮೀಕಿಪುರಮಲ್ಲಪುರಾಣಿ ಚ ।
ತುಂಡೀರಮಂಡಲೇ ತಸ್ಮಿನ್ವರ್ಣನಾಶಕ್ಯವೈಭವೇ ॥೧೮॥

---

ಆ ಊರಿನ ಗ್ರಾಮಗಳಲ್ಲಿ ವಾರ್ಷಿಕಹಬ್ಬಗಳೇ ಮೊದಲಾದವುಗಳು ಸಾಂಗವಾಗಿ ನೆರವೇರುತ್ತಾ, ಯುದ್ಧ, ಕದನಗಳಿಲ್ಲದೇ ಶಾಂತವಾಗಿರುವುವು. 'ವಲ್ಲಿಗ್ರಾಮ'ದಲ್ಲಿ ಉಮಾದೇವಿಯು ಬ್ರಾಹ್ಮಣಕುಮಾರಿಯಾಗಿ ತಪಸ್ಸುಮಾಡುತ್ತಾ ಇರುವಳು. ಇಲ್ಲಿಯೇ ಉಮಾದೇವಿಯು ದುಷ್ಟರಾಕ್ಷಸರಿಂದ ಪ್ರಪಂಚವನ್ನೆಲ್ಲಾ ಕಾಪಾಡುವುದಕ್ಕಾಗಿ, ಅಗ್ನಿರೂಪನೂ ಕ್ರೌರ್ಯಗುಣವುಳ್ಳವನೂ ಆಗಿ ಮನ್ಮಥನನ್ನು ಸುಟ್ಟಿದ್ದ ಶಿವನನ್ನು ದಯಾನಿಧಿಯಾದ ತಾನು ಶಾಂತಗೊಳಿಸಿದಳು. ॥೧೪-೧೫॥

ಶೌರಿಲಾಭವೆಂಬ ಹೆಸರಿನ ಒಂದು ಗ್ರಾಮದಲ್ಲಿ ಶಂಭುವಿನ ಸ್ಥಾನವು ಪ್ರಖ್ಯಾತವಾಗಿದೆ. ಶ್ರೀಪಾಶಪುರಶಂಕರನು ಅಲ್ಲಿ ಮುತ್ತಿನ ಆಕೃತಿಯಲ್ಲಿರುವನು. ಅಲ್ಲಿಯೇ ಜಗಜ್ಜನನಿಯಾದ ಪಾರ್ವತಿಯು 'ವೇಪ್ಯುವಲ್ಲರೀ' ಎಂಬ ಹೆಸರಿನಿಂದ ಪ್ರಖ್ಯಾತಳಾಗಿರುವಳು. ಆಧಿಪುರವೆಂಬುದು ಉಮಾರಮಣನಾದ ಶಿವನಿಗೆ ಏಕಾಂತವಾಸಕ್ಕೆ ಸಮ್ಮತವಾದಸ್ಥಳವೆಂದು ಪರಿಗಣಿಸಲ್ಪಟ್ಟಿದೆ. ॥೧೬-೧೭॥

ವರ್ಣಿಸಲು ಅಸಾಧ್ಯವಾಗಿರುವ ವೈಭವವುಳ್ಳ ಆ ತುಂಡೀರರಾಷ್ಟ್ರದಲ್ಲಿ ಮಯೂರಪುರ, ವಾಲ್ಮೀಕಪುರ, ಮಲ್ಲಪುರಗಳೆಂಬ ಪಟ್ಟಣಗಳಿರುವುವು. ಎಲ್ಲ ಕ್ಷೇತ್ರಗಳಿಗಿಂತಲೂ ಪ್ರಸಿದ್ಧವೂ ಸರ್ವಯುಗಗಳಲ್ಲಿಯೂ ಶ್ರೇಷ್ಠವೂ ಎನಿಸಿರುವ

ಅಸ್ತಿ ಸರ್ವಯುಗೋತ್ಕೃಷ್ಟಾ ಪುರೀ ಕಾಂಚೀತಿ ವಿಶ್ರುತಾ ।
ಸಸ್ಯಾವೃತಕ್ಷೇತ್ರಯುತಾ ಸರ್ವಲೋಕಾಭಿನಂದಿತಾ ॥೧೯॥

ಪ್ರತ್ಯಕ್ಷಯತ್ತದಾಶ್ಚರ್ಯಪ್ರಭಾವಾಯ ಪ್ರಕಾಶತೇ ।
ಆತ್ಮೀಯಂ ನಾಯಕಂ ಯತ್ರ ದಯಾಸಾರಕುಚಾಶ್ರಯೈಃ ॥೨೦॥

ಉಪಚಾರೈಃ ಸಮಾನರ್ಚ್ಯ ತೈಸ್ತ್ರೈಶ್ಶ್ರುತಿಸಮೀರಿತೈಃ ।
ರರಕ್ಷ ರಾಕ್ಷಸತ್ರಸ್ತಾಂ ಧರಿತ್ರೀಂ ಧರ್ಮಗೋಪನೈಃ ॥೨೧॥

ಯಥಾಮತಿ ಪುರಸ್ಯಾಸ್ಯ ಮಾಹಾತ್ಮ್ಯಮಪಿ ವರ್ಣ್ಯತೇ ।
ತಂ ಚ ಗಂಗಾಜಟಾಜೂಟಂ ಕೈಲಾಸನಿಲಯಂ ಪುರಾ ॥೨೨॥

ನತ್ವಾ ನಾಥಮುಮಾ ಧರ್ಮಾನಶೃಣೋಲ್ಲೋಕನಾಯಿಕಾ ।
ಸರ್ವಧರ್ಮಾತ್ಪ್ರಿಯಂ ತಸ್ಮಾತ್ತಸ್ಯ ಲಿಂಗಸಮರ್ಚನಂ ॥೨೩॥

---

ಕಾಂಚೀ ಪಟ್ಟಣವು ಸಸ್ಯಪೂರ್ಣವಾದ ಕ್ಷೇತ್ರಗಳಿಂದ ಶೋಭಿಸುತ್ತಾ ಸಕಲ ಜನಗಳಿಂದಲೂ ಸರ್ವದಾ ಅಭಿನಂದನೀಯವಾಗಿದೆ. ॥೧೮-೧೯॥

ದೇವಿಯು ಕಾಂಚಿಯಲ್ಲಿ ಆಶ್ಚರ್ಯಕರವಾದ ಮಹಿಮೆಯುಳ್ಳ ತನ್ನ ದಯಾಸಾರಭೂಯಿಷ್ಠವಾದ ಸ್ತನಗಳಿಂದ ತನ್ನ ಪ್ರಿಯನನ್ನು ಪ್ರತ್ಯಕ್ಷಮಾಡಿಕೊಂಡಳು. ಆಯಾ ವೇದೋಕ್ತವಾದ ಉಪಚಾರಗಳಿಂದ ಮಹೇಶನನ್ನು ಪೂಜಿಸಿ ರಾಕ್ಷಸರಿಂದ ಭಯಗೊಂಡಿದ್ದ ಆ ಭೂಮಿಯಲ್ಲಿ ಧರ್ಮರಕ್ಷಣೆಮಾಡಿ ಅದನ್ನು ಕಾಪಾಡಿದಳು. ॥೨೦-೨೧॥

ಅಯ್ಯ ಜೈಗಿಷವ್ಯನೇ! ನನಗೆ ತಿಳಿದಷ್ಟುಮಟ್ಟಿಗೆ ಈ ಪಟ್ಟಣದ ಮಹಿಮೆಯನ್ನೂ ವರ್ಣಿಸುವೆನು. ಜಗಜ್ಜನನಿಯಾದ ಉಮಾದೇವಿಯು ಗಂಗೆಯನ್ನು ಜಡೆಯಲ್ಲಿ ಧರಿಸಿರುವ ಕೈಲಾಸವಾಸಿಯಾದ ತನ್ನ ಗಂಡನಿಗೆ ನಮಸ್ಕರಿಸಿ ಹಿಂದೆ ಸಕಲಧರ್ಮಸ್ವರೂಪವನ್ನೂ ಕೇಳಿದಳು. ಆ ಸಮಯದಲ್ಲಿ ಸಕಲಧರ್ಮಗಳಿಗಿಂತಲೂ ಆ ತನ್ನ ಪತಿಯ ಲಿಂಗಪೂಜೆಯೇ ಪ್ರಿಯಕರವಾದ ಧರ್ಮವೆಂದು ಅವಳಿಗೆ ಗೊತ್ತಾಯಿತು. ॥೨೨-೨೩॥

ತಾಮರ್ಚನೋನ್ಮುಖೀಂ ಕಿಂ ತೇ ಪೂಜಯೇತ್ಯಾಹಶಂಕರಃ ।
ಸ್ಮೇರಾನನಂ ತದಾರಮ್ಯಾ ದೇವೀ ಪ್ರಾಹ ತದರ್ಚನಂ ॥೨೪॥

॥ ದೇವ್ಯುವಾಚ ॥

ಕರ್ತುಂ ಕಾಮಯತೇ ಚೇತಸ್ತ್ವದುಕ್ತಾಗಮವರ್ತ್ಮನಾ ।

॥ ಈಶ್ವರ ಉವಾಚ ॥

ದೇವಿ ದಕ್ಷಿಣದಿಗ್ಭಾಗೇ ಕಾಂಚ್ಯಾಂ ಧರ್ಮೈಕಧಾಮನಿ ॥೨೫॥

ಏಕಾಮ್ರಧಾಮನಿಲಯಂ ಮಾಮರ್ಚಯ ಮಹೇಶ್ವರಿ ।
ಇತ್ಯಾದಿಶನ್ಮಹಾದೇವೋ ಮಹೇಶಾನೀಂ ದಯಾನಿಧಿಃ ॥೨೬॥

ದಧೌ ಮನಸ್ತಥಾ ಸಂವಿತ್ಸಾ ಚ ಶಂಭೋಸ್ತಥಾತ್ಮನಃ ।
ತತಶ್ಚ ಚತುರಾಶೀತಿಲಕ್ಷಜೀವಾತ್ಮನಃ ಪ್ರಭೋಃ ॥೨೭॥

---

ಹಾಗೆ ಲಿಂಗಪೂಜೆಯಲ್ಲಿ ಆಸಕ್ತಳಾಗಿ ಕುಳಿತಿದ್ದ ಪಾರ್ವತಿಯನ್ನು ಕುರಿತು ಶಂಕರನು ದೇವಿ! ನಿನಗೆ ಈ ಪೂಜೆಯಿಂದ ಏನು ಪ್ರಯೋಜನವೆಂದು ಪ್ರಶ್ನಿಸಲು, ಮಂದಹಾಸಯುಕ್ತ ಮುಖವುಳ್ಳ ಮಹೇಶನಿಗೆ ಮನೋಹರಳಾದ ದೇವಿಯು ತನ್ನ ಪೂಜೆಯ ಪ್ರಯೋಜನವನ್ನು ಹೀಗೆ ಹೇಳಿದಳು. ॥೨೪॥

ಪ್ರಭೋ! ನೀನು ಹೇಳಿದ ಆಗಮಮಾರ್ಗವನ್ನು ಅನುಸರಿಸಿ ಪೂಜೆ ಮಾಡಬೇಕೆಂದು ಮನಸ್ಸು ಪ್ರವರ್ತಿಸುತ್ತಿರುವುದರಿಂದ ಹೀಗೆ ಪೂಜೆಮಾಡುತ್ತಿರುವೆ ನೆಂದು ಪಾರ್ವತಿಯು ಹೇಳಲು, ಆಗ ಶಿವನು, ದೇವಿ! ಕಾಂಚೀಪಟ್ಟಣದ ದಕ್ಷಿಣ ದಿಕ್ಕಿನಲ್ಲಿ ಧರ್ಮಕ್ಕೆ ಮುಖ್ಯ ನೆಲೆಯಾದ ಏಕಾಮ್ರೇಶ್ವರ ನಿಲಯವಿರುವುದು. ಮಹೇಶ್ವರಿ! ಅಲ್ಲಿ ನನ್ನನ್ನು ಪೂಜೆಮಾಡೆಂದು ದಯಾನಿಧಿಯಾದ ಮಹೇಶನು ಲೋಕಮಾತೆಗೆ ಅಪ್ಪಣೆಮಾಡಿದನು. ॥೨೫-೨೬॥

ಆಗ ದೇವಿಯು ಹಾಗೆಯೇ ಆಗಲೆಂದು ತನ್ನ ಮನಸ್ಸನ್ನು ದೃಢಮಾಡಿ ಆ ಮಹೇಶ್ವರನ ಅಪ್ಪಣೆಯನ್ನೂ ಪಾಲಿಸಿದಳು. ಆನಂತರ ಎಂಬತ್ತುನಾಲ್ಕು (೮೪) ಲಕ್ಷ ವಿಧ ಜೀವರಾಶಿಗಳಿಗೆ ಪ್ರಭುವಾದ ಮಹಾದೇವನ ಬಾಯಿಂದ ಹೇಳಲ್ಪಟ್ಟ

ಮುಖೇನ ಕಥಿತಂ ತತ್ರ ವೇದಮಾರ್ಗಂ ವಿವೃಣ್ವತಿ ।
ಆತ್ಮನಾಯಕಮಾನಮ್ಯ ಸಾಂಜಲಿಃ ಸಾಥ ನಿರ್ಯಯೌ ॥೨೮॥

ಪರ್ವತೇಂದ್ರಶ್ಚ ತಾಂ ಪ್ರಾಪ್ಯ ತಸ್ಯೈ ಪರಿಜನಂ ದದೌ ।
ಕಾಂಚೀಂ ಸಾ ಚ ಯಯೌ ದೇವಸಿದ್ಧವಿದ್ಯಾಧರಸ್ತುತಾಂ ॥೨೯॥

ಪದ್ಮನಾಭಮುಣಿಂ ತತ್ರ ಪ್ರಣಮ್ಯೈನಾಮುವಾಚ ಹ ॥೩೦॥

॥ ಹರಿರುವಾಚ ॥

ದೇವೀ ಭೂತಲಮೇತನ್ಮೇ ಭವತ್ವಾ ಭವನಂ ಶುಭಂ ।
ಭವತ್ವಿತಿ ತದಾ ತಸ್ಯ ವಾಕ್ಯಂ ಚೈವಾನ್ವಮನ್ಯತ ॥೩೧॥

ಸರ್ವಸ್ಯ ಪ್ರಾಣಿಜಾತಸ್ಯ ದೇವೀ ತತ್ರ ವಿಭೂತಯೇ ।
ಚಂದ್ರಶೇಖರಮಾನರ್ಚ್ಯ ಕೃಪಾಗರ್ಭಮನಾ ಸತೀ ॥೩೨॥

ಸಿದ್ಧಃ ಸನ್ನಪಿ ಸರ್ವತ್ರ ಸ್ವೈರಕ್ರೀಡಃ ಪರಃ ಶಿವಃ ।
ತಸ್ಯೈ ಚಾತ್ಮಾಸಮುದ್ವಂದ್ವಂ ಜಗನ್ಮೂರ್ತಿರದರ್ಶಯತ್ ॥೩೩॥

---

ವೇದಮಾರ್ಗವನ್ನು ಅಲ್ಲಿ ಚಿಂತಿಸುತ್ತಾ ತನ್ನ ಸ್ವಾಮಿಗೆ ಕೈಮುಗಿದು ನಮಸ್ಕರಿಸಿ ದೇವಿಯು ಅಲ್ಲಿಂದ ಹೊರಟಳು. ॥೨೭-೨೮॥

ಪರ್ವತರಾಜನೂ ಆ ದೇವಿಯನ್ನು ಹಿಂಬಾಲಿಸಿ ಅವಳ ಸೇವೆಗೆ ಸೇವಕರನ್ನು ಕೊಟ್ಟನು. ಆಮೇಲೆ ಪಾರ್ವತಿಯು ದೇವತೆಗಳು, ಸಿದ್ಧರು ಮತ್ತು ವಿದ್ಯಾಧರರಿಂದ ಸ್ತೋತ್ರಮಾಡಲ್ಪಟ್ಟಿರುವ ಕಾಂಚೀಪಟ್ಟಣಕ್ಕೆ ಹೋದಳು. ಅಲ್ಲಿ ವಿಷ್ಣುವು ಪಾರ್ವತಿಗೆ ಪ್ರಣಾಮಮಾಡಿ, ॥೨೯-೩೦॥

ದೇವಿ! ನಿನ್ನಿಂದ ಈ ಭೂಮಂಡಲವು ನನಗೆ ಮಂಗಳಗೃಹವಾಗಲೆಂದು ವಿಷ್ಣುವು ಪ್ರಾರ್ಥಿಸಲು, ಆಗ ಆ ಮಾತನ್ನು ಕೇಳಿ ಹಾಗೆಯೇ ಆಗಲೆಂದು ದೇವಿಯು ಅನುಮೋದಿಸಿದಳು. ಅನಂತರ ಆ ಪಾರ್ವತೀದೇವಿಯು ಸಕಲ ಪ್ರಾಣಿಗಳಿಗೂ ಐಶ್ವರ್ಯವುಂಟಾಗಲೆಂದು (ಸಕಲ ಸಿದ್ಧಿಗಳೂ) ದಯಾಪೂರ್ಣವಾದ ಮನಸ್ಸುಳ್ಳವಳಾಗಿ ಚಂದ್ರಶೇಖರನನ್ನು ಪೂಜಿಸಿದಳು. ॥೩೧-೩೨॥

ಲೀಲಾವಿಹಾರಿಯಾದ ಪರಶಿವನು ಎಲ್ಲೆಡೆಗಳಲ್ಲಿಯೂ ಸಿದ್ಧನಾಗಿದ್ದರೂ ಆ ಪಾರ್ವತಿಗೆ ಮಾತ್ರ ಕಾಂಚಿಯಲ್ಲಿ ತನ್ನ ಅದ್ವಿತೀಯ ಪರಿಪೂರ್ಣಸ್ವರೂಪವನ್ನು

ಕಾಂಕ್ಷಂತೀ ಮನಸಾ ದ್ರಷ್ಟುಂ ಕಾಮಾಕ್ಷೀತ್ಯಪಿ ಸಾ ಶಿವಾ ।
ಪಂಚಾಕ್ಷರಲಸದ್ವಾಣೀ ಪ್ರವೃತ್ತಾತಾಕ್ಕ ತಪಸ್ಯಭೂತ್ ॥೩೪॥

ಸಹೇತಿ ಕಿಂ ತದಾತ್ಮೇಶಶ್ಚೂತಮೂಲೇ ತಯೈಕ್ಷಿ ಸಃ ।
ತಪಃ ಫಲಂ ಸಾ ದೃಷ್ಟ್ವೈವಂ ಜಹೌ ಶೃಂಗಾರಭಾವನಂ ॥೩೫॥

ಶಾಂತಾಶಯಾ ಪ್ರಣಮ್ಯೈನಂ ಬಿಂಬೋಷ್ಠೀ ಲಂಬಕುಂತಲಾ ।
ಇತ್ಥಂ ಮನೋ ದಧೌ ತಸ್ಯಾ ಭಕ್ತಭರ್ತುಃ ಸಮರ್ಚನೇ ॥೩೬॥

ಸಾ ಶಿವಾಗಮಸಾರಜ್ಞಾ ಶಿವಾಭ್ಯರ್ಚನ ಕಾರಣಾತ್ ।
ಪುರಸ್ಕೃತಾ ಪತ್ರಪುಷ್ಪಪಾಣಿಭಿಶ್ಚೇಟಿಕಾಜನೈಃ ॥೩೭॥

ಪಾದಾಭ್ಯಾಂ ಪಲ್ಲವಾಭ್ಯಾಂ ಸಾ ಪ್ರಾಪ್ಯೋದ್ಯಾನಂ ಸ್ವಯಂ ಶಿವಾ ।
ಪುಷ್ಪಾಣಿ ಪೂಜನಾರ್ಹಾಣಿ ತಾನಿ ಹೃದ್ಯಾನ್ಯಪಾಚಿನೋತ್ ॥೩೮॥

---

ಜಗನ್ಮೂರ್ತಿಯಾಗಿ ತೋರಿಸಿದನು. ಕಾಮಾಕ್ಷಿಯೆನಿಸಿದ ಆ ಪಾರ್ವತಿಯು ಮನಸ್ಸಿನಿಂದಲೇ ಆ ಮಹಾದೇವನನ್ನು ನೋಡಲು ಇಚ್ಛಿಸುತ್ತಿರುವಳೋ ಎಂಬಂತೆ ಶಿವಪಂಚಾಕ್ಷರಮಂತ್ರಜಪದಿಂದ ಶೋಭಿಸುವ ದಿವ್ಯವಾಣಿಯುಳ್ಳವಳಾಗಿ ತಪಸ್ಸಿನಲ್ಲಿ ನಿರತಳಾದಳು. ॥೩೩-೩೪॥

ಆ ತಪಃಕ್ಲೇಶವನ್ನು ನೋಡಿ ಪರಮಾತ್ಮನು ಹೇಗೆತಾನೆ ಸಹಿಸುವನು? ಆದ್ದರಿಂದ ಆ ಪರಮೇಶನು ಮಾವಿನಮರದ ಬುಡದಲ್ಲಿ ಸರ್ವಲಕ್ಷಣಪೂರ್ಣವಾಗಿ ಅವಳಿಗೆ ದರ್ಶನವಿತ್ತನು. ಆ ಪಾರ್ವತಿಯೂ ತನ್ನ ತಪಸ್ಸಿನ ಫಲವು ಹೀಗೆ ಶೃಂಗಾರ ಭಾವನೆಯನ್ನು ಪಡೆದದ್ದನ್ನು ಕಂಡು ತಪಸ್ಸಿನಿಂದ ವಿರತಳಾದಳು. ಆಮೇಲೆ ಶಾಂತವಾದ ಅಭಿಪ್ರಾಯವುಳ್ಳವಳೂ, ತೊಂಡೆಯಹಣ್ಣಿನಂತೆ ತುಟಿಯುಳ್ಳವಳೂ, ನೀಳವಾದ ಕೇಶಪಾಶಗಳುಳ್ಳವಳೂ ಆದ ಪಾರ್ವತಿಯು ಸಕಲಭಕ್ತರಿಗೂ ಒಡೆಯನಾದ ಮಹೇಶ್ವರನನ್ನು ಸೇವೆಮಾಡುವುದರಲ್ಲಿ ಮನಸ್ಸುಮಾಡಿದಳು. ॥೩೫-೩೬॥

ಶೈವಾಗಮರಹಸ್ಯವನ್ನರಿತ ಆ ಪಾರ್ವತಿಯು ಶಿವನ ಪೂಜಾನಿಮಿತ್ತವಾಗಿ ಪತ್ರೆ, ಹೂಗಳನ್ನು ಕೈಯ್ಯಲ್ಲಿ ಹಿಡಿದಿರುವ ಗೆಳತಿಯರಿಂದ ಕೂಡಿದವಳಾಗಿ ಚಿಗುರಿನಂತಿರುವ ಮೃದುವಾದ ತನ್ನಪಾದಗಳಿಂದಲೇ ಉದ್ಯಾನವನಕ್ಕೆ ಸ್ವತಃ ಹೋಗಿ ಮನೋಹರವೂ ಪೂಜಾಯೋಗ್ಯವೂ ಆಗಿರುವ ಆ ವನದ ಹೂಗಳನ್ನು ತಾನೇ ಕೊಯ್ದು ತಂದಳು. ॥೩೭-೩೮॥

ಅಭಿಷಿಚ್ಯ ಶುಭೈಸ್ತೋಯೈಃ ಕೃಪಾಸರಿದುಪಾಹೃತೈಃ ।
ಸುಗಂಧಿಭಿಶ್ಚಂದನಾದ್ಯೈರುಪಲಿಪ್ಯ ಚ ಚಂದನೈಃ ॥೩೯॥

ಅಲಂಕೃತ್ಯಾಥ ತೈಃ ಪುಷ್ಪೈ ರ್ಧೂಪದೀಪಾದಿಭಿಸ್ತದಾ ।
ಹೃದ್ಯೈರ್ನೈವೇದ್ಯಜಾಲೈಶ್ಚ ಫಲತಾಂಬೂಲಕೈಸ್ತಥಾ ॥೪೦॥

ನೀರಾಜನಾರಾರ್ತಿಕೈಶ್ಚ ಕರ್ಪೂರೋಜ್ವಲದೀಪಕೈಃ ।
ಪ್ರದಕ್ಷಿಣಪ್ರಕ್ರಮಣೈಃಸ್ತುತ್ವಾ ದೇವಮತೋಷಯತ್ ॥೪೧॥

॥ ಪಾರ್ವತ್ಯುವಾಚ ॥

ಶಂಭೋ ರಸಾಲವರಮೂಲಗೃಹೀತಶೂಲ
ವ್ಯಾಲಾಂಗಮಾಲ ಜಿತಕಾಲಲಲಾಮಸೋಮ ।
ಗಂಗಾರಸಾಲರಯಚುಂಬಿಜಟಾಲವಾಲ
ಶ್ರೀಕಂಠಮೂಲ ಭಜತಾಮಘಹಾರಿಶೀಲ ॥೪೨॥

---

ಆ ದೇವಿಯು ಭಕ್ತಿಯಿಂದ ನದಿಗೆಹೋಗಿ ತಂದಿರುವ ಮಂಗಳೋದಕದಿಂದ ಶಿವನಿಗೆ ಅಭಿಷೇಕಮಾಡಿ, ಸುಗಂಧಭರಿತವಾದ ಚಂದನವೇ ಮುಂತಾದವುಗಳನ್ನು ಲೇಪನಮಾಡಿ, ಆ ಹೂಗಳಿಂದ ಅಲಂಕರಿಸಿ, ಧೂಪ, ದೀಪಾದಿಗಳಿಂದಲೂ, ಮನೋಹರವಾದ ನೈವೇದ್ಯರಾಶಿಗಳಿಂದಲೂ, ಹಣ್ಣು, ತಾಂಬೂಲಗಳಿಂದಲೂ ಉಪಚರಿಸಿ, ನೀರಾಜನ, ಆರತಿ, ಕರ್ಪೂರದ ಆರತಿ ಮುಂತಾದವುಗಳನ್ನೆಸಗಿ ಪ್ರದಕ್ಷಿಣನಮಸ್ಕಾರಗಳನ್ನೂ ಕ್ರಮವಾಗಿಮಾಡಿ, ಅನಂತರ ಮಹಾದೇವನನ್ನು ಸ್ತೋತ್ರದಿಂದ ಈ ರೀತಿ ಸಂತೋಷಪಡಿಸಿದಳು. ॥೩೯-೪೦-೪೧॥

ಶ್ರೇಷ್ಠವಾದ ಸಿಹಿಮಾವಿನಮರದ ಬುಡದಲ್ಲಿ ನೆಲಸಿ, ತ್ರಿಶೂಲಪಾಣಿಯಾಗಿರುವ ಶಂಭುವೇ! ಸರ್ಪಹಾರನೂ, ಯಮನನ್ನು ನಿಗ್ರಹಿಸಿದ ಫಾಲನೇತ್ರವುಳ್ಳವನೂ, ಉಮಾರಮಣನೂ, ಗಂಗಾನದಿಯ ಸಾರವತ್ತಾದ ನೀರಿನ ವೇಗದಿಂದ ಸಂಬಂಧಿಸಿರುವ ಜಡೆಗಳುಳ್ಳವನೂ, ಗರಳ ಭಕ್ಷಣದಿಂದ ಕಪ್ಪಾದ ಕೊರಳಬುಡವುಳ್ಳವನೂ, ಭಜಿಸುವವರ ಪಾಪವನ್ನು ಹೋಗಲಾಡಿಸುವ ಸ್ವಭಾವವುಳ್ಳವನೂ ನೀನೆ ಆಗಿರುವೆ. ॥೪೨॥

ಏಕಾಮ್ರಮೂಲನಿಲಯಂ ಭುಜಗಾಧಿರಾಜ
ರಾಜತ್ಕಿರೀಟವಲಯಂ ಸದಯಂ ಸದೈವ ।
ಅತ್ಯಂತಮೇವ ಭಜಮಾನಜನಾಂತರಂಗೇ
ನೃತ್ಯಂತಮಾಶು ಗಿರಿಶಂ ಪರಿಶೀಲಯಾಮಿ ॥೪೩॥

ಏಕಾಮ್ರಮೂಲನಿಲಯಂ ಭಜತಾಮನೇಕ
ಜನ್ಮಾರ್ಜಿತಾಘವಿನಿವಾರಣಕಾರಣಂ ತತ್ ।
ತೇಜಃ ಶ್ರಯಾಮಿ ಶಿವಮದ್ಯ ಶಿವೇತರಾಣಾಂ
ನಿರ್ಣೋದನೈಕನಿರತಂ ವಿರತಂ ಜಗತ್ಯಾಂ ॥೪೪॥

ಏಕಾಮ್ರಮೂಲನಿಲಯಾಯ ದಯಾಲಯಾಯ
ಸಂಸಾರಘೋರವರುಣಾಲಯತಾರಣಾಯ ।
ತಾಪತ್ರಯೋಪಶಮನಾಯ ಸಕೃನ್ನತಾನಾಂ
ಲೋಕತ್ರಯೈಕವಿಭವೇ ತರವೇ ನಮಸ್ಯಾಂ ॥೪೫॥

---

ಒಂಟಿಮಾವಿನ ಮರದ ಬುಡದಲ್ಲಿ ನೆಲಸಿ, ಸರ್ಪರಾಜನಾದ ಆದಿಶೇಷನಿಂದ ಶೋಭಿಸುತ್ತಿರುವ ಕಿರೀಟಮಂಡಲವುಳ್ಳವನೂ, ಭಕ್ತವರ್ಗದವರಲ್ಲಿ ದಯಾಮಯನೂ, ವಿಶೇಷವಾಗಿ ಭಜಿಸುವವರ ಮನಸ್ಸಿನಲ್ಲಿ ನರ್ತನಮಾಡುತ್ತಿರುವವನೂ ಆದ ಮಹೇಶನನ್ನು ಸರ್ವದಾ ನಾನು ಧ್ಯಾನಮಾಡುತ್ತೇನೆ. ॥೪೩॥

ಏಕಾಮ್ರವೃಕ್ಷದ ಬುಡದಲ್ಲಿ ಪ್ರಕಾಶಿಸುವವನೂ, ತನ್ನನ್ನು ಭಜಿಸುವವರ ಅನೇಕ ಜನ್ಮಗಳಲ್ಲಿ ಸಂಪಾದಿಸಿದ ಪಾಪರಾಶಿಯನ್ನು ಹೋಗಲಾಡಿಸುವುದರಲ್ಲಿ ಮೂಲಕಾರಣನೂ, ಮಂಗಳಪ್ರದನೂ, ಅಮಂಗಳಗಳನ್ನು ಹೋಗಲಾಡಿಸುವುದರಲ್ಲಿ ಸಮರ್ಥನೂ, ಈ ಪ್ರಪಂಚದಲ್ಲಿ ವಿರಕ್ತಿಹೊಂದಿರುವವನೂ ಆದ ಪರಶಿವನೆಂಬ ದಿವ್ಯತೇಜಸ್ಸನ್ನು ನಾನು ಆಶ್ರಯಿಸುತ್ತೇನೆ. ॥೪೪॥

ಏಕಾಮ್ರವೃಕ್ಷಮೂಲವಾಸಿಯೂ, ದಯಾನಿಲಯನೂ, ಸಂಸಾರವೆಂಬ ಘೋರಸಮುದ್ರವನ್ನು ದಾಟಿಸುವವನೂ, ಆಧ್ಯಾತ್ಮಿಕ, ಆಧಿಭೌತಿಕ, ಮತ್ತು ಆಧಿದೈವಿಕಗಳೆಂಬ ತಾಪತ್ರಯಗಳನ್ನೂ ಹೋಗಲಾಡಿಸುವವನೂ, ತನಗೆ ಭಕ್ತಿಯಿಂದ ಪ್ರಣಾಮಮಾಡಿದವರಿಗೆ ಮೂರುಲೋಕಗಳನ್ನೂ ಕೊಡುವವನೂ ಆದ ಶಂಭುವಿಗೆ ನಮಸ್ಕಾರಮಾಡುತ್ತೇನೆ. ॥೪೫॥

ಏಕಾಮ್ರಮೂಲನಿಲಯಾದಿನವೀತಿಹೋತ್ರ
ಸೋಮಾಂಬಕಾದಖಿಲಪೂರ್ವಸುರಾಂತಕರ್ತುಃ ।
ಮನ್ಯೇ ಶಿವಾನ್ಯದಿಹ ದೈವತಮಾದಿಮಧ್ಯ
ಜಗತೋ ನಾಶಂಕರಾಚ್ಛಂಕರಾತ್(?) ॥೪೬॥

॥ ಸೂತ ಉವಾಚ ॥

ಜಗನ್ಮಾತಾ ಪತಿಂ ಸ್ತುತ್ವಾ ಕಾಲೇ ಕಾಲೇಽಂತಕಾಂತಕಂ ।
ನಾಯಕೇ ಚೂತಮೂಲಸ್ಥೇ ಗಾಢಪ್ರೇಮಾ ಜಗದ್ಧಿ್ರಯೋ ॥೪೭॥

ಪಾಣ್ಯೋರಿದಂ ಫಲಮಿತಿ ಶಿವಮಾನರ್ಚ್ಯ ತಾನ್ವಹಂ ।
ಇತ್ಯರ್ಚಿತೋ ಬಹುಪ್ರೇಮ್ಣಾ ಕೃಪಾಂ ಕರ್ತುಂ ತದೇಶ್ವರಃ ॥೪೮॥

ಸಪ್ತಾರ್ಣವಾಮಿವೋತ್ಕೂಲಾಂಭೋಘ್ಯೈಃ ಕಂಪಾನದೀಭರೈಃ ।
ದೃಷ್ಟ್ವಾ ಸ್ವಪತಿನಾ ಹೃಷ್ಟಾ ತದೋಘಂ ಕಾಮಲೋಚನಾ ॥೪೯॥

---

ಏಕಾಮ್ರವೃಕ್ಷಮೂಲವಾಸಿಯೂ, ಸೂರ್ಯ, ಅಗ್ನಿ ಮತ್ತು ಚಂದ್ರರೆಂಬ ಮೂರುಕಣ್ಣುಗಳುಳ್ಳವನೂ, ಅಪೂರ್ವರಾದ ರಾಕ್ಷಸರನ್ನು ಸಂಹಾರಮಾಡುವವನೂ, ಪ್ರಪಂಚದ ಸೃಷ್ಟಿ, ಸ್ಥಿತಿ, ಸಂಹಾರಗಳನ್ನು ನಡೆಸುವವನೂ ಆದ ಜಗನ್ಮಂಗಳ ಕರನಾದ ಶಿವನಿಗಿಂತಲೂ ಲೋಕದಲ್ಲಿ ಅತಿರಿಕ್ತವಾದ ಯಾವ ದೇವರನ್ನೂ ನಾನು ತಿಳಿಯಲಾರೆನು (ಸಕಲ ಪ್ರಪಂಚವೂ ತನ್ಮಯವೆಂದೂ, ಅವನೇ ಆರಾಧ್ಯದೈವ ವೆಂದೂ ಭಾವಿಸುವೆನೆಂದು ತಾತ್ಪರ್ಯವು.) ॥೪೬॥

ಜಗದಂಬಿಕೆಯು ಸಕಾಲದಲ್ಲಿ ಯಮಾಂತಕನಾದ ತನ್ನ ಪತಿಯನ್ನು ಹೀಗೆ ಸ್ತೋತ್ರಮಾಡಿ, ಮಾವಿನಮರದ ಬುಡದಲ್ಲಿನೆಲಸಿರುವ ತನ್ನ ಪ್ರಿಯನಲ್ಲಿ ಗಾಢವಾದ ಪ್ರೇಮವನ್ನು ಹೊಂದಿದಳು. ಈ ಕೈಗಳಿಗೆ ಇದೇ ಸರಿಯಾದ ಫಲಕಾರಿಯಾದ ಕರ್ಮವೆಂದರಿತು, ಪ್ರತಿದಿನವೂ ಶಿವನನ್ನೇ ಪೂಜಿಸುತ್ತಾ, ಆ ಪಾರ್ವತಿಯು ವಿಶೇಷ ಪ್ರೇಮದಿಂದ ಆರಾಧಿಸಿದಳು. ಆಗ ಈಶ್ವರನು ಅತಿಶಯವಾದ ಈ ತನ್ನ ಪ್ರೇಯಸಿಯ ಪ್ರೇಮದಿಂದ ಸಂತುಷ್ಟನಾಗಿ ಅವಳಲ್ಲಿ ತನ್ನ ನೈಜವಿಶ್ವಾಸವನ್ನು ಬೀರಿದರು. ॥೪೭-೪೮॥

ಒಂದು ಸಾರಿ ಸಪ್ತಸಮುದ್ರಗಳೋ ಎಂಬಂತೆ ದಡವನ್ನು ಮೀರಿ ಬರುತ್ತಿರುವ ಕಂಪಾನದೀ ನೀರಿನ ಪ್ರವಾಹವನ್ನು ಕಂಡು ದೇವಿಯು, ತನ್ನ ಪತಿಯೊಡನೆ

ಅನೇನಾತ್ಯಾಹಿಕಂ ಶಂಭೋಃ ಸ್ಯಾದಿತಿ ವ್ಯಥಿತಾಽಭವತ್ ।
ಕರಾಭ್ಯಾಂ ಲಿಂಗಮಾಲಿಂಗ್ಯ ತಟಿನೀತಟವಿಪ್ಲವೇ ॥೫೦॥

ಬ್ರುವಂತೀ ನಾಥ ನಾಥೇತಿ ಮನ್ಮಥಾಂತಕಮೀಶ್ವರೀ ।
ಕೂಲೇ ಕಂಪಾತರಂಗಿಣ್ಯಾ ಮೂಲೇ ಚೂತಮಹೀರುಹೇ ॥೫೧॥

ದುಕೂಲಸಂವೃತಾಂಗೀ ಸಾ ಮೂಲಲಿಂಗಂ ಪರಿಷ್ವಜೇ ।
ಕಾಮಾಕ್ಷೀ ತತ್ರ ಕಾಮಾರಿಂ ಚಕಾರ ಕುಚಮುದ್ರಿತಂ ॥೫೨॥

ಶಿವಾಕುಚಾಭ್ಯಾಮಾಶ್ಲಿಷ್ಟೋ ಗಾಢಂ ದೃಢತರೋ ಮೃಡಃ ।
ಕಂಪಾಶಂಪಾಭವೇಗೇನ ಕ್ವಣತ್ಕಂಕಣಹಸ್ತಯಾ ॥೫೩॥

ಸ್ಥಾಣುರ್ಮೃದುಲತಾಂ ಪ್ರಾಪ್ಯ ಶಿವಃ ಸ್ಮೇರಮುಖಶ್ರಿಯಾ ।
ಕರೀಂದ್ರಚರ್ಮವಸನಕರ್ಕಶಾಂಗೋಽಪಿ ಕಾಮಜಿತ್ ॥೫೪॥

---

ಸಂತೋಷದಿಂದಿದ್ದ ಆ ಕಾಲದಲ್ಲಿ ಕಂಪಾನದಿಯ ಪ್ರವಾಹದಿಂದ ಪತಿಗೆ ತೊಂದರೆ ಒದಗಬಹುದು ಎಂದು ವ್ಯಥೆಗೊಂಡವಳಾಗಿ ತನ್ನ ಎರಡು ಕೈಗಳಿಂದಲೂ ನದಿಯ ದಡದಲ್ಲಿದ್ದ ಶಿವಲಿಂಗವನ್ನು ಬಿಗಿಯಾಗಿ ಆಲಿಂಗಿಸಿಕೊಂಡಳು. ॥೪೯-೫೦॥

ಜಗದೀಶ್ವರಿಯು ಮನ್ಮಥರಿಪುವಾದ ಮಹಾದೇವನನ್ನುದ್ದೇಶಿಸಿ, ಸ್ವಾಮಿ! ಸ್ವಾಮಿ! ಎಂದು ಕೂಗುತ್ತಾ ಕಂಪಾನದಿಯ ದಡದಲ್ಲಿರುವ ಮಾವಿನ ಮರದಡಿಯಲ್ಲಿ ಪರಶಿವನ ಮೂಲಲಿಂಗವನ್ನು, ರೇಷ್ಮೆಯ ವಸ್ತ್ರಗಳಿಂದ ಅಲಂಕೃತಳಾದ ಆ ದೇವಿಯು ಆಲಂಗಿಸಿಕೊಂಡಳು. ಆಗಲೇ ಕಾಮಾಕ್ಷೀದೇವಿಯು ಮನ್ಮಥಾಂತಕನಾದ ಮಹೇಶನಿಗೆ ತನ್ನ ಸ್ತನಮುದ್ರೆಯನ್ನು ಗುರುತುಮಾಡಿದಳು. ॥೫೧-೫೨॥

ಪಾರ್ವತಿಯ ಸ್ತನಗಳಿಂದ ಬಿಗಿಯಾಗಿ ಆಲಿಂಗನಮಾಡಲ್ಪಟ್ಟ ಆ ಶಿವನು ಕಂಪಾನದಿಯ ವೇಗದಿಂದಲೂ, ಧ್ವನಿಮಾಡುತ್ತಿರುವ ದೇವಿಯ ಕಂಕಣದ ನಾದದಿಂದಲೂ, ಲಿಂಗರೂಪಿಯಾಗಿ ಕಠಿಣನಾಗಿದ್ದರೂ ಮಾರ್ದವಸ್ವಭಾವವನ್ನು ಪಡೆದನು. ಮಂದಹಾಸಯುಕ್ತವಾದ ಮುಖಕಾಂತಿಯಿಂದ ಗಜಚರ್ಮಧಾರಿಯಾಗಿ ಕಠಿಣಾಂಗನೂ, ಮನ್ಮಥನನ್ನು ಗೆದ್ದವನೂ, ಅಷ್ಟಮೂರ್ತಿಯೂ ಆದ ಶಂಕರನು ಆ ದೇವಿಯಿಂದ ಆಲಿಂಗನೆಮಾಡಿದ್ದಂತೆಯೇ ದೇವಿಗೆ ಪ್ರತ್ಯಕ್ಷವಾದನು. ॥೫೩-೫೪॥

ಪ್ರಾದುರಾಸೀಚ್ಛಿವಾಶ್ಲಿಷ್ಟಃ ಶಿಪಿವಿಷ್ಟೋಽಷ್ಟಮೂರ್ತಿಮಾನ್ ।
ದಿವ್ಯಾಂ ದೇವದಯಾಂ ದೃಷ್ಟ್ವಾ ಪರಿರಂಭಣಸಂಭವಾಂ ॥೫೫॥

ನವೀನಪಾಣಿಗ್ರಹಣಂ ಶಂಗಂ ಸಂಗಂ ಚ ಶಾಂಕರೀ ।
ದೇವ್ಯೈಃ ಪ್ರಹರ್ಷಿತೋ ದೃಷ್ಟೋ ಪುಷ್ಪೋತ್ಕೀರ್ಣೋಽರುವರ್ಷತಃ ॥೫೬॥

ಅಂತರ್ಹೃತಾಶಯಾಃ ಸರ್ವಾ ಜಪ್ಯಷು ಜೀವಕೋಟಯಃ ।
ವರ್ಷತ್ಸು ದೇವಪುಷ್ಪೇಷು ನೇದುರ್ದುಂದುಭಿಕೋಟಯಃ ॥೫೭॥

ಕಂಪಾನದೀ ನನಾಮ್ಯೈನಾಮಂಬಿಕಾಮನುಕಂಪಿನೀಂ ।
ಮೃದುಲಸ್ವಚ್ಛಸೌಭಾಗ್ಯವರವೇಷಃ ಸದಾಶಿವಃ ॥೫೮॥

ವರಂದೇವಿ ವೃಣೀಷ್ವೇತಿ ಪ್ರಾಹ ದೇವೀ ತದಾಬ್ರವೀತ್ ।
ಪ್ರಾಂಜಲಿಃ ಪಾದಯೋಃ ಶಂಭೋಃ ಪ್ರಣತಾ ಶಾಂಭವೀ ತದಾ ॥೫೯॥

॥ ದೇವ್ಯುವಾಚ ॥

ನಿರುದ್ಧಸರಿದೋಘೇನ ನ ಸಮಾಪ್ತಂ ತ್ವದರ್ಚನಂ ।
ವರ್ತಯಿಷ್ಯಾಮಿ ತದ್ಭೂಯೋ ಮತ್ಪ್ರಿಯಸ್ತ್ವಂ ಪ್ರಸೀದ ಮೇ ॥೬೦॥

---

ಮಹೇಶ್ವರಿಯು ತನ್ನ ಆಲಿಂಗನದಿಂದ ತೋರಿಬಂದ ಮಹೇಶನ ದಯೆಯನ್ನು ಪಡೆದು ಪಾಣಿಗ್ರಹಣರೂಪದಿಂದ ಸುಖಪ್ರದನಾದ ಶಿವನ ಸಂಬಂಧವನ್ನು ಪಡೆದು ಸಂತುಷ್ಟಳಾದಳು. ಆಗ ದೇವತೆಗಳು ಹೂಮಳೆಗರೆದರು. ಆದರಿಂದ ಮಹಾದೇವನು ಸಂತುಷ್ಟನಾಗಿರುವುದನ್ನು ಕಂಡರು. ಸಕಲ ಜೀವರಾಶಿಗಳೂ ತಮ್ಮ ಅಂತರಂಗದಲ್ಲಿ ಸಂಪೂರ್ಣ ಸದಭಿಪ್ರಾಯಗಳುಳ್ಳವರಾಗಿ ಸಂತೋಷಪಟ್ಟವು. ದೇವತೆಗಳೆಲ್ಲರೂ ಪುಷ್ಪವೃಷ್ಟಿಗರೆಯುತ್ತಿರುವಾಗಲೇ ದೇವನಗಾರಿಗಳು ಮೊಳಗಲಾರಂಭಿಸಿದುವು. ॥೫೫-೫೬-೫೭॥

ಆ ರೀತಿ ಶಂಕರನ ದಯಾರ್ಹಳಾದ ಪಾರ್ವತೀದೇವಿಗೆ ಕಂಪಾನದಿಯು ನಮಸ್ಕಾರಮಾಡಿತು. ಮೃದುವೂ, ಶುಭ್ರವೂ ಮಂಗಳಕರವೂ ಆದ ಉತ್ತಮವೇಷವನ್ನು ಧರಿಸಿದ ಸದಾಶಿವನು, "ದೇವಿ, ನಿನಗೆ ಬೇಕಾದ ವರವನ್ನು ಬೇಡೆಂದು" ಕೇಳಲು, ಆಗ ಶಾಂಕರಿಯು ಮಹೇಶನ ಪಾದಗಳಿಗೆ ವಂದಿಸುತ್ತಾ ಕೈಮುಗಿದುಕೊಂಡು ಹೀಗೆ ಪ್ರಾರ್ಥಿಸಿದಳು. ॥೫೮-೫೯॥

"ಸ್ವಾಮಿ, ನದಿಯ ಪ್ರವಾಹವು ಅಡ್ಡಬಂದದ್ದರಿಂದ ನಿನ್ನ ಪೂಜೆಯು

ಅಸ್ಯಾಂ ನಿಃಸೀಮಸಂಪತ್ಯಾಂ ಕಾಂಚೀಪುರ್ಯಾಂ ದಿವಾನಿಶಂ ।
ಕರಿಷ್ಯಾಮ್ಯಖಿಲಾನ್ಧರ್ಮಾನ್ತ್ವತ್ಪಾದಲಸನ್ಮನಾಃ ॥೬೧॥

ಕ್ರಿಯಾವಂತೋಽತ್ರ ಸರ್ವೇ ಸ್ಯುಃ ಫಲೈರ್ಧರ್ಮೈಶ್ಚ ಸಂಯುತಾಃ ।
ಇತಿ ಲೋಕೇಶಮಾತ್ಮೇಶಂ ಯಯಾಚೇ ಶೈಲನಂದಿನೀ ॥೬೨॥

ಭೋಗೀಂದ್ರಭೂಷಣೋ ದೇವೋಽತಸ್ಯೈ ಸ್ವಾರ್ಧಾಂಗಮಾದಧತ್ ।
ಭುವನತ್ರಯಬೀಜಾರ್ಥಂ ಸಿದ್ಧ್ಯರ್ಥಂ ಧರ್ಮಸಂತತೇಃ ॥೬೩॥

ಶಾಲಿಪ್ರಸ್ಥದ್ವಯಂ ದೇವ್ಯೈ ದದುಃ ಸರ್ವೇಽಪಿ ಶಾಂಕರಾಃ ।
ನಿರ್ದೋಷಾಃ ಸ್ಯುಃ ಸುಕರ್ಮಾಣ ಇತಿ ಭೂಯೋ ವರಂ ದದೌ ॥೬೪॥

॥ ಸೂತ ಉವಾಚ ॥

ಲಬ್ಧ್ವಾ ವರಾನ್ಸ ಗಿರಿಶಾದ್ಗಿರೀಂದ್ರಜಾತಾ
ತ್ರಿಲೋಕಸಂರಕ್ಷಣಕಾರಣಾಯ ।

---

ಸಾಂಗವಾಗಿ ನೆರವೇರಲಿಲ್ಲ. ಸರ್ವಾರ್ಥಪ್ರದವಾದ ಆ ಪೂಜೆಯನ್ನು ತಿರುಗಿ ನಾನು ನಡೆಸುತ್ತೇನಾದ್ದರಿಂದ ನನ್ನ ಸ್ವಾಮಿಯಾದ ನೀನು ನನಗೆ ಸದಾ ಪ್ರಸನ್ನನಾಗಬೇಕು; ಅಲ್ಲದೇ ಅಪರಿಮಿತವಾದ ಸಂಪತ್ತುಳ್ಳ ಈ ಕಾಂಚೀಪಟ್ಟಣದಲ್ಲಿಯೇ ನಾನು ಹಗಲಿರುಳೂ ಸಕಲ ಧರ್ಮಕಾರ್ಯಗಳನ್ನೂ ನಡೆಸುತ್ತಾ ಯಾವಾಗಲೂ ನಿನ್ನ ಪಾದ ಧ್ಯಾನದಲ್ಲಿಯೇ ಆಸಕ್ತವಾದ ಮನಸ್ಸುಳ್ಳವಳಾಗಿ ನಿಲ್ಲುವೆನು. ಅದರಿಂದ ಇಲ್ಲಿ ಎಲ್ಲ ಭಕ್ತರೂ ಕ್ರಿಯಾವಂತರಾಗಿ ಸಕಲ ಧರ್ಮಫಲಗಳನ್ನೂ ಪಡೆಯಲಿ,'' ಎಂದು ಪರ್ವತರಾಜ ಕುಮಾರಿಯು ಜಗದೊಡೆಯನಾದ ತನ್ನ ಪತಿಯನ್ನು ಪ್ರಾರ್ಥಿಸಿದಳು. ॥೬೦-೬೧-೬೨॥

ಆಗ ಸರ್ಪಭೂಷಣನಾದ ಮಹಾದೇವನು ಮೂರು ಲೋಕಗಳನ್ನು ಸೃಷ್ಟಿ ಮಾಡುವ ಕಾರಣಕ್ಕಾಗಿಯೂ, ಸಕಲ ಧರ್ಮಸಮೂಹಗಳ ಸಿದ್ಧಿಗಾಗಿಯೂ ತನ್ನ ಅರ್ಧ ದೇಹವನ್ನೇ ಅವಳಿಗೆ ಕೊಟ್ಟುಬಿಟ್ಟನು. ಅಲ್ಲದೇ ಸಕಲ ಶಾಂಭವರೂ ಇಲ್ಲಿ ದೇವಿಗೆ ಎರಡು ಕೊಳಗ ಬತ್ತವನ್ನು ಕೊಟ್ಟು ದೋಷರಹಿತರೂ, ಸತ್ಕರ್ಮಶೀಲರೂ ಆಗಲೆಂದೂ ವರಕೊಟ್ಟನು. ॥೬೩-೬೪॥

ಸೂತರು ಶೌನಕಾದಿಗಳೊಡನೆ ಮುಂದಿನ ಕಥೆಯನ್ನು ಹೀಗೆ ವಿವರಿಸಿದರು: ಹೀಗೆ ದೇವಿಯು ಮಹೇಶ್ವರನಿಂದ ಮೂರು ಲೋಕಗಳನ್ನೂ ಕಾಪಾಡುವುದ

ಶ್ರೀಕಾಮಕೋಷ್ಠೇ ವಿಭವೈಕಧಾಮ್ನಿ
ದ್ವಾತ್ರಿಂಶತಂ ಪಾಲಯತಿ ಸ್ಮ ಧರ್ಮಾನ್ ॥೬೫॥

ಸಂತ್ಯನ್ಯಾನ್ಯದ್ಭುತಾನ್ಯೇವ ದೇವ್ಯಾ ಶ್ರೀಸದನೇ ಶುಭೇ ।
ಅನಿರ್ವಾಣೈಶ್ಚನಮ್ಲಾನೈಃ ಪುಲ್ಲಹಲ್ಲಕಮುಂಡಿಕೈಃ ॥೬೬॥

ಶಾರದಾದೌ ಸ್ಥಾಪಿತೋಽಯಂ ಚಕಾಸ್ತಿ ಶರದಾಂ ಶತಂ ।
ವ್ಯನಕ್ತಿ ದ್ವಿವಿಧಂ ಚಾಪಿ ಲೋಕಾನಾಂ ಭಾವಿಲಕ್ಷಣಂ ॥೬೭॥

ಪ್ರತ್ಯುದ್ದಾಮೇವ ಕಲ್ಹಾರತ್ರಯಮಪ್ಯೇವಮೇವ ತೇ ।
ಇತ್ಯಾಶ್ಚರ್ಯಕರೀ ತತ್ರ ಜಾಗರ್ತಿ ಶಿವನಾಯಿಕಾ ॥೬೮॥

ದುರ್ವಿದಗ್ಧಮಿದಂ ತೀರ್ಥಂ ತೀರ್ಥದೇವಾಭಿರಕ್ಷಿತಂ ।
ಯತ್ರಾಸ್ತೇ ಕಾಮಕೋಷ್ಠಸ್ಯ ದಕ್ಷಿಣೇ ಕಚ್ಛಪೇಶ್ವರಃ ॥೬೯॥

---

ಕ್ಯೋಽಸ್ಮರ ನಾನಾ ವರಗಳನ್ನು ಪಡೆದು ಸಕಲ ವೈಭವಗಳಿಗೂ ಮುಖ್ಯಾಶ್ರಯವಾದ ಶ್ರೀ ಕಾಮಕೋಷ್ಠವೆಂಬ ಸ್ಥಳದಲ್ಲಿ (ಕಾಂಚಿಯಲ್ಲಿ) ಮೂವತ್ತೆರಡು ವಿಧದ ಧರ್ಮಗಳನ್ನೂ ಪರಿಪಾಲಿಸುತ್ತಾ ನಿಂತಿದ್ದಳು. ॥೬೫॥

ಮಂಗಳಕರವಾದ ಶ್ರೀಕಾಮಾಕ್ಷೀದೇವಿಯ ನಿಲಯದಲ್ಲಿ ಇನ್ನೂ ಅನೇಕ ಅದ್ಭುತಕಾರ್ಯಗಳು ಕಾಣುವುವು. ಆಶ್ವಯುಜ ಕಾರ್ತೀಕಮಾಸಗಳಲ್ಲಿ (ಶರದೃತುವಿನಲ್ಲಿ) ದೇವಿಗೆ ಅಲಂಕಾರಮಾಡಿದ್ದ ಅರಳಿದ ಕೆಂದಾವರೆ ಹೂಗಳು ಒಣಗದೇ, ಬಾಡದೇ ನೂರುವರ್ಷಗಳ ವರೆಗೂ ಹಾಗೆಯೇ ಶೋಭಿಸುತ್ತಾ, ಪ್ರಪಂಚಗಳ ಸುಖ ದುಃಖರೂಪವಾದ ಎರಡು ಲಕ್ಷಣಗಳನ್ನೂ ತಿಳಿಸಿ ಅವು ಮುಂದೆ ಆಗುವುವೆಂಬುದನ್ನು ಸೂಚಿಸುತ್ತವೆ. ॥೬೬-೬೭॥

ಹಾಗೆಯೇ ದೇವಿಗೆ ಅಲಂಕಾರಮಾಡಿದ ಮೂರು ಕಣಿಗಲೆ ಹೂಗಳೂ ಮೊದಲಿದ್ದಂತೆಯೇ ಅಲ್ಲಿ ಇರುವುವು. ಈ ರೀತಿ ಅನೇಕರೀತಿಯಲ್ಲಿ ಆ ಶಿವನಾಯಿಕೆಯು (ಕಾಮಾಕ್ಷಿಯು) ಭಕ್ತರಿಗೆ ಅತ್ಯಾಶ್ಚರ್ಯವನ್ನುಂಟುಮಾಡುತ್ತಾ ಅಲ್ಲಿ ಪ್ರತ್ಯಕ್ಷಳಾಗಿರುವಳು. ತೀರ್ಥಾಭಿಮಾನ ದೇವತೆಗಳಿಂದ ರಕ್ಷಿಸಲ್ಪಟ್ಟ ಆ ತೀರ್ಥವಾದರೋ ಅತ್ಯಂತ ಶ್ರೇಷ್ಠವಾದುದು. ಈ ಕಾಮಕೋಷ್ಠಕ್ಷೇತ್ರದ ದಕ್ಷಿಣದಿಕ್ಕಿನಲ್ಲಿ ಮತ್ಸ್ಯೇಶ್ವರಸ್ವಾಮಿಯು ನೆಲಸಿರುವನು. ॥೬೮-೬೯॥

ಮಹೀನಿದರ್ಶನಂ ತೀರ್ಥಮಸ್ತಿ ಲೋಕೈಕವಿಶ್ರುತಂ ।
ಕಾಂಚೀದಾಮಾಯಿತಾಂಭೋಧಿರ್ಭೂಚಕ್ರಾಕಾರಯೋಗತಃ ॥೨೦॥

ರಕ್ಷಂತ್ಯಾ ಸರ್ವಧರ್ಮಾಣಿ ದೇವ್ಯಾ ಶ್ರೀಮಂದಿರೇ ಶುಭೇ ।
ಕಾಮಕೋಷ್ಠೇ ಸದಾ ಹೃಷ್ಟೇ ಪ್ರಾದಕ್ಷಿಣ್ಯಾರ್ಕಚಂದ್ರಕೌ ॥೨೧॥

ಶಶ್ವಚ್ಛಾಯಾವಿಪರ್ಯಾಸಾ ದಿಶಃ ಪ್ರಾಚ್ಯಾದಿಷು ಕ್ರಮಾತ್ ।
ನಿರ್ಣೇತುಂ ನ ಹಿ ಶಕ್ಯಂತೇ ಸರ್ವೈರದ್ಯಾಪಿ ಮಾನವೈಃ ॥೨೨॥

ಕಾಮಾಕ್ಷೀ ರಕ್ಷತೇ ತತ್ರ ಧಾಮ್ನಿ ಕಂಪಾಸರಿತ್ತಟೇ ।
ಕಾಮಿಕಾಂಚೀತರುಚ್ಛಾಯಾ ಸಂಧ್ಯಯೋರವಿಕಾರಿಣೀ ॥೨೩॥

ಯತ್ರ ಕೃತ್ವಾ ತಪೋದೇವೈಃ ಕೃತಕೃತ್ಯೈರ್ಮಹರ್ಷಿಭಿಃ ।
ಸಮರ್ಚಿತಾನ್ಯನೇಕಾನಿ ಶಿವಧಾಮಾನಿ ಸತ್ತಮ ॥೨೪॥

---

ಲೋಕಗಳಲ್ಲೆಲ್ಲಾ ಅತಿ ಪ್ರಖ್ಯಾತವಾದ ಮಹೀನಿದರ್ಶನವೆಂಬ ಒಂದು ತೀರ್ಥವಿರುವುದು. ಆ ತೀರ್ಥವು ಭೂಮಿಗೆ ಒಡ್ಯಾಣದಂತಿರುವ ಸಮುದ್ರದಂತೆ, ಭೂಮಿಯಲ್ಲಿ ಚಕ್ರದ ಆಕಾರದಂತೆ ದುಂಡಾಗಿರುವುದು. ಮಂಗಳಕರವಾದ ಶ್ರೀ ನಿಕೇತನದಲ್ಲಿ ಸಕಲ ಧರ್ಮಗಳನ್ನೂ ಕಾಪಾಡುತ್ತಾ ಕಾಮಕೋಷ್ಠಕ್ಷೇತ್ರದಲ್ಲಿ ಯಾವಾಗಲೂ ಸಂತುಷ್ಟಳಾಗಿ ದೇವಿಯಿರಲು ಸೂರ್ಯಚಂದ್ರರು ಅದನ್ನು ಪ್ರದಕ್ಷಿಣೆ ಮಾಡುತ್ತಿರುವರು. ॥೨೦-೨೧॥

ಅನೇಕವೇಳೆ ನೆರಳಿನ ವ್ಯತ್ಯಾಸದಿಂದ ಪೂರ್ವಪಶ್ಚಿಮಾದಿ ದಿಕ್ಕುಗಳನ್ನು ಅಲ್ಲಿ ಸುಲಭವಾಗಿ ನಿರ್ಣಯಿಸಲು ಈಗಲೂ ಅಲ್ಲಿರುವ ಎಲ್ಲಾ ಮಾನವರಿಂದಲೂ ಸಾಧ್ಯವಾಗುವುದಿಲ್ಲ. ಕಂಪಾನದಿಯ ದಡದಲ್ಲಿರುವ ಕ್ಷೇತ್ರವನ್ನು ಆ ಕಾಮಾಕ್ಷೀ ದೇವಿಯು ರಕ್ಷಣೆಮಾಡುತ್ತಿರುವಳು. ಕಾಮಿಕಾಂಚೀವೃಕ್ಷದ ನೆರಳು ಬೆಳಗ್ಗೆ ಮತ್ತು ಸಾಯಂಕಾಲರೂಪವಾದ ಎರಡು ಸಂಧ್ಯಾಕಾಲಗಳಲ್ಲಿಯೂ ಏನೂ ಬದಲಾವಣೆ ಹೊಂದುವುದಿಲ್ಲ. ॥೨೨-೨೩॥

ಅಯ್ಯ ಸಾಧುವರ್ಯನೇ, ಅಲ್ಲಿ ದೇವತೆಗಳೂ ಮಹರ್ಷಿಗಳೂ ತಪಸ್ಸುಮಾಡಿ ಕೃತಕೃತ್ಯರಾಗಿ ಅನೇಕ ಶಿವಕ್ಷೇತ್ರಗಳನ್ನು ಪೂಜಿಸಿರುವರು. ಧನುಸ್ಸು, ಬಾಣಗಳಿಲ್ಲ

ಶರಾಸನಮುಶಾಲಕ್ಷ್ಯ ಸಾಶ್ಚರ್ಯಂ ತತ್ರ ತಿಷ್ಠತಿ ।
ತಂ ದೃಶ್ಯತೇ ಯೈರ್ಮನುಜೈಸ್ತೇಷಾಮಾಯುರ್ವಿವರ್ಧತೇ ॥೭೩॥

ಪುಣ್ಯಶ್ರಾವಣವಾಂಗಲ್ಯತೀರ್ಥಾನ್ಯನ್ಯಾನಿ ಸಂತಿ ಚ ।
ಏಕನಾಲಾಮ್ರಪದ್ಮಾಚ ಕಾಪಿ ರಕ್ತಸುಪದ್ಮಿನೀ ॥೭೬॥

ಆಶ್ಚರ್ಯಕಾರಿಣೀ ಫುಲ್ಲಪಲ್ಲಕಾರುಣಗಂಧಿಲಾ ।
ಮಜ್ಜತಾಮಘಹಂತ್ರೀ ಸ್ಯಾತ್ಪುಣ್ಯದಾತ್ರೀ ಸಸೌರಭಾ ॥೭೭॥

ಬಿಲಂ ತತ್ರ ಪ್ರವಿಶತಾಂ ಸ್ವರ್ಗಮಾರ್ಗಗತಿಪ್ರದಂ ।
ತತ್ರ ಪಾಲಯತಿ ದ್ವಾರಂ ಪಂಚಹಸ್ತೋ ಗಜಾನನಃ ॥೭೮॥

ಷಡಾನನಃ ಶಕ್ತಿಧರೋ ಬಾಹ್ಯಪ್ರಾಕಾರರಕ್ಷಕಃ ।
ತ್ರಿಶೂಲಪಾಣಿರಂಭೋದನಿಭೋ ಮುಖರನೂಪುರಃ ॥೭೯॥

ನಿಶೀಥೇ ರಕ್ಷತಿ ಚರನ್ಭೈರವೋ ಭೈರವಾರವಃ ।
ಯತ್ರ ಪಶ್ಯತಿ ಭೂತಾನಿ ಪ್ರವಿಷ್ಟಸ್ತಂ ಪುನಃ ಪುರೇ ॥೮೦॥

---

ದಿದ್ದರೂ ಅದರ ಫಲವನ್ನು ಮಾತ್ರ ಆಶ್ಚರ್ಯಕರವಾಗಿ ತೋರ್ಪಡಿಸುವ ಶಿವನ ಲೀಲೆಯನ್ನು ನೋಡುವ ಮಾನವರ ಆಯುಸ್ಸು ಹೆಚ್ಚುತ್ತದೆ. ॥೭೪-೭೩॥

ಪುಣ್ಯಶ್ರವಣಯೋಗ್ಯವಾದ ಇತರ ಮಂಗಳತೀರ್ಥಗಳೂ ಅಲ್ಲಿ ಇರುವುವು. ಒಂಟಿಮರವೆನಿಸಿದ ಮಾವು, ಪದ್ಮ ಇವುಗಳೂ, ಯಾವುದೋ ಒಂದು ಪವಿತ್ರವಾದ ಕೆಂದಾವರೆಯೂ ಆಶ್ಚರ್ಯಕರವಾದ ಆ ಅರಳಿದ ಕೆಂದಾವರೆಯಿಂದ ಸುಗಂಧಭರಿತವಾಗಿಯೂ, ಸ್ನಾನಮಾಡುವರಿಗೆ ಪಾಪನಾಶಕವಾಗಿಯೂ ಪುಣ್ಯಪ್ರದವೆನಿಸಿಯೂ ಇರುವ ಆ ಕ್ಷೇತ್ರವು ಸೌರಭ್ಯಯುಕ್ತವೆನಿಸಿ ಪವಿತ್ರಕ್ಷೇತ್ರವಾಗಿರುವುದು. ॥೭೬-೭೭॥

ಅಲ್ಲಿರುವ ಬಿಲವು (ಗುಹೆಯು) ತನ್ನಲ್ಲಿ ಪ್ರವೇಶಿಸುವವರಿಗೆ ಸ್ವರ್ಗಗಮನ ಮಾರ್ಗವನ್ನುಂಟುಮಾಡುವುದು. ಆ ಬಿಲದ ಬಾಗಿಲನ್ನು ಐದು ಮುಖದ ಗಜವದನನು ರಕ್ಷಣೆ ಮಾಡುತ್ತಿರುವನು. ಶಕ್ತ್ಯಾಯುಧಧಾರಿಯಾದ ಷಣ್ಮುಖನು ಹೊರಗಿನ ಪ್ರಾಕಾರವನ್ನು ರಕ್ಷಿಸುತ್ತಿರುವನು. ತ್ರಿಶೂಲಪಾಣಿಯೂ ಮೇಘಸಮಾನನೂ ಶಬ್ದಮಾಡುತ್ತಿರುವ ಕಾಲ್ಗಡಗಗಳುಳ್ಳವನೂ, ಆದ ॥೭೮-೭೯॥

ಭಯಂಕರಧ್ವನಿಯುಳ್ಳ ಭೈರವನು ರಾತ್ರಿವೇಳೆ ಸಂಚರಿಸುತ್ತಾ ಆ ಪಟ್ಟಣ

ನ ಪಶ್ಯಾಮಿ ಯಥಾಧಾಮ ನ ತದ್ಯತ್ರಾಪಿ ದೃಶ್ಯತೇ ।
ಶಿಲಾ ಕಾಚನ ತತ್ರಾಸ್ತಿ ಮುಕ್ತಿದಾನ್ಯೈಕವರ್ತ್ಮನಿ ॥೮೧॥

ಯತ್ಕಿಂಚಿತ್ಪತಿತಂ ತಸ್ಯಾಂ ವಸ್ತು ತತ್ಕನಕಾಯತೇ ।
ತತ್ರ ಪೀಠಾನಿ ದೇವ್ಯಾಸ್ತು ಸತ್ಯಂಸಂತಿ ಮಹೀತಲೇ ॥೮೨॥

ದೇವೋಽನುಕಂಪಯೇಕಾಮ್ರಮೂಲೇ ತಿಷ್ಠತ್ಯುಮಾರ್ಚಿತಃ ।
ಕದಾಚಿತ್ತತ್ರ ಕಾಲಾಖ್ಯೋ ಚೋಲೇಂದ್ರಸ್ತತ್ರ ಚಾಗತಃ ॥೮೩॥

ಶಿವಕೈಂಕರ್ಯನಿಷ್ಣಾತೋ ನಿಧಿತ್ಸು ಕಾಂಚನಾಚಲಂ ।
ಕಾಂಚೀಮಾಲೋಕ್ಯ ಹೃಷ್ಟಾತ್ಮಾ ಕಾಂಚೀಂ ತಾಂ ಮಣಿಸದ್ಯುತಿಂ ॥೮೪॥

ತಾಂ ಪುರೀಂ ಪ್ರಾಪ್ಯ ಕಾಮಾಕ್ಷೀ ಕಾಮುಕೇಭಕ್ತಿಮಾನಭೂತ್ ।
ಯತ್ರ ವಿಷ್ಣುರ್ಮಹಾದೇವಂ ಸಮಾರಾಧ್ಯಾವಸತ್ಸದಾ ॥೮೫॥

---

ದಲ್ಲಿ ಎಲ್ಲಾ ಪ್ರಾಣಿಗಳನ್ನೂ ನೋಡುತ್ತಿರುತ್ತಾನೆ. ಆ ಪಟ್ಟಣದಲ್ಲಿ ಪ್ರವೇಶ ಮಾಡುವವರೆಲ್ಲರೂ ಅವನಿಗೆ ಕಾಣದೇ ಇರುವುದಿಲ್ಲ. ಆ ಸ್ಥಳಕ್ಕೆ ಸಮಾನವಾದ ಬೇರೊಂದು ಸ್ಥಾನವು ಬೇರೆಲ್ಲಿಯೂ ಕಾಣುವುದಿಲ್ಲ. ಮೋಕ್ಷಪ್ರದವಾದುದರಲ್ಲಿ ಮುಖ್ಯಸ್ಥಾನವಾಗಿರುವ ಆ ಕಾಂಚೀಪಟ್ಟಣದಲ್ಲಿ ಒಂದು ಚಿನ್ನದ ಬಂಡೆಯಿರುವುದು. ೮೦-೮೧॥

ಆ ಬಂಡೆಯ ಮೇಲೆ ಬಿದ್ದ ಯಾವುದೊಂದು ವಸ್ತುವೂ ಚಿನ್ನವಾಗುತ್ತದೆ. ಕಾಮಾಕ್ಷಿದೇವಿಯ ಪೀಠಗಳು ಆ ಭೂಭಾಗದಲ್ಲಿ ಸತ್ಯವಾಗಿ ನೆಲಸಿರುವುವು. ಮಹಾದೇವನು ದಯಾಮಯನಾಗಿ ಆ ಏಕಾಮ್ರಮರದ ಬುಡದಲ್ಲಿ ಉಮಾದೇವಿಯಿಂದ ಪೂಜಿಸಲ್ಪಟ್ಟವನಾಗಿ. ನೆಲಸಿರುವನು. ಒಂದು ಸಲ ಅಲ್ಲಿಗೆ ಕಾಲನೆಂಬ ಹೆಸರಿನ ಚೋಲಭೂಪತಿಯು ಬಂದನು. ॥೮೨-೮೩॥

ಆ ರಾಜನು ಶಿವಪೂಜಾಧುರೀಣನಾಗಿ ನಿಧಿಯನ್ನುಂಟುಮಾಡುವ ಕಾಂಚನ ಶಿಲೆಯನ್ನೂ, ರತ್ನಸಮಪ್ರಭೆಯುಳ್ಳ ಆ ಕಾಂಚೀಪಟ್ಟಣವನ್ನೂ ಕಂಡು ಸಂತುಷ್ಟಾಂತರಂಗನಾಗಿ ಆ ಪಟ್ಟಣದಲ್ಲಿ ಕಾಮಾಕ್ಷೀದೇವಿಯ ಪ್ರಿಯನಿಗೆ (ಶಿವನಲ್ಲಿ) ಭಕ್ತನಾದನು. ಅದೇ ಕಾಂಚಿಯಲ್ಲಿ ವಿಷ್ಣುವು ಮಹಾದೇವನನ್ನು ಪೂಜಿಸಿ ಯಾವಾಗಲೂ ವಾಸಮಾಡುತ್ತಿರುವನು. ॥೮೪-೮೫॥

ತಾಂ ಯೋಜನ ಪ್ರಮಾಣೇನ ದಿಶಾಸು ಚ ಚತಸೃಷು ।
ಆಕರೋತ್ಪರಿಘಾಕಾರಂ ಹರ್ಮ್ಯಪ್ರಾಕಾರಗೋಪುರಂ ॥೮೬॥

ನಾನಾವರ್ಣಜನ್ಯೈಃ ಪೂರ್ಣಾಂ ಕೃತ್ವಾಶ್ಚರ್ಯಕರೀಂ ಪುರೀಂ ।
ತತೋ ದೇವಾಜ್ಞಯಾ ಮೇರೋರ್ನಿದಧೇ ನಿಜಲಾಂಛನಂ ॥೮೭॥

ತತ್ರ ಕಾಂಚೀಪುರೇ ಕಶ್ಚಿದ್ರಜಕಾನ್ವಯಶೇಖರಃ ।
ಶಿವತದ್ಭಕ್ತಪಾದಾಬ್ಜಸೇವನ ಸ್ಥಿರಮಾನಸಃ ॥೮೮॥

ವಿಚಾರಭೃತ್ಯನಾಮಾಃಭೂದ್ಭಕ್ತವಸ್ತ್ರಾಣ್ಯನೇಕಧಾ ।
ನಿರ್ಣೇಜಕಃ ಸದಾಸ್ತ್ರೀಭಿರ್ನೇತರೇಷಾಂ ಕದಾಚನ ॥೮೯॥

ಸ ಭಕ್ತಾನಾಂ ಯದಾ ದೇಶವಾಸಸಾಂಕ್ಷಾಲಕಃ ಸದಾ ।
ಸ್ವೇದಮಾಲಿನ್ಯಜಾತಸ್ಯ ಸ ತದಾ ಸಮುಪಾಕರೋತ್ ॥೯೦॥

ಪರೀಕ್ಷಿತುಂ ಸಮುದ್ಯುಕ್ತೋ ದೇವ್ಯಾ ಭಾವಂ ತಯಾಸ್ಥಿತಃ ।
ಸ ಶಿವೋ ದೇವಭಕ್ತಸ್ಯ ಭಾವಂ ವೇದಿತುಮಾಗತಃ ॥೯೧॥

---

ಆ ಚೋಲರಾಜನು ನಾಲ್ಕು ದಿಕ್ಕುಗಳಲ್ಲಿಯೂ ಯೋಜನ ವಿಸ್ತಾರಪ್ರಮಾಣದಿಂದ ಪರಿಘಾಕಾರವಾದ ಮಹಡಿ, ಪ್ರಾಕಾರ ಮತ್ತು ಗೋಪುರಗಳನ್ನು ಮಾಡಿಸಿದನು. ಬಗೆ ಬಗೆಯ ಜಾತಿಗಳ ಜನಗಳಿಂದ ಪೂರ್ಣವಾದ ಆ ಪಟ್ಟಣವನ್ನು ಆಶ್ಚರ್ಯಕರವನ್ನಾಗಿ ಮಾಡಿ, ಅನಂತರ ಮಹಾದೇವನ ಅಪ್ಪಣೆಯಂತೆ ಮೇರುವಿನಲ್ಲಿ ತನ್ನ ಗುರುತನ್ನು ಇಟ್ಟನು. ॥೮೬-೮೭॥

ಆ ಕಾಂಚೀಪಟ್ಟಣದಲ್ಲಿ ವಿಚಾರಭೃತ್ಯನೆಂಬ ಹೆಸರಿನ ಒಬ್ಬ ಶ್ರೇಷ್ಠ ಅಗಸರ ವಂಶಕುಲತಿಲಕನು ಶಿವ ಮತ್ತು ಶೈವರ ಪಾದಕಮಲಸೇವೆಯಲ್ಲಿ ದೃಢಮನಸ್ಸುಳ್ಳವನಾಗಿ ಯಾವಾಗಲೂ ಆ ಮಹೇಶನ ಭಕ್ತರ ಅನೇಕ ಬಟ್ಟೆಗಳನ್ನು ಹೆಂಗಸರಿಂದ ಒಗೆಸುತ್ತಾ ತಾನು ಇತರ ಯಾರ ವಸ್ತ್ರಗಳನ್ನು ಎಂದಿಗೂ ಸ್ವೀಕರಿಸದೇ ತನ್ನ ಕುಲಕಸಬನ್ನು ಮಾಡಿಕೊಂಡಿದ್ದನು. ॥೮೮-೮೯॥

ಆ ವಿಚಾರಭೃತ್ಯನು ಶೈವರ ಅಪ್ಪಣೆಯಂತೆ ಅವರ ಬಟ್ಟೆಬರೆಗಳನ್ನು ತೆಗೆದುಕೊಂಡು, ಬೆವರು, ಕೊಳೆಗಳಿಂದ ಕೂಡಿದ ಆ ಬಟ್ಟೆಗಳನ್ನು ತೊಳೆದು ಶುಭ್ರ ಮಾಡಿಕೊಡುತ್ತಿರಲು, ಒಂದು ಸಲ ಶಿವನು ದೇವಿಯೊಡನೆ ತನ್ನ ಭಕ್ತನ ಭಾವ

ಕೃಶೋ ಮಲಿನಕಂಥಾಂಕಸ್ಕಂಧಃ ಸಂವೃದ್ಧತಾಪಸಃ ।
ತಂ ತದಾ ಶಿಶಿರೇ ಕಾಲೇ ಪ್ರಪೇದೇ ಪ್ರಸ್ಖಲತ್ಪದಃ ॥೯೨॥

ಸ ದೃಷ್ಟ್ವಾ ಭಸ್ಮದಿಗ್ಧಾಂಗಂ ತಂ ಪ್ರಣಮ್ಯ ಕೃತಾಂಜಲಿಃ ।
ಕುಶಲೋಕ್ತ್ಯಾ ಪ್ರಸಾದ್ಯೈನಂ ರಜಕಃ ಪ್ರಾಹ ಹರ್ಷಿತಃ ॥೯೩॥

॥ ರಜಕ ಉವಾಚ ॥

ನಾಥ ಕಾರ್ಶ್ಯಂ ತವ ಕಥಂ ಕಂಥಾ ಚೇಯಂ ಮಲೀಮಸಾ ।
ದೇಹಿ ಮಾಂ ವಿಮಲಾಂ ಕುರ್ಯಾಮಿತ್ಯುಕ್ತಸ್ತಂ ಸ ಚಾಬ್ರವೀತ್ ॥೯೪॥

॥ ಭಿಕ್ಷುರುವಾಚ ॥

ನಾನ್ಯಾ ಮೇಽಸ್ತಿ ಕುತಃ ಕಂಥಾ ಯಥಾಹಂ ತ್ವಾಂ ಸಮಾಗತಃ ।
ನ ದದಾಮಿ ತ್ವಮದ್ಯೈವ ಧೌತಾಕೃತ್ವಾ ದದಾಸಿ ಚೇತ್ ॥೯೫॥

---

ವನ್ನರಿತು ಅವನನ್ನು ಪರೀಕ್ಷಿಸಬೇಕೆಂದು ತಾನೇ ಭಕ್ತನ ಬಳಿಗೆ ಬಂದನು. ॥೯೦-೯೧॥

ತೆಳ್ಳಗೆ, ಹರಿದು ಕೊಳೆಯಾಗಿರುವ ಬಟ್ಟೆಯನ್ನು ಹೆಗಲಮೇಲೆ ಹಾಕಿಕೊಂಡು ಮುದಿತಪಸ್ವಿಯ ವೇಷದಿಂದ ಆ ಪರಶಿವನು ಚಳಿಗಾಲದಲ್ಲಿ ಮುಗ್ಗರಿಸುತ್ತಾ ಮೆಲ್ಲಗೆ ಆ ವಿಚಾರಭೃತ್ಯನ ಬಳಿಗೆ ಬಂದನು. ಆಗ ಆ ರಜಕನಾದರೋ ಭಸ್ಮಲೇಪಿತಗಾತ್ರನಾದ ಇವನನ್ನು ಕಂಡು ಕೈಮುಗಿದು ನಮಸ್ಕರಿಸಿ, ಕುಶಲಪ್ರಶ್ನೆಗಳಿಂದ ಅವನನ್ನು ಸಮಾಧಾನಪಡಿಸಿ, ಉಪಚರಿಸಿದ ಅನಂತರ ಆ ಅಗಸರವನು ಸಂತುಷ್ಟನಾಗಿ, ॥೯೨-೯೩॥

ಸ್ವಾಮಿಯೇ! ಏಕೆ ಕೃಶನಾಗಿರುವೆ; ಈ ಬಟ್ಟೆಗಳೇಕೆ ಕೊಳೆಯಾಗಿರುವುವು. ನನಗೆ ಈ ಬಟ್ಟೆಯನ್ನು ಕೊಟ್ಟರೆ ಅದನ್ನು ಶುದ್ಧಮಾಡಿಕೊಡುವೆನೆಂದು ರಜಕನು ಕೇಳಲು ಆ ಭಿಕ್ಷುಕವೇಷಧಾರಿಯಾದ ಶಿವನು ಅವನಿಗೆ ಇಂತೆಂದನು.॥೯೪॥

ಅಯ್ಯ ಅಗಸನೇ, ನಾನು ನಿನ್ನ ಬಳಿಗೆ ಬಂದಾಗಿದ್ದ ಬಟ್ಟೆಯೇ ಹೊರತು ನನಗೆ ಬೇರೆ ಯಾವ ಬಟ್ಟೆಯೂ ಇಲ್ಲ. ನೀನು ಈಗಲೇ ಒಗೆದು ಒಣಗಿಸಿಕೊಡುವುದಾದರೆ ನಾನು ಈ ಬಟ್ಟೆಯನ್ನು ನಿನಗೆ ಕೊಡುತ್ತೇನೆ. ಕೂಡಲೇ ನನಗೆ ಕೊಡುವುದಾದರೆ ನನ್ನ ಈ ದೇಹಕ್ಕೆ ತೊಂದರೆಯಾಗುವುದಿಲ್ಲ. ಇಲ್ಲದಿದ್ದಲ್ಲಿ ಚಳಿಯಿಂದ

ಯದಿ ದಾಸ್ಯಸಿ ಸದ್ಯೋ ಮೇ ತದಾ ನೋಽಸ್ಯಾತ್ರನುವ್ಯಯಃ ।
ಇತಿ ಕಂಥಾಂ ವಿಭುಸ್ತಸ್ಮೈ ತಥೇತಿ ಬ್ರುವತೇ ದದೌ ॥೯೬॥

ರಜಕೋ ವಿಮಲಂ ಕರ್ತುಂ ತದಾ ಕಂಥಾಂ ಸಮುದ್ಯತಃ ।
ಅನ್ಯೈರ್ಮಲೈಸ್ತಾಂ ಸಂಯೋಜ್ಯ ಪಕ್ತ್ವಾ ಕುಂಭ್ಯಾಂ ಸ ಪಾಕತಃ॥೯೭॥

ಧೌತುಂ ಪಾಷಾಣವೌಲೌ ತಾಂ ಯಾವನ್ನಿಕ್ಷಿಪತೇ ತದಾ ।
ತಾವಚ್ಛಿವಾಜ್ಞಯಾಮೋಘಮೇಘಾಶ್ಚ ವವೃಷುಶ್ಚಿರಂ ॥೯೮॥

ವೃಷ್ಟಿರ್ನ ವಿರಮತ್ಯೇಷಾ ಶೀತಾಸಾರೋರುವಾತಕಾ ।
ಶೀತಾರ್ತೋಽಥ ಕಂಥಾಭಿಕ್ಷುರ್ಹಾ ಹಾ ಹಂತ ಹತೋಽಸ್ಮ್ಯಹಂ ॥೯೯॥

ವ್ಯತೀತಾ ಪ್ರೋಕ್ತವೇಲಾಪಿ ಧೌತಕಂಥಾ ನ ಶುಷ್ಯತೇ ।
ಅನ್ಯಾನಿ ಮಮ ವಾಸಾಂಸಿ ನ ಗೃಹ್ಣಾತ್ಯೇವ ಭಿಕ್ಷುಕಃ ॥೧೦೦॥

---

ಸಾಯಬೇಕಾಗುತ್ತದೆಂದು ಹೇಳಿದನು. ಆಗ ಆ ಅಗಸನು ಹಾಗೆಯೇ ಆಗಲೆಂದು ಒಪ್ಪಿಕೊಳ್ಳಲು ಆ ಪ್ರಭುವು ಅವನಿಗೆ ತನ್ನ ಬಟ್ಟೆಯನ್ನು ಕೊಟ್ಟನು. ॥೯೫-೯೬॥

ಆಗ ವಿಚಾರಭೃತ್ಯನು ಆ ಚಿಂದೀಬಟ್ಟೆಯನ್ನು ಒಗೆದು ಶುದ್ಧಿಮಾಡಲು ಸುಣ್ಣ, ಚೌಳು ಮುಂತಾದ ಮಲಗಳೊಡನೆ ಸೇರಿಸಿ ಗುಡಾಣದಲ್ಲಿ ಕುದಿಸಿ, ಪಾಕ ಮಾಡಿದನು. ಆಮೇಲೆ ಅದನ್ನು ಒಣಗಿಸಲು ಒಂದು ಬಂಡೆಯ ತುದಿಯಲ್ಲಿ ಹರವು ವಷ್ಟರಲ್ಲಿ, ಶಿವನ ಅಪ್ಪಣೆಯಂತೆ ಅಪಾರವಾದ ಮೋಡಗಳು ವ್ಯಾಪಿಸಿ ಬಹಳ ಹೊತ್ತು ಮಳೆಗರೆದವು. ॥೯೭-೯೮॥

ಈ ಮಳೆಯಾದರೋ ಈಗಲೇ ಬಿಡುವಂತಿಲ್ಲ. ಶೈತ್ಯಪೂರ್ಣವಾದ ದೊಡ್ಡ ತಂಗಾಳಿಬೇರೆ ಬೀಸುತ್ತಿರುವುದು. ಈ ಬಟ್ಟೆಯನ್ನು ಕೊಟ್ಟಿರುವ ಭಿಕ್ಷುವಾದರೋ ಶೀತದಿಂದ ಪೀಡಿತನಾಗಿರುವನು. ಅಯ್ಯೋ! ನಾನು ಹೀಗೆ ಮಾಡಿ ಹಾಳಾದೆ ನಲ್ಲಾ! ನಾನು ಹೇಳಿದ್ದ ಕಾಲವೂ ಕಳೆಯಿತು. ಹರವಿದ ಬಟ್ಟೆಯು ಒಣಗಲಿಲ್ಲ. ಹೋಗಲಿ, ನನ್ನ ಬೇರೆ ಬಟ್ಟೆಗಳನ್ನು ಕೊಡೋಣವೆಂದರೆ ಈ ಭಿಕ್ಷುವು ಇದನ್ನು ತೆಗೆದುಕೊಳ್ಳುವುದೇ ಇಲ್ಲ. ಹೀಗೆಂದು ಅಗಸನು ಯೋಚಿಸುತ್ತಾ, ॥೯೯-೧೦೦॥

ವಸ್ತ್ರದ್ಯಾತೇ ಮಹಾಗ್ರಾವೇ ಶಿರಃ ಸಂಘಾತಯಾಮ್ಯಹಂ ।
ಇತಿ ಭೂ ಶಿರೋಗ್ರಾವೇ ಯಾವತಾ ಘಾತಯತ್ಯಸೌ ॥೧೦೧॥

ತಾವದ್ಗರಧರೋ ಗ್ರೀವಾಂ ತಸ್ಯ ಹಸ್ತೇನ ಶೀಲಯನ್ ।
ಅಪಾಲಯತ್ಫಾಲನೇತ್ರೋ ರಜಕಂ ಭಗವಾನ್ಭವಃ ॥೧೦೨॥

ವೃಷಾರೂಢಸ್ತದಾ ದೇವ್ಯಾ ವವಂದೇ ಸೋಽಪಿ ಭಕ್ತಿತಃ ।
ತ್ವಂ ಧೀರೋಽಸೀತ್ಯಪಿ ವದನ್ಗಲಾಗಂ ಮಮ ಸಾಂಪ್ರತಂ ॥೧೦೩॥

ಕೈಲಾಸಂ ರಜಕಶ್ರೇಷ್ಠ ವ್ರಜ ಪತ್ನ್ಯಾ ಸುತೈಃ ಸಹ ।
ಸುಖೀ ಭವೇತಿ ದೇವೇಶೋ ಜಗಾಮೈಕಾಮ್ರಮೂಲಗಃ ॥೧೦೪॥

॥ ಸೂತ ಉವಾಚ ॥

ಜನ್ಮಾಹಿತಂ ದೇವ ದಯಾವಿಶೇಷೈ
ರ್ವಿಚಾರಭೃತ್ಯೋಽಪಿ ವಿಧೂಯ ಬಂಧುಂ ।
ಸ ಚೈಕದಂತಾದ್ಯಭಿಪೂಜ್ಯಮಾನ
ಏಕಾಮ್ರಧಾಮೇಶ್ವರ ಧಾಮ ಭೇಜೇ ॥೧೦೫॥

---

ಈಗ ಈ ವಸ್ತ್ರಕ್ಕಾಗಿ ನಾನು ಈ ನನ್ನ ತಲೆಯನ್ನು ಬಂಡೆಗೆ ಹೊಡೆದು ಚಚ್ಚಿಕೊಳ್ಳುವೆನು, ಎಂದು ನಿಶ್ಚಯಿಸಿ, ಅವನು ಆದರಂತೆಯೇ ತನ್ನ ತಲೆಯನ್ನು ಬಂಡೆಗೆ ಚಚ್ಚಿಕೊಳ್ಳುವಷ್ಟರಲ್ಲಿ, ವಿಷಕಂಠನಾದ ಆ ಶಂಕರನು ಅವನ ಕೊರಳನ್ನು ಕೈಯಿಂದ ಸವರುತ್ತಾ ಹಣೆಗಣ್ಣನೂ, ಷಡ್ಗುಣಪೂರ್ಣನೂ ಆದ ಶಿವನು ಆ ಅಗಸನನ್ನು ಅಪಾಯದಿಂದ ಕಾಪಾಡಿದನು. ॥೧೦೧-೧೦೨॥

ಕೂಡಲೆ ಪಾರ್ವತಿಯೊಡನೆ ಪ್ರತ್ಯಕ್ಷನಾದ ಮಹಾದೇವನಿಗೆ ಅವನು ಭಕ್ತಿಯಿಂದ ನಮಸ್ಕರಿಸಿದನು. ಆಗ ಶಿವನು, ಭಕ್ತನಾದ ರಜಕನೇ, ನೀನು ಧೀರನು ಎಂದು ಹೇಳುತ್ತಾ ನೀನು ನಿನ್ನ ಪತ್ನೀಪುತ್ರರೊಡನೆ ದೋಷರಹಿತವಾದ ಕೈಲಾಸಕ್ಕೆ ಬಂದು ಸುಖವಾಗಿರೆಂದು ನುಡಿದು ಆ ದೇವೇಶ್ವರನು ಏಕಾಮ್ರವೃಕ್ಷದ ಬುಡವನ್ನು ಸೇರಿದನು. ॥೧೦೩-೧೦೪॥

ಅವಿಚಾರಭೃತ್ಯನಾದರೋ ಜನ್ಮಮೊದಲು ತನಗೆ ಹಿತವನ್ನುಂಟುಮಾಡಿದ್ದ ನೆಂಟರಿಷ್ಟರನ್ನೆಲ್ಲಾ ಮಹಾದೇವನ ದಯಾವಿಶೇಷಗಳಿಂದ ತ್ಯಜಿಸಿ, ಏಕದಂತನಾದ

ವಿಚಾರಭಕ್ತಸ್ಯ ವಿಶಿಷ್ಟಭಕ್ತೇ
ರ್ವಿಚಾರಯುಕ್ತ್ಯೈ ರಭಿವಂದ್ಯಮಾನಂ ।
ವಿಶಿಷ್ಟಮೇತಂ ಚರಿತಂ ಪವಿತ್ರಂ
ಪಠಂತಿ ಯೇ ಯಾಂತಿ ಪರಂ ಪದಂ ತೇ ॥೧೦೬॥

ಇತಿ ಶ್ರೀಶಿವರಹಸ್ಯೇ ನವಮಾಂಶೇ ಸದಾಶಿವಾಖ್ಯೇ ವಿಚಾರಭಕ್ತಚರಿತ್ರ ವರ್ಣನಂ ನಾಮ ದ್ವಿಚತ್ವಾರಿಂಶೋಽಧ್ಯಾಯಃ

---

ಗಣಪತಿಯೇ ಮುಂತಾದವರಿಂದ ಪೂಜಿಸಲ್ಪಡುವವನಾಗಿ ಅವನು ಏಕಾಮ್ರಧಾಮೇಶ್ವರನ ಸ್ಥಾನವನ್ನು ಸುಲಭವಾಗಿ ಪಡೆದನು. ॥೧೦೫॥

ವಿವೇಕಸಂಪನ್ನರಿಂದ ನಮಸ್ಕರಿಸಲ್ಪಡುವ ವಿಶೇಷಭಕ್ತಿಯುಳ್ಳ ವಿಚಾರ ಭಕ್ತನ ಪವಿತ್ರವಾದ ಈ ಚರಿತಾವಿಶೇಷವನ್ನು ಪಠಿಸುವವರು ನಿಜವಾಗಿ ಪರಮಪದವನ್ನೈದುವರೆಂದು ಕುಮಾರಸ್ವಾಮಿಯು ಜೈಗೀಷವ್ಯನಿಗೆ ಹೇಳಿದುದನ್ನು ಸೂತರು ಶೌನಕಾದಿಗಳಿಗೆ ನಿರೂಪಿಸಿದರು. ॥೧೦೬॥

ಇಲ್ಲಿಗೆ ಶ್ರೀ ಶಿವರಹಸ್ಯದ ಸದಾಶಿವಸಂಜ್ಞಕವಾದ ಒಂಬತ್ತನೆಯ ಅಂಶದಲ್ಲಿ ವಿಚಾರಭಕ್ತನ ಕಥಾವರ್ಣನೆಯೆಂಬ ನಲವತ್ತೆರಡನೆಯ ಅಧ್ಯಾಯ ಮುಗಿದುದು

॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀ ಶಿವರಹಸ್ಯೇ

## ಸದಾಶಿವಾಖ್ಯೇ

## ನವಮಾಂಶೇ

## ತ್ರಿಚತ್ವಾರಿಂಶೋಽಧ್ಯಾಯಃ

॥ ಶ್ರೀಸ್ಕಂದ ಉವಾಚ ॥

ಕಥಯಾಮಿ ಕಥಾಂ ಪುಣ್ಯಾಂ ವಾಗೀಶಸ್ಯ ಮಹಾತ್ಮನಃ ।
ಕಶ್ಚಿದತ್ಯಗ್ರಬಾಲೇತಿ ವಿಷಯಸ್ತಿಲಕೋ ಭುವಃ ॥೧॥

ವಿಲಾಸಭವನಂ ಲಕ್ಷ್ಮ್ಯಾಃ ಮಹೀಮಂಡಲ ಮಂಡನಂ ।
ಯಸ್ಮಿನ್ಜನಪದೇ ಸರ್ವೇ ಹಾರಾ ಏವ ವಿಹಾರಿಣಃ ॥೨॥

ಭಸ್ಮಸಂಪನ್ನಫಾಲಾಸ್ತೇ ಮಹಾರುದ್ರಾಕ್ಷವಕ್ಷಸಃ ।
ಯಸ್ಮಿನ್ಕುಟುಂಬಿನಾಂ ಸೌಧೇ ಚರತೀಂದೌ ವಿಧುಂತುದಃ ॥೩॥

---

## ನಲವತ್ತಮೂರನೆಯ ಅಧ್ಯಾಯ

ಓ ಜೈಗೀಷವ್ಯನೇ,- ವಾಗೀಶನೆಂಬ ಮಹಾತ್ಮನ ಪುಣ್ಯಕರವಾದ ಕಥೆಯನ್ನು ಹೇಳುತ್ತೇನೆ ಕೇಳು. ಭೂಮಿಗೆ ತಿಲಕಪ್ರಾಯವಾಗಿ ಒಂದು ಅತ್ಯಗ್ರಬಾಲವೆಂಬ ದೇಶವಿರುವುದು. ಅದು ಲಕ್ಷ್ಮೀದೇವಿಯ ವಿಲಾಸಸ್ಥಾನವೆನಿಸಿ ಭೂಮಂಡಲಕ್ಕೇ ಅಲಂಕಾರಪ್ರಾಯವಾಗಿರುವುದು. ಈ ದೇಶದಲ್ಲಿ ಸಂಚರಿಸುವವರೆಲ್ಲರೂ ಶೈವರೇ ಆಗಿರುವರು. ॥೧-೨॥

ಅವರೆಲ್ಲರೂ ಹಣೆಗಳಲ್ಲಿ ಭಸ್ಮಧಾರಣೆಮಾಡಿ ದೊಡ್ಡ ರುದ್ರಾಕ್ಷಮಾಲೆಗಳನ್ನು ಎದೆಯಲ್ಲಿ ಧರಿಸಿಕೊಂಡಿರುವರು. ಆ ಊರಿನಲ್ಲಿ ಗೃಹಸ್ಥರ ಮಹಡಿಮನೆಗಳ ಮೇಲೆ ಚಂದ್ರನು ಸಂಚರಿಸುತ್ತಿರಲು (ಚಂದ್ರಮಂಡಲದವರೆಗೂ ಎತ್ತರವಾಗಿ ಮಳಿಗೆಗಳಿವೆ. ಆ ಚಂದ್ರನು ತನ್ನ ಮಂಡಲದಲ್ಲಿ ಸಂಚರಿಸುತ್ತಿರಲು ಇವರ ಮನೆಯ ಮೇಲೆಯೇ

ಸಂದಿಗ್ಧೇ ಗ್ರಸಿತುಂ ಪ್ರಾಯೋ ಮಧ್ಯೇ ಸುಭ್ರುಮುಖಾವಲೀ ।
ವೇಣೀಪುಷ್ಪಸಮುತ್ಕ್ಷಿಪ್ತೈರ್ನಾನಾಪುಷ್ಪಮಣಿವ್ರಜೈಃ ॥೪॥

ವಿಭೂಷಾ ಹಾಲಿಕಸ್ತ್ರೀಣಾಂ ಯಸ್ಮಿನ್ಕೃಷಿಕಲಾಜುಷಾಂ ।
ಯತ್ರ ಕುಲ್ಯಾಸು ಕಾದಂಬಮೂಧ್ವೀಪುಂಡ್ರೇಷು ಪರ್ವಸು ॥೫॥

ಮುಕ್ತಾಸೀತಾಸು ಕಲ್ಹಾರ ಸರತ್ಸುಕ್ರಮುಕಾ ಬಹಿಃ ।
ಯಂತ್ರೇಕ್ಷುಕಾಂಡಖಂಡೋದ್ಯದ್ರಸಸಾರೇಣ ಭೂಮಯಃ ॥೬॥

ನದೀಮಾತೃಕತಾಂ ಯಾಂತಿ ರಸಸಸ್ಯಾದಿಸೇತವಃ ।
ಯತ್ರ ಕಾಂತಾ ಗಲೋಲ್ಲಾಸಿ ಕ್ರಮುಕಾಕ್ರಮಿತಂ ಫಲಂ ॥೭॥

---

ಸಂಚರಿಸಿದಂತಿರುವುದು.) ಅಲ್ಲಿಯೇ ಸುಂದರಾಂಗಿಯರೂ ಅಲೆದಾಡುತ್ತಿರುವರು. ಕೇತುವು ಚಂದ್ರನನ್ನು ಹಿಡಿಯಲು ಬಂದು ಅಲ್ಲಿರುವ ಚಂದ್ರಮುಖಿಯರ ಮಧ್ಯದಲ್ಲಿರುವ ಚಂದ್ರಮಂಡಲವನ್ನು ನೋಡಿ, ನಿಜವಾದ ಚಂದ್ರನಾರೆಂದು ತಿಳಿಯಲಾರದೇ ಸಂದೇಹಗೊಂಡಿರುವನು. ಜಡೆಗಳನ್ನು ಹೂವುಗಳಿಂದ ಹೆಣೆದುಕೊಂಡು ಅದರ ಜತೆಗೆ ಈ ಸುಂದರಿಯರು ಬಗೆಬಗೆಯ ಹೂಗಳನ್ನೂ ರತ್ನರಾಜಿಗಳನ್ನೂ ಮುಡಿದಿರುವರು. ॥೩-೪॥

ಆ ಊರಿನಲ್ಲಿ ಕೃಷಿಮಾಡುವ ರೈತರ ಹೆಂಗಸರಿಗೆ ಬಗೆಬಗೆಯ ಹೂಗಳೂ ರತ್ನಗಳೂ ಆಭರಣಗಳಾಗಿರುವುವು. ಸಣ್ಣಕಾಲುವೆಗಳಲ್ಲಿ ನೀರನ್ನು ಹಾಯಿಸಿಕೊಂಡು ಕದಂಬವೃಕ್ಷ, ಮೃದುವಾದ ರಸದಾಳಿ ಕಬ್ಬು ಮತ್ತು ಇತರ ಕಬ್ಬುಗಳನ್ನು ಅಲ್ಲಲ್ಲಿ ಬೆಳೆಯುತ್ತಿರುವರು. ಉತ್ತ ನೆಲಗಳಲ್ಲಿ ಕೆಲವುಕಡೆ ಮುತ್ತುಗಳೂ, ಕಣಿಗಲೆ ಮುಂತಾದ ಹೂಗಿಡಗಳೂ, ಸರಸ್ಸುಗಳ ಹೊರಗಡೆ ಅಡಿಕೆಮರಗಳೂ ಹೇರಳವಾಗಿ ಬೆಳೆದಿರುವುವು. ಕಬ್ಬಿನ ಗಾಣಗಳೂ, ಕಬ್ಬಿನ ಜಲ್ಲೆಗಳೂ ಹೇರಳವಾಗಿದ್ದು ಆ ಕಬ್ಬಿನ ಸಾರವತ್ತಾದ ರಸದಿಂದ ಅಲ್ಲಿನ ಭೂಸಾರವು ವ್ಯಕ್ತಪಡುತ್ತಿರುವುದು. ॥೫-೬॥

ಕಬ್ಬು, ತೆಂಗು ಮುಂತಾದ ರಸಭರಿತ ವೃಕ್ಷಗಳು, ಬತ್ತ, ಉದ್ದು ಮೊದಲಾದ ಪೈರುಗಳೂ ನದೀ ಮಾತೃಕತ್ವವನ್ನು ಅವಲಂಬಿಸಿರುವುವು ಅಂದರೆ ಅವು ಕೇವಲ ನದಿಯ ನೀರಿನ ಸಹಾಯದಿಂದಲೇ ಬೆಳೆಯುವುವು. ಸ್ತ್ರೀಯರ ಕಂಠಮಾಲಿಕೆಯಂತೆ ಕಂಡುಬರುವ ಅಡಕೆಯ ಕಾಯಿಗಳ ಗೊಂಚಲುಗಳು ಮೊದಲು ಕಠಿನವಾಗಿದ್ದು ಕಾಲಕ್ರಮದಲ್ಲಿ ಸ್ತ್ರೀಯರ ಕುಚದ್ವಂದ್ವಗಳಂತೆ ಅವುಗಳ ಸಾಹಚರ್ಯಬಲದಿಂದಲೋ

ಗೃಹೀತ್ವಾಲಿಕುಚದ್ವಂದ್ವಂ ಕುಚವತ್ಕರಿಣಂ ಜಹುಃ ।
ಮಹಿಷ್ಯೋ ಯತ್ರ ವಾಪೀಷು ಘನಪಂಕ್ತಿವದರ್ಣವೇ ॥೮॥

ನಿಮಜ್ಜಂತ್ಯೋ ಝಷೋಲ್ಲೀಢೈರ್ದುಗ್ಧೈರುತ್ಕಲಯಂತಿ ತಾಃ ।
ಯತ್ರಾರಾಮತರುಸ್ತೋಮ ಸೀಮಾಸಂಸ್ಥೌ ವಿರಾಜತಃ ॥೯॥

ಪುಷ್ಪವಂತೌ ಮಹೀಶಾಖೀ ಭುಜಾಗ್ರಾಲಿಂಗತಾವಿವ ।
ಸೌರಭೀಜುಷಿ ಕೇದಾರೇ ಮೇರುವದ್ವ್ರೀಹಿರಾಶಯಃ ॥೧೦॥

ಯತ್ರ ಹೋಲಿಕಸೌಧೇಷು ಮಿಲಂತಿ ಶಿಖಿನೋಽಂಬುದೈಃ ।
ಯತ್ರ ಸುಂದರವಾಗೀಶಾವವತೀರ್ಣೌ ಶಿವಾಜ್ಞಯಾ ॥೧೧॥

ಜಗದ್ಧಿತಾಯ ಹಂತಾಸ್ಯ ಮಾಹಾತ್ಮ್ಯಂ ಕೇನ ವರ್ಣ್ಯತೇ ।
ತಸ್ಮಿನ್ಸತ್ಯಗ್ರಪಾಲೀತಿ ವಿಷಯೇ ವಿಶ್ರುತಾಶಯೇ ॥೧೨॥

---

ಎಂಬಂತೆ ಮಾರ್ದವವನ್ನಾಶ್ರಯಿಸಿ ಕೆಳಗೆ ಜೋತುಬಿದ್ದಿರುವುವು. ಅಲ್ಲಲ್ಲಿ ಎಮ್ಮೆಗಳು ಸಮುದ್ರದ ಮೇಲೆ ತೇಲಾಡುವ ಮೋಡಗಳ ಸಮೂಹದಂತೆ ಕೊಳಗಳಲ್ಲಿ ಮುಳುಗುತ್ತಾ, ಆ ಕೊಳದಲ್ಲಿರುವ ಮೀನುಗಳು ತಮ್ಮ ಹಾಲನ್ನು ಕುಡಿಯಲು ಯತ್ನಿಸುತ್ತಿದ್ದಾಗ ಅದನ್ನು ತಡೆಗಟ್ಟಲು ನೀರಿನಲ್ಲಿಯೇ ಸುತ್ತಾಡುತ್ತಿರುವುವು॥೭-೮॥

ಸೂರ್ಯ ಚಂದ್ರರು ಆ ಊರಿನ ಉದ್ಯಾನದಲ್ಲಿರುವ ಎತ್ತರವಾದ ಮರಗಳ ಗುಂಪಿನ ಎಲ್ಲೆಯಲ್ಲಿದ್ದು ಸದಾ ಶೋಭಿಸುತ್ತಿರುವರು. ಇದನ್ನು ನೋಡಿದರೆ ದೊಡ್ಡ ದೊಡ್ಡ ಮರಗಳು ತಮ್ಮ ಭುಜಗಳ ತುದಿಯಿಂದ ಈ ಸೂರ್ಯಚಂದ್ರರನ್ನು ಆಲಿಂಗಿಸುತ್ತಿರುವುವೋ ಎಂಬಂತೆ ತೋರುತ್ತಿದ್ದಿತು. ಸುಗಂಧಭರಿತವಾದ ಗದ್ದೆಗಳಲ್ಲಿ ಬತ್ತದ ರಾಶಿಗಳು ಮೇರುಪರ್ವತದಂತೆ ಕಂಗೊಳಿಸುತ್ತಿರುವುವು. ರೈತರ ಉಪ್ಪರಿಗೆಗಳಲ್ಲಿರುವ ಸಾಕುನವಿಲುಗಳು ಮೋಡಗಳನ್ನು ತಾಕುತ್ತಿರುವುವೋ ಎಂಬಂತೆ ಕಾಣುವುವು. ಇಂತಹ ದಿವ್ಯದೇಶದಲ್ಲಿ ಶಿವನ ಅಪ್ಪಣೆಯಂತೆ, ಸುಂದರ ಮತ್ತು ವಾಗೀಶರೆಂಬುವರು ಅವತಾರ ಮಾಡಿದರು. ॥೯-೧೦-೧೧॥

ಪ್ರಪಂಚಕಲ್ಯಾಣಕ್ಕೋಸ್ಕರ ಅವತರಿಸಿರುವ ಇವರ ಮಹಿಮೆಯನ್ನು ಯಾರಿಂದತಾನೇ ವರ್ಣಿಸಲು ಸಾಧ್ಯ! ಈ 'ಅಗ್ರಪಾಲಿ' ಎಂಬ ದೇಶವು ಲೋಕ ಪ್ರಸಿದ್ಧವಾಗಿ ಮೆರೆಯುತ್ತಿರಲು, ಅನೇಕ ಪಟ್ಟಣಗಳಿಗೆ ಆಶ್ರಯವಾದ ಆ ದೇಶದಲ್ಲಿ

ನಾನಾಪುರೇಷು ತೇಷ್ವೇಕಮಮೂರಾಖ್ಯಂ ಮಹತ್ಪುರಂ ।
ಯದೀಯಪರಿಖಾಚಕ್ರೇ ಪಂಕಜಾಖ್ಯಾಂಗಜಾಸತೀ ॥೧೩॥

ಕೆರ್ತುಮಭ್ಯುದ್ಯತಾನೀವ ವಪ್ರಯುದ್ಧಂ ವಧೂಮುಖೈಃ ।
ಯದ್ವಿಶೇಷಫಣೀರತ್ನವಿಶೇಷೈಃ ಪಾಟಲೋತ್ಪಲೈಃ ॥೧೪॥

ಪರೀತೇ ಪರಿಖಾಚಕ್ರೇ ದಿವೋ ಬಿಂಬಮಿವೇಕ್ಷ್ಯತೇ ।
ನರಸ್ತ್ರಿಯಸ್ಸುರಸ್ತ್ರೀಭಿರ್ಯತ್ರ ಸೌಧೇಷು ಸರ್ವದಾ ॥೧೫॥

ದಿವ್ಯಭೌಮಪದಾರ್ಥಾನಾಂ ಕ್ರಿಯಂತೇ ಕ್ರಯವಿಕ್ರಯೌ ।
ಆಮೂರಾಖ್ಯೇ ಪುರೇ ತಸ್ಮಿಂಶ್ಚಾತುರ್ವರ್ಣಾಶ್ರಮಾಶ್ರಯೇ ॥೧೬॥

ಯತ್ರ ಭುಗ್ನಾವಲಗ್ನೇನ ಯೌವನೇನ ಸಮನ್ವಿತೇ ।
ವಿಪದಾಮಪದೇ ಶಂಭುಭಕ್ತಿಸಿದ್ಧ್ಯೈಕವರ್ತ್ಮನಿ ॥೧೭॥

---

"ಆಮೂರ" ಎಂಬ ಒಂದು ದೊಡ್ಡ ಪಟ್ಟಣವಿದ್ದಿತು. ಆ ಪಟ್ಟಣದ ಸುತ್ತಲೂ ವಿಶಾಲವಾದ ಮತ್ತು ಭಯಂಕರವಾದ ಕಂದಕವಿದ್ದಿತು. ಅದರ ನೀರಿನಲ್ಲಿ ಬೇಕಾದಷ್ಟು ಕಮಲಗಳಿದ್ದವು. ॥೧೨-೧೩॥

ಆ ಅಗಳಿನ ದಡದಲ್ಲಿರುವ ಸರ್ಪಗಳ ರತ್ನವಿಶೇಷಗಳಿಂದಲೂ ಬಿಳುಪು, ಕೆಂಪು ಮತ್ತು ಮಿಶ್ರವರ್ಣವಾಗಿರುವ ನೈದಿಲೆ ಹೂವುಗಳಿಂದಲೂ ಯುಕ್ತವಾಗಿರುವ ತಾವರೆ ಹೂಗಳು ಆ ಕೃಷೀವಲನಾರಿಯರ ಮುಖಗಳೊಡನೆ ಬೀದಿಜಗಳವಾಡುತ್ತಿರುವುವೋ ಎಂಬಂತೆ ರಾಜಿಸುತ್ತಿದ್ದವು. ಊರಿನ ಸುತ್ತಲೂ ಇರುವ ಅಗಳಿನಲ್ಲಿ ಆಕಾಶದ ಪ್ರತಿಬಿಂಬವೇ ಪ್ರತಿಫಲಿಸುತ್ತಿರುವಂತೆ ಕಾಣುವುದು. ಆ ಗ್ರಾಮದ ಉಪ್ಪರಿಗೆಗಳಲ್ಲಿ ವಾಸಮಾಡುವ ಮಾನವಸ್ತ್ರೀಯರು ಯಾವಾಗಲೂ ದೇವತಾನಾರಿಯರೊಡನೆ ಪರಸ್ಪರ ತಮ್ಮ ತಮ್ಮ ಪದಾರ್ಥಗಳನ್ನು ವ್ಯಾಪಾರಮಾಡುತ್ತಿರುವರು. ॥೧೪-೧೫॥

ಆಮೂರವೆಂಬ ಹೆಸರಿನ ಆ ಪಟ್ಟಣವು ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೆಂಬ ನಾಲ್ಕು ವರ್ಣಗಳಿಗೂ, ಬ್ರಹ್ಮಚರ್ಯ, ಗಾರ್ಹಸ್ಥ್ಯ, ವಾನಪ್ರಸ್ಥ ಮತ್ತು ಸಂನ್ಯಾಸವೆಂಬ ನಾಲ್ಕು ಆಶ್ರಮಗಳಿಗೂ ಆಶ್ರಯವಾಗಿದ್ದಿತು. ಈ ಊರು ಯೌವನದಿಂದ ಭರಿತವಾಗಿ ಕಾಂತಿಮಯವಾಗಿ ಕಾಣುತ್ತಿದ್ದಿತು. ಪ್ರಜೆಗಳೆಲ್ಲರೂ ಕಷ್ಟವನ್ನೇ ಕಾಣದೇ ಶಂಭುವಿನ ಭಕ್ತಿಯಿಂದ ಸಿದ್ಧವಾದ ಮುಖ್ಯಮಾರ್ಗದಲ್ಲಿ (ಶೈವಧರ್ಮ

ಚತುರ್ಥಜಾತಿಧೌರೇಯಭಕ್ತಧುರ್ಯೋಽಭವತ್ತದಾ ।
ಹಲಹಲ್ಲೋಹಲೋದ್ಧಂ ಚ ಸಂಯುವಾ ಮಾನಿತಾತಿಥಿಃ ॥೧೮॥

ಕೀರ್ತಿಮಾನ್ಕೀರ್ತಿಮಾನ್ನಾಮ ಬಂಧುಮಿತ್ರಪ್ರಿಯೋಽಭವತ್ ।
ಯೌವನಾಲಂಕೃತಾಂಗಸ್ಯ ತಸ್ಯ ಕೀರ್ತಿಮತೋಽಭವತ್ ॥೧೯॥

ಗೃಹಿಣೀ ಮೋದಿನೀ ನಾಮ ಕೌಮುದೀವ ಕಲಾವತಃ ।
ವಾರಿಧೇರ್ವೇಲಯೈವಾಸೀತ್ಸರಲಾ ವಿರಲಾ ತದಾ ॥೨೦॥

ಸತ್ಯಾಂ ಕೀರ್ತಿಮತಸ್ತಸ್ಯಾಂ ಕನ್ಯಾಸೀತ್ಕಮಲಾವತೀ ।
ಶುಭೋದಯಾ ಸಾ ಬಭೂವ ಕಮಲೇ ವಾಮಲಾಶಯಾ ॥೨೧॥

ಮಾತಾಪಿತ್ರೋರ್ಮುಖಾಬ್ಜಸ್ಯ ವಿಕಾಸಿರವಿಸುಪ್ರಭಾ ।
ಯಥಾ ಮೇನಾ ಹಿಮವತೋರುಮೈನಾಮಪೋಷಯತ್ ॥೨೨॥

---

ದಲ್ಲಿ) ನಡೆಯುತ್ತಿದ್ದರು. ಇಂತಹ ಊರಿನಲ್ಲಿ ಶೂದ್ರಜಾತಿಶ್ರೇಷ್ಠನಾದ ಒಬ್ಬ ಭಕ್ತವರ್ಯನಿದ್ದನು. ॥೧೬-೧೭॥

ಆತನು ಯಾವಾಗಲೂ ನೇಗಿಲನ್ನು ಹಿಡಿದು ಕೃಷಿಮಾಡುತ್ತಾ ಅತಿಥಿಗಳನ್ನು ಗೌರವದಿಂದ ನೋಡುತ್ತಾ ಕೀರ್ತಿಮಂತನೆಂಬ ಹೆಸರಿನಿಂದ ಕೀರ್ತಿಶಾಲಿಯಾಗಿ ಸಕಲ ಬಂಧುಮಿತ್ರರಿಗೂ ಇಷ್ಟನಾಗಿ ಪ್ರಸಿದ್ಧನಾಗಿದ್ದನು. ಯೌವ್ವನಭರಿತವಾದ ದೇಹಸೌಷ್ಠವವುಳ್ಳ ಆ ಕೀರ್ತಿವಂತನಿಗೆ, ಚಂದ್ರನಿಗೆ ಬೆಳದಿಂಗಳಂತೆಯೂ, ಸಮುದ್ರಕ್ಕೆ ಪ್ರವಾಹದಂತೆಯೂ ಸರಳಸ್ವಭಾವದ ಮೋದಿನೀ ಎಂಬ ಹೆಂಡತಿಯಿದ್ದಳು. ॥೧೮-೧೯-೨೦॥

ಪತಿವ್ರತೆಯಾದ ಆ ಮೋದಿನಿಯಲ್ಲಿ ಕೀರ್ತಿವಂತನಿಗೆ ಕಮಲಾವತಿಯೆಂಬ ಮಗಳಾದಳು. ಪವಿತ್ರಜನ್ಮವನ್ನು ಪಡೆದ ಆ ಕಮಲಾವತಿಯು ಲಕ್ಷ್ಮಿಯಂತೆ ಪರಿಶುದ್ಧಭಾವವುಳ್ಳವಳಾದಳು. ಇವಳು ಮೇನಾ ಮತ್ತು ಹಿಮವಂತರಿಗೆ ಉಮೆಯಂತೆ ತಾಯಿತಂದೆಗಳ ಮುಖಕಮಲಗಳನ್ನು ಅರಳಿಸಿ ಸಂತೋಷಪಡಿಸುವುದರಲ್ಲಿ ಸೂರ್ಯಕಾಂತಿಯಂತೆ ಬೆಳೆಯುತ್ತಿರಲು, ತಾಯಿತಂದೆಗಳು ಈ ಕುಮಾರಿಯನ್ನು ಸಂತೋಷದಿಂದ ಪೋಷಿಸಿದರು. ॥೨೧-೨೨॥

ವಿದ್ಯಾ ಹೃದ್ಯತಮೋಪಾಭೂತ್ಪ್ರಿಯಶಿಷ್ಯೇ ಗುರೂದಿತಾ ।
ತಮೋನಿವಾರಕೋ ನಾಮ್ನಾ ಮೇದಿನ್ಯಾಂ ಕೋಽಪ್ಯಭೂತ್ಸುತಃ ॥೨೩॥

ಕೀರ್ತಿಮಾನ್ಸಹ ಮೇದಿನ್ಯಾ ಲಬ್ಧಭವ್ಯತನೂಜಯಾ ।
ಅಮನ್ಯತಾನ್ವಯಂ ಸ್ವಸ್ಯ ಸ್ಪೃಹಣೀಯಮಿವೋನ್ನತಂ ॥೨೪॥

ಶುಭಾಂಗಲಕ್ಷಣಃ ಸೋಽಯಂ ಜಾತಕರ್ಮಾದಿಸತ್ಕೃತಃ ।
ಪಿತುರ್ಹೃತ್ಪದ್ಮಬೋಧಾಯ ಸುಖೋ ವಿದ್ಯಾಂ ಸಮಗ್ರಹೀತ್ ॥೨೫॥

ಕ್ರಮಾತ್ಕಲಾವರುದ್ಧೋಽಭೂತ್ಕಲಾಧರ ಇವೋದ್ಯತಃ ।
ಗುರೂಣಾಂ ವಿಸ್ಮಯಂ ಕುರ್ವನ್ನಪ್ಪಷ್ಟವೃಷ್ಟಿಮಿವೇಂದುವತ್ ॥೨೬॥

ಕನ್ಯಾಂ ತಿಲಕವಜ್ಯಾಖ್ಯಾಂ ದಾತುಂ ದ್ವಾದಶಹಾಯನಾಂ ।
ಪ್ರವರಾಯಾನುರೂಪಾಯ ವರಾಯಾಚಿತಯತ್ಪಿತಾ ॥೨೭॥

---

ಈ ಕಮಲಾವತಿಗೆ, ಸದ್ಗುರುವಿನ ಉಪದೇಶವು ಪ್ರಿಯಶಿಷ್ಯನಲ್ಲಿ ಫಲಿಸುವಂತೆ ಸಕಲವಿದ್ಯೆಗಳೂ ಮನೋಹರವಾಗಿ ಲಬ್ಧವಾದವು. ಸ್ವಲ್ಪಕಾಲಕಳೆದ ತರುವಾಯ ಮೇದಿನಿಯು 'ತಮೋನಿವಾರಕ' ನೆಂಬ ಹೆಸರಿನ ಒಬ್ಬ ಮಗನನ್ನು ಪಡೆದಳು. ಆ ಕೀರ್ತಿವಂತನು ತನ್ನ ಪತ್ನಿಯಾದ ಮೇದಿನಿ, ಮಂಗಳಕುವರಿಯಾದ ಕಮಲಾವತಿಯರಿಂದ, ತನ್ನ ವಂಶವು ಎಲ್ಲರಿಂದಲೂ ಅಪೇಕ್ಷಿಸುವಂತೆ ಅಭಿವೃದ್ಧಿಹೊಂದಿತೆಂದು ತಿಳಿದು ಸಂತುಷ್ಟನಾದನು. ॥೨೩-೨೪॥

ಶುಭಕರವಾದ ಅಂಗಚಿಹ್ನೆಗಳುಳ್ಳ ಈ ತಮೋನಿವಾರಕನು ಜಾತಕರ್ಮ ನಾಮಕರಣಾದಿಸಂಸ್ಕಾರಗಳಿಂದ ಸತ್ಕೃತನಾಗಿ, ತಂದೆತಾಯಿಗಳ ಹೃದಯಕಮಲ ವಿಕಾಸಕ್ಕೋಸ್ಕರ ಸಕಲ ವಿದ್ಯೆಗಳನ್ನು ಅಭ್ಯಾಸಮಾಡಿದನು. ಕ್ರಮವಾಗಿ ಚಂದ್ರನಂತೆ ಒಂದೊಂದು ಕಲೆಯನ್ನೇ ಅರಿತು, ಗುರುಗಳಿಗೂ ಆಶ್ಚರ್ಯವನ್ನುಂಟುಮಾಡುತ್ತಾ ಅಮೃತಕಿರಣನಂತೆ ಹೂಮಳೆಗರೆಯುತ್ತಿದ್ದನು.

ತಂದೆಯಾದ ಕೀರ್ತಿವಂತನು ಹನ್ನೆರಡು ವಯಸ್ಸಿನ ತನ್ನ ಕುವರಿಯಾದ ತಿಲಕವತಿಯನ್ನು (ಇಲ್ಲಿ ತಿಲಕವತಿಯೆಂದೂ ಜನನಕಾಲದಲ್ಲಿ ಕಮಲಾವತಿಯೆಂದೂ ಹೇಳಿರುವುದರಿಂದ ಕನ್ಯೆಗೆ ಎರಡು ಹೆಸರಿದ್ದವೆಂದು ಹೇಳಬಹುದು.) ಯೋಗ್ಯನೂ ಉತ್ತಮವಂಶೀಯನೂ ಆದ ವರನಿಗೆ ಕೊಟ್ಟು ವಿವಾಹಮಾಡಲು ಬಂಧುಗಳನ್ನು

ಶೂದ್ರಃ ಕಲಿರಿಪುರ್ನಾಮ್ನಾ ಮಂತ್ರಿವರ್ಯೋ ಮಹೀಪತೇಃ ।
ಪೂರ್ವಸಂಬಂಧಶೋಭೀಚ ಶಿವಪಾದಸ್ಥಿರಾಶಯಃ ॥೨೮॥

ಆತ್ಮೀಯಾನ್ಕೀರ್ತಿಮತ್ಪುತ್ರೀಂ ವರಿತುಂ ಪ್ರಾಹಿಣೋದ್ಧಿತಾನ್ ।
ಕೀರ್ತಿಮಂತಂ ಚ ತೇ ಪ್ರಾಪ್ಯ ವವ್ರಿರೇ ಕನ್ಯಕಾಂ ಚ ತಾಂ ॥೨೯॥

ಸಂಭಾವ್ಯ ಕೀರ್ತಿಮಾನ್ಪ್ರೀತ್ಯಾ ಬಾಂಧವಾನ್ಕಲಿವೈರಿಣಃ ।
ತಸ್ಮೈ ಸ್ವತನಯಾಮೇನಾಂ ದಾಸ್ಯಾಮೀತ್ಯವದಚ್ಚತಾನ್ ॥೩೦॥

ಕನ್ಯಾಪಿತೃಮತಂ ಶ್ರುತ್ವಾ ಪ್ರತ್ಯಾಗತಸುಹೃನ್ಮುಖಾನ್ ।
ಕಲಿಶತ್ರುಃ ಪ್ರಹೃಷ್ಟೋಽಭೂತ್ತದ್ದರ್ಶನಕುತೂಹಲೀ ॥೩೧॥

ತಾವನ್ನೃಪತಿನಾದಿಷ್ಟಃ ಕಲಿವೈರೀ ರಣೇದ್ವಿಷಃ ।
ಜೇತುಂ ಸ ನಿರ್ಯಯೌ ಧೀರಶ್ಚತುರಂಗಬಲಾನ್ವಿತಃ ॥೩೨॥

---

ಬೇಡಿದನು. ಮಹಾರಾಜನ ಮಂತ್ರಿಶ್ರೇಷ್ಠನಾದ 'ಕಲಿರಿಪು'ವೆಂಬ ಶೂದ್ರನು ಕೀರ್ತಿವಂತನ ಹಿಂದಿನ ಬಾಂಧವ್ಯವುಳ್ಳವನೂ ಶಿವನ, ಪಾದಕಮಲಭಕ್ತಿಪೂರ್ಣನೂ ಆಗಿದ್ದನು. ಆ ಕಲಿರಿಪುವು ಕೀರ್ತಿವಂತನ ಮಗಳನ್ನು ಮದುವೆಮಾಡಿಕೊಳ್ಳ ಬೇಕೆಂಬ ಉದ್ದೇಶದಿಂದ ತನ್ನ ಕಡೆಯ ಹಿತಚಿಂತಕರನ್ನು ಕೀರ್ತಿವಂತನ ಬಳಿಗೆ ಕಳುಹಿಸಿದನು. ॥೨೭-೨೮॥

ಕಲಿರಿಪುವಿನ ಕಡೆಯವರು ಕೀರ್ತಿವಂತನ ಬಳಿಗೆ ಬಂದು ಅವನ ಮಗಳನ್ನು ತಮ್ಮ ಮಂತ್ರಿಗೆ ಕೊಡಬೇಕೆಂದು ಪ್ರಾರ್ಥಿಸಿದರು. ಆಗ ಆ ಕೀರ್ತಿವಂತನು ಕಲಿವೈರಿಯ ಬಾಂಧವರನ್ನು ಪ್ರೀತಿಯಿಂದ ಗೌರವಿಸಿ, ಅವರ ಮಾತಿಗೆ ಮನ್ನಣೆ ಯಿತ್ತು, ನಿಮ್ಮ ಆ ಮಂತ್ರಿಗೆ ಈ ನನ್ನ ಮಗಳನ್ನು ಕೊಟ್ಟು ವಿವಾಹ ಮಾಡುತ್ತೇ ನೆಂದು ಅವರಿಗೆ ಹೇಳಿಕಳುಹಿಸಿದನು. ಹುಡುಗಿಯ ತಂದೆಯ ಅಭಿಪ್ರಾಯವನ್ನು ತನ್ನ ಬಂಧುಮಿತ್ರರಿಂದ ತಿಳಿದು ಕಲಿಶತ್ರುವು ಸಂತುಷ್ಟನಾಗಿ ಆ ತಿಲಕವತಿಯ ದರ್ಶನಮಾಡಲು ಕುತೂಹಲವುಳ್ಳವನಾದನು. ॥೨೯-೩೦-೩೧॥

ಇಷ್ಟರಲ್ಲಿ ರಾಜನಿಂದ ಆಜ್ಞಪ್ತನಾಗಿ ಯುದ್ಧದಲ್ಲಿ ವೈರಿಗಳನ್ನು ಜಯಿಸಲು ಧೀರನಾದ ಆಕಲಿರಿಪುವು, ಹಸ್ತ್ಯಶ್ವರಥಪದಾತಿಗಳೆಂಬ ಚತುರಂಗಬಲಸಮೇತನಾಗಿ ರಣರಂಗಕ್ಕೆ ಹೊರಟನು. ಅಲ್ಲಿ ಹೋದನಂತರ ಶತ್ರುಗಳನ್ನೆದುರಿಸಿ ಪರಸ್ಪರವಾಗಿ

ಪ್ರತ್ಯೇತ್ಯ ದ್ವಿಷತೇ ಯುದ್ಧೇ ಯುಧ್ಯಮಾನೇಷು ತೈರ್ಮುಹುಃ ।
ಪರಾಜಿತ್ಯ ರಣೇ ಯೋದ್ಧಾನಾಯುಧೈಃ ಸ ಸಮಾಗಮತ್ ॥೩೩॥

ತಸ್ಯಾಸ್ತಿಲಕವತ್ಯಾಶ್ಚ ಜನಕಃ ಕಾಲಮೇಯಿವಾನ್ ।
ಮೋದಿನೀ ಚಾನ್ವಗಾತ್ತತ್ರ ಪತಿಲೋಕಪರಾಯಣಾ ॥೩೪॥

ತಯೋಃ ಸಾ ಪುತ್ರಕೇಣೋರ್ಧ್ವದೇಹಂ ಚಕ್ರೇ ವಿಧಾನತಃ ।
ರಿಪುಃ ಕಲಿರಿಪುಶ್ಚೋಭೌ ಸನ್ನದ್ಧೌ ನಿಹತೌ ಯುಧಿ ॥೩೫॥

ತದಾ ಕಮಲಿನೀ ಶ್ರುತ್ವಾ ನಿಹತಂ ಕಲಿವೈರಿಣಂ ।
ಸಾ ಭ್ರಾತ್ರಾ ಸಾಂತ್ವಿತಾ ಸಾಧ್ವೀ ವೈಧವ್ಯಂ ಚಾನ್ವಭೂತ್ತದಾ ॥೩೬॥

ದೇಹಸ್ಯಾಸ್ಥಿರತಾಂ ಜ್ಞಾತ್ವಾ ತದ್ಭ್ರಾತಾ ಧರ್ಮವಾಸಭೂತ್ ।
ಅರ್ಚಯಿತ್ವಾ ಮಹೇಶಾನಮರ್ಥಿನೋಽಭ್ಯರ್ಚಯದ್ಧನೈಃ ॥೩೭॥

---

ಯುದ್ಧರಂಗದಲ್ಲಿ ಕಾದಾಡಿ ಆಯುಧಗಳಿಂದ ಅವರನ್ನು ಸೋಲಿಸಿ ಅನಂತರ ಕಲಿರಿಪುವು ಹಿಂತಿರುಗಿ ಬಂದನು. ॥೩೨-೩೩॥

ಅನಂತರ ಕಲಿರಿಪುವಿಗೂ ತಿಲಕವತಿಗೂ ಮದುವೆಯಾಯಿತು. ಕೊಂಚ ದಿವಸದಲ್ಲಿ ತಿಲಕವತಿಯ ತಂದೆಯು ಕಾಲವಾದನು. ಆತನ ಹೆಂಡತಿಯಾದ ಮೋದಿನಿಯೂ ಪತಿಲೋಕಪರಾಯಣಳಾದ್ದರಿಂದ ಅವನನ್ನೇ ಹಿಂಬಾಲಿಸಿದಳು. ಆಗ ತಂದೆತಾಯಿಗಳಿಗೆ ಕುಮಾರಿಯಾದ ತಿಲಕವತಿಯು ತನ್ನ ತಮ್ಮನಿಂದ ವಿಧಿಪ್ರಕಾರ ಅಪರಕ್ರಿಯೆಗಳನ್ನು ನೆರವೇರಿಸಿದಳು. ಹೀಗೆ ಕೊಂಚ ಕಾಲ ಕಳೆಯಲು ಕಲಿರಿಪುವು ಯುದ್ಧದಲ್ಲಿ ಶತ್ರುವನ್ನು ಕೊಂದು ತಾನೂ ಮೃತನಾದನು. ॥೩೪-೩೫॥

ಆಗ ಕಮಲಿನಿಯು (ತಿಲಕವತಿಯು) ಕಲಿವೈರಿಯು (ತನ್ನ ಗಂಡನು) ಕೊಲ್ಲಲ್ಪಟ್ಟದ್ದನ್ನು ಕೇಳಿ ದುಃಖಿಸುತ್ತಿರಲು, ಸಹೋದರನುಬಂದು ಸಮಾಧಾನಮಾಡಿದನು. ಪತಿವ್ರತೆಯಾದ ಆ ಕಮಲಿನಿಯು ಅಲ್ಲಿಂದ ಮುಂದೆ ವೈಧವ್ಯದುಃಖಾಕ್ರಾಂತಳಾದಳು. ಇವಳ ತಮ್ಮನು ಈ ದೇಹದ ಅಶಾಶ್ವತತ್ವವನ್ನು ತಿಳಿದು ಧರ್ಮಮಾರ್ಗವನ್ನವಲಂಬಿಸಿದನು. ಅವನು ಮಹೇಶ್ವರನನ್ನು ಪೂಜೆಮಾಡಿ ಯಾಚಕರಿಗೆ ಬೇಕಾದಷ್ಟು ಹಣಕಾಸುಗಳನ್ನು ಕೊಟ್ಟು ಪೂಜಿಸುತ್ತಿದ್ದನು. ॥೩೬-೩೭॥

ಪ್ರಾವರ್ತಯದವೋಘಶ್ರೀರನ್ನಶಾಲಾಮಠಾನಪಿ ।
ಕೃತಾರಾಮತಟಾಕಾಶ್ಚ ಶಿವಗೋಪುರಬಂಧನೈಃ ॥೩೮॥

ಚಾತುರ್ವರ್ಣ್ಯಾನ್ ತಥಾ ಭಕ್ತಾನನ್ನದಾನೈರತೋಷಯತ್ ।
ತಮೋರಿಪುಃ ಸ್ವಚ್ಛಚಿತ್ತೋ ಪಶ್ಯನ್ಸಾಂಸಾರಿಕೀಂ ರುಜಂ ॥೩೯॥

ಅಹಿಂಸಾನಿಷ್ಠಹೃದಯಃ ಶ್ರೌತದ್ವಿಟ್ಚಾರ್ಹತೋಽಭವತ್ ।
ಹಿತ್ವಾ ಬಂಧುಂ ತತಃ ಸಾ ಚ ತದಾ ತಿಲಕವತ್ಯಪಿ ॥೪೦॥

ಸಹ್ಯಜಾತೀರನಿಲಯಂ ವೀರಸ್ಥಾನೇಶ್ವರಂ ಗತಾ ।
ಮಠಂ ತತ್ರ ವಿಧಾಯೈವ ನೀಲಕಂಠಪದಾರ್ಚಕಾ ॥೪೧॥

ಪ್ರಾಗೇವಾರ್ಕೋದಯಾತ್ಪಾಂಸೂನ್ಮಾರ್ಜನ್ಯಾ ಪರಿಧೂಯ ಸಾ ।
ಧೇನೋಶ್ಚಿರಪ್ರಸೂತಾಯಾ ಗೋಮಯೇನೋಪಲಿಪ್ಯ ಗಾಂ ॥೪೨॥

ಸ್ವಹಸ್ತಲೂನೈಃ ಕುಸುಮೈರ್ಗ್ರಥಿತ್ವಾ ಚ ನವಸ್ರಜಃ ।
ಸ್ವಯಮಭ್ಯರ್ಚಯಲ್ಲಿಂಗೇ ದದೌ ವೀರೇಶ್ವರಾಯ ಸಾ ॥೪೩॥

---

ಅಪರಿಮಿತವಾದ ಐಶ್ವರ್ಯವುಳ್ಳ ಆ ತಮೋನಿವಾರಕನು ಅನ್ನಶಾಲೆ (ಛತ್ರ) ಮಠಗಳು, ಉದ್ಯಾನವನ, ಕೆರೆ ಮತ್ತು ಶಿವದೇವಾಲಯಗಳ ಗೋಪುರಗಳು ಇವೇ ಮುಂತಾದ ಧರ್ಮಕೆಲಸಗಳನ್ನು ಮಾಡುವುದರಲ್ಲಿ ತೊಡಗಿದನು. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರರೆಂಬ ನಾಲ್ಕು ಜಾತಿಯವರಲ್ಲಿಯೂ ಶೈವರಾದವರನ್ನು ಅನ್ನದಾನವೇ ಮುಂತಾದವುಗಳಿಂದ ಸಂತೋಷಪಡಿಸಿದನು. ನಿರ್ಮಲಾಂತಃಕರಣನಾದ ಆ ತಮೋರಿಪುವು ಈ ಸಂಸಾರದ ರೋಗವನ್ನು ನೋಡುತ್ತಾ, ಅಹಿಂಸಾಮಾರ್ಗದಲ್ಲಿಟ್ಟ ಮನವುಳ್ಳವನಾಗಿ ಶ್ರುತಿಪ್ರತಿಪಾದಿತಗಳಾದ ಕರ್ಮಗಳನ್ನು ದ್ವೇಷಿಸುತ್ತಾ ಜೈನನಾದನು. ॥೩೮-೩೯॥

ಆ ತಿಲಕವತಿಯೂ ಕೂಡ ಆಗ ತನ್ನ ಬಂಧುಗಳನ್ನೆಲ್ಲಾ ಬಿಟ್ಟು, ಕಾವೇರೀ ನದಿಯ ದಡದಲ್ಲಿದ್ದ ವೀರೇಶ್ವರನ ದೇವಸ್ಥಾನವನ್ನಾಶ್ರಯಿಸಿ, ಅಲ್ಲಿಯೇ ಮಠವನ್ನು ಕಟ್ಟಿಸಿ, ನೀಲಕಂಠನ ಪಾದಪೂಜೆ ಮಾಡುತ್ತಾ, ಸೂರ್ಯನು ಹುಟ್ಟುವುದಕ್ಕೆ ಮುಂಚೆಯೇ ದೇವಾಲಯದ ಧೂಳನ್ನೆಲ್ಲಾ (ಕಸವನ್ನೆಲ್ಲಾ) ಕಸಪರಿಕೆಯಿಂದ ಚೆನ್ನಾಗಿ ಗುಡಿಸಿ, ಹೊಸದಾಗಿ ಕರು ಹಾಕಿರುವ ಹಸುವಿನ ಸಗಣಿಯಿಂದ ನೆಲವನ್ನು

ಏವಂ ಸಾ ಶಿವಕೈಂಕರ್ಯನಿಷ್ಠಶಿಷ್ಟತಮಾ ಸತೀ ।
ನಿನಾಯ ವಾಸರಾನ್ಮಾಸಾನ್ಹಾಯನಾಯನಾಂಶುಭಾನ್ ॥೪೪॥

ಶ್ರುತ್ವಾನುಜಂ ಜೈನಮಾರ್ಗಸ್ಥಿತಂ ದುಃಖಾಕುಲಾಭವತ್ ।
ತದ್ದುಃಖತಪ್ತಾ ಸಾ ನಿತ್ಯಂ ವಿರಟ್ಟೇಶಂ ವ್ಯಜಿಜ್ಞಪತ್ ॥೪೫॥

॥ ಕುಮಾರ್ಯುವಾಚ ॥

ವಿರಟ್ಟೇಶ ಶಂಭೋ ಮಯಿ ಯದಿ ತೇ ಕರುಣಾ ಶಿವ ।
ಮಮಾನುಜೋ ಬಲಾದ್ದೇವ ಸ್ಥಾಪ್ಯಃ ಶೈವಪಥಿಸ್ಥಿರಃ ॥೪೬॥

ವಿಜ್ಞಪ್ತಿಮಥ ದೇವೋಽಪಿ ತಸ್ಯಾಃ ಶ್ರುತ್ವಾ ದಿನೇ ದಿನೇ ।
ಯದಾ ತದುದರೇ ಶೂಲಂ ಕಾಲಾಗ್ನ್ಯುಜ್ವಲದೀಪಿನಂ ॥೪೭॥

---

ಸಾರಿಸುತ್ತಾ, ತನ್ನ ಕೈಗಳಿಂದಲೇ ಕೊಯ್ದು ಹೊಸ ಹೂಗಳಿಂದ ಮಾಲೆಗಳನ್ನು ಕಟ್ಟಿ ತಾನೇ ಶಿವಲಿಂಗವನ್ನು ಪೂಜಿಸಿ ಆ ವೀರೇಶ್ವರನಿಗೆ ಆ ಮಾಲೆಗಳನ್ನು ಸಮರ್ಪಿಸುತ್ತಿದ್ದಳು. ॥೪೦-೪೧-೪೨-೪೩॥

ಹೀಗೆ ಅವಳು ಶಿವಸೇವಾನಿರತಳಾಗಿ ಶ್ರೇಷ್ಠಳೆನಿಸಿ ಅನೇಕ ದಿವಸ, ತಿಂಗಳು, ವರ್ಷ ಮತ್ತು ಅಯನಗಳನ್ನು ಸುಖವಾಗಿ ಕಳೆದಳು. ಇತ್ತ ತನ್ನ ತಮ್ಮನು ಜೈನ ಮಾರ್ಗದಲ್ಲಿರುವುದನ್ನು ಕೇಳಿ ತಾನು ದುಃಖಪೀಡಿತಳಾಗಿ ಆ ಖೇದದಿಂದ ನೊಂದು ನಿತ್ಯವೂ ಅವಳು ಆ ವಿರಟ್ಟೇಶ್ವರನಿಗೆ ಹೀಗೆ ಅರಿಕೆಮಾಡುತ್ತಿದ್ದಳು. ॥೪೪-೪೫॥

'ವೀರಟ್ಟೇಶ್ವರನಾದ ಶಂಭುವೇ! ಮಂಗಳಸ್ವರೂಪನಾದ ನಿನಗೆ ನನ್ನಲ್ಲಿ ದಯೆಯಿರುವುದಾದರೆ, ನನ್ನ ತಮ್ಮನನ್ನು ಬಲಾತ್ಕಾರವಾಗಿ ಶೈವಮಾರ್ಗದಲ್ಲಿ ಶಾಶ್ವತವಾಗಿರುವಂತೆ ಮಾಡು' ಎಂದು ಕುಮಾರಿಯು ಪ್ರಾರ್ಥಿಸಲು, ಆ ವಿಜ್ಞಾಪನೆಯನ್ನು ಪ್ರತಿದಿನವೂ ಕೇಳಿ ಕೇಳಿ ಆ ಮಹಾದೇವನು ಒಮ್ಮೆ ಪ್ರಳಯಕಾಲದ ಬೆಂಕಿಯಂತೆ ಉಜ್ವಲವಾಗಿ ಉರಿಯುತ್ತಿದ್ದ ಶೂಲವನ್ನು ಆ ತಮೋರಿಪುವಿನ ಹೊಟ್ಟೆಯಲ್ಲಿರಿಸಿ ದಿನದಿನಕ್ಕೂ ಆ ಹೊಟ್ಟೆಶೂಲೆಯು ಹೆಚ್ಚಾಗಿ ವ್ಯಥೆಕೊಡುವಂತೆ ಬೆಳೆಸಿದನು. ॥೪೬-೪೭॥

ವ್ಯವರ್ಧಯತ್ತದಾಸಹ್ಯಂ ಶೂಲಂ ತದುದರೇ ಶಿವಃ ।
ವಿಹ್ವಲಸ್ತೇನ ಶೂಲೇನ ಧರ್ಮಹೀನಜನಾಲಯೇ ॥೪೮॥

ನೃಪತತ್ತದ್ರುಜೋಶಾಂತ್ಯೈ ಕುತ್ಸಿತೈಸ್ತ್ರೈಶ್ಚಿಕಿತ್ಸಿತಃ ।
ಮಂತ್ರಸಿದ್ಧಾಶ್ಚ ತಾ ವಿದ್ಯಾನಾಲಂ ಶೂಲಂ ವ್ಯಪೋಹಿತುಂ ॥೪೯॥

ವ್ಯಜೃಂಭಂತ್ಯೇವ ಸಹಸಾ ಶೂಲೇ ಹಾಲಾಹಲೋಪಮಃ ।
ಆಪಾದಚೂಲಮಾಮೃಜ್ಯ ಪಿಂಛಾಗ್ರೈಃ ಪಿಂಛಧಾರಿಣಃ ॥೫೦॥

ಮಂತ್ರಸಿದ್ಧಾಂತ್ಸ್ವಸಿದ್ಧಾಂತಾನ್ಸಂಜೇಪುರ್ಜೈನದೇಶಿಕಾಃ ।
ತಥಾಪಿ ವರ್ಧಮಾನೋಽಸೌ ಧರ್ಮಸೇನಮಮೋಹಯತ್ ॥೫೧॥

ಧಾತ್ರೀಯೀಂ ಕಾಂಚಿದಾಭಾಷ್ಯ ಪ್ರೇಷಯದ್ಭಗಿನೀಂ ಪ್ರತಿ ।
ಸಾಧಾತ್ರೀ ತಾಂ ಚ ದೃಷ್ಟ್ವಾರ್ತಾಂ ಭ್ರಾತುಃ ಶೂಲಕ್ಕೃತಾಂವದತ್ ॥೫೨॥

---

ಆಗ ತವೋರಿಪುವು ಉದರಶೂಲೆಯಿಂದ ಕಾತರನಾಗಿ ಧರ್ಮಭ್ರಷ್ಟರಾದ ಜೈನ ಜನಗಳ ಗುಂಪಿನಲ್ಲಿ ಬಿದ್ದುಬಿಟ್ಟನು. ಆಗ ಆ ರೋಗದ ಶಾಂತಿಗೋಸ್ಕರ ನೀಚರಾದ ಆ ಜೈನರು ಚಿಕಿತ್ಸೆಮಾಡಿದರು. ಮಂತ್ರಸಿದ್ಧಗಳಾದ ಆ ವಿದ್ಯೆಗಳೆಲ್ಲವೂ ಆ ಉದರ ಶೂಲೆಯನ್ನು ಹೋಗಲಾಡಿಸಲು ಶಕ್ತವಾಗಲಿಲ್ಲ. ಎಲ್ಲವೂ ಹಾಲಾಹಲವಿಷಕ್ಕೆ ಸಮನಾಗಿ ಆ ನೋವನ್ನು ಇನ್ನೂ ರೇಗಿಸುತ್ತಿದ್ದವು. ॥೪೮-೪೯॥

ನವಿಲುಗರಿಯ ಕಂತೆಗಳನ್ನು ಹಿಡಿದ ಜೈನಗುರುಗಳು ತಮ್ಮ ನವಿಲುಗರಿಗಳ ತುದಿಯನ್ನು ಕಾಲಿಂದ ಹಿಡಿದು ತಲೆಗೂದಲವರೆಗೂ ಮಂತ್ರಿಸಿ ಮುಟ್ಟಿಸಿ ಅನಂತರ ಮಂತ್ರಸಿದ್ಧವಾದ ತಮ್ಮ ಸಿದ್ಧಾಂತಗಳನ್ನು ಜಪಿಸಿದರು. ಆದರೂ ಈ ಶೂಲ ವ್ಯಾಧಿಯು ಹೆಚ್ಚುತ್ತಲೇ ಇದ್ದು ಆ ಧರ್ಮಸೇನನನ್ನು ಮೂರ್ಛೆಗೊಳಿಸಿತು. ಆಗ ಅವನು ಒಬ್ಬ ದಾದಿಯನ್ನು ಕರೆದು ತನ್ನ ತಂಗಿಯ ಬಳಿಗೆ ಹೋಗಿ ಕರೆತರುವಂತೆ ಹೇಳಿಕಳುಹಿಸಿದನು. ಅವಳು ಅದರಂತೆ ಕಮಲಾವತಿಯಿದ್ದೆಡೆಗೆ ಬಂದು ಭ್ರಾತೃ ಚಿಂತೆಯಿಂದ ನೊಂದಿದ್ದ ಅವಳನ್ನು ನೋಡಿ, ಅವಳ ಸೋದರನ ಶೂಲವ್ಯಾಧಿಯನ್ನು ತಿಳಿಸಿದಳು. ॥೫೦-೫೧-೫೨॥

ಸಾ ಸಮಾಗತ್ಯ ದದೃಶೇ ಭ್ರಾತರಂ ಶೂಲವಿಹ್ವಲಂ ।
ಉವಾಚ ಜೈನಾನ್ಸಂವೀಕ್ಷ್ಯ ಭ್ರಾತರಂ ಶೂಲವಿಹ್ವಲಂ ॥೫೩॥

॥ ಕುಮಾರ್ಯುವಾಚ ॥

ಸರ್ವರೋಗಹರಂ ಚೈತದ್ಭಸ್ಮೇದಂ ಶಿವಶಾಸನಂ ।
ಅನೇನ ಸಂಸ್ಪೃಶಾಮೀದಂ ಅಸ್ಯಾರ್ಥೋದರಮಂಜಸಾ ॥೫೪॥

ಪಂಚಾಕ್ಷರೇಣ ಸಂಜಪ್ಯ ಶೂಲಹಸ್ತಂ ಹೃದಿಸ್ಮರನ್ ।
ರೋದ್ಧುಮಿಚ್ಛಾಮ್ಯಹಂ ಶೂಲಮರ್ಧೇ ಯುಷ್ಮತ್ಕ್ರಿಯಾ ಭವೇತ್ ॥೫೫॥

ಇತ್ಥಂ ಜೈನಾಸ್ತದಾವಾಕ್ಯಂ ಶ್ರುತ್ವಾ ಜೇಪುಸ್ತದಂಗಕೇ ।
ನ ಶಾಂತೋಽಭೂತ್ತದಾ ಶೂಲಃ ಶೂಲಹಸ್ತಂ ಹೃದಿಸ್ಮರನ್ ॥೫೬॥

ಪಸ್ಪರ್ಶ ಭಸ್ಮನಾ ಸಾಪಿ ಪಂಚಾಕ್ಷರಮತಂದ್ರಿತಾ ।
ತದಾ ತದುದರೇ ಪಾರ್ಶ್ವೇ ತಸ್ಯಾರ್ಧೇ ಶಾಂತಿಮಾನಭೂತ್ ॥೫೭॥

---

ಆ ಕಮಲಾವತಿಯು ಜಾಗ್ರತೆಯಾಗಿ ಅಲ್ಲಿಗೆ ಬಂದು ಶೂಲವ್ಯಾಧಿಯಿಂದ ಕಾತರನಾಗಿ ಬಿದ್ದಿರುವ ತಮ್ಮನನ್ನು ನೋಡಿ ಅಲ್ಲಿ ನೆರೆದಿದ್ದ ಜೈನರನ್ನುದ್ದೇಶಿಸಿ ಮಾತನಾಡುತ್ತಾ ॥೫೩॥

ಭಸ್ಮವು ಸಕಲ ವ್ಯಾಧಿಗಳನ್ನೂ ಹೋಗಲಾಡಿಸುವುದೆಂದು ಶಿವನ ಶಾಸನವಿರುವುದು. ಈ ಭಸ್ಮದಿಂದ ಈತನ ಅರ್ಧ ಹೊಟ್ಟೆಯನ್ನು ನಾನು ಜಾಗ್ರತೆ ಮುಟ್ಟಿ ಪಂಚಾಕ್ಷರಮಂತ್ರವನ್ನು ಜಪಿಸಿ ತ್ರಿಶೂಲಪಾಣಿಯನ್ನು ಮನದಲ್ಲಿ ನೆನೆಯುತ್ತಾ ಅರ್ಧಹೊಟ್ಟೆಯ ನೋವನ್ನು ತಡೆಯಲು ಇಚ್ಛಿಸುತ್ತೇನೆ. ಇನ್ನರ್ಧಭಾಗದ ನೋವನ್ನು ಹೋಗಲಾಡಿಸಲು ನಿಮ್ಮ ಕಾರ್ಯವು ನಡೆಯಲಿ ; ಎಂದು ಹೇಳಿದಳು. ॥೫೪-೫೫॥

ಹೀಗೆ ಆ ಮಾತನ್ನು ಕೇಳಿ ಜೈನರು ಆಗ ತಮ್ಮ ಸಿದ್ಧಾಂತವಾಕ್ಯಗಳನ್ನು ಅವನ ಉದರಶೂಲೆಯ ನಿಮಿತ್ತವಾಗಿ ಜಪಿಸಿದರು. ಆದರೂ ಆ ಶೂಲವ್ಯಾಧಿಯು ನಿಲ್ಲಲಿಲ್ಲ. ಆಗ ಕಮಲಾವತಿಯು ಮಹೇಶನನ್ನು ಮನದಲ್ಲಿ ಸ್ಮರಿಸುತ್ತಾ ಪಂಚಾಕ್ಷರಮಂತ್ರಪೂತವಾದ ಭಸ್ಮದಿಂದ ಅವನ ಅರ್ಧ ಹೊಟ್ಟೆಯನ್ನು ಜಾಗ್ರತೆಯಿಂದ ಮುಟ್ಟಿದಳು. ಆಗ ಅವಳು ಮುಟ್ಟಿದ ಅರ್ಧಹೊಟ್ಟೆಯ ಭಾಗದಲ್ಲಾಗುತ್ತಿದ್ದ ಶೂಲವ್ಯಾಧಿಯು ನಿವಾರಣೆಯಾಯಿತು. ॥೫೬-೫೭॥

ಜೈನಾ ಭಸ್ಮಕ್ರಿಯಾಂ ದೃಷ್ಟ್ವಾ ತದಾವನತಕಂಧರಾಃ ।
ಸೋಽಪ್ಯಯಾಚತ್ತದಾ ಭಸ್ಮ ಪಂಚಾಕ್ಷರ ವಿಮಂತ್ರಿತಂ ॥೫೮॥

॥ ಭ್ರಾತಾ ಉವಾಚ ॥

ಭವಾಮಿ ಭಸ್ಮಫಾಲೋಽಹಂ ಜೈನಾಂಸ್ತ್ಯಕ್ತ್ವಾ ಸುಖೀ ಭವೇ ।
ಶಪೇ ಶಿವಸ್ಯ ಪಾದಾಬ್ಜಂ ನೈತತ್ಸಂದೇಹಕಾರಣಂ ॥೫೯॥

ಇತ್ಯಾರ್ತೇನ ತದಾ ಪೃಷ್ಟಾ ಭಸ್ಮನಾ ಶಾಂತಿಮಾತನೋತ್ ।
ಸೋಽಪಿ ಭಸ್ಮತ್ರಿಪುಂಡ್ರಾಂಕೋ ರುದ್ರಾಕ್ಷಸ್ರಗ್ಭಿರುಜ್ವಲಃ ॥೬೦॥

ಬಭೂವ ಶಿವಧರ್ಮಜ್ಞಸ್ತ್ಯಕ್ತ್ವಾ ಜೈನಮತಂ ತದಾ ।
ಅನುಜಾಯಾಮತೇ ತಿಷ್ಠನ್ಗಿರಿಜಾಪತಿಪೂಜಕಃ ॥೬೧॥

ಸ್ತುತ್ವೇಶಂ ಸ್ತುತಿಭಿರ್ನಿತ್ಯಂ ಜಗಾಮ ಕಿಲ ಕಾಲತಃ ।
ಕಲಧೌತಮಹಾಶೈಲಂ ಶಿವಪ್ರೇಮ್ಣಾ ಸ್ವಯಂ ತದಾ ॥೬೨॥

ಸಾ ಚಾಪಿ ಗಿರಿಜಾಪಾದಪದ್ಮಮೂಲಂ ಜಗಾಮ ಚ ॥೬೩॥

---

ಆಗ ಜೈನರೆಲ್ಲರೂ ಭಸ್ಮದ ವ್ಯಾಪಾರವನ್ನು ನೋಡಿ ತಲೆಬಾಗಿ ನಿಂತರು. ಆ ಧರ್ಮಸೇನನಾದರೋ ಪಂಚಾಕ್ಷರಮಂತ್ರಪೂತವಾದ ಅದೇ ಭಸ್ಮವನ್ನು ಮತ್ತೆ ಬೇಡಿದನು. ॥೫೮॥

ನಾನೂ ಈ ಜೈನಮತವನ್ನು ತ್ಯಜಿಸಿ, ಈ ಸಂಸಾರದಲ್ಲಿ ಭಸ್ಮಲಲಾಟನಾಗಿ ಶೈವಮತವನ್ನಂಗೀಕರಿಸುವೆನು. ಶಿವನ ಪಾದಕಮಲದಾಣೆಯನ್ನಿಟ್ಟು ಹೇಳುತ್ತೇನೆ. ಇದರಲ್ಲಿ ಸಂಶಯಕ್ಕೆ ಕಾರಣವೇ ಇಲ್ಲವು ಎಂದು ಶೂಲವ್ಯಾಧಿಪೀಡಿತನಾದ ಆ ಸಹೋದರನು ಹೇಳಲು, ಆಗ ಕಮಲಾವತಿಯು ಅದರಂತೆ ಇನ್ನರ್ಧ ಹೊಟ್ಟೆಯಲ್ಲಿದ್ದ ಶೂಲವ್ಯಾಧಿಯನ್ನೂ ಭಸ್ಮದಿಂದ ನಿವಾರಿಸಿ ಶಾಂತಿಯನ್ನುಂಟುಮಾಡಿದಳು. ಆಗ ಆ ತಮೋರಿಪುವೂ ಸಹ ಭಸ್ಮತ್ರಿಪುಂಡ್ರಾಂಕಿತನಾಗಿ, ರುದ್ರಾಕ್ಷಮಾಲೆಗಳಿಂದ ಪ್ರಜ್ವಲಿಸುತ್ತಾ ಶಿವಧರ್ಮವನ್ನರಿತು ಜೈನಮತವನ್ನು ಪೂರ್ಣವಾಗಿ ತ್ಯಾಗಮಾಡಿದನು. ॥೫೯-೬೦॥

ಸಹೋದರಿಯಾದ ಕಮಲಾವತಿಯ ಮತದಲ್ಲಿ ಇದ್ದುಕೊಂಡು ಗಿರಿಜಾರಮಣನನ್ನು ಪೂಜಿಸುತ್ತಾ ನಿತ್ಯವೂ ಅನೇಕ ಸ್ತುತಿಗಳಿಂದ ಈಶ್ವರನನ್ನು ಸ್ತೋತ್ರ

ಏವಂ ಭಸ್ಮಪ್ರಭಾವೋಜ್ಝಿತವರಗದ ಹೃಚ್ಛೂಲಹಸ್ತಾನುಕೂಲ
ಜ್ವಾಲಾಕ್ಷಾತುಲಪಾದಪದ್ಮವಿಲಸದ್ಭಕ್ತ್ಯೈವ ಭುಕ್ತ್ವಾ ಸುಖಂ ।
ಮುಕ್ತಿಂ ಚಾಪಿ ಜಗಾಮ ಶಂಭುಕೃಪಯಾ ರುದ್ರೋರುಜಾಪ್ಯರ್ದಿತೋ
ವಾಚಾಂ ಚಾಪಿ ಪತಿರ್ಬಭೂವ ಸ ತದಾ ಯುಕ್ತೋ ಹ ಶಂಗಂ ವಿಶತ್॥೬೪॥

ಇತಿ ಶ್ರೀ ಶಿವರಹಸ್ಯೇ ನವಮಾಂಶೇ ಸದಾಶಿವಾಖ್ಯೇ ವಾಗೀಶಭಕ್ತಚರಿತ್ರೇ
ಭಸ್ಮಮಹಿಮಾವರ್ಣನಂ ನಾಮ ತ್ರಿಚತ್ವಾರಿಂಶೋಽಧ್ಯಾಯಃ

---

ಮಾಡಿ ಕೊನೆಗೆ ಮರಣಕಾಲದಲ್ಲಿ ಶಿವನ ದಯೆಯಿಂದ ತಾನೇ ರಜತಾದ್ರಿಯನ್ನೈದಿದನು. ಆ ಕಮಲಾವತಿಯೂ ಕೂಡ ಪರ್ವತರಾಜಕುವರಿಯ ಅಡಿದಾವರೆಗಳ ಬುಡವನ್ನೈದಿದಳು. ॥೬೧-೬೨-೬೩॥

ಹೀಗೆ ಭಸ್ಮಪ್ರಭಾವದಿಂದ ದೊಡ್ಡ ಉದರಶೂಲೆಯನ್ನು ಪರಿಹರಿಸಿಕೊಂಡು, ಶೂಲಪಾಣಿಯಾದ ಶಿವನಿಗೆ ಅನುಕೂಲನಾಗಿ ಹಣೆಗಣ್ಣನಾದ ಆ ಮಹಾದೇವನ ಅಸದೃಶವಾದ ಪಾದಕಮಲಗಳಲ್ಲಿಟ್ಟ ಭಕ್ತಿಯಿಂದಲೇ ಇಹದಲ್ಲಿ ಸಮಸ್ತ ಸುಖವನ್ನೂ ಅನುಭವಿಸಿ, ಕೊನೆಗೆ ಆ ಶಂಭುವಿನ ದಯೆಯಿಂದ ಮುಕ್ತಿಯನ್ನೂ ಪಡೆದು, ಆ ರುದ್ರನ ಶಿವಮಂತ್ರಜಪಪ್ರಭಾವದಿಂದ ವಾಗೀಶನೆಂದೂ ಪ್ರಖ್ಯಾತನಾಗಿ ಆ ತಮೋರಿಪುವು ಅವಸಾನದಲ್ಲಿ ಆ ಪರಶಿವನಲ್ಲಿಯೇ ಐಕ್ಯನಾದನು ; ಎಂದು ಜೈಗೀಶವ್ಯನಿಗೆ ಕುಮಾರಸ್ವಾಮಿಯು ಹೇಳಿದನು. ॥೬೪॥

ಇಂತು ಶ್ರೀಶಿವರಹಸ್ಯದಲ್ಲಿ ಸದಾಶಿವ ಸಂಜ್ಞಕವಾದ ಒಂಬತ್ತನೆಯ ಅಂಶದಲ್ಲಿ
ವಾಗೀಶನೆಂಬ ಭಕ್ತನ ಚರಿತ್ರೆಯಲ್ಲಿ ಭಸ್ಮಪ್ರಭಾವವರ್ಣನೆಯೆಂಬ
ನಲವತ್ತಮೂರನೆಯ ಅಧ್ಯಾಯ ಮುಗಿಯಿತು.



॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಸದಾಶಿವಾಖ್ಯೇ

## ನವಮಾಂಶೇ

## ಚತುಶ್ಚತ್ವಾರಿಂಶೋಽಧ್ಯಾಯಃ

॥ ಶ್ರೀಸ್ಕಂದ ಉವಾಚ ॥

ಕುಲಪಕ್ಷಸ್ಯ ಚರಿತಂ ಸರ್ವಪಾಪಪ್ರಣಾಶನಂ ।
ಭಾಗ್ಯಜನ್ಮಪದೇ ದೇಶೇ ಪಾಂಡ್ಯಭೂಪಾಲಪಾಲಿತೇ ॥೧॥

ಸೌರಭೋತ್ತರ ಕುಂಡಾಖ್ಯಂ ಕ್ರಮುಕಾ ಕ್ರಮಿತಂ ಪುರಂ ।
ತತ್ರಾಸೀತ್ಕುಲಪಕ್ಷಾಖ್ಯೋ ನಿರ್ಮಲಃ ಶೂಲಭೃತ್ಪರಃ ॥೨॥

ಹರಭಕ್ತಾರ್ಚಕೋ ನಿತ್ಯಂ ಹರಿತಾಘೋಽಖಿಲಾತ್ಮನಾಂ ।
ಶಂಭುದಾಸ್ಯಂ ತತ್ಪ್ರಭುತ್ವಾತ್ಪಾಂಡ್ಯಸ್ಯೈವಾಕರೋತ್ತದಾ ॥೩॥

---

## ನಲವತ್ತನಾಲ್ಕನೆಯ ಅಧ್ಯಾಯ

ಓ ಜೈಗೀಷವ್ಯನೇ, ಸಕಲ ಪಾಪಗಳನ್ನೂ ಕಳೆಯುವ ಕುಲಪಕ್ಷನೆಂಬ ಭಕ್ತನ ಕಥೆಯನ್ನು ಹೇಳುತ್ತೇನೆ ಕೇಳು—ಪಾಂಡ್ಯರಾಜನಿಂದ ರಕ್ಷಿಸಲ್ಪಡುವ ಭಾಗ್ಯಜನ್ಮವೆಂಬ ದೇಶದಲ್ಲಿ ಅಡಕೆಮರಗಳಿಂದ ವ್ಯಾಪ್ತವಾದ ಸೌರಭೋತ್ತರಕುಂಡವೆಂಬ ಒಂದು ಪಟ್ಟಣವಿದ್ದಿತು. ಅಲ್ಲಿ ಪರಿಶುದ್ಧನೂ ಶಿವಭಕ್ತಾಗ್ರಣಿಯೂ ಆದ ಕುಲಪಕ್ಷನೆಂಬ ಹೆಸರಿನ ಭಕ್ತನೊಬ್ಬನಿದ್ದನು. ॥೧-೨॥

ಶೈವರನ್ನು ನಿತ್ಯವೂ ಪೂಜಿಸುತ್ತಾ ಸಕಲರ ಪಾಪವನ್ನೂ ಕಳೆಯುತ್ತಾ ಅವನು ಶಂಭುವಿನ ಸೇವೆಯನ್ನೂ, ಆ ದೇಶದ ರಾಜನಾದ್ದರಿಂದ ಆ ಪಾಂಡ್ಯನ ಸೇವೆಯನ್ನೂ ಮಾಡಿಕೊಂಡಿದ್ದನು. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೆಂಬ ನಾಲ್ಕು ವರ್ಣಗಳಲ್ಲಿಯಾಗಲೀ ಅಥವಾ ನೀಚವಾದ ಪಂಚಮವರ್ಣದಲ್ಲಿಯಾಗಲೀ

ಜಾತಶ್ಚ ತ್ರಿಷು ವರ್ಣೇಷು ನೀಚೇ ವಾ ಯೋ ಮಹೇಶ್ವರೇ ।
ಭಕ್ತಿಂ ಬಿಭರ್ತಿ ತತ್ಪಾದೇ ಧತ್ತೇ ಮೂರ್ಧ್ನಿ ಸದೈವ ಸಃ ॥೪॥

ಯೋ ವಾ ಕೋ ವಾಪಿ ತದ್ಭಕ್ತೋ ಆಯಾತಿ ಪರಮಾರ್ಥವಿತ್ ।
ಸ ತಂ ನತ್ವಾ ಸೋಪಚಾರೈರನ್ನಾದಿಭಿರತೋಷಯತ್ ॥೫॥

ಭಸ್ಮರುದ್ರಾಕ್ಷಸಂಪನ್ನಂ ದೃಷ್ಟ್ವೈವಂ ಪ್ರಣಮೇಚ್ಚ ಸಃ ।
ಪಂಚಾಕ್ಷರೀ ಮನುರ್ವಕ್ತ್ರೇ ತತ್ಪಾದಂ ಪ್ರಣನಾಮ ಸಃ ॥೬॥

ಏವಂ ಶಿವಾರ್ಚಕೋ ನಿತ್ಯಂ ಕುಲಪಕ್ಷಃ ಸುಧಾರ್ಮಿಕಃ ।
ಪರೌಘಜೇತಾ ಪಾಂಡ್ಯಸ್ಯ ಮಂತ್ರಿಣಾಮಗ್ರಣೀರ್ಭವೇತ್ ॥೭॥

ತೇನೈವ ಬೋಧಿತಾ ಸಾಧ್ವೀ ಮಹಿಲಾ ಯಾ ಚ ಭೂಪತೇಃ ।
ಶೈವಾಂಘ್ರಿಪೂಜನರತಾ ರಾಜಾನಂ ಪಾಂಡ್ಯಭೂಪತಿಂ ॥೮॥

ಜೈನಪಕ್ಷಸ್ಥಿತಂ ಸಾಧ್ವೀ ಮಂತ್ರಿಣಾಮಂತ್ರಿತೇನ ಸಾ ।
ತದಾ ತೇನ ಪ್ರಬುದ್ಧೋಽಸೌ ಪಾಂಡ್ಯಭೂಪೋಽಪಿ ಸತ್ತಮಃ ॥೯॥

---

ಹುಟ್ಟಿದವನು ಮಹೇಶ್ವರನ ಭಕ್ತನಾಗಿದ್ದರೆ ಅವನ ಕಾಲುಗಳನ್ನು ಸಹ ಯಾವಾಗಲೂ ಇವನು ತಲೆಯಲ್ಲಿ ಧರಿಸುತ್ತಿದ್ದನು. (ಅಂದರೆ ಅವನ ಪಾದಗಳಿಗೆರಗುತ್ತಿದ್ದನು.) ||೩-೪||

ಪರಮೇಶಭಕ್ತನು ಯಾರೇ ಆಗಲಿ, ಕೂಡಲೇ ಪರಮತತ್ವವನ್ನರಿತ ಆ ಕುಲಪಕ್ಷನು, ಬಂದ ಆ ಭಕ್ತನಿಗೆ ನಮಸ್ಕರಿಸಿ, ಉಪಚಾರಮಾಡಿ ಅರ್ಘ್ಯವೇ ಮೊದಲಾದವುಗಳಿಂದ ಸಂತೋಷಗೊಳಿಸುತ್ತಿದ್ದನು. ಹೀಗೆ ಭಸ್ಮರುದ್ರಾಕ್ಷಸಂಪನ್ನರಾದವರನ್ನು ಕಂಡಕೂಡಲೇ ಅವನು ನಮಸ್ಕಾರಮಾಡುತ್ತಿದ್ದನು. ಶಿವಪಂಚಾಕ್ಷರಮಂತ್ರವನ್ನು ಬಾಯಲ್ಲಿ ಉಚ್ಚರಿಸುವವರ ಕಾಲಿಗೆ ಪ್ರಣಾಮಮಾಡುತ್ತಿದ್ದನು. ||೫-೬||

ಹೀಗೆ ನಿತ್ಯವೂ ಶಿವಪೂಜಾನಿರತನೂ, ಒಳ್ಳೆಯ ಧರ್ಮಿಷ್ಠನೂ ಆದ ಆ ಕುಲಪಕ್ಷನು ಶತ್ರುಸಮೂಹಗಳನ್ನೆಲ್ಲಾ ಗೆಲ್ಲುತ್ತಾ ಪಾಂಡ್ಯರಾಜನ ಮಂತ್ರಿಗಳಲ್ಲೆಲ್ಲಾ ಅಗ್ರಗಣ್ಯನಾದನು. ಆ ಪಾಂಡ್ಯರಾಜನ ರಾಣಿಯಾದ ಪತಿವ್ರತಾಶಿರೋಮಣಿಯು ಶೈವರ ಪಾದಪೂಜಾನಿರತಳಾದಳು. ಆಕೆಯು ಜೈನಮತವನ್ನಾಶ್ರಯಿಸಿದ್ದ ತನ್ನ

ಉತ್ಕೃತ್ತಜೈನಾನಾಹೂಯ ಸ್ವಗಾತ್ರಸ್ಥಂ ತದಾ ಜ್ವರಂ ।
ನಾಶಕ್ನುವಂಸ್ತಂ ತ್ವರಿತಂ ರೋಗಜ್ವರ ನಿವಾರಣೇ ॥೧೦॥

ವಾಗೀಶಮಾಹೂಯ ತದಾ ಶಿವಭಕ್ತೈರಿ ತದಾ ಸದಾ ।
ತೇನ ಜ್ವರಂ ನೃಪಸ್ಯಾಂಗೇ ನಾಶಯಾಮಾಸ ಸಾ ತದಾ ॥೧೧॥

ಜೈನಾನ್ಶೂಲಸ್ಥಿತಾನ್ಚಕ್ರೇ ಶೂಲಪಾಣಿ ಪರಾಙ್ಮುಖಾನ್ ।
ಭಸ್ಮರುದ್ರಾಕ್ಷಸಂಪನ್ನಂ ಪಾಂಡ್ಯಭೂಪತಿಮಾತನೋತ್ ॥೧೨॥

ಮಿಥಿಲಾಯಾಂ ದ್ವಿಜಃ ಕಶ್ಚಿಚ್ಛೂರಶರ್ಮೇತಿ ನಾಮತಃ ।
ಪೂಗಪುನ್ನಾಗಪನಸ ನಾರಿಕೇಲಾಮ್ರಶೋಭಿತಾ ॥೧೩॥

ಶ್ರೀಭೂತಿಧಶ ತೇಜೋಭಿರ್ದೀಪ್ತವೀಥಿಷು ಭೂತಿಷು ।
ಗೃಹಸ್ಥಧರ್ಮನಿರತೈರಾಶ್ರಿತಾ ಶ್ರೀಭಿರಾವೃತಾ ॥೧೪॥

---

ಗಂಡನನ್ನು ಆ ಮಂತ್ರಿಯಿಂದ ಎಚ್ಚರಗೊಳಿಸಿದಳು. ಹಾಗೆ ಶೈವತತ್ತ್ವವನ್ನರಿತ ಆ ಪಾಂಡ್ಯರಾಜನಾದರೋ ಶ್ರೇಷ್ಠನೆನಿಸಿದನು. ॥೭-೮-೯॥

ಒಂದು ದಿನ ಪಾಂಡ್ಯರಾಜನ ರಾಣಿಯು ಕೊಬ್ಬಿದ ಜೈನರನ್ನು ಕರೆಸಿ ರಾಜನ ದೇಹದಲ್ಲಿರುವ ಜ್ವರವನ್ನು ಅವರಿಗೆ ಸೂಚಿಸಿದಳು. ಅವರು ಆ ರಾಜನ ಜ್ವರವನ್ನು ನಿವಾರಿಸಲು ಸಮರ್ಥರಾಗಲಿಲ್ಲ. ಆಗ ರಾಜನು ಶಿವಭಕ್ತನಾದ ವಾಗೀಶನನ್ನು ಕರೆಸಿ ಅವನಿಂದ ತನ್ನ ಶರೀರದಲ್ಲಿದ್ದ ಜ್ವರವನ್ನು ಹೋಗಲಾಡಿಸಿಕೊಂಡಳು. ॥೧೦-೧೧॥

ಶಿವಪರಾಙ್ಮುಖರಾಗಿದ್ದ ಜೈನರನ್ನೆಲ್ಲಾ ಆ ರಾಣಿಯು ಶೂಲಕ್ಕೇರಿಸಿ ತನ್ನ ಗಂಡನಾದ ಪಾಂಡ್ಯರಾಜನನ್ನು ಭಸ್ಮರುದ್ರಾಕ್ಷಸಂಪನ್ನನನ್ನಾಗಿ ಮಾಡಿಸಿದಳು. ॥೧೨॥

ಮಿಥಿಲಾದೇಶದಲ್ಲಿ 'ಶೂರಶರ್ಮ' ನೆಂಬ ಹೆಸರಿನ ಒಬ್ಬ ದ್ವಿಜನಿದ್ದನು. ಅಡಿಕೆ, ಪುನ್ನಾಗ, ಹಲಸು, ತೆಂಗು, ಮಾವು ಮುಂತಾದ ಮರಗಳ ಸಮೂಹದಿಂದ ಆ ಮಿಥಿಲಾದೇಶವು ಶೋಭಿಸುತ್ತಿದ್ದಿತು. ಸಂಪತ್ಕರವಾದ ವಿಭೂತಿಧಾರಿಗಳಾದ ಜನಗಳ ತೇಜಸ್ಸುಗಳಿಂದ ಆ ಊರಿನ ಬೀದಿಗಳೆಲ್ಲವೂ ಪ್ರಜ್ವಲಿಸುತ್ತಿದ್ದುವು. ಸಕಲೈಶ್ವರ್ಯಗಳಿಂದ ಆ ಊರು ಮೆರೆಯುತ್ತಿದ್ದಿತು. ಗೃಹಸ್ಥಧರ್ಮದಲ್ಲಿ ನಿರತರಾದ ಜನಗಳಿಂದಲೂ ದಿವ್ಯವಾದೈಶ್ವರ್ಯಗಳಿಂದಲೂ ಸಂಪೂರ್ಣವಾದ ಆ ಮಿಥಿಲಾದೇಶದಲ್ಲಿ ಪ್ರಸಿದ್ಧವಾದ 'ಮಿಥಿಲಾ' ಎಂಬ ಪಟ್ಟಣವಿದ್ದಿತು. ॥೧೩-೧೪॥

ಪ್ರಕಾಶೇ ಮಿಥಿಲಾದೇಶೇ ಪ್ರಥಿತಾ ಮಿಥಿಲಾಪುರೀ ।
ಮಿಥಿಲಾದ್ವಿಜಶೂರೋಽಭೂತ್ತತ್ರಾತ್ಮಜ್ಞಃ ಶಿವಾಂಘ್ರಿಭಾಕ್ ॥೧೫॥

ನೀಲಿಮಾಸಂಪನ್ನಮುಗ್ಧೇಂದುಮೌಳಿಶಂಕರ ಕಿಂಕರಃ ।
ಮಿಥಿಲಾದ್ವಿಜಶೂರೋಽಯಂ ಭಕ್ತಾನಾಂ ಭಾವಿತಾತ್ಮನಾಂ ॥೧೬॥

ಅನುಕ್ತಮಪಿ ಕೈಂಕರ್ಯಂ ಭಕ್ತಾನಾಂ ಸ ಸದಾತನೋತ್ ।
ಸ್ವಯಂ ಪ್ರಹ್ವೋ ಭವನ್ನಿತ್ಯಂ ಭಕ್ತಾನಾಮರ್ಚನೇ ರತಃ ॥೧೭॥

ಯಥೇಷ್ಟಂ ಷಡ್ರಸೈರ್ಯುಕ್ತಂ ಭಕ್ತಂ ಭಕ್ತಾನಭೋಜಯತ್ ।
ಭೂಯಃ ಸಂತರ್ಪ್ಯ ತಾಂಭೋಜ್ಯೈಃ ಪ್ರಾಜ್ಯೈರಾಜ್ಯಾದಿಭಿಸ್ತದಾ ॥೧೮॥

ಭೃಂಗಾಂಗಕಬರೀಗೌರೀನಾಥಾಂಘ್ರಿ ನಲಿನಾಶಯಃ ।
ಶಿವದಾಸ್ಯಮಸೀಮಾಂತಂ ಸ್ವೀಚಕ್ರೇ ವಿಧಿನಾ ಸುಧೀಃ ॥೧೯॥

---

ಮಿಥಿಲಾಪಟ್ಟಣದ ಬ್ರಾಹ್ಮಣರಲ್ಲಿ ಶ್ರೇಷ್ಠನಾದ ಶೂರಶರ್ಮನು ಆತ್ಮಸ್ವರೂಪವನ್ನರಿತು ಶಿವಪಾದಭಕ್ತನಾಗಿದ್ದನು. ಹಾಲಾಹಲವಿಷಭಕ್ಷಣದಿಂದ ಕಪ್ಪಾದ ಕೊರಳು, ಸುಂದರವಾದ ಅರ್ಧಚಂದ್ರ ತಲೆಯುಳ್ಳ ಶ್ರೀಮಹಾದೇವನ ಕಿಂಕರನಾದ ಈತನು ಮಿಥಿಲಾಪಟ್ಟಣದ ಶೈವರೂ ಜಿತೇಂದ್ರಿಯರೂ ಆದವರಿಗೆಲ್ಲಾ ಶ್ರೇಷ್ಠನಾಗಿದ್ದನು. ಮತ್ತೊಬ್ಬರಿಂದ ಹೇಳಿಸಿಕೊಳ್ಳದೇ ಶೈವರ ಸೇವೆಯನ್ನು ಯಾವಾಗಲೂ ಮಾಡುತ್ತಿದ್ದನು. ॥೧೫-೧೬॥

ತಾನು ನಿತ್ಯವೂ ವಿನೀತನಾಗಿ ಶೈವರ ಪೂಜೆಯಲ್ಲಿ ಆಸಕ್ತನಾಗುತ್ತಿದ್ದನು. ಮಧುರಾಮ್ಲಲವಣಕಟುಕಷಾಯತಿಕ್ತರೂಪವಾದ ಷಡ್ರಸಭರಿತವಾದ ದಿವ್ಯಾನ್ನವನ್ನು ಮಾಡಿಸಿ ಭಕ್ತರಿಗೆ ಬೇಕಾದಷ್ಟು ಭೋಜನಮಾಡಿಸುತ್ತಿದ್ದನು. ವಿಶೇಷವಾಗಿ ಆ ಭಕ್ತರಿಗೆ ಭಕ್ಷ್ಯಭೋಜ್ಯಾದಿಗಳಿಂದಲೂ ಹೆಚ್ಚಾದ ತುಪ್ಪವೇ ಮುಂತಾದವುಗಳಿಂದಲೂ ತೃಪ್ತಿಪಡಿಸಿ, ದುಂಬಿಯ ದೇಹದಂತೆ ನೀಲವಾದ ಕೇಶಪಾಶದಿಂದ ಶೋಭಿಸುವ ಗೌರೀದೇವಿಯ ರಮಣನ ಪಾದಕಮಲದಲ್ಲಿ ಮನಸ್ಸಿಟ್ಟು ವಿಧಿಪೂರ್ವಕವಾಗಿ ಆ ಜ್ಞಾನಿಯು ಅತುಲವಾದ ಶಿವಕೈಂಕರ್ಯವನ್ನು ಸ್ವೀಕರಿಸಿದ್ದನು. ॥೧೭ ೧೮-೧೯॥

ವಕ್ತುಂ ಭಕ್ತೇಶಮಾಹಾತ್ಮ್ಯಂ ಭೂತೇಶಕರುಣಾನಿಧೇಃ ।
ಸೋಽಭೂತ್ಸುಂದರನಾಥಸ್ಯ ಪದಸ್ಮೃತಿಪರಾಯಣಃ ॥೨೦॥

ಸೌಮ್ಯಃ ಸೋಽಮಾರ್ಧಚೂಡಸ್ಯ ಪಾದಪಂಕಜಸೇವಿನಾಂ ।
ಪಾರ್ವತೀಶಸ್ಯಪಾದಾಬ್ಜಭಕ್ತಿಂ ಮುಕ್ತಿಮುಮಂಸ್ತ ಸಃ ॥೨೧॥

ಏವಂ ಸ್ಥಿತಸ್ಯ ತಸ್ಯೈವಂ ಭವೋ ಭಾವಂ ಪರೀಕ್ಷಿತುಂ ।
ಗೋಧಿನೇತ್ರೋ ಗಾಧಿಪುರಮಾಜಗಾಮಾತಿಕುತ್ಸಿತಃ ॥೨೨॥

ನೀಚವೇಷೇಣ ಕಲಶಂ ಧಾರಯನ್ಮೃದ್ಯಸಂಭವಂ ।
ತನ್ಮಧ್ಯಗೃಹಮಾಸ್ಥಾಯ ಪಾರ್ವಣೇ ಸಮುಪಸ್ಥಿತಃ ॥೨೩॥

ಸ್ನಾತ್ವಾ ದ್ವಿಜಾಸ್ತಥಾ ಶಾಂತಾ ಉಪವಿಷ್ಟಾ ವರಾಸನೇ ।
ಏವಂ ಸ್ಥಿತೇ ತದಾ ಶೂರೋ ಧೈರ್ಯಶೂರಶ್ಚ ಭಕ್ತಿಮಾನ್ ॥೨೪॥

ಭಸ್ಮಫಾಲಂ ತದಾ ದೃಷ್ಟ್ವಾ ಭಕ್ತಮುಭ್ಯುಜ್ಜಹಾರ ಚ ।
ಚಂಡಾಲಾಯ ದದೌ ಪೂರ್ವಂ ಪೈತೃಕಾರ್ಯಕೃತಂ ಹವಿಃ ॥೨೫॥

---

ಸ್ಥಾವರಜಂಗಮಾತ್ಮಕವಾದ ಪ್ರಾಣಿಗಳಿಗೊಡೆಯನೂ ದಯಾಸಮುದ್ರನೂ ಆದ ಆ ಭಕ್ತನಾಥನ ಮಹಿಮೆಯನ್ನು ಹೇಳಲು ಅವನು ಮೊದಲು ಸುಂದರ ನಾಥನ ಪಾದಸ್ಮರಣನಿರತನಾದನು. ಸೌಮ್ಯಸ್ವರೂಪನಾದ ಆ ಶೂರಶರ್ಮನು ಅರ್ಧಚಂದ್ರಶೇಖರನಾದ ಮಹಾದೇವನ ಅಡಿದಾವರೆಗಳನ್ನು ಸೇವಿಸುವವರಿಗೆ ಪಾರ್ವತೀರಮಣನ ಪಾದಕಮಲಭಕ್ತಿಯೇ ಮುಕ್ತಿಯೆಂದು ತಿಳಿಸಿದನು. ॥೨೦-೨೧॥

ಆ ಶೈವನು ಹೀಗೆ ನಡೆಯುತ್ತಿರಲು ಒಮ್ಮೆ ಹಣೆಗಣ್ಣನಾದ ಶಿವನು ತನ್ನ ಭಕ್ತನನ್ನು ಪರೀಕ್ಷಿಸಲು ಕೇವಲ ನೀಚವೇಷದಿಂದ ಆ ಗಾಧಿಪುರಕ್ಕೆ ಬಂದನು. ಹೊಸ ಆಕಾರದಿಂದ ಹೆಂಡದ ಗಡಿಗೆಯನ್ನು ಕೈಯ್ಯಲ್ಲಿ ಹಿಡಿದುಕೊಂಡು ಆ ಶೂರಸೇನನ ಮನೆಯ ಮಧ್ಯಭಾಗಕ್ಕೆ ಪರ್ವಕಾಲದಲ್ಲಿ (ಶ್ರಾದ್ಧಕಾಲದಲ್ಲಿ) ಬಂದನು. ॥೨೨-೨೩॥

ಆ ಶೂರಸೇನನ ಮನೆಯಲ್ಲಿ ಶ್ರಾದ್ಧಕ್ಕೆ ನಿಮಂತ್ರಿತರಾಗಿದ್ದ ಶಾಂತರಾದ ಬ್ರಾಹ್ಮಣರು ಸ್ನಾನಮಾಡಿ ಪವಿತ್ರರಾಗಿ ಉತ್ತಮವಾದ ಆಸನದಲ್ಲಿ ಮಂಡಿಸಿದ್ದರು. ಹೀಗಿರಲು ಧೈರ್ಯವಂತರಲ್ಲಿ ಶೂರನೆನಿಸಿ ಶೈವವರ್ಯನಾದ ಆ ಶೂರಸೇನನು ವಿಭೂತಿ ಲಲಾಟನಾದ ಈ ಚಂಡಾಲನನ್ನು ನೋಡಿ ಜಗ್ಗನೆ ಅವನನ್ನು ಎದುರುಗೊಂಡು

ತಂ ದೃಷ್ಟ್ವಾ ಚುಕ್ರುಧುರ್ವಿಪ್ರಾ ಧಿಕ್ತ್ವಾಮಿತಿ ವಿನಿರ್ಯಯುಃ ।
ವಿನಿಂದಿತೋ ಬಂಧುಭಿಶ್ಚ ಸ್ತಬ್ಧಸ್ತಸ್ಥೌ ಪ್ರಹೃಷ್ಟಧೀಃ ॥೨೬॥

ಅಷ್ಟಮೂರ್ತಿಮಿಮಂ ದಿಷ್ಟಂ ಭಕ್ತಿಹೃಷ್ಟತನೂರುಹಾಃ ।
ಚಂಡಾಲೋಽಪ್ಯಥ ತದ್ದತ್ತಂ ಬುಭುಜೇ ಪರಮಂ ಹವಿಃ ॥೨೭॥

ಹೃಷ್ಟೋಽಥ ನಿರ್ಜಗಾಮೈವ ಮೌಲಿಮಾಂದೋಲಯಂಸ್ತದಾ ।
ನಿಕ್ಷಿಪ್ಯೋಚ್ಛಿಷ್ಟಪಾತ್ರಂ ತದಂಕಣೇ ಫಣಿಕಂಕಣಃ ॥೨೮॥

ವಿನಿರ್ಗತೇಽಥ ಚಂಡಾಲೇ ತತ್ಪತ್ನೀ ಕೋಪವಿಹ್ವಲಾ ।
ಪಾತ್ರಮುಚ್ಚಾಲಯಾಮಾಸ ಶೂದ್ರಾಸ್ತ್ರ್ಯಾ ತದ್ಭುಕ್ತಮೇವ ಸಾ ॥೨೯॥

---

ಕರೆತಂದು, ಪಿತೃಕಾರ್ಯಕ್ಕಾಗಿ ಸಿದ್ಧಮಾಡಿದ್ದ ಹವಿಸ್ಸನ್ನು ಮೊದಲು ಆ ಚಂಡಾಲನಿಗೆ ಅರ್ಪಿಸಿದನು. ॥೨೪-೨೫॥

ಹೀಗೆ ಮಾಡಿದ ಆ ಶೂರಸೇನನನ್ನು ನೋಡಿ ಬಂದಿದ್ದ ಬ್ರಾಹ್ಮಣರು ಛೀ! ನಿನಗೆ ಧಿಕ್ಕಾರವು; ಎಂದು ನಿಂದಿಸಿ ಅಲ್ಲಿಂದ ಹೊರಟುಹೋದರು. ಹೀಗೆಯೇ ಬಂಧುಗಳಿಂದ ನಿಂದಿಸಲ್ಪಟ್ಟವನಾದರೂ ನಿಶ್ಚಲನಾಗಿ ನಿಂತು ಈಶ್ವರಸ್ವರೂಪ ನಾದ ಈ ಚಂಡಾಲನನ್ನು ನೋಡುತ್ತಾ ಭಕ್ತಿಯಿಂದ ರೋಮಾಂಚಿತನಾಗಿ ಸಂತುಷ್ಟ ಮನಸ್ಕನಾದನು. ಆಗ ಆ ಚಂಡಾಲನೂ ಸಹ ತನಗೆ ಕೊಟ್ಟ ಉತ್ತಮವಾದ ಹವಿಸ್ಸನ್ನು ಸಂತೋಷದಿಂದ ಊಟಮಾಡಿದನು. ॥೨೬-೨೭॥

ಆಗ ಚಂಡಾಲವೇಷಧಾರಿಯಾದ ಆ ಪರಶಿವನು ಭೋಜನಮಾಡಿ ಸಂತುಷ್ಟ ನಾಗಿ ತಲೆಯನ್ನಲ್ಲಾಡಿಸುತ್ತಾ ಹೊರಟುಹೋದನು. ಹೋಗುವಾಗ ಆ ಸರ್ಪ ಕಂಕಣನಾದ ಶಿವನು ಊಟಮಾಡಿದ ಪಾತ್ರೆಯನ್ನು ಆ ಮನೆಯ ಅಂಗಳದಲ್ಲೇ ಬಿಟ್ಟು ಹೋದನು. ಆ ಚಂಡಾಲವೇಷಧಾರಿಯಾದ ಶಿವನು ಹೀಗೆ ಹೊರಟು ಹೋದಮೇಲೆ ಶೂರಶರ್ಮನ ಹೆಂಡತಿಯು ತುಂಬಾ ಕೋಪಭರಿತಳಾಗಿ ಆ ಚಂಡಾಲನುಂಡಪಾತ್ರೆಯನ್ನು ಶೂದ್ರಸ್ತ್ರೀಯಿಂದ ಆಚೆಗೆ ತೆಗೆಸಿಹಾಕಿದಳು. ॥೨೮-೨೯॥

ಶೂದ್ರ್ಯಾ ತತ್ಪಾತ್ರಮುಧ್ಯೇನ ದಂಡೇನೋತ್ಕೀರ್ಯ ಪಾತಿತಂ ।
ಗ್ರಾಮಾದ್ಬಹಿಸ್ತನ್ನಿಕ್ಷಿಪ್ತಂ ಸ್ನಾತ್ವಾ ಶೂದ್ರೀ ಸಮಾಗತಾ ॥೩೦॥

ಪುನರನ್ಯತ್ತಥಾಪಾತ್ರಂ ಸ್ಥಿತಮೇವ ತದಂಕಣೇ ।
ಏವಂ ಪುನಃಪುನರ್ನೀತ್ವಾ ತ್ಯಕ್ತ್ವಾ ಶ್ರಾಂತಿಂ ಪರಾಂಗತಾ ॥೩೧॥

ಶೂರೋಽಪಿ ಭಾರ್ಯಾಂ ಸಾಂತ್ವಾಥ ಪುನಃ ಪಾಕಮಥಾರಭತ್ ।
ಪೂರ್ವಂ ನಿಮಂತ್ರಿತಾನ್ವಿಪ್ರಾನ್ಸಾಂತ್ವಯಂಛ್ರಾದ್ಧಭೋಜನೇ ॥೩೨॥

ತಂ ಚುಕ್ರುಧುಃ ಪುನಸ್ತೇಽಪಿ ಧಿಕ್ತ್ವಾಂ ಚಂಡಾಲಭೋಜಕಂ ।
ಬಹಿಷ್ಕಾರ್ಯೋಽಸಿ ವಿಪ್ರೈಸ್ತ್ವಂ ಗ್ರಾಮಾದಸ್ಮಾತ್ಪರಾವ್ರಜ ॥೩೩॥

ಇತ್ಯುಕ್ತೋ ದುಃಖಿತೋ ವಿಪ್ರಃ ಶ್ರಾದ್ಧಘಾತಂ ಸಮೀಕ್ಷ್ಯ ಚ ।
ಶಿವಂ ಹೃದಿ ತದಾಧ್ಯಾಯನ್ನುವಾಸಾ ಸಾಯಮೇವ ಹಿ ॥೩೪॥

---

ಆ ಶೂದ್ರಸ್ತ್ರೀಯೂ ಸಹ ಆ ಪಾತ್ರೆಗಳನ್ನು ಮುಟ್ಟದೇ ಕೋಲಿನಿಂದ ಆ ಪಾತ್ರೆಗಳ ಮಧ್ಯಭಾಗವನ್ನು ಹಿಡಿದು ಎತ್ತಿಕೊಂಡು ಹೋಗಿ ಊರಹೊರಗೆ ಅದನ್ನು ಎಸೆದು ಅನಂತರ ಸ್ನಾನಮಾಡಿ ಮನೆಗೆ ಬಂದಳು. ಪುನಃ ಇನ್ನೊಂದು, ಮತ್ತೊಂದು ಹೀಗೆ ಬಾರಿಬಾರಿಗೂ ಆ ಅಂಗಣದಲ್ಲಿ ಅದೇ ಪಾತ್ರೆಗಳು ಕಂಡುಬಂದವು. ಅವೆಲ್ಲ ವನ್ನೂ ಶೂದ್ರಸ್ತ್ರೀಯಿಂದ ಎತ್ತಿಹಾಕಿಸಿದ ಮೇಲೆ ಆ ಶೂರಶರ್ಮನ ಹೆಂಡತಿಗೆ ಸಂಪೂರ್ಣ ಶಾಂತಿಯುಂಟಾಯಿತು. ॥೩೦-೩೧॥

ಆಗ ಆ ಶೂರಶರ್ಮನು ಹೆಂಡತಿಯನ್ನು ಸಮಾಧಾನಪಡಿಸಿ ಅನಂತರ ಹೊಸದಾಗಿ ಅಡಿಗೆಮಾಡಲು ಉಪಕ್ರಮಿಸುವಂತೆ ಹೇಳಿದನು. ಅಲ್ಲದೆ ಹಾಗೆಯೇ ಹಿಂದೆ ನಿಮಂತ್ರಣಮಾಡಿದ್ದ ಬ್ರಾಹ್ಮಣರನ್ನೇ ಸಮಾಧಾನಮಾಡಿ ಪುನಃ ಶ್ರಾದ್ಧ ಭೋಜನಕ್ಕೆ ಕರೆಯಲು ಹೋದನು. ಆಗ ವಿಪ್ರರೆಲ್ಲರೂ ಕೋಪಗೊಂಡು "ಛೀ! ನೀಚ! ಚಂಡಾಲನಿಗೆ ಭೋಜನಮಾಡಿಸಿದ ನಿನ್ನನ್ನು ಧಿಕ್ಕರಿಸುವೆವು. ನೀನು ಬ್ರಾಹ್ಮಣ ಸಂಘದಿಂದಲೇ ಬಹಿಷ್ಕಾರ ಹೊಂದತಕ್ಕವನಾಗಿದ್ದೀಯೆ; ಈ ಗ್ರಾಮ ವನ್ನು ಬಿಟ್ಟು ಬೇರೆ ಎಲ್ಲಿಯಾದರೂ ದೂರ ಹೊರಗೆ ಹೋಗು" ಎಂದು ನಿಂದಿಸಿ ದರು. ॥೩೨-೩೩॥

ಹೀಗೆ ಬ್ರಾಹ್ಮಣರಿಂದ ನಿಂದಿಸಲ್ಪಟ್ಟು ದುಃಖಿತನಾದ ಆ ಬ್ರಾಹ್ಮಣನು ಶ್ರಾದ್ಧಕ್ಕೆ ಬಂದ ಅಡಚಣೆಯನ್ನು ಕಂಡು, ಶಿವನನ್ನು ಮನದಲ್ಲಿ ನೆನೆಯುತ್ತಾ

ತದ್ಭಕ್ತಿಂ ವಿಪ್ರಸಂಘಾನಾಂ ಪ್ರದರ್ಶಯಿತುಮಾಗತಃ ।
ವೃಷಾರೂಢೋ ಮಹಾದೇವ್ಯಾ ಚಂಚಚ್ಚಂದ್ರವಿಭೂಷಣಃ ॥೩೫॥

ನದತ್ಸು ದೇವತೂರ್ಯೇಷು ನೃತ್ಯಂತೀಷ್ವಪ್ಸರಸ್ಸು ಚ ।
ತಾನಾಹ ವಿಪ್ರಮಾಹೂಯ ಪಶ್ಯೈತತ್ಪೈತೃಕಂ ಗಣಂ ॥೩೬॥

ಸಂತೃಪ್ತಂ ನಿತರಾಮನ್ನೈರ್ವಿಮಾನೇನಾರ್ಕರೋಚಿಷಾ ।
ಗಚ್ಛಂತಂ ಶಕ್ರಸದನಂ ಪಶ್ಯೇತ್ಯಾಹ ಮಹೇಶ್ವರಃ ॥೩೭॥

ತದಾನೀಂ ಸ ಚ ಶೂರೋಽಸೌ ಭವದೇವಂ ಪ್ರಣಮ್ಯ ಚ ।
ಕೃತಾಂಜಲಿಪುಟಸ್ತಸ್ಥೌ ಸ್ತುವನ್ಜಯಜಯೇತಿ ಚ ॥೩೮॥

ವಿಪ್ರಸಂಘೈಃ ಪಿತೃಗಣಂ ಸ್ವಕೀಯಂ ವಿಸ್ಮಯಂ ಗತಃ ।
ಗಂಧಾಲಂಕಾರವಾಸೋಭಿರ್ಭೂಷಿತಂ ಯಾನಮಾಸ್ಥಿತಂ ॥೩೯॥

ತಂ ತದಾ ಪಿತರಃ ಪ್ರಾಹುರ್ಭಕ್ತಿಶೂರಂ ಶಿವಾರ್ಚಕಂ ॥೪೦॥

---

ಸಾಯಂಕಾಲದವರೆಗೂ ಹಾಗೆಯೇ ಇದ್ದನು. ಆಗ ಶೂರಸೇನನ ಭಕ್ತಿಯನ್ನು ಬ್ರಾಹ್ಮಣಸಮುದಾಯಕ್ಕೆ ತೋರಿಸಲು, ಹೊಳೆಯುತ್ತಿರುವ ಚಂದ್ರಕಿರೀಟಧಾರಿಯಾದ ಮಹಾದೇವನೇ ದೇವಿಯೊಡನೆ ವೃಷಭವನ್ನೇರಿ ಅಲ್ಲಿ ಪ್ರತ್ಯಕ್ಷವಾದನು. ॥೩೪-೩೫॥

ದೇವದುಂದುಭಿಗಳು ಮೊಳಗುತ್ತಾ ಅಪ್ಸರೆಯರು ನಾಟ್ಯವಾಡುತ್ತಿರಲು ಮಹಾದೇವನು ಈ ಬ್ರಾಹ್ಮಣನನ್ನು ಕರೆದು, ಓ ಶೂರಶರ್ಮನೇ, ಇಗೋ ಈ ಪಿತೃದೇವತೆಗಳ ಗಣಗಳನ್ನು ಇತ್ತ ನೋಡು ; ನೀನಿತ್ತ ಅನ್ನದಿಂದ ಸಂತುಷ್ಟರಾಗಿ ಸೂರ್ಯಕಾಂತಿಯುಳ್ಳ ವಿಮಾನಗಳನ್ನೇರಿ ಸ್ವರ್ಗಲೋಕಕ್ಕೆ ಹೋಗುತ್ತಿರುವದನ್ನು ನೋಡು ಎಂದು ಹೇಳಿದನು. ॥೩೬-೩೭॥

ಆಗ ಶೂರಶರ್ಮನು ದೇವದೇವನಾದ ಶಂಕರನಿಗೆ ನಮಸ್ಕರಿಸಿ ಕೈಮುಗಿದುಕೊಂಡು, 'ಜಯ ಜಯ' ಎಂದು ಬ್ರಾಹ್ಮಣರ ಸಮೂಹದೊಡನೆ ಶಿವನನ್ನು ಸ್ತೋತ್ರಮಾಡುತ್ತಾ ನಿಂತು, ಗಂಧ, ಅಲಂಕಾರ, ವಸ್ತ್ರಗಳಿಂದ ಅಲಂಕೃತರಾಗಿ ವಿಮಾನವನ್ನೇರಿ ಗಮಿಸುತ್ತಿರುವ ತನ್ನ ನಿಜಪಿತೃಗಣವನ್ನು ನೋಡಿ ಆಶ್ಚರ್ಯಪಟ್ಟನು. ಆಗ ಅವನ ಪಿತೃಗಳು ಭಕ್ತರಲ್ಲಿ ಶೂರನೆನಿಸಿ ಶಿವಪೂಜಾನಿರತನಾದ ಶೂರಶರ್ಮನನ್ನು ಕುರಿತು ಇಂತೆಂದರು. ॥೩೮-೩೯-೪೦॥

|| ಪಿತರ ಊಚುಃ ||

ಅಸ್ಮಾಕಂ ಪರಮಾತೃಪ್ತಿರ್ಭವತೋ ಭಾಗ್ಯಗೌರವಾತ್ ।
ಸಂಜಾತಾ ಶಂಭುಭುಕ್ತೇನ ಭಕ್ತಸಿಕ್ಥೇನ ಸರ್ವದಾ ||೪೧||

ದೇಶಪಾತ್ರಕ್ಷೇತ್ರದತ್ತೈಸ್ತೃಪ್ತಿಂ ನಃ ಶತವಾರ್ಷಿಕೀ ।
ಭವಭುಕ್ತಾನ್ನಶೇಷೇಣ ಅನಂತಾ ತೃಪ್ತಿರೇವ ನಃ ||೪೨||

ಯತಸ್ತ್ವಂ ಶಿವಭಕ್ತಾನಾಂ ಶ್ರೇಷ್ಠೋ ಮಾನ್ಯೋ ವಿಶೇಷತಃ ।
ತ್ವಯಾ ಯದ್ದತ್ತಮಸ್ಮಾಕಂ ಶಿವಭಕ್ತಮುಖೇ ಹುತಂ ||೪೩||

ಅನಂತ್ಯಾಯ ಭವೇದನ್ನಂ ಕಿಂ ಪುನಃ ಶಿವವಕ್ತ್ರಗಂ ||೪೪||

ಯೋ ಭಸ್ಮರುದ್ರಾಕ್ಷಯುತಾಂಗಕಂ ಸದಾ
ಶ್ರಾದ್ಧಂ ದದನ್ಭೋಜನಕೃತ್ಸದೈವ ।
ಅಸ್ಮಾಕಮೇವೇಷ್ಟತಮಾ ಹಿ ತೃಪ್ತಿಃ
ಸ್ಯಾತ್ತರ್ಪಣೇನಾನ್ಯದತೋ ವಿಶಿಷ್ಟಂ ||೪೫||

---

ಅಯ್ಯ ಶೂರಶರ್ಮನೇ, ನಿನ್ನ ಭಾಗ್ಯಗೌರವದಿಂದ ಸಾಕ್ಷಾತ್ಪರಮೇಶ್ವರನೇ ನಿನ್ನ ಮನೆಗೆ ಬಂದು ಊಟಮಾಡಿದ ಅನ್ನದ ಅಗಳುಗಳಿಂದ ನಮಗೆ ತುಂಬಾ ತೃಪ್ತಿಯುಂಟಾಗಿದೆ. ಉತ್ತಮವಾದ ದೇಶ, ಪಾತ್ರ, ಕ್ಷೇತ್ರಾದಿಗಳಲ್ಲಿ ನಮಗೆ ಕೊಡುವ ಅನ್ನೋದಕಗಳಿಂದ ನಮಗೆ ನೂರು ವರ್ಷ ಮಾತ್ರ ತೃಪ್ತಿಯುಂಟಾಗುವುದು. ಈಗ ಸಾಕ್ಷಾಚ್ಛಿವನೇ ಊಟಮಾಡಿ ಮಿಕ್ಕ ಅನ್ನಭಾಗದಿಂದ ನಮಗೆ ಅನಂತವಾದ ತೃಪ್ತಿಯೇ ಉಂಟಾಗಿರುವುದು. ||೪೧-೪೨||

ಏತಕ್ಕೆಂದರೆ ನೀನು ಶೈವರಲ್ಲೆಲ್ಲಾ ಶ್ರೇಷ್ಠನೂ ವಿಶೇಷವಾಗಿ ಮಾನ್ಯನೂ ಆಗಿರುವೆ. ನೀನು ನಮ್ಮನ್ನುದ್ದೇಶಿಸಿ ಶೈವನಮೂಲಕ ಅನ್ನವನ್ನು ಸಮರ್ಪಿಸಿರುವೆ. ಆ ಅನ್ನವು ಅನಂತತೃಪ್ತಿಯನ್ನುಂಟುಮಾಡುವುದೆಂದು ಹೇಳಿದಮೇಲೆ ಸಾಕ್ಷಾಚ್ಛಿವನ ಮುಖದಲ್ಲಿಯೇ ಸಮರ್ಪಿಸಿದ ಅನ್ನದ ವಿಷಯದಲ್ಲಿ ಹೇಳುವುದೇನಿದೆ. ||೪೩-೪೪||

ಭಸ್ಮರುದ್ರಾಕ್ಷಗಳಿಂದಲಂಕೃತವಾದ ದೇಹವುಳ್ಳ ಶೈವನಿಗೆ ಪಿತೃಗಳನ್ನುದ್ದೇಶಿಸಿ ಶ್ರಾದ್ಧಭೋಜನ ಮಾಡಿಸುವುದರಿಂದ ಪಿತೃಗಳಾದ್ದ್ವನಮಗೆ, ಇತರರಿಗೆ ಮಾಡಿ

ಯೋ ಭಸ್ಮರುದ್ರಾಕ್ಷವಿಹೀನಫಾಲೇ
ತೇನಾಫಲಂ ಶ್ರಾದ್ಧಮಹೋ ಸುದತ್ತಂ ।
ಸ್ಯಾದ್ದೇಶಕಾಲೋಚಿತಪಾತ್ರದತ್ತಂ
ಭವೇತ್ಸದಾ ನಿಷ್ಫಲಕಂ ಸದೈವ ॥೪೬॥

ಧನ್ಯಾವಯಂ ಶೈವಪಿತಾ ಪಿತಾಮಹಾ
ಮಾತಾಮಹಾ ಬಾಂಧವಾ ಯೇ ಚ ಸರ್ವೇ ।
ಪುನಾಸಿ ನಃ ಪುತ್ರಭೂತೋ ಮಹೇಶ
ಭಕ್ತೋಽಸಿ ಮಾನ್ಯೋಽಸಿ ವಿಶಿಷ್ಟ ಏವ ॥೪೭॥

ಪುನ್ನಾಮ್ನೋ ನರಕಾತ್ಸುತಾರಕ ಇತಿ ಜ್ಞೇಯಃ ಸದಾ ಶಾಂಭವೋ
ಭೂಯಾತ್ತತ್ಪ್ರತಪಸ್ಯಯಾ ಫಲಮಿದಂ ಜ್ಞೇಯಂ ಪಿತುರ್ವೈ ಸುತಃ ।
ನೋ ಚೇತ್ಪಾತಯತೋಽಸಿ ಪುತ್ರಕುಹರೇ ಭಸ್ಮಾಕ್ಷಭಕ್ತ್ಯುಜ್ಝಿತಃ .
ಪುತ್ರಃ ಕುತ್ಸಿತ ಏವ ಭಕ್ತಿವಿಧುರೋ ತಸ್ಮಾದಪುತ್ರೋ ವರಃ ॥೪೮॥

---

ಸುವ ಭೋಜನಕ್ಕಿಂತಲೂ ವಿಶೇಷವೂ ಇಷ್ಟಕರವೂ ಆದ ತೃಪ್ತಿಯುಂಟಾಗುತ್ತದೆ. ಇದರಲ್ಲಿ ಸಂಶಯವಿಲ್ಲ. ॥೪೫॥

ಭಸ್ಮರುದ್ರಾಕ್ಷಗಳಿಂದ ರಹಿತನಾಗಿ, ಹಣೆಯಲ್ಲಿ ಭಸ್ಮತ್ರಿಪುಂಡ್ರಗಳಿಲ್ಲದವನಿಗೆ ಕೊಟ್ಟ ಉತ್ತಮ ಶ್ರಾದ್ಧಭೋಜನವೂ ಸಹ ನಿಷ್ಪ್ರಯೋಜನವೇ ಆಗುವುದು. ಒಂದುವೇಳೆ ದೇಶ ಕಾಲಗಳಿಗೆ ಉಚಿತವಾಗಿ ಸತ್ಪಾತ್ರನಲ್ಲಿ ದಾನಮಾಡಿದರೂ ಸಹ ಆ ದಾನಾದಿಗಳು ಭಸ್ಮರುದ್ರಾಕ್ಷ ಚಿಹ್ನಿತನಲ್ಲದವನಿಗಾದರೆ ಅದರಿಂದ ಏನೂ ಪ್ರಯೋಜನವು ಇರುವುದಿಲ್ಲ. ॥೪೬॥

ಮಹಾತ್ಮನೇ, ನಿನ್ನ ತಂದೆ, ತಾತ, ತಾಯಿಯ ತಂದೆ ಮತ್ತು ಬಂಧುಗಳಾದ ನಾವೆಲ್ಲರೂ ನಿಜವಾಗಿಯೂ ಧನ್ಯರಾದೆವು. ಓ ಶೂರಶರ್ಮನೇ, ನಮಗೆ ಪುತ್ರನಾಗಿ ಮಹೇಶಭಕ್ತನಾದ ನೀನು ನಮ್ಮೆಲ್ಲರನ್ನೂ ಪವಿತ್ರಗೊಳಿಸುತ್ತಿರುವೆ. ನೀನೇ ಮಾನ್ಯನೂ ಶ್ರೇಷ್ಠನೂ ಆಗಿರುವೆ. ॥೪೭॥

ಶಂಭುಭಕ್ತನಾದ ಕುವರನು ಯಾವಾಗಲೂ 'ಪುತ್' ಸಂಜ್ಞಕವಾದ ನರಕದಿಂದ ತನ್ನ ಪಿತೃಗಳನ್ನು ಚೆನ್ನಾಗಿ ಉದ್ಧಾರಮಾಡುವನೆಂದು ತಿಳಿಯಬೇಕು. ಅಂತಹ ಪುತ್ರಪ್ರಾಪ್ತಿರೂಪವಾದ ಫಲವುಂಟಾಗಬೇಕಾದರೆ ಪಿತೃದೇವತೆಗಳು ತುಂಬ

ಇತ್ಯುಕ್ತ್ವಾ ತೇ ಪ್ರಣಮ್ಯೇಶಂ ಪಿತರಂ ತಸ್ಯ ಸುವ್ರತ ।
ಆಶೀರ್ಭಿರಭಿನಂದ್ಯೈನಂ ಶತಂಜೀವೇತಿ ತೆ ಯಯುಃ ॥೪೯॥

ಶೂರಂ ತೇ ಭೂಸುರಾ ದೃಷ್ಟ್ವಾಽಕ್ಷಯದ್ವೀರಪದಾರ್ಚಕಂ ।
ಊಚುಃ ಸಂಹೃಷ್ಟಮನಸೋ ಧನ್ಯೋಽಸೀತಿ ಮುಹುರ್ಮುಹುಃ ॥೫೦॥

ದೃಷ್ಟ್ವೈವ ಸ್ವಪಿತೄನ್ಸರ್ವಾನ್ಮಹಾದೇವಂ ದೃಶಾತದಾ ।
ತುಷ್ಟಾವ ಶಿಪಿವಿಷ್ಟಂ ತಂ ಶೂರೋ ಮೂರ್ಧ್ನಿ ಕೃತಾಂಜಲಿಃ ॥೫೧॥

॥ ಶೂರ ಉವಾಚ ॥

ಪಾಯಂ ಪಾಯಂ ನೇತ್ರಪಾತ್ರೈಸ್ತ್ರಿನೇತ್ರಂ
ನಾಮಂ ನಾಮಂ ಶಶ್ವದುನ್ನಮ್ಯ ಹರ್ಷಾತ್ ।
ಹಾಯಂ ಹಾಯಂ ದುಃಖಜಾತಂ ಸಮಗ್ರಂ
ತ್ವತ್ಪಾದಾಬ್ಜಾಲೋಕನೇನೈವ ಶಂಭೋ ॥೫೨॥

---

ತಪಸ್ಸುಮಾಡಿದ್ದರೆ ಮಾತ್ರ ಸಾಧ್ಯವಾದೀತು ; ಇಲ್ಲದೇಹೋದರೆ ಎಲೈ ಕುಮಾರನೆ, ನಮ್ಮೆಲ್ಲರನ್ನೂ ನರಕದ ಗುಂಡಿಯಲ್ಲಿ ನೀನು ಬೀಳಿಸಿಬಿಡುತ್ತಿದ್ದೆ. ಭಗವಂತನಾದ ಶಿವನಲ್ಲಿ ಭಕ್ತಿರಹಿತನಾದ ಆ ಪುತ್ರನು ನೀಚನೇ ಸರಿ ; ಶಿವಭಕ್ತಿಹೀನನಾದ ಕುಮಾರನ ಜನನಕ್ಕಿಂತಲೂ ಮಕ್ಕಳಿಲ್ಲದಿರುವುದೇ ಉತ್ತಮವಾದುದು. ॥೪೮॥

ಅಯ್ಯ ಉತ್ತಮ ವ್ರತನೇ, ಹೀಗೆ ಆ ಶೂರಶರ್ಮನ ಪಿತೃಗಳು ಅವನಿಗೆ ಹೇಳಿ ಶಿವನಿಗೆ ನಮಸ್ಕಾರಮಾಡಿ, ಶೂರಶರ್ಮನಿಗೆ ನೂರುವರ್ಷ ಸುಖವಾಗಿ ಬಾಳೆಂದು ಆಶೀರ್ವಾದಮಾಡಿ ಹೊರಟುಹೋದರು. ಆಗ ಶಿವಪಾದಪೂಜಕನಾದ ಆ ಶೂರಶರ್ಮನನ್ನು ಬ್ರಾಹ್ಮಣರು ನೋಡಿ ಸಂತುಷ್ಟಹೃದಯರಾಗಿ 'ಅಯ್ಯ, ನೀನೇ ಧನ್ಯನು' ಎಂದು ಅನೇಕಬಾರಿ ಹೊಗಳಿದರು ॥೪೯-೫೦॥

ಆ ಶೂರಶರ್ಮನು ತನ್ನ ಎಲ್ಲಾ ಪಿತೃಗಳನ್ನೂ ಮಹಾದೇವನನ್ನೂ ಸಹ ಪ್ರತ್ಯಕ್ಷವಾಗಿ ನೋಡಿ, ಕೈಮುಗಿದು ಅಂಜಲಿಬದ್ಧನಾಗಿ ನಿಂತು ಶಂಕರನನ್ನು ಇಂತು ಸ್ತೋತ್ರಮಾಡಿದನು. ॥೫೧॥

ಶಂಕರನೇ, ಮುಕ್ಕಣ್ಣನಾದ ನಿನ್ನನ್ನು ಕಣ್ಣುಗಳೆಂಬ ಪಾತ್ರೆಗಳಿಂದ ತೃಪ್ತಿಯಾಗುವಷ್ಟು ದರ್ಶನಾಮೃತಪಾನಮಾಡಿ, ಪದೇ ಪದೇ ಸಂತೋಷದಿಂದ

ಯಾಮಿ ಕೈಲಾಸಮೂಲಂ ತೇ ಭಾರ್ಯಯಾಹಂ ಮಹೇಶ್ವರ ।
ಕನೀನಕಾವಿಹೀನಸ್ಯ ನೇತ್ರಸ್ಯೇವಾತ್ರ ಮೇ ಸ್ಥಿತಿಃ ॥೫೩॥

ತವಾನುಯಾಯೀ ತಿಷ್ಠಾಮಿ ಶಂಭೋ ರಕ್ಷ ಕೃಪಾಂಕುರು ।
ಇತ್ಯುಕ್ತಂ ಶೂರವಚನಂ ಶ್ರುತ್ವಾ ತಚ್ಚೇಂದುಭೂಷಣಃ ॥೫೪॥

ದತ್ವಾಯೋಗಂ ಸಮಾಯಾಹೀತ್ಯವೋಚತ್ತದ್ದ್ವಿಜಂ ಪ್ರತಿ ।
ಇತ್ಯೇವಂ ದ್ವಿಜಶೂರೋಽಪಿ ಸಮಾಧಿಮಗಮತ್ತದಾ ॥೫೫॥

ನಾಡೀಂ ಸುಷುಮ್ನಾಂ ಮರುದಾಭಿಪೂರ್ಯ
ದ್ರುತಂ ಸುಧಾಚಾಂದ್ರಮಸೀಂ ವಿಭೂಯ ।
ಹಿತ್ವಾ ಸ ತದ್ಬ್ರಹ್ಮಕಪಾಲರಂಧ್ರಂ
ಕೈಲಾಸನಾಥಸ್ಯ ಪದಂ ಪ್ರಪೇದೇ ॥೫೬॥

---

ತಲೆಬಾಗಿ ನಮಸ್ಕಾರಮಾಡಿ ಸಕಲ ದುಃಖರಾಶಿಗಳನ್ನೂ ನಿನ್ನ ಪಾದಕಮಲದರ್ಶನದಿಂದಲೇ ಕಳೆದುಕೊಂಡೆನು. ॥೫೨॥

ಓ ಮಹೇಶ್ವರನೆ, ನಾನು ನನ್ನ ಪತ್ನಿಯೊಡನೆ ನಿನ್ನ ಕೈಲಾಸಪರ್ವತದ ಬುಡವನ್ನು ಸೇರುವೆನು. ಗುಡ್ಡೆಯಿಲ್ಲದ ಕಣ್ಣಿನಂತೆ ಇಲ್ಲಿ ನಾನು ವಾಸಮಾಡುವೆನು. ಶಂಭೋ, ನಿನ್ನನ್ನೇ ಹಿಂಬಾಲಿಸಿ ನಿಲ್ಲುವೆನು. ಶಂಕರ, ನನ್ನನ್ನು ಕಾಪಾಡು ; ದಯೆತೋರುವನಾಗೆಂದು ಶೂರಶರ್ಮನು ಬೇಡಲು, ಆಗ ಮಹಾದೇವನು ಅವನಿಗೆ ಯೋಗಶಕ್ತಿಯನ್ನು ಕೊಟ್ಟು ಇದರಿಂದ ಕೈಲಾಸಕ್ಕೆ ಬಂದುಬಿಡೆಂದು ಆ ಬ್ರಾಹ್ಮಣನಿಗೆ ಅನುಗ್ರಹಮಾಡಿದನು. ॥೫೩-೫೪॥

ಹೀಗೆ ಮಹಾದೇವನಿಂದ ಅನುಗ್ರಹೀತನಾದ ಆ ಬ್ರಾಹ್ಮಣಭಕ್ತನೂ ಸಹ ಸಮಾಧಿಮಗ್ನನಾಗಿ ಸುಷುಮ್ನಾನಾಡಿಯನ್ನು ಪೂರಕಪ್ರಾಣಾಯಾಮವಿಶೇಷದಿಂದ ವಾಯುವಿನಿಂದ ಪೂರ್ಣಮಾಡಿ ಜಾಗ್ರತೆಯಾಗಿ ಚಂದ್ರನಾಡಿಯನ್ನು ಭೇದಿಸಿ ಬ್ರಹ್ಮಕಪಾಲರಂಧ್ರವನ್ನು ಆ ವಾಯುವಿನ ಒತ್ತಡದಿಂದ ಭೇದಿಸಿಕೊಂಡು ಕೈಲಾಸೇಶ್ವರನ ಪಾದಸನ್ನಿಧಿಯನ್ನೈದಿದನು. ॥೫೫-೫೬॥

ಮಿಥಿಲಾದ್ವಿಜಶೂರವೃತ್ತಮೇತ
ತ್ಪ್ರಥಿತಂ ಭಕ್ತಿಪರಾಯಣಂ ಪರಾರ್ಘ್ಯಂ ।
ದೃಢಭಕ್ತಿಯುತೋ ಮೃಡಾಬ್ಜಪಾದೇ
ನ ಹಿ ಗಾಢಂ ತಮು ಆವಿಶೇತ್ಸಧನ್ಯಃ ॥೫೭॥

ಇತಿ ಶ್ರೀಶಿವರಹಸ್ಯೇ ನವಮಾಂಶೇ ಸದಾಶಿವಾಖ್ಯೇ ಶೂರಭಕ್ತಚರಿತ್ರ ವರ್ಣನಂ ನಾಮ ಚತುಶ್ಚತ್ವಾರಿಂಶೋಽಧ್ಯಾಯಃ

---

ಮಿಥಿಲಾಪಟ್ಟಣವಾಸಿಯಾಗಿ ಬ್ರಾಹ್ಮಣೋತ್ತಮನೆನಿಸಿದ ಈ ಶೂರಸೇನನ ಪ್ರಖ್ಯಾತವೂ, ಭಕ್ತಿಪೂರ್ಣವೂ, ಅಮೂಲ್ಯವೂ ಆದ ಕಥೆಯನ್ನು ಕೇಳಿ ಶಂಕರನ ಪಾದಕಮಲದಲ್ಲಿ ದೃಢಭಕ್ತಿಯುಳ್ಳವನೇ ಧನ್ಯನು. ಅವನನ್ನು ಎಂತಹ ಅಜ್ಞಾನವೂ ಆವರಿಸುವುದಿಲ್ಲವೆಂದು ಕುಮಾರಸ್ವಾಮಿಯು ಜೈಗೀಷವ್ಯನಿಗೆ ನಿರೂಪಿಸಿದನು. ॥೫೭॥

ಇಲ್ಲಿಗೆ ಶ್ರೀಶಿವರಹಸ್ಯದಲ್ಲಿ ಸದಾಶಿವಸಂಜ್ಞಕವಾದ ಒಂಬತ್ತನೆಯ ಅಂಶದಲ್ಲಿ ಶೂರಭಕ್ತನ ಚರಿತ್ರೆಯ ವರ್ಣನೆಯೆಂಬ ನಲವತ್ತನಾಲ್ಕನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

|| ಶ್ರೀ ಶಿವಾಯನಮಃ ||

# ಅಥ ಶ್ರೀಶಿವರಹಸ್ಯೇ

## ಸದಾಶಿವಾಖ್ಯೇ

## ನವಮಾಂಶೇ

## ಪಂಚಚತ್ವಾರಿಂಶೋಽಧ್ಯಾಯಃ

|| ಶ್ರೀ ಸ್ಕಂದ ಉವಾಚ ||

ಶ್ರೀಮತೋ ಬೋಧಸಂಬಂಧನಾಥಸ್ಯ ಕಥಯೇ ಕಥಾಂ ।
ಅಸ್ತಿ ಬ್ರಹ್ಮಪುರೀ ನಾಮ ಪುರಾರಾತೇಃ ಪ್ರಸಾದಕೃತ್ ||೧||

ಕಾವೇರೀಶುಕ್ತಿಮುಕ್ತಾಭಿಃ ಪ್ರಾಕಾರತ್ರಯಕಲ್ಪಿತಾ ।
ಪರಿಖಾವಲಯೋ ಯತ್ರ ಪಾತಾಲಾಕಾಶಲಂಘನೇ ||೨||

ವಿಘ್ನಂ ಪಥಿ ವಿತನ್ವಂತಿ ಪ್ರಾಕಾರಾಃ ಸೋಮಸೂರ್ಯಯೋಃ ।
ಯತ್ರ ಪ್ರಾಕಾರವೀಥೀಷು ದಿವಾಪಿ ಘನವಾಹನಾಃ ||೩||

---

## ನಲವತ್ತೈದನೆಯ ಅಧ್ಯಾಯ

ಅಯ್ಯ ಜೈಗೀಷವ್ಯನೇ, ಇನ್ನು ಶ್ರೀಮಂತನಾದ ಬೋಧಸಂಬಂಧನಾಥನ ಕಥೆಯನ್ನು ಹೇಳುವೆನು ಕೇಳು; ಶಿವನ ಅನುಗ್ರಹಕ್ಕೆ ಕಾರಣವಾಗುವ 'ಬ್ರಹ್ಮಪುರಿ'ಯೆಂಬ ಒಂದು ಪಟ್ಟಣವಿರುವುದು. ಅಲ್ಲಿ ಕಾವೇರೀನದಿಯ ಕಪ್ಪೆ ಚಿಪ್ಪಿನ ಮುತ್ತುಗಳಿಂದ ಮೂರು ಪ್ರಾಕಾರಗಳು ಮಾಡಲ್ಪಟ್ಟಿರುವುವು. ಆ ಊರಿನ ಅಗಳು ಪಾತಾಳಲೋಕದ ತುದಿಯನ್ನು ದಾಟುತ್ತಿರುವುದೋ ಎಂಬಂತೆ ಅತಿ ಆಳ ವಾಗಿರುವುದು. ||೧-೨||

ಆ ಊರಿನ ಪ್ರಾಕಾರದ ಗೋಡೆಗಳು ಚಂದ್ರಸೂರ್ಯರಿಗೂ ಮಾರ್ಗದಲ್ಲಿ ವಿಘ್ನವನ್ನುಂಟುಮಾಡುತ್ತಾ ಅಂತರಿಕ್ಷದಲ್ಲಿ ಎದ್ದುನಿಂತಿರುವುವು. ಯಾವ ಊರಿನ

ವಿದ್ಯುದ್ಭ್ರಾಂತಿಂ ವಿತನ್ವಂತ್ಯಃ ಸಂಚರಂತ್ಯಭಿಸಾರಿಕಾಃ ।
ಯಸ್ಯಾಂ ಹರಿನ್ಮಣೀವೇದೀಕಾಂತಿಶ್ಶೈವಾಲಮೋಚಕಾಃ ॥೪॥

ರತ್ನಾಕಾರಪ್ರಭಾಪೂರಂ ವಹಂತೇ ವೀಥಿಕಾಪಗಾಃ ।
ಯತ್ರಾಧ್ವರ ಹವಿರ್ಧೂಮ್ಯೈರಕಾಲೇಽಪ್ಯುತ್ಥಿತಾ ಘನಾಃ ॥೫॥

ಮುಂಚಂತಿ ಪಯಸೋ ಧಾರಾಂ ಯತ್ರ ಸೋಮರಸೋತ್ತರಾಃ ।
ಯತ್ರ ಕೇಡಾಮಯೂರಾಣಾಂ ಲಾಸ್ಯಂ ಬಾಲಾ ದಿದೃಕ್ಷವಃ ॥೬॥

ಹಸ್ತೈರಾತನ್ವತೇ ಸೌಧೈಃ ಪಯೋದಪಟಹಾರವಂ ।
ಸುದೃಶಶ್ಚಂದ್ರಶಾಲಾಸು ರಾಮಾಶ್ಚಂದ್ರೋಪಲಾಂಭಸಾಃ ॥೭॥

ಕೇಲೀರಸಃ ಸುಪೂರ್ಣೇಷು ಚಂದ್ರಂ ಪೀಡಯತೇ ಕರೈಃ ।
ಯತ್ಸೌಧಚಂದ್ರಕಾಂತಾಂಬುಪ್ರವಾಹೈರ್ವಿಪಿನೀಮಹೀಂ ॥೮॥

---

ಪ್ರಾಕಾರಮಾರ್ಗಗಳಲ್ಲಿ ಹಗಲಿನಲ್ಲಿಯೂ ಮೋಡಗಳು ಮಿಂಚಿನ ಭ್ರಾಂತಿಯನ್ನುಂಟು ಮಾಡುತ್ತಾ ಅಭಿಸಾರಿಕೆಯರಂತೆ ಸಂಚರಿಸುತ್ತಿರುವುವು. ಅಲ್ಲಿ ಹಸುರು ಪಚ್ಚೆಮಣಿಗಳಿಂದ ಖಚಿತವಾದ ಜಗಲಿಗಳು ಪಾಚಿಗಳಂತೆ ಅಲ್ಲಲ್ಲಿ ಕಂಗೊಳಿಸುತ್ತಿರುವುವು.॥೩-೪॥

ಬೀದಿಯ ಪಕ್ಕದಲ್ಲಿ ಹರಿಯುವ ನದಿಗಳು ರತ್ನಾಕಾರವಾದ ಕಾಂತಿಯಿಂದ ಕೂಡಿದ ಪ್ರವಾಹವನ್ನು ಧರಿಸಿ ಹರಿಯುತ್ತಿರುವುವು. ಅದೇ ಊರಿನಲ್ಲಿ ಯಾಗ ಧೂಮಗಳಿಂದುಂಟಾದ ಮೋಡಗಳು, ಸೋಮರಸ ಸಮಾನವಾದ ನೀರಿನ ಧಾರೆಗಳನ್ನು ಸುರಿಸುತ್ತಿರುವುವು. ಆಟಕ್ಕೋಸ್ಕರ ಸಾಕಿರುವ ನವಿಲುಗಳ ನಾಟ್ಯವನ್ನು ನೋಡಬಯಸುವ ಹುಡುಗರು ಉಪ್ಪರಿಗೆಮೇಲೆ ನಿಂತು ತಮ್ಮ ಕೈಗಳಿಂದ ಮೋಡದ ಮತ್ತು ತಮಟೆಯ ಧ್ವನಿಗಳನ್ನು ಮಾಡುತ್ತಿರುವರು. ॥೫-೬॥

ಸುಂದರಿಯರಾದ ನಾರಿಯರು ಚಂದ್ರಶಾಲೆಗಳಲ್ಲಿ (ಮನೆಯ ಮೇಲಿನ ಅಂತಸ್ತಿನಲ್ಲಿ ಕಟ್ಟಿರುವ ಮನೆಗಳಲ್ಲಿ) ಚಂದ್ರಕಾಂತಶಿಲೆಗಳಿಂದುದ್ಭವಿಸಿದ ನೀರಿನಿಂದ ವಿಹಾರವೆಸಗುತ್ತಾ ರಸಾವಿಷ್ಟಹೃದಯರಾಗಿ ತಮ್ಮ ಕೈಗಳಿಂದ ಚಂದ್ರನನ್ನೇ ಹಿಡಿದು ಪೀಡಿಸುತ್ತಿರುವರು. ಅದೇ ನಗರದ ಮಹಡೀಮನೆಗಳ ಚಂದ್ರಕಾಂತಶಿಲೆಗಳಿಂದ ಹೊರಟ ನೀರಿನ ಪ್ರವಾಹಗಳಿಂದ ಕಾಡಿನ ಭೂಮಿಯೆಲ್ಲವೂ ಕೊಚ್ಚಿಹೋಗಿ ಸಮುದ್ರವು ನೀರಿನಿಂದ ತುಂಬಿ ' ರತ್ನಾಕರವೆಂಬ ' ಹೆಸರನ್ನು ಧರಿಸಿದೆ. ॥೭-೮॥

ಆಕೃಷ್ಯ ಪೂರಿತಾಂಭೋಧಿರ್ಧತ್ತೇ ರತ್ನಾಕರಾಭಿಧಾಂ ।
ಪತಾಕಘಟನಾದ್ಯಸ್ಯಾಂ ಪತಿತೈರುಡುಭಿರ್ಯತಃ ॥೯॥

ನ ಗೃಹ್ಯತೇ ರತಿರ್ಯಸ್ಯ ಛಿನ್ನಮುಕ್ತಾವಧೂಜನೈಃ ।
ಸುಮನಃ ಸುಮನಾಮೋದಭ್ರಮದ್ಭ್ರಮರರಾಜಯಃ ॥೧೦॥

ಆನಂದವಾರಿಧೇಃ ಪೂರಜಲಕ್ರೀಡಾಂ ವಿತನ್ವತೇ ।
ಯತ್ರ ಕ್ರೀಡಾಕುರಂಗೀಭಿಃ ಕೇಲಿಪರ್ವತಮೂರ್ಧನಿ ॥೧೧॥

ಹರಿನ್ಮಣಿಪ್ರಭಾದೂರ್ವಾಶ್ಚರಂತಿ ವಿಮಲಾಶಯಾಃ ।
ಕವೇರಾಟೋಪಕೂಪಾನಾಂ ಪಟೇಯುಸಿವಿಪಾವನೇ ॥೧೨॥

ಭಾವಿತಾಧ್ವರಧೂಮಾಭ್ಯಾಂ ಯಸ್ಯಾಂ ತೇಜಸ್ತಮೋಜುಷಿ ।
ಅರ್ಧನಾರೀಶ್ವರಃ ಸೂಕ್ತೈರ್ನಕ್ತಂ ವಾದಿಭಿಧಾ ಮುದಾ ॥೧೩॥

---

ಆ ಪ್ರಾಕಾರಗಳ ಮೇಲೆ ಪತಾಕೆಗಳನ್ನು (ಬಾವುಟಗಳನ್ನು) ಕಟ್ಟಿರುವುದರಿಂದ ಅವು ನಕ್ಷತ್ರಮಂಡಲಕ್ಕೆ ತಾಕಿ ಅಲ್ಲಿಂದ ನಕ್ಷತ್ರಗಳು ಕೆಳಕ್ಕೆ ಬೀಳುವುವು. ಆ ಊರಿನಲ್ಲಿ ಕಿತ್ತಮುತ್ತಿನಸರವುಳ್ಳಸ್ತ್ರೀಯರು ತಮ್ಮ ಹಾರಕ್ಕೋಸ್ಕರ ಆಸಕ್ತಿಯಿಂದ ಆ ನಕ್ಷತ್ರಗಳನ್ನೇ ಆರಿಸಿಕೊಳ್ಳುವರು. ಹೂಗಳ ಪರಿಮಳಕ್ಕಾಗಿ ಬಂದು ಮುತ್ತಿ ಅಲೆಯುತ್ತಿರುವ ದುಂಬಿಗಳ ಹಿಂಡು ಆನಂದಸಮುದ್ರದ ಪ್ರವಾಹದ ನೀರಿನಲ್ಲಿ ಜಲಕ್ರೀಡೆಯಾಡುತ್ತಿರುವವು. ॥೯-೧೦॥

ಕ್ರೀಡಾಪರ್ವತದ ಶಿಖರದಲ್ಲಿ ಆಟವಾಡುತ್ತಿರುವ ಹೆಣ್ಣು ಜಿಂಕೆಗಳು ಹಸುರು ಪಚ್ಚೆಯ ಮಣಿಗಳಂತೆ ಹೊಳೆಯುತ್ತಿರುವ ಗರಿಕೆಗಳನ್ನು ನಿಷ್ಕಪಟಭಾವನೆಯಿಂದ ಮೇಯುತ್ತಿರುವುವು. ಕಾವೇರೀನದಿಯ ಆಟೋಪಯುಕ್ತವಾದ ಮಡುಗಳುಳ್ಳ ಆ ಪವಿತ್ರವಾದ ಸ್ಥಳದಲ್ಲಿ ಹೊರಟ ಯಾಗಧೂಮಗಳು ಸೂರ್ಯನ ಬೆಳಕನ್ನೆಲ್ಲಾ ಮುಚ್ಚಿ ಕತ್ತಲೆಯನ್ನುಂಟುಮಾಡುತ್ತಿರುವುವು. ವಾದಿಭಯಂಕರರಾದ ವಿದ್ವಾಂಸರು ರಾತ್ರಿಯಲ್ಲಿ ಅರ್ಧನಾರೀಶ್ವರನನ್ನು ರುದ್ರಸೂಕ್ತವೇ ಮುಂತಾದವುಗಳಿಂದ ಪೂಜಿಸಿ ಸಂತೋಷವಾಗಿ ಸ್ತೋತ್ರಮಾಡುತ್ತಿರುವರು. ॥೧೧-೧೨-೧೩॥

ಪ್ರಲಯೋತ್ಕಲಯಾಂಭೋಧಿಶುಕ್ತಾಮುಕ್ತಾಲಿವೇಷ್ಟಿತಾ ।
ಯಾಶೇಷಮೂರ್ತಿಭಿಃ ಶಂಭೋರಾಲಯೋಪ್ಯಾಸಿ ಶೋಭನೈಃ ॥೧೪॥

ನಾಲಿಕೇರಾವಲೀರಂಭಾಕ್ರಮುಕಾರಾಮಮಧ್ಯಗಾ ।
ಅಸಂವರ್ತೇಃಪ್ರಿಯಾ ಭಾತಿ ವೇಲಿತೈವ ಪಯೋಧಿನಾ ॥೧೫॥

ಕೇದಾರೇ ಯತ್ರ ಮಾಕಂದರಕ್ತಾಂಬುಜದಲೇ ಮಧು ।
ಮುಂಚತೋ ಜ್ವಲನಾರಾತಿಂ ಭೂಸುರಾಣಾಂ ವಿತನ್ವತೇ ॥೧೬॥

ವಧೂಮುಖೈರ್ಹಿತೈರ್ಯತ್ರ ಸಾರಸ್ಯೈಃ ಕ್ರಿಯತೇ ತಪಃ ।
ಕುಶೇಶಯತ್ವಮೇತೇಷಾಂ ಕಥಂಕಾರಂ ನ ಚೇದ್ಭವೇತ್ ॥೧೭॥

ಕಸ್ತೂರೀಗಂಧಕರ್ಪೂರೈಃ ಕುಂಕುಮಕ್ಷೋದರಾಶಿಭಿಃ ।
ಸ್ಫಾರೈರವಕರೈರ್ಯಸ್ಯಾಂ ಭರಿತ್ರೀಮಣಿಮೇದುರೈಃ ॥೧೮॥

---

ಪ್ರಳಯಕಾಲದಲ್ಲಿ ಪ್ರಪಂಚವನ್ನಾವರಿಸುವ ಸಮುದ್ರದ ಕಪ್ಪೇಚಿಪ್ಪು ಮತ್ತು ಮುತ್ತುಗಳಿಂದ ರಚಿತಗಳಾದ, ಮಂಗಳಕರವಾದ ಆ ಶಂಕರನ ಸಮಸ್ತ ಮೂರ್ತಿಗಳೂ ಅಲ್ಲಿ ಶೋಭಿಸುತ್ತಿದ್ದುವು. ತೆಂಗು, ಬಾಳೆ, ಅಡಿಕೆ, ಮುಂತಾದ ಮರಗಳ ಆರಾಮಗಳ ಮಧ್ಯದಲ್ಲಿ ಆ ಬ್ರಹ್ಮಪುರವೆಂಬುದು ಪ್ರಳಯಕಾಲದಲ್ಲೂ ಸಮುದ್ರದಿಂದ ಸುತ್ತುವರಿಯಲ್ಪಟ್ಟು ಪ್ರಿಯಕರವಾಗಿ ಜನರಿಗೆ ಶೋಭಿಸುತ್ತಿರುವುದು. ॥೧೪-೧೫॥

ಆ ಊರಿನ ಗದ್ದೆಗಳಲ್ಲಿರುವ ಸಿಹಿಮಾವಿನಮರ ಮತ್ತು ಕೆಂದಾವರೆಗಳ ದಳಗಳಲ್ಲಿರುವ ಮಕರಂದವು ಆ ಗ್ರಾಮವಾಸಿಗಳಾದ ಬ್ರಾಹ್ಮಣರ ತೀಕ್ಷ್ಣತೆಯನ್ನು ಹೋಗಲಾಡಿಸಿ ಶೈತ್ಯವನ್ನುಂಟುಮಾಡುತ್ತಿರುವುವು. ಆ ಊರಿನ ಸರೋವರಗಳಲ್ಲಿರುವ ಕಮಲಗಳು ಅಲ್ಲಿನ ಸುಂದರಾಂಗಿಯರಾದ ನಾರೀಮಣಿಗಳ ಮುಖಸಾದೃಶ್ಯವನ್ನು ಪಡೆಯಲೋಸುಗ ತಪಸ್ಸನ್ನು ಗೈಯುತ್ತಿರುವುವೋ ಎನ್ನುವಂತಿರುವುವು. ಇಲ್ಲದಿದ್ದಪಕ್ಷದಲ್ಲಿ ಈ ಕಮಲಗಳಿಗೆ 'ಕುಶೇಶಯ' (ನೀರಿನಲ್ಲಿ ದರ್ಭೆಯಲ್ಲಿ ಯಾವಾಗಲೂ ನೆಲಸಿರುವುವು) ಎಂಬ ಅನ್ವರ್ಥನಾಮವು ಹೇಗೆತಾನೆ ಉಂಟಾಗುತ್ತಿದ್ದಿತು. ॥೧೬-೧೭॥

ಕಸ್ತೂರಿ, ಗಂಧ, ಕರ್ಪೂರ, ಕುಂಕುಮಚೂರ್ಣ ಮುಂತಾದ ಪುಡಿಗಳ ರಾಶಿಗಳಿಂದ ತುಂಬಿದ ಆ ಭೂಭಾಗದಲ್ಲಿ ರತ್ನಖಚಿತವಾದ ಪ್ರದೇಶಗಳು ವಿಶೇಷವಾಗಿ

ಚಂಚತ್ಕೇಲೀದರಾಧಾರವಾಲುಕೈರ್ಮಣಿಮೇದುರೈಃ ।
ಕ್ಷಿಪ್ತೈರರ್ಕಕರಾ ಯತ್ರ ಮೇರುಭ್ರಾಂತಿಂ ವಿತನ್ವತೇ ॥೧೯॥

ಪುಷ್ಪವಂತೌ ಯದಾರಾಮೇ ಚರಂತೌ ವಿಟಪಾಂತರೇ ।
ವಿತನ್ವತೇ ಜಪಾಮಲ್ಲೀಗುಚ್ಛಸಚ್ಛಾಯಿತೌ ತದಾ ॥೨೦॥

ಉಲ್ಲೋಲಚಾಂತಲೋಕೇಷು ಸಪ್ತಕಲ್ಲೋಲಮಾಲಿಷು ।
ದ್ರೋಣೀ ರಾಮೋಪಯಚ್ಛಂಭುರ್ಭಕ್ತಾನ್ಕಲ್ಪಾಂತಿಮೋ ಹರಃ ॥೨೧॥

ತಸ್ಯಾಮಾಸೀದ್ದ್ವಿಜಾಧೀಶೋ ದ್ವಿಜರಾಜಧರಾರ್ಚಕಃ ।
ಆಮ್ನಾಯಾಗಮಷಟ್ಪ್ರಸ್ರಸಾರದೃಶ್ವಾ ಶಿವವ್ರತಃ ॥೨೨॥

ಶಿವಾಂಘ್ರಿಚಿತ್ತಸದ್ವೃತ್ತಿಃ ಷಟ್ಕರ್ಮಾಚರಣೋದ್ಯತಃ ।
ವಿವರ್ತ ಇವ ಧರ್ಮಸ್ಯ ಸರ್ವಸ್ಯೇವ ಸಮುದ್ಗತಃ ॥೨೩॥

---

ಹರಡಿರುವುವು. ಆಟಕ್ಕೋಸ್ಕರ ನಿರ್ಮಿಸಿಕೊಂಡಿರುವ ರತ್ನಖಚಿತವಾದ ಮರಳು ಗುಡ್ಡೆಗಳ ಮೇಲೆ ಸೂರ್ಯಕಿರಣಗಳು ಬಿದ್ದು ಮೇರುಪರ್ವತದ ಭ್ರಾಂತಿಯನ್ನುಂಟು ಮಾಡುತ್ತಿರುವುವು. ॥೧೮-೧೯॥

ಆದೇ ಊರಿನ ಉದ್ಯಾನದಲ್ಲಿರುವ ಮರಗಳ ಮಧ್ಯಭಾಗದಲ್ಲಿ ಸಂಚರಿಸುವ ಸೂರ್ಯಚಂದ್ರರು, ದಾಸವಾಳದ ಹೂವು ಮತ್ತು ಮಲ್ಲಿಗೆಹೂಗಳ ಗೊಂಚಲಿನಂತೆ ಸ್ವಚ್ಛವಾಗಿ ತೋರುತ್ತಿರುವರು. ಕಲ್ಪದ ಕೊನೆಯಲ್ಲಿ ಶಂಭುವು ತನ್ನ ಭಕ್ತರನ್ನು ದಡಮೀರಿ ಹರಿಯುತ್ತಿರುವ ಏಳು ಪ್ರವಾಹಗಳುಳ್ಳ ನೀರಿನಿಂದ ಉದ್ಧಾರಮಾಡು ವಂತೆ ಲೋಕಗಳನ್ನೆಲ್ಲಾ ಮುಳುಗಿಸುವಂತಿರುವ ಜಲಾಶಯಗಳಲ್ಲಿ ಈ ಗ್ರಾಮವಾಸಿ ಗಳು ದೋಣಿಗಳಿಂದ ತೆಪ್ಪದಂತೆ ವಿಹರಿಸುತ್ತಿರುವರು. ॥೨೦-೨೧॥

ಇಂತಹ ಬ್ರಹ್ಮಪುರಿಯಲ್ಲಿ ಶಿವಪೂಜಕನಾದ ಒಬ್ಬ ಬ್ರಾಹ್ಮಣೋತ್ತಮ ನಿದ್ದನು. ಅವನು ವೇದ, ಆಗಮ ಮತ್ತು ಆರುಶಾಸ್ತ್ರಗಳನ್ನು (ಶಿಕ್ಷಾ, ವ್ಯಾಕರಣ, ಛಂದಸ್ಸು, ನಿರುಕ್ತ, ಜ್ಯೋತಿಷ ಮತ್ತು ಕಲ್ಪ) ಚೆನ್ನಾಗಿ ತಿಳಿದು ವಿದ್ಯಾಪಾರಂಗತನಾ ಗಿದ್ದನು. ಅವನು ಶೈವವ್ರತನಿರತನಾಗಿದ್ದನು. ಯಾವಾಗಲೂ ಶಿವನ ಪಾದಗಳಲ್ಲಿಯೇ ಇಟ್ಟ ಮನೋವ್ಯಾಪಾರವುಳ್ಳವನಾಗಿ, ಅಧ್ಯಯನ, ಅಧ್ಯಾಪನ, ಯಜನ, ಯಾಜನ, ದಾನ ಮತ್ತು ಸ್ವೀಕಾರ (ಪ್ರತಿಗ್ರಹ) ಗಳೆಂಬ ಷಟ್ಕರ್ಮನಿರತನಾಗಿದ್ದನು. ಅವನು ಸಕಲ ಧರ್ಮಗಳಿಗೂ ನಿಧಿಯಂತೆ ನಡೆಯುತ್ತಿದ್ದನು. ॥೨೨-೨೩॥

ಶಾಂತೇರಿವ ಪರೀಪಾಕೋ ದಾಂತೇರಿವ ಪರಿಗ್ರಹಃ ।
ಉಲ್ಲಾಸ ಇವ ಬೋಧಸ್ಯ ಮೋಕ್ಷಸ್ಯೈವ ಮಹಾಪಥಃ ॥೨೪॥

ಪರೋರಜೋಽಭಿಶ್ಚರಿತ್ರೈಃ ಪವಿತ್ರಿತ ಜಗತ್ರಯಃ ।
ತಪಸ್ತುಷ್ಟಾಂಬಿಕಾಜಾನೇಃ ಪ್ರಸಾದ ಇವ ಮೂರ್ತಿಮಾನ್ ॥೨೫॥

ವಿನಯಾಭರಣಾ ಕಾಚಿತ್ಕರುಣೈವ ಶರೀರಿಣೀ ।
ಆಸೀದ್ಭಗವತೀ ನಾಮ್ನಾ ತಸ್ಯ ಧರ್ಮಕುಟುಂಬಿನೀ ॥೨೬॥

ಧರ್ಮಾನುಷ್ಠಾನನಿಷ್ಠಾ ಸಾ ವಸಿಷ್ಠಗೃಹಿಣೀಸಮಾ ।
ಪ್ರತಿಷ್ಠಾತಿಥಿಸತ್ಕಾರೇ ಗರಿಷ್ಠಾ ಶಾಠ್ಯವರ್ಜಿತಾ ॥೨೭॥

ಮಹತಾ ಸಾಪಿ ಕಾಲೇನ ತನಯಂ ವಿನಯಾನ್ವಿತಂ ।
ಅಪ್ರಾಪ್ಯ ಸ ತದಾ ಖೇದಾತ್ತತಶ್ಚಿಂತಾಮುಗಾಹತ ॥೨೮॥

ತದಾ ಭಗವತೀ ಸಾಪಿ ಸುತಮಪ್ರಾಪ್ಯ ದುರ್ಮನಾಃ ।
ಕಿಮಪ್ಯಂತಶ್ಚಿಂತಯಂತೀಹ್ಯವಾದೀತ್ತಂ ಶಿವವ್ರತಂ ॥೨೯॥

---

ಶಾಂತಿಯ ಪರಿಪಾಕದಂತೆಯೂ, ಇಂದ್ರಿಯನಿಗ್ರಹದ ಪಾಣಿಗ್ರಹಣದಂತೆಯೂ ಜ್ಞಾನದ ವಿಕಾಸದಂತೆಯೂ, ಮೋಕ್ಷಪ್ರಾಪ್ತಿಗೆ ಮುಖ್ಯಮಾರ್ಗದಂತೆಯೂ ಆತನು ಉತ್ಕೃಷ್ಟವಾದ ನಡತೆಗಳಿಂದ ಮೂರು ಲೋಕಗಳನ್ನೂ ಪಾವನಗೊಳಿಸುತ್ತಾ ತಪಸ್ಸಿನಿಂದ ಸಂತೋಷಪಡಿಸಿದ ಅಂಬಿಕಾರಮಣನ ಮೂರ್ತಿಮತ್ತಾದ ಅನುಗ್ರಹವೋ ಏನೋ ಎಂಬಂತೆ ಪ್ರಕಾಶಿಸುತ್ತಿದ್ದನು. ॥೨೪-೨೫॥

ವಿನಯಾಲಂಕೃತಳಾಗಿ ದೇಹಧಾರಿಣಿಯಾದ ದಯೆಯೋ ಎನ್ನುವಂತಿರುವ ಭಗವತೀ ಎಂಬಾಕೆಯು ಆತನಿಗೆ ಧರ್ಮಪತ್ನಿಯಾಗಿದ್ದಳು. ಧರ್ಮಕಾರ್ಯಾಚರಣ ತತ್ಪರಳಾದ ಆ ಭಗವತಿಯು ವಸಿಷ್ಠಮಹರ್ಷಿಗಳ ಪತ್ನಿಯಾದ ಅರುಂಧತೀದೇವಿಗೆ ಸಮಾನಳಾಗಿದ್ದಳು. ಅತಿಥಿಸತ್ಕಾರದಲ್ಲಿ ಆಸಕ್ತಳಾದ ಶ್ರೇಷ್ಠಳಾದ ಆಕೆಯು ಯಾರಲ್ಲಿಯೂ ವಂಚನೆಯಿಲ್ಲದೇ ನಡೆದುಕೊಳ್ಳುತ್ತಿದ್ದಳು. ॥೨೬-೨೭॥

ಹೀಗೆ ತನಗೆ ವಿವಾಹವಾಗಿ ಬಹಳ ಕಾಲವಾದರೂ ವಿನಯಸಂಪನ್ನನಾದ ಮಗನನ್ನು ಕಾಣದಿದ್ದುದರಿಂದ ಆ ಬ್ರಾಹ್ಮಣನು ಖೇದದಿಂದ ಚಿಂತಾಕ್ರಾಂತನಾದನು.

ವ್ಯರೀರಚತ್ಸೋಮವಾರಂ ನಿಶಿ ತತ್ರ ಶಿವಾರ್ಚನಂ ।
ಸಾ ಪ್ರಾಹ ಶಿವಧರ್ಮಾಖ್ಯಂ ಬ್ರಾಹ್ಮಣಂ ಬ್ರಾಹ್ಮಣೀ ತದಾ ॥೩೦॥

ಆರ್ಯಾಪುತ್ರವತಾಂ ನಾಸ್ತಿ ಲೋಕೇ ಲೋಕೇಽದ್ಯ ನಂದನಂ ।
ಮಮ ಕಿಂ ಜನ್ಮನಾ ವಾಪಿ ಚಿರಸ್ಥಿತ್ಯಾಯುಷಾಪಿ ಕಿಂ ॥೩೧॥

ಪುತ್ರವತಾಂ ಹಿ ಲೋಕಾನಾಂ ಸಫಲಂ ಸಂಸೃತೇಃ ಫಲಂ ।
ಪ್ರರೋಹೋ ಧರ್ಮ ಸಾಲಸ್ಯ ಮಹತ್ವಸ್ಥಸ್ಯ ವೈಭವಂ ॥೩೨॥

ಧರ್ಮಪತ್ನ್ಯನಪತ್ಯಾಪಿ ಭುವೋ ಭಾರಾಯ ಕೇವಲಂ ।
ಯೇನ ಕೇನ ಪ್ರಕಾರೇಣ ಸಾಂಬಮಾರಾಧ್ಯ ಶಂಕರಂ ॥೩೩॥

ತನಯಂ ಪ್ರಾಪ್ನುಹಿ ಪ್ರೌಢಂ ಶಿಲಾದ ಇವ ನಂದನಂ ।
ಇತಿ ತಸ್ಯಾ ವಚಃ ಶ್ರುತ್ವಾ ಶಿವಪಾದರಜೋ ದ್ವಿಜಃ ॥೩೪॥

ಶಂಭೋರಾರಾಧನಾಲಭ್ಯಂ ಕಿಂಚಿನ್ನಾಸ್ತೀತ್ಯಮನ್ಯತ ॥೩೫॥

---

ಆ ಭಗವತಿಯೂ ಸಹ ಪುತ್ರಸಂತಾನವಿಲ್ಲದೆ ದುಃಖಿತಳಾಗಿ ಮನಸ್ಸಿನಲ್ಲಿ ಏನನ್ನೋ ಯೋಚಿಸುತ್ತಾ ಆ ಶಿವಪೂಜಕನಿಗೆ ಇಂತೆಂದಳು. ॥೨೮-೨೯॥

ಆ ಭಗವತಿಯು ಸೋಮವಾರ ರಾತ್ರಿ ಶಿವಪೂಜೆಗೈದು ಶಿವಧರ್ಮಸಂಜ್ಞಕನಾದ ಪತಿಯೊಡನೆ, ಸ್ವಾಮಿ, ಪುತ್ರಸಂತತಿಯಿಲ್ಲದವರಿಗೆ ಪರಲೋಕವಿಲ್ಲವೆಂದಿರುವುದು. ನಮಗಾದರೋ ಈ ಲೋಕದಲ್ಲಿ ಆನಂದಪ್ರದವಾದ ಪುತ್ರಪ್ರಾಪ್ತಿಯಿಲ್ಲವೆಂದೇ ತೋರುವುದು. ಹೀಗಿರುವಾಗ ಬಹಳಕಾಲ ದೀರ್ಘಾಯುಷ್ಮಂತಳಾಗಿ ನಾನು ಬದುಕುವುದರಿಂದೇನು ಫಲ? ॥೩೦-೩೧॥

ಮಕ್ಕಳುಳ್ಳ ಜನರಿಗೇ ಈ ಸಂಸಾರವು ಸಾರ್ಥಕವೆನಿಸುವುದು. ಪುತ್ರಸಂತಾನವು ಧರ್ಮವೆಂಬ ಸಾಲವೃಕ್ಷದ ಬೆಳೆಯೂ ದೊಡ್ಡಸ್ತಿಕೆಯು ವೈಭವವೂ ಆಗಿರುವುದು. ಧರ್ಮಪತ್ನಿಯಾದರೂ ಪುತ್ರಹೀನಳಾದರೆ ಅವಳು ಕೇವಲ ಭೂಭಾರವೇ ಸರಿ. ಸ್ವಾಮಿ, ಯಾವ ರೀತಿಯಿಂದಲಾದರೂ ಅಂಬಿಕಾರಮಣನಾದ ಶಂಕರನನ್ನು ಪೂಜಿಸಿ, ಶಿಲಾದಮಹರ್ಷಿಯಂತೆ ಶ್ರೇಷ್ಠನಾದ ಮಗನನ್ನು ಪಡೆಯಬೇಕೆಂದು ಪತ್ನಿಯು ಹೇಳಿದಳು. ॥೩೨-೩೩॥

ಆ ಪತ್ನಿಯ ಮಾತನ್ನು ಕೇಳಿ ಶಿವನ ಪಾದಧೂಳಿಯನ್ನು ಧರಿಸುವ

॥ ವಿಪ್ರ ಉವಾಚ ॥

ಭದ್ರೇ ಸಮ್ಯಕ್ತ್ವಯಾಭಾಣಿ ಅರ್ಚಯಾವೋ ಮಹೇಶ್ವರಂ ।
ಅಭ್ಯರ್ಚ್ಯ ತನಯಂ ಪ್ರೌಢಂ ಪ್ರಾಪ್ಸ್ಯಾವ ಇತಿ ಸೋಽಬ್ರವೀತ್ ॥೩೬॥

ಸ ಜಾಯಯಾ ಸಮಂ ಪ್ರೌಢಂ ದೃಢಂ ಮೃಡಪಾದಾರ್ಚನೇ ।
ಅಮೀಮಂಸ್ತ ದ್ರೋಣಿಕೇಶಂ ಸಮರ್ಚಯಿತುಮಂಜಸಾ ॥೩೭॥

ಪಾವನೇ ಶಂಭುಸರಸಿ ಪ್ರಾತರ್ವಿಹಿತಗಾಹನಃ ।
ಅರ್ಚಯಾಮಾಸ ರಕ್ತಾಬ್ಜೈರ್ಯಥಾವಿಧಿ ದಿವಾಕರಂ ॥೩೮॥

ಅರುಣೋತ್ಥೈರ್ಮಂತ್ರವರ್ಯೈಸ್ತರುಣಾರುಣನಾಯಕಂ ।
ನಮಸ್ಯಂಛರಣಂ ಯಾತಶ್ಚರಣಾಂಬುರುಹಂ ರವೇಃ ॥೩೯॥

ಶಿವಂ ಶಿವಾಯುತಂ ವಿಪ್ರೋ ಭಸ್ಮರುದ್ರಾಕ್ಷಭೂಷಣಃ ।
ರುದ್ರಪಂಚಾಕ್ಷರಾವೃತ್ತ್ಯಾ ಬಿಲ್ವಪತ್ರೈರಪೂಜಯತ್ ॥೪೦॥

---

ಆ ಬ್ರಾಹ್ಮಣನು ಶಂಭುವಿನ ಪೂಜೆಯಿಂದ ದೊರೆಯದಿರುವುದು ಲೋಕದಲ್ಲಿ ಯಾವುದೂ ಇಲ್ಲವೆಂದು ಭಾವಿಸಿದನು. ॥೩೪-೩೫॥

ಮಂಗಳಾಂಗಿಯೇ, ನೀನು ಸರಿಯಾಗಿ ಮಾತನಾಡಿದೆ, ಅದರಂತೆಯೆ ಮಹಾದೇವನನ್ನು ನಾವಿಬ್ಬರೂ ಪೂಜಿಸೋಣ. ಶಿವನನ್ನು ಪೂಜಿಸಿ ಯೋಗ್ಯನಾದ ಮಗನನ್ನು ಪಡೆಯೋಣವೆಂದು ಆ ಬ್ರಾಹ್ಮಣನು ಪತ್ನಿಯನ್ನು ಸಮಾಧಾನಗೊಳಿಸಿ ತನ್ನ ಹೆಂಡತಿಯೊಡನೆ ಯೋಗ್ಯನಾದ ಪುತ್ರಪ್ರಾಪ್ತಿಗೋಸ್ಕರ ದೃಢವಾಗಿ ಆ ಶಂಕರನ ಪಾದಪೂಜೆಯಲ್ಲಿ ಆಸಕ್ತನಾಗಿ ಜಾಗ್ರತೆಯಾಗಿ ಆ ಮಹಾದೇವನನ್ನು ಪೂಜಿಸಲು ಪಕ್ರಮಿಸಿದನು. ॥೩೬-೩೭॥

ಪವಿತ್ರವಾದ ಶಿವಸರೋವರದಲ್ಲಿ ಬೆಳಗ್ಗೆ ಸ್ನಾನಮಾಡಿ, ಕೆಂದಾವರೆಗಳಿಂದ ವಿಧಿಪ್ರಕಾರ ಸೂರ್ಯನನ್ನು ಪೂಜೆಮಾಡಿದನು. ಶ್ರೇಷ್ಠವಾದ ಅರುಣಮಂತ್ರಗಳನ್ನು ಚ್ಛರಿಸುತ್ತಾ ಸೂರ್ಯನಿಗೆ ನಮಸ್ಕಾರಮಾಡುವವನಾಗಿ ಆ ಸೂರ್ಯದೇವನ ಚರಣಸರೋಜಗಳಿಗೆ ಮರೆಹೋದನು. ॥೩೮-೩೯॥

ಆ ಬ್ರಾಹ್ಮಣನು ಭಸ್ಮರುದ್ರಾಕ್ಷಗಳಿಂದಲಂಕೃತನಾಗಿ ಪಾರ್ವತೀಸಮೇತನಾದ ಶಿವನನ್ನು ರುದ್ರಪಂಚಾಕ್ಷರಮಂತ್ರವನ್ನು ಆವೃತ್ತಿಮಾಡುತ್ತಾ ಬಿಲ್ವದಳಗಳಿಂದ

ಪ್ರದಕ್ಷಿಣಪ್ರಣಾಮಾದಿಸ್ತುತ್ಯಾ ಧೂಪನಿವೇದನೈಃ ।
ಶಿವಾಗಮೋಕ್ತವಿಧಿನಾದ್ರವ್ಯೈಃ ಸೌಭಾಗ್ಯದಾಯಿಭಿಃ ॥೪೧॥

ಪ್ರಕಲ್ಪಿತೋಪಚಾರಂ ಚ ಕಂದಮೂಲಫಲಾದಿಭಿಃ ।
ತದಾ ಭಗವತೀ ಸಾಽಪಿ ಸ್ವಾತ್ಮನಾಥೇನ ನೋದಿತಾ ॥೪೨॥

ಮನೋಯುಕ್ತಂ ತಪಃ ತರ್ತುಂ ಸಂಸಾರವಾರಿಧಿಂ ।
ಭರಿತಾನಂದಹೃತ್ಪದ್ಮಶಾಂತಸ್ವಾಂತಾ ಮಹೇಶ್ವರೇ ॥೪೩॥

ಯಥಾ ಕುಮಾರಜನನೇ ಪಾರ್ವತೀ ಪರ್ವತಾಗ್ರಗಾ ।
ಶರ್ವಮಾರಾಧಯಾಮಾಸ ತಥೇಯಂ ಪುತ್ರವಾಂಛಯಾ ॥೪೪॥

ಸ್ನಾತ್ವಾ ತದಾಸಾಧಮ್ಮಿಲ್ಲಮಂದಾರ ಪ್ರಸವೋಚಿತಂ ।
ಜಟಾಭರತ್ವಂ ತಪಸೇ ಗಮಯಾಮಾಸ ಸುವ್ರತಾ ॥೪೫॥

ಹಂಸಕೂಲದುಕೂಲಂ ಸಾ ಹಿತ್ವಾ ವಲ್ಕಲಧಾರಿಣೀ ।
ಅಪಿ ಪ್ರಸೂನಾಪಚಯೋ ನಿಃಸಹಾಂಗುಲಿಪಲ್ಲವಾ ॥೪೬॥

---

ಪೂಜಿಸಿದನು. ಧೂಪ, ನಿವೇದನ, ಶಿವಾಗಮದಲ್ಲಿ ಹೇಳಿದ ವಿಧಿಗನುಸಾರವಾಗಿ ಸೌಭಾಗ್ಯಕರವಾದ ಪದಾರ್ಥಗಳಿಂದ ಪೂಜೆಗಳನ್ನು ಸಲ್ಲಿಸಿ, ಪ್ರದಕ್ಷಿಣ, ನಮಸ್ಕಾರ ಗಳನ್ನು ಮಾಡಿ ಆ ಬ್ರಾಹ್ಮಣನು ಸ್ತೋತ್ರಮಾಡಿದನು. ॥೪೦-೪೧॥

ಆಗ ತನ್ನ ಪತಿಯಿಂದ ಅನುಮತಿಪಡೆದು, ಗೆಡ್ಡೆಗೆಣಸುಗಳು ಮತ್ತು ಹಣ್ಣು ಹಂಪಲುಗಳನ್ನು ಸ್ವೀಕರಿಸಿ, ಈ ಸಂಸಾರಸಾಗರವನ್ನು ದಾಟಿಸುವ ತಪಸ್ಸನ್ನು ಮನಃಪೂರ್ವಕವಾಗಿ ಗೈಯಲು ಆನಂದಭರಿತಳಾಗಿ ಮಹೇಶ್ವರನಲ್ಲಿ ತನ್ನ ಹೃದಯ ಕಮಲವನ್ನಿರಿಸಿದಳು. ॥೪೨-೪೩॥

ಷಣ್ಮುಖಸ್ವಾಮಿಯ ಪ್ರಾಪ್ತಿಯಲ್ಲಿ ಪಾರ್ವತೀದೇವಿಯು ಕೈಲಾಸಪರ್ವತದ ತುದಿಯಲ್ಲಿ ನಿಂತು ಶಂಕರನನ್ನು ಪೂಜೆಮಾಡಿದಂತೆ, ಆ ಭಗವತಿಯೂ ಪುತ್ರಕಾಮನೆ ಯಿಂದ ಶಂಭುವನ್ನು ಪೂಜಿಸಿದಳು. ಅವಳು ಆಗ ಸ್ನಾನಮಾಡಿ ಪಾರಿಜಾತಹೂ ಗಳನ್ನು ಧರಿಸಲು ಯೋಗ್ಯವಾಗಿದ್ದ ತನ್ನ ತಲೆಗೂದಲಿನ ಗಂಟನ್ನು ಶೃಂಗರಿಸಿ ಕೊಳ್ಳದೆ ತಪಸ್ಸಿಗೋಸ್ಕರ ಜಡೆಬಿಟ್ಟು ತಪೋನಿರತಳಾದಳು. ॥೪೪-೪೫॥

ಅವಳು ಹಂಸದಂತೆ ಶುಭ್ರವಾದ ದುಕೂಲಗಳನ್ನು ಉಟ್ಟು ನಾರುಮಡಿ

ಪವಿತ್ರಂ ಸಾ ಕುಶಾಗ್ರಾಣಾಂ ಪವಿತ್ರತ್ವೇನ ಬಿಭ್ರತಿ ।
ಚಂದನಾಸಾರಗಾತ್ರಂ ಸಾ ಪರಿಧೂಯಾಂಗರಾಗಕಂ ॥೪೭॥

ಭಸ್ಮಧೂಸರಿತಾಂಗಂ ಸಾ ಚಕ್ರೇ ಸಿಂಧೂರಲಾಂಛಿತೇ ।
ಫಾಲೇ ತ್ರಿಪುಂಡ್ರರಚನಾಂ ಮಾಲಾರುದ್ರಾಕ್ಷಕಲ್ಪಿತಾಃ ॥೪೮॥

ಅನಲ್ಪರತ್ನಾಭರಣಾ ಸ್ವೀಚಕ್ರೇ ತರುಣೀ ತದಾ ।
ಅಂಗುಷ್ಠಾಗ್ರೇಣ ತಿಷ್ಠಂತ್ಯಾ ಧರ್ಮೇಸಾ ವರ್ಮಣಾವೃತಾ ॥೪೯॥

ವರ್ಷರಾತ್ರಿಷು ಧಾರಾಭಿರ್ವಾರಿದೋಕ್ಷ್ಣಾಸು ಸಾಬಭೌ ।
ಸೌದಾಮಿನೀವ ಭೂಲೋಕೇ ಕಾಮಿನೀ ಯಾಮಿನೀಷು ಸಾ ॥೫೦॥

ತಿಮಿರಸ್ತಿಮಿತೇ ಕಾಲೇ ತಸ್ಯಾಂಗಪ್ರಭಯಾ ದಿಶಃ ।
ಭಾಂತಿ ತತ್ಕುಂದಸಂದೋಹಕೋರಕಾನಿವ ತದ್ರದಾಃ ॥೫೧॥

---

ಗಳನ್ನು ಧರಿಸಿದಳು. ಹೂಪತ್ರೆಗಳನ್ನು ಕೊಯ್ಯುವುದರಲ್ಲಿಯೂ ಸಹ ಆಯಾಸ ಹೊಂದುತ್ತಿದ್ದ ಪಲ್ಲವಸದೃಶವಾದ ಬೆರಳುಗಳುಳ್ಳ ಆ ಭಗವತಿಯು ಹರಿತವಾದ ದರ್ಭೆಗಳ ತುದಿಗಳನ್ನು ತಾನೇ ತಂದು ಪವಿತ್ರಮಾಡಿಕೊಂಡಳು. ಚಂದನರಸ ಧಾರಣಯೋಗ್ಯವಾಗಿದ್ದ ತನ್ನ ಶರೀರಕ್ಕೆ ಅಂಗರಾಗಗಳನ್ನು ಲೇಪನಮಾಡುವುದನ್ನೇ ಬಿಟ್ಟಳು. ॥೪೬-೪೭॥

ಅದಕ್ಕೆ ಬದಲಾಗಿ ತನ್ನ ದೇಹವನ್ನು ಭಸ್ಮಲೇಪನದಿಂದ ಧೂಸರವರ್ಣವನ್ನಾಗಿ ಮಾಡಿಕೊಂಡಳು. ಕುಂಕುಮವನ್ನು ಧರಿಸುವ ಹಣೆಯಲ್ಲಿ ಭಸ್ಮತ್ರಿಪುಂಡ್ರವನ್ನು ರಚಿಸಿಕೊಂಡಳು. ಅಪರಿಮಿತವಾದ ರತ್ನದ ಒಡವೆಗಳನ್ನು ಧರಿಸುತ್ತಿದ್ದ ಆ ತರುಣಿಯು ಆಗ ರುದ್ರಾಕ್ಷಗಳಿಂದ ಯುಕ್ತಗಳಾದ ಮಾಲೆಗಳನ್ನಲಂಕರಿಸಿದಳು. ಈ ರೀತಿ ನಿಯಮಭರಿತಳಾಗಿ ಧರ್ಮಮಾರ್ಗದಲ್ಲಿ ನಡೆಯುತ್ತಾ ಧರ್ಮಕಂಚುಕ ಧಾರಿಣಿಯಾಗಿ ಹೆಬ್ಬೆಟ್ಟಿನ ತುದಿಯಿಂದ ನಿಂತು ತಪಸ್ಸಿಗೆ ಉಪಕ್ರಮಿಸಿದಳು. ॥೪೮-೪೯॥

ಮಳೆಗಾಲದ ರಾತ್ರಿಗಳಲ್ಲಿ ಅವಳು ಧಾರಾಕಾರವಾಗಿ ಸುರಿಯುತ್ತಿರುವ ಮಳೆಯಲ್ಲಿಯೇ ನಿಂತು ತಪಸ್ಸುಮಾಡುತ್ತಾ ಭೂಲೋಕದಲ್ಲಿರುವ ಸೌದಾಮಿನಿಯೋ (ಮಿಂಚಿನ ಲತೆಯೋ) ಎಂಬಂತೆ ಪ್ರಕಾಶಿಸುತ್ತಿದ್ದಳು. ಗಾಢಾಂಧಕಾರದಿಂದ ಅಂತರಿಕ್ಷವೆಲ್ಲಾ ವ್ಯಾಪಿಸಿರಲು ಈ ಭಗವತಿಯು ದೇಹಪ್ರಭೆಯಿಂದ ದಿಕ್ಕುಗಳೆಲ್ಲವೂ

ತಸ್ಯಾರುಣಾಧರಂ ಬಿಂಬಂ ತಿರಸ್ಕಾರಿ ಚಮತ್ಕೃತಿಃ ।
ಪಾಣಿಪಾದೇನ ಪದ್ಮಾನಿ ಮುಖೇನೇಂದುಕಲಾಮಪಿ ॥೫೨॥

ನೇತ್ರೇಣ ನೀಲಪದ್ಮಂ ಸಾ ಧಮ್ಮಿಲ್ಲಜಿತಸದ್ಮನಾ ।
ಕುಚಾಭ್ಯಾಂ ಜಿತಮಾತಂಗ ಕುಂಭಾಭ್ಯಾಂ ಚಾರುಹಾಸಿನೀ ॥೫೩॥

ಪ್ರದರ್ಶಯತ್ಯನಾಯಾಸಾ ನಿತ್ಯೇ ಸಾ ಹೈಮಿನೀನಿಶಾಃ ।
ನೀಹಾರಿಹಾರಿಪದ್ಮಶ್ರೀರಪ್ಯಸ್ಯಾ ಮುಖಪಂಕಜಂ ॥೫೪॥

ಮನೋಹಾರಿ ಸದೈವಾಸ್ಯಾ ಹರಹೃತ್ಪದ್ಮಸದ್ಮಗಂ ।
ತಪಸ್ವತ್ಯಾಂ ತದಾ ಸ್ವಪ್ನೇ ದದೌ ಕೋಽಪಿ ಜಟಾಧರಃ ॥೫೫॥

---

ಪ್ರಕಾಶಿಸುತ್ತಿದ್ದವು. ಅವಳ ಸ್ವಚ್ಛವಾದ ಹಲ್ಲುಗಳು ಮಲ್ಲಿಗೆ ಹೂಗಳ ಮೊಗ್ಗುಗಳ ಸಮೂಹದಂತೆ ರಾಜಿಸುತ್ತಿದ್ದವು. ॥೫೦-೫೧॥

ಅವಳ ಕೆಂಪಾದ ಕೆಳದುಟಿಯು ತೊಂಡೆಯ ಹಣ್ಣನ್ನು ತಿರಸ್ಕರಿಸುತ್ತಿದ್ದಿತು. ಕೈಕಾಲುಗಳಿಂದ ತಾವರೆಗಳನ್ನೂ, ಮೊಗದಿಂದ ಚಂದ್ರಕಲೆಯನ್ನೂ ಕಣ್ಣಿನಿಂದ ಕನ್ನೈದಿಲೆಯನ್ನೂ, ಕೇಶಪಾಶದಿಂದ ಗಾಢಾಂಧಕಾರರಾಶಿಯನ್ನೂ ಕುಚಗಳಿಂದ ಆನೆಯ ಕುಂಭಸ್ಥಳಗಳನ್ನೂ ತಿರಸ್ಕಾರಮಾಡುತ್ತಾ ಇವಳು ಮಂದಹಾಸಯುಕ್ತಳಾಗಿ ತಪಸ್ಸುಮಾಡುತ್ತಿದ್ದಳು. ॥೫೨-೫೩॥

ಆ ಭಗವತಿಯು ಸ್ವಲ್ಪವೂ ಆಯಾಸವಿಲ್ಲದೆ ಹಿಮಂತಋತುವಿನ ರಾತ್ರಿಗಳನ್ನೆಲ್ಲಾ ಕಳೆದಳು. ಹಿಮದಿಂದ ಅವಳ ಮುಖಕಮಲವು ವ್ಯಾಪ್ತವಾಗಿದ್ದರೂ ಮಹೇಶ್ವರನನ್ನು ಹೃದಯಕಮಲದಲ್ಲಿ ಧ್ಯಾನಿಸಿ ನೆಲಸಿದ್ದರಿಂದ ಯಾವಾಗಲೂ ಮನೋಹರವಾಗಿಯೇ ರಾಜಿಸುತ್ತಿದ್ದಿತು. ಹೀಗೆ ಈ ಭಗವತಿಯು ನಿಯಮಬದ್ಧಳಾಗಿ ತಪಸ್ಸುಮಾಡುತ್ತಿದ್ದುದರಿಂದ ಜಟಾಧಾರಿಯಾದ ಯಾವನೋ ಒಬ್ಬ ಮಹಾತ್ಮನು ಅವಳ ಕನಸಿನಲ್ಲಿ ಕಾಣಿಸಿಕೊಂಡು, ಅವಳ ಮುಖ, ದೇಹ ಮುಂತಾದ ಭಾಗಗಳಿಲ್ಲೆಲ್ಲಾ ಭಸ್ಮಲೇಪನಮಾಡಿದನು. ಇದರ ಪ್ರಭಾವದಿಂದಲೇ ಆ ಭಗವತಿಯು ಗರ್ಭಿಣಿಯಾದಳು. ॥೫೪-೫೫॥

ಭಸ್ಮ ತನ್ಮುಖಗಾತ್ರೇಷು ತೇನ ಸಾ ದೌಹೃದಂ ದಧೌ ।
ಉದೇಷ್ಯಚಂಡಮಾರ್ತಾಂಡ ಪುರುಹೂತ ದಿಶೇವ ಸಾ ॥೫೬॥

ತಥಾಪಿ ಮಧ್ಯೇ ನೈತಸ್ಯಾ ಮಹತಾ ಸಮುಪೂಯತಾ ।
ಫಾಲೇ ವಿರಚಿತಾಂ ರಕ್ಷಾಂ ರೇಖಾಂ ಕುಕ್ಷಿಜುಷಃ ಶಿಶೋಃ ॥೫೭॥

ಸಾ ಭಕ್ಷಯದುದ್ಧ್ರವಂ ಮೃತ್ಸ್ನಾಂ ಭಸ್ಮನೋದ್ಧೂಳನೇಚ್ಛಯಾ ।
ಕುಕ್ಷಿಸ್ಥಸ್ಯ ಕುಮಾರಸ್ಯ ವಿಭೂತ್ಯೈವ ವಪುಶ್ರಿಯಃ ॥೫೮॥

ಪಾಂಡ್ಯಮಾನಂ ವಹತ್ಯಾಸೀತ್ಸತ್ವಾಧಿಷ್ಠಾತೃ ದೇವತಾ ।
ಸುಧಯಾ ಪರಿತೌ ತಸ್ಯಾಃ ಕುಚೌ ಮೇಚಕಚೂಚುಕೌ ॥೫೯॥

ಸಂವೀಕ್ಷ್ಯ ತಾಂ ಪ್ರಮೋದೇನ ಪ್ರಮುದಾ ಮುದಿತಾಶಯಾಃ ।
ಇಂದುಶೇಖರಭಾವೇನ ಭಾಸುರೋ ಭೂಸುರಸ್ತದಾ ॥೬೦॥

---

ಉದಯಿಸುತ್ತಿರುವ ಚಂಡಭಾನುವಿನಿಂದ ಪೂರ್ವದಿಕ್ಕು ಶೋಭಿಸುವಂತೆ ಗರ್ಭಿಣಿಯಾದ ಆ ಭಗವತಿಯು ಪೂರ್ಣಗರ್ಭದಿಂದ ಶೋಭಿಸುತ್ತಿದ್ದಳು. ಹೀಗಿದ್ದರೂ ದಿನದಿನಕ್ಕೆ ಏಳಿಗೆಯನ್ನು ಹೊಂದುತ್ತಿರುವ ಇವಳ ಉದರವು ಮಹಾತ್ಮನ ಜನನವನ್ನು ಸೂಚಿಸುತ್ತಿದ್ದಿತು. ತನ್ನ ಹಣೆಯಲ್ಲಿ ರಚಿಸಿಕೊಂಡಿರುವ ಭಸ್ಮತ್ರಿಪುಂಡ್ರರೇಖೆಯೇ ತನ್ನ ಗರ್ಭದಲ್ಲಿರುವ ಮಗುವಿಗೆ ರಕ್ಷೆಯೆಂದರಿತು, ಅವಳು ಭಸ್ಮೋದ್ಧೂಳನಾಪೇಕ್ಷೆಯಿಂದ ಗರ್ಭಿಣಿಯರು ಸ್ವಭಾವವಾಗಿತಿನ್ನುವ ಮೃತ್ತಿಕೆಯನ್ನು ತಿಂದಳು. ತಾನು ತಿನ್ನುವ ಮೃತ್ತಿಕೆಯು ಗರ್ಭದಲ್ಲಿರುವ ತನ್ನ ಕುಮಾರನ ದೇಹಕಾಂತಿಯ ಸಂಪತ್ತಿಗೋಸ್ಕರವೇ ಎಂದು ಅವಳು ಭಾವಿಸಿದಳು. ॥೫೬-೫೭-೫೮॥

ಗರ್ಭಿಣಿಯಾದ ಭಗವತೀದೇವಿಯು ದಿನದಿನಕ್ಕೆ ಪಾಂಡುವರ್ಣವನ್ನು ಪಡೆಯುತ್ತಿದ್ದಳು. ಇವಳ ಎರಡು ಸ್ತನಗಳಲ್ಲಿಯೂ ಅಮೃತಪೂರ್ಣವಾದ ಹಾಲು ತುಂಬಿ ಕುಚಾಗ್ರಗಳು ಕಪ್ಪಗೆ ಹೊಳೆಯಲಾರಂಭಿಸಿದವು. ಗರ್ಭಿಣಿಯಾಗಿರುವ ಭಗವತಿಯನ್ನು ಕಂಡು ಎಲ್ಲಾ ನಾರಿಯರೂ ಆನಂದದಿಂದ ಸಂತುಷ್ಟಾಂತರಂಗರಾದರು. ಬ್ರಾಹ್ಮಣನೂ ಕೂಡ ಚಂದ್ರಶೇಖರನ ಭಕ್ತಿಭಾವನೆಯಿಂದ ದಿನೇ ದಿನೇ ಪ್ರಕಾಶಿಸ ತೊಡಗಿದನು. ॥೫೯-೬೦॥

ಯಥಾ ವಿಭವಮಾನಾನಿ ಕ್ರಿಯಾ ಪುಂಸವನಂ ಕ್ರಿಯಾತ್ ।
ಸೀಮಂತೋನ್ನಯನೇನಾಸೌ ಸ್ಫುರಿತಾತಿಶಯೋ ಬಭೌ ॥೬೧॥

ತದಾ ಮಣಿಶಲಾಕೇವ ಶಾಣೋಲ್ಲೀಢಾ ಪ್ರಭಾವತೀ ।
ಅಥ ವೈಜನನೇ ಮಾಸಿ ಗೃಹೇಷೂಚ್ಚೇಷು ಪಂಚಸು ॥೬೨॥

ಮುಹೂರ್ತೇ ಶೋಭನೇ ಸೂನುಂ ಪ್ರಸೂತಾ ಭಾವಯನ್ದಿಶಃ ।
ಸೂತಿಕಾಭಾಸಯಾಮಾಸ ಮಣಿದೀಪತಿರಸ್ಕ್ರಿಯಾಂ ॥೬೩॥

ಕುರ್ವತಾನಂದ ಭಾನೂನಾಂ ಲೀಲಾಯಿತಮುದಂಚಿತಂ ।
ದೇವಾಶ್ಚ ಸುಮುಖಾಃ ಸರ್ವೇ ತದಾ ಮಖಮುಖೇಽಗ್ನಯಃ ॥೬೪॥

ಪ್ರದಕ್ಷಿಣಾಕಾರತಯಾ ಜಜ್ವಲುಃ ಪವನಾ ವವುಃ ।
ವವರ್ಷುಃ ಕುಸುಮಾಸಾರಂ ದೇವಗಂಧರ್ವಜಾಪ್ಸರಾಃ ॥೬೫॥

---

ಆ ಬ್ರಾಹ್ಮಣನು ತನ್ನ ಐಶ್ವರ್ಯ ಮಾನಗಳಿಗನುಗುಣವಾಗಿ ಕಾಲಕ್ಕೆ ಸರಿಯಾಗಿ ಪತ್ನಿಗೆ ಪುಂಸವನ, ಸೀಮಂತೋನ್ನಯನ ಮುಂತಾದ ಸಂಸ್ಕಾರಗಳನ್ನು ನೆರವೇರಿಸಿ ವಿಶಾಲವಾದ ಭಾವವುಳ್ಳವನಾಗಿ ಆನಂದದಿಂದಿರುತ್ತಿದ್ದನು. ಇದರಿಂದ ಭಗವತಿಯು ಸಾಣೆಹಿಡಿದ ರತ್ನಶಲಾಕೆಯಂತೆ ಶೋಭಿಸುತ್ತಿದ್ದಳು. ನವಮಾಸ ಪೂರ್ತಿಯಾದೊಡನೆಯೇ ಭಗವತಿಯು ಐದು ಗ್ರಹಗಳು ಉಚ್ಚಸ್ಥಾನದಲ್ಲಿರುವಾಗ ಷಡ್ಬಲಯುಕ್ತವಾದ ಮಂಗಳಮುಹೂರ್ತದಲ್ಲಿ ದಿಕ್ಕುಗಳೆಲ್ಲಾ ಪ್ರಸನ್ನವಾಗಿರುವಾಗ, ಸರ್ವಾಂಗಸುಂದರನಾದ ಪುತ್ರನನ್ನು ಪಡೆದಳು. ॥೬೧-೬೨॥

ಬಾಣಂತಿಯಾದ ಆ ಭಗವತಿಯು ರತ್ನದೀಪಗಳನ್ನು ತಿರಸ್ಕರಿಸುತ್ತಿರುವಳೋ, ಎಂಬಂತೆ ಪ್ರಸವಗೃಹವನ್ನೆಲ್ಲಾ ತನ್ನ ದೇಹಕಾಂತಿಯಿಂದ ಬೆಳಗಿಸಿದಳು. ತಂದೆಯಾದರೋ ಆನಂದ ಕಿರಣಗಳ ಲೀಲೆಗೆ ಆಶ್ರಯವಾದ ತನ್ನ ಮಗನ ಜನ್ಮರೂಪವಾದ ಸಂತೋಷೋತ್ಸವವನ್ನು ನಡೆಸುತ್ತಿರಲು, ಇತ್ತ ದೇವತೆಗಳೆಲ್ಲರೂ ಪ್ರಸನ್ನರಾದರು. ತ್ರೇತಾಗ್ನಿಗಳು ಯಜ್ಞಕುಂಡಗಳಲ್ಲಿ ಮಂಗಳಾಕಾರವಾಗಿ ಪ್ರದಕ್ಷಿಣಮುಖದಿಂದ ಪ್ರಜ್ವಲಿಸಿದವು. ಮಂದಮಾರುತವೂ ತಂಪಾಗಿ ಬೀಸಿತು. ದೇವ, ಗಂಧರ್ವ ಮತ್ತು ಅಪ್ಸರೆಯರು ಸಂತೋಷದಿಂದ ಭೂಮಿಗೆ ಹೂಮಳೆಗರೆದರು. ॥೬೩-೬೪-೬೫॥

ಜಗುಃ ಕಲಂ ತಾ ನನೃತುಃ ಮೇನಕಾ ನಾಕಿನಾಂ ಗಣಾಃ ।
ಅನಾಹತಾ ದುಂದುಭಯೋ ನೇದುರ್ಜಲದಗೌರವಂ ॥೬೬॥

ಅಥ ಶಯ್ಯಾಸಮಾರೂಢೋ ಬಭೌ ಭಗವತೀಸುತಃ ।
ಉದಯಾದ್ರೇರಿವಾರೂಢಶ್ಚಂಡಭಾನುಃ ಪ್ರಚಂಡಭಾಃ ॥೬೭॥

ಪುತ್ರಜನ್ಮಾಮೃತಂ ಶ್ರುತ್ವಾ ತತ್ಪಿತಾ ಹರ್ಷವರ್ಷಣೈಃ ।
ಹರ್ಷಿತೋ ಬಹುಕಾಲೇನ ಬ್ರಾಹ್ಮಣೇಭ್ಯೋ ದದೌ ವಸು ॥೬೮॥

ಮಹಾಂತಮುತ್ಸವಂ ಕುರ್ವನ್ಬಂಧುವರ್ಗಸಮನ್ವಿತಃ ।
ಅಪೂಪುಷತ್ಕುಮಾರಂ ಸ್ವಂ ಪೂಷೇವ ಗಗನೇ ಸ್ಥಿತಂ ॥೬೯॥

ದಿನೇ ದಿನೇ ಪರಾಂ ವೃದ್ಧಿಮವಾಪಾತ್ಯಂತಹರ್ಷಿತಃ ।
ಅಯಾಸೀದತುಲಾಂ ಪುಷ್ಟಿಮಿಷ್ಟಂ ಪಿತ್ರೋರಥಾಚ್ಛಿಶುಃ ॥೭೦॥

---

ಅಂತರಿಕ್ಷದಲ್ಲಿ ಗಂಧರ್ವರು ಅವ್ಯಕ್ತಮಧುರವಾಗಿ ಗಾನಮಾಡುತ್ತಿರಲು, ಮೇನಕೆಯೇ ಮುಂತಾದ ಅಪ್ಸರೆಯರೂ ದೇವಗಣಗಳೂ ನಾಟ್ಯವಾಡಿದರು. ತಾವಾಗಿಯೇ ದೇವನಗಾರಿಗಳು ಮೋಡಗಳಂತೆ ಗಂಭೀರವಾಗಿ ಮೊಳಗಿದವು. ಹೀಗೆ ಎಲ್ಲೆಡೆಗಳಲ್ಲಿಯೂ ಮಂಗಳಪರಂಪರೆಯಾಗುತ್ತಿರಲು ಹಾಸಿಗೆಯ ಮೇಲಿರುವ ಆ ಭಗವತೀದೇವಿಯ ಮಗನು ಉದಯಪರ್ವತದ ತುದಿಯನ್ನು ಸೇರಿರುವ ಚಂಡ ಸೂರ್ಯನಂತೆ ಪ್ರಚಂಡ ಕಾಂತಿಯಿಂದ ಶೋಭಿಸುತ್ತಿದ್ದನು. ॥೬೬-೬೭॥

ಅಮೃತಸಮಾನವಾದ ಪುತ್ರಪ್ರಾಪ್ತಿಯ ಶುಭಸಮಾಚಾರವನ್ನು ಕೇಳಿದಾಗಿನಿಂದ ಮಗುವಿನ ತಂದೆಯು ಸಂತೋಷವೃಷ್ಟಿಯಿಂದ ತೊಯ್ದವನಾಗಿ ಬಹಳ ಕಾಲಕ್ಕೆ ದೈವಾನುಗ್ರಹದಿಂದುಂಟಾದ ಪುತ್ರರತ್ನಲಾಭದಿಂದ ತೃಪ್ತನಾಗಿ, ಬ್ರಾಹ್ಮಣರಿಗೆ ಯಥೇಚ್ಛವಾಗಿ ದ್ರವ್ಯದಾನಮಾಡಿದನು. ತನ್ನ ನೆಂಟರಿಷ್ಟರೊಡನೆ ದೊಡ್ಡದಾದ ಉತ್ಸವವನ್ನು ಏರ್ಪಡಿಸಿ ಅಂಬರದಲ್ಲಿರುವ ಶುಕ್ಲಪಕ್ಷದ ಚಂದ್ರನಂತೆ ತನ್ನ ಮಗನನ್ನು ದಿನದಿನಕ್ಕೂ ಅಭಿವೃದ್ಧಿಗೊಳಿಸುತ್ತಿದ್ದನು. ॥೬೮-೬೯॥

ದಿನದಿನಕ್ಕೂ ಮಗುವು ಕಾಂತಿಯುಕ್ತವಾಗಿ ಅಭಿವೃದ್ಧಿ ಹೊಂದುತ್ತಾ ಸಂತೋಷಚಿತ್ತದಿಂದಿರುತ್ತಾ, ಅಪರಿಮಿತವಾದ ದೇಹಪುಷ್ಟಿಹೊಂದಿ ತನ್ನ ತಂದೆ ತಾಯಿಗಳಿಗೆ ಆನಂದವನ್ನುಂಟುಮಾಡುತ್ತಿದ್ದಿತು. ಆ ಮಗುವು ತಲೆಯನ್ನು ಮೇಲ

ಮೂರ್ಧನ್ಯುನ್ನಮಿತೇ ತೇನ ವೇದೈರುನ್ನಮಿತಂ ಶಿರಃ ।
ಅಂಕಣೇ ಕಿಂಕಿಣೀರತ್ನಹಂಸಕಸ್ವನಮಂಜುಲಃ ॥೭೧॥

ಜಾನುಚಂಕ್ರಮಣಂ ಚಕ್ರೇ ವಾಚಾಲಮಣಿಕಂಕಣಃ ।
ಜನನೀಕರಮಾಲಂಬ್ಯ ಪಂಚಷಾಣಿ ಪದಾನಿ ಸಃ ॥೭೨॥

ವಕ್ಷಸ್ಥಹೇಮಸೂತ್ರಾಢ್ಯಪುಂಡರೀಕನಖಾಂಕಿತಃ ।
ಭುವಂ ಗತ ಇವ ಸ್ಕಂದಃ ಕೌತುಕಂ ಪಿತುರಾತನೋತ್ ॥೭೩॥

ಅವ್ಯಕ್ತಾಕ್ಷರವಾಙ್ಮಾಧ್ವೀ ಮುಖರೀಕೃತದಿಙ್ಮುಖಃ ।
ಅವ್ಯಾಜಹಸಿತೋಲ್ಲಾಸೀ ತದ್ದಂತಕಮುಖಶ್ರಿಯಾ ॥೭೪॥

ಫಾಲತ್ರಿಪುಂಡ್ರರಚನಾ ರೋಚನಾಕ್ತಸುರೇಖಯಾ ।
ವಿಲೋಲಕರ್ಣಪಾಶಾಂತರತ್ನರುದ್ರಾಕ್ಷ ಕುಂಡಲಃ ॥೭೫॥

---

ಕೈತ್ತುತ್ತಲೇ ವೇದಗಳೆಲ್ಲವೂ ತಮ್ಮನ್ನು ಇವನು ಅಭಿವೃದ್ಧಿಗೊಳಿಸುವನೆಂದು ತಿಳಿದು ತಲೆ ಎತ್ತಿ ನಡೆಯಲಾರಂಭಿಸಿದುವು. ಕಾಲಿನಲ್ಲಿ ರತ್ನಖಚಿತವಾದ ಗೆಜ್ಜೆಗಳ ಕಾಲ್ಗಡಗಗಳನ್ನು ಧರಿಸಿ ಹಂಸದಂತೆ ಮನೋಹರವಾಗಿ ಧ್ವನಿಮಾಡುತ್ತಾ ಈ ಬಾಲಕನು ಅಂಬೆಗಾಲಿಡಲು ಆರಂಭಿಸಿದನು. ॥೭೦-೭೧॥

ಹಾಗೆಯೇ ಧ್ವನಿಗೈಯುವ ರತ್ನಕಂಕಣವನ್ನು ಧರಿಸಿ ತನ್ನ ತಾಯಿಯ ಕೈಹಿಡಿದು ಐದಾರು ಹೆಜ್ಜೆಗಳನ್ನಿಡಲುಪಕ್ರಮಿಸಿದನು. ಹುಲಿಯುಗುರಿನಿಂದ ಕೂಡಿದ ಸುವರ್ಣಮಾಲೆಯು ಎದೆಯಲ್ಲಿ ವಿರಾಜಿಸುತ್ತಾ ನಡೆದಾಡುತ್ತಿರುವಾಗ ಈ ಬಾಲಕನು ಭೂಮಿಗಿಳಿದಿರುವ ಕುಮಾರಸ್ವಾಮಿಯಂತೆ ತಂದೆತಾಯಿಗಳಿಗೆ ಅತ್ಯಾನಂದವನ್ನುಂಟುಮಾಡುತ್ತಿದ್ದನು. ॥೭೨-೭೩॥

ಕೆಲವು ಕಾಲದಲ್ಲಿಯೇ ಆ ಮಗುವು ಮೃದುಮಧುರವಾದ ತನ್ನ ಮುದ್ದು ಮಾತುಗಳಿಂದ ಎಲ್ಲ ದಿಕ್ಕುಗಳನ್ನು ಧ್ವನಿಗೈಯ್ಯುತ್ತಿದ್ದನು. ತನ್ನ ಮುದ್ದುಮುಖದ ಕಾಂತಿಯಿಂದ ನಿರ್ನಿಮಿತ್ತವಾಗಿ ನಗುತ್ತಾ ಎಲ್ಲರನ್ನೂ ಆನಂದಗೊಳಿಸುತ್ತಿದ್ದನು. ಹಣೆಯಲ್ಲಿಟ್ಟಿರುವ ಶುಭ್ರವಾದ ಭಸ್ಮತ್ರಿಪುಂಡ್ರಗಳಿಂದ ದಿವ್ಯವಾಗಿ ಕಂಗೊಳಿಸುತ್ತಿದ್ದನು. ಕಿವಿಯ ಪಕ್ಕದವರೆಗೂ ಜೋಲುಬಿದ್ದಿರುವ ರತ್ನಖಚಿತವಾದ ರುದ್ರಾಕ್ಷ ಕುಂಡಲಗಳನ್ನು ಅವನು ಧರಿಸಿದ್ದನು. ॥೭೪-೭೫॥

ಭಸಿತಾಲಕ್ತಕಾಸಕ್ತ ಪದಾರಕ್ತಿತಭೂತಲಃ ।
ವ್ಯಾಲೋಲಕುಂತಲಾ ನೀಲಫಾಲಾತ್ತತಿಲಕಾಮುಖಃ ॥೨೬॥

ಪೂರ್ಣೇಂದುಮಧ್ಯವಿಲಸನ್ನ್ಯಂಕುಶಂಕಾವಿಶೋಭಿನಾ ।
ಫಾಲೇನ ಭಾತಿ ಬಾಲೋಽಸೌ ಪರ್ಯಂಕೋತ್ತಾನಶಾಯ್ಯಪಿ ॥೨೭॥

ಸಾ ಜಗೌ ಲಾಲನೇ ಗೀತಿಂ ನಾನ್ಯಾಂ ಪಂಚಾಕ್ಷರೀಮನೋಃ ।
ಅಂಕೇ ಕನಕಪರ್ಯಂಕೇ ಮುಕ್ತಾ ಶೃಂಖಲಯಾಂಚಿತೇ ॥೨೮॥

ಮಾತೋಪಲಾಲಯಾಮಾಸ ಮಧುರೈರ್ಗೀತಗುಂಫನೈಃ ॥೨೯॥

ಬಾಲೋಽಪಿ ಭಸ್ಮವಿಧೃತಾಮಲರುದ್ರನೇತ್ರಃ
ಸ್ರಗ್ಭಿರ್ವಿಕೀರ್ಯ ಕುಸುಮಾನಿ ಚ ಪಾಂಸುಲಿಂಗೇ ।
ನೈವೇದ್ಯಮಿಷ್ಟಮುದದಾಚ್ಛಿಪಿವಿಷ್ಟಲಿಂಗಂ
ಸಂಪೂಜಯಂಭಿವಶಿವೇತಿ ಸ ಬಾಲವರ್ಗೈಃ ॥೩೦॥

---

ಭಸ್ಮ ಮತ್ತು ಲಾಕ್ಷಾರಸಗಳಿಂದ ಲೇಪನಮಾಡಲ್ಪಟ್ಟ ಕಾಲುಗಳಿಂದ ನೆಲವನ್ನೆಲ್ಲಾ ಕೆಂಪುಮಾಡುತ್ತಿದ್ದನು. ಚಂಚಲವಾದ ಮುಂಗುರುಳುಗಳಿಂದಲೂ, ಹಣೆಯಲ್ಲಿ ಧರಿಸಿರುವ ಕಪ್ಪುತಿಲಕಗಳಿಂದಲೂ ಅವನು ಶೋಭಿಸುತ್ತಿದ್ದನು. ಎತ್ತರವಾದ ಮಂಚದಮೇಲೆ ಹಾಸಿಗೆಯಲ್ಲಿ ಕಪ್ಪುತಿಲಕವನ್ನಿಟ್ಟುಕೊಂಡು ಮಲಗಿದ್ದ ಈ ಬಾಲಕನು ಶಶಚಿಹ್ನೆಯುಳ್ಳ ಅಂದರೆ ಮಧ್ಯೆ ಕಪ್ಪುಮಚ್ಚೆಯಿಂದ ರಂಜಿಸುವ ಪೂರ್ಣಚಂದ್ರನಂತೆ ವಿರಾಜಿಸುತ್ತಿದ್ದನು. ॥೨೬-೨೭॥

ಆ ಭಗವತೀದೇವಿಯು ಮಗನನ್ನು ತೂಗುವಾಗ ಪವಿತ್ರವಾದ ಶಿವಪಂಚಾಕ್ಷರಮಂತ್ರವನ್ನು ಬಿಟ್ಟು ಬೇರೆ ಯಾವುದನ್ನೂ ಹಾಡುತ್ತಿರಲಿಲ್ಲ. ಮುತ್ತಿನ ಸರಪಣಿಯಿಂದ ಯುಕ್ತವಾಗಿರುವ ಚಿನ್ನದ ತೊಟ್ಟಿಲಲ್ಲಿಯೂ ಮತ್ತು ತನ್ನ ತೊಡೆಯ ಮೇಲೆಯೂ ಸಹ ಅವಳು ಮಧುರವಾದ ಶಿವಗೀತೆಗಳನ್ನು ಹಾಡಿ ಮಗನನ್ನು ಲಾಲಿಸುತ್ತಿದ್ದಳು. ॥೨೮-೨೯॥

ಆ ಬಾಲಕನಾದರೋ ಪೂರ್ವಜನ್ಮಸಂಸ್ಕಾರದಿಂದಲೂ, ಮಾತಾಪಿತೃಗಳ ಶಿಕ್ಷಣದಿಂದಲೂ, ಭಸ್ಮತ್ರಿಪುಂಡ್ರ ಮತ್ತು ಪವಿತ್ರವಾದ ರುದ್ರಾಕ್ಷಮಾಲೆಗಳನ್ನು ಧರಿಸಿ ಆಟಕ್ಕಾಗಿ ಸೈಕತಲಿಂಗಮಾಡಿಕೊಂಡು ಹೂಗಳಿಂದ ಅದನ್ನು ಪೂಜೆಮಾಡಿ ಇಷ್ಟವಾದ

ಇತಿ ಶ್ರೀಶಿವರಹಸ್ಯೇ ಸದಾಶಿವಾಖ್ಯೇ ನವಮಾಂಶೇ ಜ್ಞಾನಸಂಬಂಧ
ಭಕ್ತೋತ್ಪತ್ತಿಕಥನಂ ನಾಮ ಪಂಚಚತ್ವಾರಿಂಶೋಽಧ್ಯಾಯಃ

---

ನೈವೇದ್ಯವನ್ನು ಸಮರ್ಪಣೆಮಾಡುತ್ತಾ 'ಶಿವ ಶಿವ' ಎಂಬ ನಾಮವನ್ನುಚ್ಚಾರ ಮಾಡುತ್ತಾ ತನ್ನ ಜತೆಗಾರ ಹುಡುಗರ ಗುಂಪಿನೊಡನೆ ಶಿವನನ್ನು ಪೂಜಿಮಾಡುತ್ತಿದ್ದನೆಂದು ಜೈಗೀಷವ್ಯನಿಗೆ ಕುಮಾರಸ್ವಾಮಿಯು ಹೇಳಿದನು. ||೮೦||

ಇಲ್ಲಿಗೆ ಶ್ರೀಶಿವರಹಸ್ಯದಲ್ಲಿ ಸದಾಶಿವಸಂಜ್ಞಕವಾದ ಒಂಬತ್ತನೆಯ ಅಂಶದಲ್ಲಿ
'ಜ್ಞಾನಸಂಬಂಧ'ನೆಂಬ ಭಕ್ತನ ಉತ್ಪತ್ತಿಕಥನವೆಂಬ
ನಲವತ್ತೈದನೆಯ ಅಧ್ಯಾಯವು ಮುಗಿದುದು



॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀ ಶಿವರಹಸ್ಯೇ

## ಸದಾಶಿವಾಖ್ಯೇ

## ನವಮಾಂಶೇ

## ಷಟ್ಚತ್ವಾರಿಂಶೋಽಧ್ಯಾಯಃ

॥ ಶ್ರೀಸ್ಕಂದ ಉವಾಚ ॥

ಏವಂ ತಸ್ಮಿಂಛಿಶುಕ್ರೀಡಾಪರಿಪಾಟೀಂ ವಿತನ್ವತಿ ।
ಪಿತ್ರೋರ್ನಕೇವಲಂ ಜೈಷಸ್ತ್ರೈಲೋಕ್ಯ ಸುಖಭಾಗಭೂತ್ ॥೧॥

ಸ ಕದಾಚಿದುತ್ಥಾಯ ಮುಹೂರ್ತೇ ಬ್ರಹ್ಮಸಂಜ್ಞಿತೇ ।
ಶಿವತೀರ್ಥಾಂಭಸಿ ಸ್ನಾತುಂ ತತ್ಪಿತಾ ಪ್ರಸ್ಥಿತೋ ದ್ವಿಜಃ ॥೨॥

ಸದಂಡಶಿಖರಾಧೌತೋ ವೇಷ್ಟಯಿತ್ವಾ ಶಿಶೋಃ ಸಹ ।
ಸದರ್ಭಮುಷ್ಟಿರುದ್ಧೂಲಗಾತ್ರೋ ಮಿತ್ರಜನೋ ದ್ವಿಜಃ ॥೩॥

---

## ನಲವತ್ತಾರನೆಯ ಅಧ್ಯಾಯ

ಅಯ್ಯ ಜೈಗೀಷವ್ಯನೇ, ಹೀಗೆ ಆ ಮಗುವು ಬಾಲಕ್ರೀಡೆಯ ವೈಭವವನ್ನು ನಡೆಸುತ್ತಾ ಕೇವಲ ತಾಯಿತಂದೆಗಳಿಗೆ ಮಾತ್ರವಲ್ಲದೆ ಮೂರುಲೋಕಗಳ ಜನಗಳ ಸಂತೋಷಕ್ಕೂ ಕಾರಣನಾದನು. ಕೆಲವು ಕಾಲ ಕಳೆಯಲು ಒಂದುದಿನ ಆ ಮಗುವಿನ ತಂದೆಯಾದ ಬ್ರಾಹ್ಮಣನು ಬ್ರಾಹ್ಮೀಮುಹೂರ್ತದಲ್ಲಿ ಶಿವತೀರ್ಥದ ಪವಿತ್ರ ಜಲದಲ್ಲಿ ಸ್ನಾನಮಾಡಲು ಎದ್ದು ಹೊರಟನು. ॥೧-೨॥

ಹೋಗುವಾಗ ಆ ಬ್ರಾಹ್ಮಣನು ಒಂದು ಕೋಲನ್ನು ಹಿಡಿದು ಬಿಳಿಯ ಪಂಚೆಯನ್ನು ತಲೆಗೆ ಕಟ್ಟಿಕೊಂಡು, ಒಂದು ಮುಷ್ಟಿ ದರ್ಭೆಯನ್ನು ಹಿಡಿದು ಮಿತವಾದ ಸ್ನೇಹಿತರೊಡನೆ ಮಗುವಿನ ಸಂಗಡ ಮನೆಬಿಟ್ಟು ಹೊರಟನು. ಅವನ

ತೇನಾನ್ವಿತೋ ಯಯೌ ಬಾಲೋ ಸರಸ್ತಟಮುದಾರಧೀಃ ।
ಪಾದಾಭ್ಯಾಂ ಪಲ್ಲವಾಭಾಭ್ಯಾಂ ಸಿಕತಾಸು ಪದಂ ದಧನ್ ॥೪॥

ಸ್ಥಾಪಯಿತ್ವಾ ಶಿಶುಂ ಶಂಭುತೀರ್ಥತೀರೇ ಸ ಭೂಸುರಃ ।
ಕೃತೋಚಿತಸಮಾಚಾರಃ ಸ್ನಾತುಂ ತೀರ್ಥಮಗಾಹತ ॥೫॥

ಬಾಲಕೋಽಪಿ ತಮಾಲೋಕ್ಯ ಧೂಲೀಕ್ರೀಡಾಪರಾಯಣಃ ।
ಸರಸ್ತಟೇ ಪಟನ್ಯಸ್ತಪಿತುರಾಲೋಕ್ಯ ಸೋಽವಟುಃ ॥೬॥

ಅದೃಷ್ಟ್ವಾ ಸ್ವಂ ಚ ಪಿತರಮಘಮರ್ಷಣಕಾರಿಣಂ ।
ರುರೋದ ಗೋಪುರಂ ಶಂಭೋಃ ಪಶ್ಯನ್ ದ್ರೋಣೀಪುರೇಶಿತುಃ॥೭॥

ತಾಂತೋ ವಕ್ತ್ರಂ ಚ ಸೋತ್ಫುಲ್ಲಹಲ್ಲಕಾರಕ್ತಪಾಣಿನಾ ।
ಕಜ್ಜಲಾಲೇಪಲೋಲೇನ ಲೋಚನೇನಾಶ್ರುಕಾರಿಣಾ ॥೮॥

---

ಜೊತೆಯಲ್ಲಿಯೇ ಉದಾರಮನಸ್ಸುಳ್ಳ ಆ ಬಾಲಕನೂ, ಚಿಗುರಿನಂತಿರುವ ತನ್ನ ಮೃದುವಾದ ಕಾಲುಗಳಿಂದ ಮರಳಮೇಲೆ ಹೆಜ್ಜೆಗಳನ್ನಿಡುತ್ತಾ ಶಿವತೀರ್ಥದ ದಡಕ್ಕೆ ಬಂದನು. ॥೩-೪॥

ಆಗ ತಂದೆಯು ಮಗುವನ್ನು ಆ ಶಂಭುತೀರ್ಥದ ದಡದಲ್ಲಿ ಕೂರಿಸಿ, ಕಾಲೋಚಿತ ಕರ್ಮಗಳನ್ನು ನೆರವೇರಿಸಿಕೊಂಡು ತಾನು ಸ್ನಾನಮಾಡಲು ಕೊಳದಲ್ಲಿ ಮುಳುಗಿದನು. ಆಗ ಮಗುವು ತಂದೆಯು ನೀರಿನಲ್ಲಿ ಸ್ನಾನಮಾಡಲು ಮುಳುಗಿದುದನ್ನು ನೋಡಿ, ತಾನು ಧೂಳಾಟದಲ್ಲಿ ನಿರತನಾಗಿರುತ್ತಾ, ಸ್ವಲ್ಪ ಹೊತ್ತಾದ ಮೇಲೆ ದಡದ ಮೇಲೆ ಬಟ್ಟೆಯನ್ನಿಟ್ಟು, ಸ್ನಾನಾಂಗವಾಗಿ ನೀರಿನಲ್ಲಿ ಅಘಮರ್ಷಣ ಸೂಕ್ತಪಾರಾಯಣ ಮಾಡುತ್ತಿದ್ದ ತನ್ನ ತಂದೆಯುನ್ನು ಕಾಣದೇ, ಪಕ್ಕದಲ್ಲಿರುವ ದ್ರೋಣೀಪುರೇಶ್ವರನ ಗೋಪುರವನ್ನು ನೋಡುತ್ತಾ ಗಟ್ಟಿಯಾಗಿ ಅಳಲು ಪ್ರಾರಂಭಿಸಿತು. ॥೫-೬-೭॥

ಬಹಳವಾಗಿ ಅತ್ತು, ಬಳಲಿ ಮಾತನಾಡಲು ಶಕ್ತಿಸಾಲದೆ ಅರಳಿದ ಕೆಂದಾವರೆಯಂತೆ ತನ್ನ ಕೆಂಪಾದ ಕೈಗಳನ್ನು ಜೋಡಿಸಿ, ಕಜ್ಜಲವನ್ನು (ಕಾಡಿಗೆಯನ್ನು) ಕೆರಳಿಸುತ್ತಾ, ಚಂಚಲವಾಗಿ ಸುರಿಯುತ್ತಿರುವ ಕಣ್ಣೀರುಳ್ಳ ಕಣ್ಣಿನಿಂದ ಆ ಮಗುವು

ಪಾಹಿ ಮಾಮಿತಿ ದೇವೇಶಂ ಸ ಬಲಾದ್ಬಾಲಕೋರುದತ್ ।
ತದಾಕರ್ಣ್ಯ ಮಹಾದೇವೋ ಮಹಾದೇವ್ಯಾ ತದಾಗತಃ ॥೯॥

ದಯಮಾನಮನಾ ದ್ರೋಣನಾಥೋಽಸೌ ಮನ್ಮಥಾಂತಕಃ ।
ಆರುಹ್ಯ ವೃಷಭಂ ದಿವ್ಯಂ ಶರದ್ಘನಸಮಪ್ರಭಂ ॥೧೦॥

ಗಣಯೋಗೀಂದ್ರ ಗೀರ್ವಾಣೈರ್ವಾಣೀಶಹರಿಸೇವಿತಂ ।
ಧಾರಾಲಬಾಷ್ಪನಯನಂ ರುದಂತಂ ತಂ ಸ್ತನಂಧಯಂ ॥೧೧॥

ದೇವೋಽದರ್ಶ ದಯಾಸಾರಸ್ರೋತಃ ಶೀತಲಯಾ ದೃಶಾ ।
ತ್ರ್ಯಕ್ಷೋ ವೀಕ್ಷ್ಯ ದೃಶಾ ಬಾಲಮಬಾಲಸಮವಿಕ್ರಮಂ ॥೧೨॥

ತ್ರೈಲೋಕ್ಯಜನನೀಂ ಪ್ರಾಹ ದಯಮಾನಮನಾಸ್ತದಾ ॥೧೩॥
ಸ್ತನ್ಯಂ ಹೇರಂಬಷಡ್ವಕ್ತ್ರಪೀತಶೇಷಂ ಗಿರೀಂದ್ರಜೇ ।

॥ ಈಶ್ವರ ಉವಾಚ ॥

ಶಿವೇಽಸ್ಮೈ ಸ್ತನಂದೇಹಿ ವಾತ್ಸಲ್ಯಾತ್ತ್ವಂ ಸುವತ್ಸಲೇ ॥೧೪॥

---

ದೇವೇಶ್ವರ, ನನ್ನನ್ನು ಸಲಹು, ನನ್ನನ್ನು ಕಾಪಾಡೆಂದು ಗದ್ಗದಕಂಠದಿಂದ ಗೋಳಿಡುತ್ತಾ ಪ್ರಾರ್ಥಿಸಿತು. ಆ ಬಾಲಕನ ದೀನಧ್ವನಿಯನ್ನು ಕೇಳಿ ಕರುಣಾ ಸಮುದ್ರನಾದ ಮಹಾದೇವನು ಪಾರ್ವತಿಯೊಡನೆ ಅಲ್ಲಿಗೆ ಬಂದನು. ॥೮-೯॥

ಮನ್ಮಥಶತ್ರುವೆನಿಸಿ, ರುದ್ರಗಣಗಳು, ಯೋಗಿವರ್ಯರು, ದೇವತೆಗಳು ಮತ್ತು ಬ್ರಹ್ಮವಿಷ್ಣು ಇವರೆಲ್ಲರಿಂದಲೂ ಸೇವಿಸಲ್ಪಡುವ ಆ ದ್ರೋಣನಾಥಸ್ವಾಮಿಯು ಮಗುವಿನ ಮೇಲೆ ದಯೆತೋರುವವನಾಗಿ ಶರದೃತುವಿನ ಮೋಡಗಳಿಗೆ ಸಮಾನ ವಾದ ಕಾಂತಿಯುಳ್ಳ ದಿವ್ಯವೃಷಭವನ್ನೇರಿ, ಧಾರಾಕಾರವಾಗಿ ಸುರಿಯುತ್ತಿರುವ ಕಣ್ಣೀರಿನಿಂದ ಕೂಡಿ ಅಳುತ್ತಿರುವ ಆ ಮಗುವನ್ನು ಪ್ರೇಮದಿಂದ ನೋಡಿದನು. ಮಹಾದೇವನು ದಯಾರಸ ಪ್ರವಾಹಭರಿತನಾಗಿ ಶೀತಲವಾದ ನೋಟದಿಂದ ಆ ಬಾಲಕನನ್ನು ಸಮಾಧಾನಗೊಳಿಸಿ, ಮತ್ತೆ ನೋಡಿ, ಮಗುವಾದರೂ ಸಾಮಾನ್ಯ ಮಕ್ಕಳಂತಲ್ಲದ ಆ ಮಗುವಿನಲ್ಲಿ ವಿಶೇಷ ದಯೆಯುಳ್ಳವನಾಗಿ ಮೂಲೋಕಮಾತೆ ಯಾದ ದೇವಿಯನ್ನು ಕುರಿತು, ॥೧೦-೧೧-೧೨-೧೩॥

ಎಲೌ ಪಾರ್ವತಿಯೇ, ಗಜಾನನ, ಷಣ್ಮುಖರು ಕುಡಿದು ಉಳಿದಿರುವ ನಿನ್ನ ಎದೆ ಹಾಲನ್ನು ಪ್ರೀತಿಯಿಂದ ಈ ಮಗುವಿಗೆ ಕೊಡು, ಎಂದು ಶಂಭುವು ವಾತ್ಸಲ್ಯ

ಇತ್ಯುಕ್ತ್ವಾ ಶಂಭುನಾ ಗೌರೀ ಕಾಂಚನೇ ಚಷಕೇ ಪಯಃ ।
ಪಯೋಧರಾಭ್ಯಾಂ ನಿಃಸೃತ್ಯ ಬಾಲಾಯಾಸ್ಮೈ ದದೌ ಶಿವಾ ॥೧೫॥

ಆದಾಯ ಚಷಕಂ ಬಾಲಃ ಪಾಣಿಭ್ಯಾಂ ಮುದಿತಾಶಯಃ ।
ಪಪೌ ಪಯಃ ಶಿವಜ್ಞಾನ ಚತುರ್ವೇದಸಮುದ್ಭವಂ ॥೧೬॥

ವಿಮೃಜ್ಯ ಲೋಚನೇ ದೇವ್ಯಾ ದತ್ತಮಾಸ್ವಾದ್ಯ ತತ್ಪಯಃ ।
ಉನ್ಮೀಲ್ಯ ಸಂವಿದುಲ್ಲಾಸಂ ಸಸ್ಮಾರ ಸ್ಮರಶಾಸನಂ ॥೧೭॥

ಪ್ರಬೋಧಲಹರೀಂ ಪ್ರಾಪ್ಯ ಪಶುಪಾಶವಿಮುಕ್ತಯೇ ।
ಯತ್ಸತ್ಯಂ ತತ್ತತೋ ಬುಧ್ವಾಪ್ರಾಧ್ಯಾಯೀತ್ಸಕಲಾಃ ಕಲಾಃ ॥೧೮॥

ಅಶೇಷಜಗತಾಂ ಮಾತುರಾಸ್ವಾದ್ಯ ಸ್ತನಮುಕ್ಲಮಃ ।
ಖ್ಯಾತೋಽಂಬಿಕಾಸುತ ಇತಿ ಜ್ಞಾನಸಂಬಂಧ ಇತ್ಯಪಿ ॥೧೯॥

---

ದಿಂದ ಗೌರಿಗೆ ಹೇಳಲು, ದೇವಿಯು ಹಾಗೆಯೇ ಆಗಲೆಂದು ಚಿನ್ನದ ಬಟ್ಟಲಲ್ಲಿ ತನ್ನ ಎರಡು ಸ್ತನಗಳಿಂದಲೂ ದಿವ್ಯವಾದ ಹಾಲನ್ನು ಕರೆದು ಆ ಹುಡುಗನಿಗೆ ಕುಡಿಯುವುದಕ್ಕಾಗಿ ಕೊಟ್ಟಳು. ||೧೪-೧೫||

ಆಗ ಆ ಹುಡುಗನು ಆ ಚಿನ್ನದಬಟ್ಟಲನ್ನು ಎರಡು ಕೈಗಳಿಂದಲೂ ಸಂತೋಷದಿಂದ ತೆಗೆದುಕೊಂಡು ಶಿವನ ದಿವ್ಯಜ್ಞಾನರೂಪವೂ ಋಗ್ಯಜುಸ್ಸಾಮಾಥರ್ವಣವೆಂಬ ನಾಲ್ಕು ವೇದಗಳಿಂದ ಜನ್ಯವೂ ಆದ ಆ ಹಾಲನ್ನು ಕುಡಿದನು. ಆಮೇಲೆ ದೇವಿಯು ಆ ಬಾಲಕನ ಎರಡು ಕಣ್ಣುಗಳನ್ನೂ ಒರೆಸಿದಳು. ದೇವಿಯು ಅನುಗ್ರಹಿಸಿದ ಹಾಲನ್ನು ಕುಡಿದು, ದೇವಿಯಿಂದ ಕಣ್ಣುಗಳೂ ಒರಸಲ್ಪಟ್ಟಮೇಲೆ, ಆ ಮಗುವು ಉಲ್ಲಾಸದಿಂದ ಎರಡು ಕಣ್ಣುಗಳನ್ನೂ ತೆರೆದು, ನಿಜವಾದ ಜ್ಞಾನವನ್ನು ಪಡೆದು ಆ ಮನ್ಮಥಾಂತಕನಾದ ಶಿವನನ್ನು ಭಕ್ತಿಯಿಂದ ಸ್ಮರಿಸಿದನು. ||೧೬-೧೭||

ಹಾಗೆಯೇ ಈ ಸಂಸಾರರೂಪವಾದ ಪಾಶವೀಬಂಧವಿಮುಕ್ತಿಗೋಸ್ಕರ ಜ್ಞಾನಲಹರಿಯನ್ನು ಮಹೇಶನಿಂದ ಕ್ಷಣಕಾಲದಲ್ಲಿ ಹೊಂದಿದನು. ಲೋಕದಲ್ಲಿ ಸತ್ಯಸ್ವರೂಪವೆನ್ನುವುದಾವುದೋ, ಅದನ್ನೂ ಆವನಿಂದಲೇ ಆಗಲೇ ಅರಿತನು. ಸಕಲ ಕಲೆಗಳ ಸ್ವರೂಪವೂ ತತ್ಕ್ಷಣವೇ ಸ್ಫುರಿಸಿತು. ಸಕಲ ಜಗಜ್ಜನನಿಯಾದ ದೇವಿಯ ಸ್ತನ್ಯವನ್ನು ಪಾನಮಾಡಿ ಸ್ವಲ್ಪವೂ ಆಯಾಸವಿಲ್ಲದೆ ಆ ಮಗುವು

ಸೋಽಪಿ ವಿಪ್ರೋ ದದರ್ಶೈವ ಮಗ್ನೋಽಂಭಸಿ ಮಹೇಶ್ವರಂ ।
ತ್ರ್ಯಕ್ಷಮುಕ್ಷಾಧಿರೂಢಂ ಚ ವೀಕ್ಷ್ಯ ದೇವ್ಯಾ ಸಮನ್ವಿತಂ ॥೨೦॥

ಜಜಾಪ ಶತರುದ್ರೈಶ್ಚ ಸ್ತುವನ್ನಭ್ಯುತ್ಥಿತೋಽಭವತ್ ।
ವಹಂತಂ ಚಷಕಂ ಹೈಮಂ ಕರೇಽದ್ರಾಕ್ಷೀನ್ನಿಜಾರ್ಭಕಂ ॥೨೧॥

ತಾರಾಮಿತ್ರಪಯಃಸಿಂಧುತರಂಗಿತಹೃದಂಬುಜಂ ।
ಲೇಲಿಹ್ಯಮಾನಂ ಭಕ್ತ್ಯೈವ ವೀಕ್ಷ್ಯಮಾಣಂ ನಭೋಽಂತರಂ ॥೨೨॥

ಆನಂದಾಶ್ರುಪರೀವಾಹಸೇಕಸೀತಲಿತಾಂಗಕಂ ।
ಕದಂಬಮುಕುಲೋಲ್ಲಾಸಿ ಪುಲಕೋದ್ದಾಮಭೂಷಣಂ ॥೨೩॥

---

'ಅಂಬಿಕಾಸುತ' ಮತ್ತು 'ಜ್ಞಾನಸಂಬಂಧ' ಎಂಬುದಾಗಿ ಪ್ರಸಿದ್ಧಿಪಡೆದನು. ಉಮಾಮಹೇಶ್ವರರ ವರಬಲದಿಂದ ಆ ಹುಡುಗನು ಅಂತಹ ಹೆಸರುಗಳಿಗೆ ಪಾತ್ರನೆನಿಸಿದನು. ॥೧೮-೧೯॥

ಆ ಮಗುವಿನ ತಂದೆಯಾದರೋ ನೀರಿನಲ್ಲಿ ಮುಳುಗಿಯೇ, ದೇವಿಯೊಡನೆ ವೃಷಭವನ್ನೇರಿ ಪ್ರತ್ಯಕ್ಷವಾಗಿದ್ದ ಆ ಮಹೇಶ್ವರನನ್ನು ಧ್ಯಾನಿಸಿ ಶತರುದ್ರೀಯಮಂತ್ರಗಳನ್ನು ಜಪಿಸುತ್ತಾ, ಶಿವನನ್ನು ಸ್ತೋತ್ರಮಾಡುವವನಾಗಿ ಮೇಲಕ್ಕೆ ಎದ್ದುಬಂದನು. ಒಂದು ಕಡೆ ಅಲ್ಲಿಯೇ ಚಿನ್ನದ ಬಟ್ಟಲನ್ನು ಕೈಯಿಂದ ಹಿಡಿದು ನಿಂತಿರುವ ತನ್ನ ಮಗನನ್ನು ಕಂಡನು. ॥೨೦-೨೧॥

ಚಂದ್ರದರ್ಶನದಿಂದ ಮೇಲೆ ಉಬ್ಬುವ ಕ್ಷೀರಸಾಗರದಂತೆ ಆ ಬಾಲಕನು ಮಹೇಶ್ವರನ ಅನುಗ್ರಹಲಬ್ಧವಾದ ಹಾಲನ್ನು ಕುಡಿದು ವಿಕಸಿತ ಹೃದಯಕಮಲವುಳ್ಳವನಾಗಿದ್ದನು. ಮತ್ತು ಆ ಬಟ್ಟಲನ್ನು ಪದೇ ಪದೇ ನೆಕ್ಕುತ್ತಾ ಶಿವಭಕ್ತಿಯಿಂದ ಆಕಾಶಮಧ್ಯವನ್ನು ನೋಡುತ್ತಾ ಆನಂದಬಾಷ್ಪಗಳ ಪ್ರವಾಹದ ಸೇಚನೆಯಿಂದ ತಂಪಾದ ಅವಯವವುಳ್ಳವನಾಗಿ, ನೀಪಪುಷ್ಪಗಳ ಮೊಗ್ಗಿನಂತೆ ಉಲ್ಲಾಸಭರಿತವಾಗಿರುವ ರೋಮಾಂಚಗಳಿಂದಲಂಕೃತನೆನಿಸಿ ಬಹು ಸುಂದರನಾಗಿ ಕಾಣುತ್ತಿದ್ದನು. ॥೨೨-೨೩॥

ನೃತ್ಯಂತಂ ಕಿಂಚಿದಾಕುಂಚಚ್ಚರಣಾಂಬುರುಹಾಚಲಂ ।
ವೀಕ್ಷ್ಯ ವೀಕ್ಷ್ಯ ನಿಜಂ ಬಾಲಂ ವಿಸ್ಮೇರಹೃದಯೋಽಭವತ್ ॥೨೪॥

ಚಿಕ್ರೀಡಮಾನಂ ತಂ ಬಾಲಮುವಾಚ ಸ ತದಾ ಪಿತಾ ॥೨೫॥

॥ ಪಿತೋವಾಚ ॥

ತ್ವಯಿ ಬಾಲಕ ಕೇನೇದಂ ತುಭ್ಯಂ ದತ್ತಂ ಪಯೋಽಧುನಾ ।
ಕಸ್ಯೋಚ್ಛಿಷ್ಟಮಿದಂ ಹಂತ ಚಷಕಂ ತ್ವತ್ಕರಸ್ಥಿತಂ ॥೨೬॥

ಶುದ್ಧಿಂ ತೇ ಪಾವನೈರ್ಮಂತ್ರೈಃ ಕರಿಷ್ಯೇಽಹಂ ದ್ರುತಂ ವದ ।
ಏತದುಚ್ಛಿಷ್ಟದಾತಾಪಿ ಕುತ್ರ ವಾ ವರ್ತತೇಽಧುನಾ ॥೨೭॥

ದರ್ಶಯೇತಿ ತದಾ ಪಿತ್ರಾ ಸ ಚೋಕ್ತೋ ಬಾಲಕಸ್ತದಾ ।
ಗೋಪುರಾಗ್ರಂ ತದದ್ರಾಕ್ಷೀತ್ಸ್ವೇನಾಂಗುಷ್ಠೇನ ವರ್ತ್ಮನಾ ॥೨೮॥

ತದಾಸ್ತೌಷೀತ್ಕುಮಾರೋಽಪಿ ದೇವಂ ದ್ರೋಣೀಪುರೇಶ್ವರಂ ॥೨೯॥

---

ಹಾಗೆಯೇ ನಿಂತು ಶಿವಧ್ಯಾನದಿಂದ ಕೂಡಿ ಬಗ್ಗಿಸಿದ ಪಾದಕಮಲಗಳಿಂದ ನಾಟ್ಯವಾಡುತ್ತಿರುವ ತನ್ನ ಮಗನನ್ನು ನೋಡಿ ನೋಡಿ ಆ ಬ್ರಾಹ್ಮಣನು ಸಂತುಷ್ಟಾಂತರಂಗನಾದನು. ಮತ್ತೂ ಮತ್ತೂ ಹೀಗೆ ಆನಂದಪರವಶನಾಗಿ ಆಡುತ್ತಿರುವ ತನ್ನ ಮಗನನ್ನು ನೋಡಿ ತಂದೆಯು ಇಂತೆಂದನು. ॥೨೪-೨೫॥

ಮಗನೇ, ಈಗ ನಿನಗೆ ಈ ಹಾಲನ್ನು ಕೊಟ್ಟವರಾರು? ಅಯ್ಯೋ! ಈ ನಿನ್ನ ಕೈಯ್ಯಲ್ಲಿರುವ ಬಟ್ಟಲು ಯಾರ ಉಚ್ಛಿಷ್ಟವು! ಮಗುವೇ, ವ್ಯರ್ಥವಾಗಿ ಎಂಜಲನ್ನು ಕುಡಿದೆಯಲ್ಲಾ, ಏಳು ಈಗಲೇ ಪ್ರಾಯಶ್ಚಿತ್ತ ಮಂತ್ರಗಳಿಂದ ನಿನ್ನನ್ನು ಪಾವನಗೊಳಿಸುವೆನು; ಜಾಗ್ರತೆಯಾಗಿ ತಿಳಿಸು, ಈ ಉಚ್ಛಿಷ್ಟವಾದ ಹಾಲನ್ನು ಕೊಟ್ಟವನು ಈಗೆಲ್ಲಿರುವನು? ॥೨೬-೨೭॥

ಯಾರು? ಯಾರು? ಅವನನ್ನು ನನಗೆ ಬೇಗ ತೋರಿಸೆಂದು ತಂದೆಯಿಂದ ಹೇಳಲ್ಪಟ್ಟಮೇಲೆ ಆ ಬಾಲಕನು, ತನ್ನ ಅಂಗುಷ್ಠದ ತುದಿಯಿಂದ ಆ ದ್ರೋಣೀಪುರೇಶ್ವರನ ಗೋಪುರದ ತುದಿಯನ್ನು ತೋರಿಸುತ್ತಾ, ಕುಮಾರನಾದರೂ ಆ ಹುಡುಗನು ಶಿವಾನುಗ್ರಹಬಲದಿಂದ ಮಹಾದೇವನನ್ನು ಈರೀತಿ ಸ್ತೋತ್ರ ಮಾಡುತ್ತಾ ಉತ್ತರ ಕೊಟ್ಟನು. ॥೨೮-೨೯॥

॥ ಬಾಲ ಉವಾಚ ॥

ಶಂಭುಃ ಸಾಂದ್ರಪಯಃ ಪಯೋಧಿಮತುಲಂ ಪಾತುಂ ದದೌ ಯಃ ಪುರಾ
ಸಂತುಷ್ಟಃ ಶಿಪಿವಿಷ್ಟ ಏವ ನಿತರಾಂ ವ್ಯಾಘ್ರಪಾದಾಯ ತು ।
ತೇನೈವಾರ್ಪಿತಮದ್ರಿಜಾಕುಚಗಿರಿಸ್ರೋತೋಂಬುಧಾರಾಪಯಃ
ಜ್ಞಾನಾನಂದಸುಧಾಸಮುದ್ರಲಹರೀ ಸಂಹಾರಿ ಪಾಪವ್ರಜಂ ॥೩೦॥

ಏವಂ ವದನ್ತದಾ ಬಾಲೋ ಜಹರ್ಷ ಚ ನನರ್ತ ಚ ।
ಪ್ರಸೂನವೃಷ್ಟಿಮಾಪೇತುಭ್ರ್ರಮದ್ಭ್ರಮರಕಾಂ ಸುರಾಃ ॥೩೧॥

ದಿವಿ ದುಂದುಭಯೋ ನೇದುರ್ನನೃತುಶ್ಚಾಪ್ಸರೋ ಗಣಾಃ ।
ತತ್ಪಿತಾಪಿ ಸುಖಾಂಭೋಧೌ ಮಮಜ್ಜ ನಿತರಾಂ ತದಾ ॥೩೨॥

ನಭೋ ನಿಬಿಡತಾಮರ್ತ್ಯಕಿರೀಟಗಲಿತಾನ್ಮಣೀನ್ ।
ಪೂರ್ಣಪೇಷಿಪಿನಷ್ಟೀವ ಜನತಾ ತತ್ರ ಸಂಗತಾ ॥೩೩॥

---

ಹಿಂದೆ ಅಗಾಧವಾದ ಸಮುದ್ರದ ಅಪರಿಮಿತವಾದ ನೀರನ್ನು ಏಕಕಾಲದಲ್ಲಿ ಪಾನಮಾಡಲು, ಸ್ವತಃ ತಾನೇ ಸಂತುಷ್ಟನಾಗಿ ವ್ಯಾಘ್ರಪಾದಮುನಿಗೆ ಯಾವ ಮಹೇಶ್ವರನು ಅನುಗ್ರಹಿಸಿದ್ದನೋ, ಅಂತಹ ದೇವದೇವನೇ ಈಗ ಜ್ಞಾನವೆಂಬ ಆನಂದರೂಪವಾದ ಸಮುದ್ರದ ಪ್ರವಾಹಗಳಿಂದ, ಪಾಪರಾಶಿಗಳನ್ನೆಲ್ಲಾ ಧ್ವಂಸ ಮಾಡಬಲ್ಲ ಪರ್ವತರಾಜಕುಮಾರಿಯ ಪರ್ವತಸಮವಾದ ಸ್ತನಗಳ ಪ್ರವಾಹ ರೂಪವಾದ ಎದೆಹಾಲನ್ನು ನನಗೆ ಕೊಡಿಸಿಕೊಟ್ಟನು. ॥೩೦॥

ಹೀಗೆ ಹೇಳುತ್ತಲೇ ಆ ಬಾಲಕನು ಸಂತೋಷದಿಂದ ನಗುತ್ತಾ ಮತ್ತೆ ನರ್ತನಮಾಡತೊಡಗಿದನು. ದೇವತೆಗಳು ದುಂಬಿಗಳಿಂದ ಮೊರೆಯುತ್ತಿರುವ ಹೂಮಳೆಗರೆದರು. ಆಕಾಶದಲ್ಲಿ ದೇವನಗಾರಿಗಳು ಮೊಳಗಿದವು. ಅಪ್ಸರೆಯರು ಗುಂಪಾಗಿ ನರ್ತನಮಾಡಿದರು. ಆಗ ಅವನ ತಂದೆಯು ಇದನ್ನು ನೋಡಿ ಆಶ್ಚರ್ಯ ಸಮುದ್ರದಲ್ಲಿ ಮುಳುಗಿ ಆನಂದಭರಿತನಾದನು. ॥೩೧-೩೨॥

ಈ ಆಶ್ಚರ್ಯವನ್ನು ನೋಡಲು ಆಕಾಶದಲ್ಲಿ ಸಾಂದ್ರವಾಗಿ ನೆರೆದಿರುವ ದೇವತೆಗಳ ಕಿರೀಟಗಳಿಂದ ರತ್ನಗಳು ಕೆಳಗುದುರುತ್ತಿದ್ದವು. ಭೂಮಿಯಲ್ಲಿ ಜನಗಳು ಗುಂಪುಗುಂಪಾಗಿ ಸೇರಿ ನೆಲವನ್ನು ಪೂರ್ಣಗೊಳಿಸುತ್ತಿರುವರೋ ಎಂಬಂತೆ ಕಾಣುತ್ತಿದ್ದರು. ಆಕಾಶದಲ್ಲಿ ಲೆಕ್ಕವಿಲ್ಲದಷ್ಟು ಮಂದಿ ದೇವತೆಗಳೂ ಭೂಮಿಯಲ್ಲಿ

ದಿವಿ ದೇವೈರಸಂಖ್ಯಾತೈಃ ಕ್ಷಿತೌ ಬಹುವಿಧೈರ್ನರೈಃ ।
ಸಮೂಹ್ಯ ಬಾಲಂ ಸ್ಕಂಧೇನ ಯಯೌ ದ್ರೋಣೀಪುರೇಶ್ವರಂ ॥೩೪॥

ಶಂಖದುಂದುಭಿನಿರ್ಘೋಷವೀಣಾಧ್ವನನಮಂಜುಲೇ ।
ಅವರುಹ್ಯ ತತೋ ಬಾಲಃ ಪಿತುರಂಸಲಕೋಽಂಸತಃ ॥೩೫॥

ಪ್ರಣಮ್ಯ ಸ ತದಾಲೋಕ್ಯ ಗೋಪುರದ್ವಾರಮಾಯಯೌ ।
ಪ್ರದಕ್ಷಿಣೀಕೃತ್ಯ ತದಾ ಶಿವಧಾಮ ದ್ವಿಜಾರ್ಭಕಃ ॥೩೬॥

ಪ್ರಮುದಂಚಿತರೋಮಾಂಚಕಂಚುಕಾಶ್ರುಮುಖೋ ಯಯೌ ।
ನತ್ವಾ ಸಾಷ್ಟಾಂಗಮೀಶಾನಂ ಶ್ರೀಮದ್ರೋಣೀಪುರೇಶ್ವರಂ ॥೩೭॥

ಅಸ್ತೌಷೀದಥ ದೇವೇಶಂ ಮನ್ಮಥಾರಾತಿಮೀಶ್ವರಂ ॥೩೮॥

॥ ಬಾಲ ಉವಾಚ ॥

ಶಂಭೋ ಭರ್ಗ ಭವಾಂತಕಾವ್ಯಯ ವಿಭೋ ಪಾಹ್ಯಂಬುಜಾತೇಕ್ಷಣಾ
ಲೋಕ್ಯಾಮೌಳಿಸುಮೂಲಫಾಲವಿಲಸನ್ನೇತ್ರಪ್ರಭಾಭಾಸಿತ ।

---

ಅಸಂಖ್ಯಾತ ಮಾನವರೂ ಸೇರಿರುವುದನ್ನು ನೋಡಿ, ತಂದೆಯು ತನ್ನ ಬಾಲಕನನ್ನು ಹೆಗಲ ಮೇಲೆ ಹೊತ್ತುಕೊಂಡು ಆ ದ್ರೋಣಿಪುರೇಶ್ವರನ ಬಳಿಗೆ ಹೋದನು. ॥೩೩-೩೪॥

ಶಂಖ, ನಗಾರಿಗಳ ಧ್ವನಿಗಳು, ವೀಣಾಧ್ವನಿ ಇವುಗಳ ನಾದದಿಂದ ಮನೋಹರವಾಗಿರುವ ಆ ಸಮಯದಲ್ಲಿ ಬಾಲಕನು ತನ್ನ ತಂದೆಯ ಹೆಗಲಮೇಲಿನಿಂದ ಇಳಿದು, ಆ ಗೋಪುರವನ್ನು ನೋಡಿ ನಮಸ್ಕರಿಸಿ, ಆ ಗೋಪುರದ ಬಾಗಿಲಿಗೆ ಹೋಗಿ ಪ್ರದಕ್ಷಿಣೆಮಾಡಿ, ಧೈರ್ಯದಿಂದ ಬ್ರಾಹ್ಮಣಕುಮಾರನು ಶಿವದೇವಾಲಯದೊಳಕ್ಕೆ ಪ್ರವೇಶಿಸಿದನು. ॥೩೫-೩೬॥

ಶಿವಭಕ್ತಿಭಾವದಿಂದ ಒದಗಿದ ರೋಮಾಂಚಗಳೆಂಬ ಕಂಚುಕವುಳ್ಳವನಾಗಿ ಆನಂದಬಾಷ್ಪವನ್ನು ಮುಖದಲ್ಲಿ ಸೂಸುತ್ತಾ ಹೊರಟು ಶ್ರೀ ದ್ರೋಣೀಪುರಾಧೀಶ್ವರನಾದ ಮಹಾದೇವನಿಗೆ ಸಾಷ್ಟಾಂಗ ಪ್ರಣಾಮಮಾಡಿ, ಅನಂತರ ಮನ್ಮಥಾಂತಕನಾದ ಆ ದೇವತಾಸಾರ್ವಭೌಮನನ್ನು ಈರೀತಿ ಸ್ತೋತ್ರಮಾಡಿದನು. ॥೩೭-೩೮॥

ಶಂಭುವೇ, ಸೃಷ್ಟಿ, ಸ್ಥಿತಿ, ಸಂಹಾರಕಾರಕನೂ, ಜಗದುತ್ಪತ್ತಿಕಾರಣನೂ,

ಆಲೋಲದ್ಯುತಿಸೋಮ ಸುಂದರಜಟಾಭಾರಾತ್ತಗಂಗೋತ್ತಮ
ವ್ಯಾಲಾನದ್ಧಶರೀರಕಾಂತಗಲಚಿಚ್ಛ್ರೀರಂಜಿತಾಂಗಪ್ರಭೋ ॥೩೯॥

ಇತ್ಥಂ ಸಂಸ್ತುತ್ಯ ದೇವಂ ಪುನರಪಿ ಸ ತದಾ ಶಂಭುದಾಮಾನಿ ನಂತುಂ
ಯಾತೋಽಸೌ ದ್ವಿಜಶಾಂಭವೈರ್ಧೃತಮಹಾಭಸ್ಮತ್ರಿಪುಂಡ್ರಾಂಕಿತಃ ।
ಪಾಂಡ್ಯಸ್ಯಾನುಮತೇ ಜಿಗಾಯ ಸ ತದಾ ಜೈನಾನ್ಹಿನಾರಿಃ ಸದಾ
ಸಿದ್ಧಾಂತೋತ್ಥಿತವೇದವಾದಜನಿತೈರ್ವಾಕ್ಯೈಶ್ಚ ತರ್ಕಾನ್ವಿತೈಃ ॥೪೦॥

ಸ್ಥಾಪ್ಯ ಜ್ಞಾನಮಹೋದಧಿಂ ಶಿವಜನೈಃ ಶ್ರೇಯಸ್ಕರಂ ಶಾಂಭವಂ
ಧರ್ಮಂ ಭಸ್ಮವರಾಕ್ಷಧಾರಣವಿಧಿಂ ಯೋ ನಿಶ್ಚಿಕಾಯಾದರಾತ್ ।
ಸೋಂತೇ ಧಾಮ ಯಯೌ ಗಿರೀಶ್ವರ ಭವಾಜಾನೇರ್ಜನುರ್ನಾಶಿತುಂ
ಶ್ರೇಯಾಂಸ್ಯಾಶ್ರಯಿತುಂ ಮಹೇಶಕೃಪಯಾ ನೈಶ್ರೇಯಸೀಂ ತಾಂ ಶ್ರಿಯಂ ॥೪೧॥

---

ಚ್ಯುತಿಯಿಲ್ಲದವನೂ, ಸರ್ವಸಮರ್ಥನೂ, ತಾವರೆಗಣ್ಣನಾದ ವಿಷ್ಣುವಿನಿಂದಲೂ ನೋಡಲಸಾಧ್ಯವಾದ ಕಿರೀಟಮೂಲವುಳ್ಳವನೂ, ಹಣೆಯಲ್ಲಿ ಶೋಭಿಸುತ್ತಿರುವ ನೇತ್ರ ಪ್ರಭೆಯಿಂದ ಪ್ರಕಾಶಿಸುವವನೂ, ಎಲ್ಲಾ ಕಡೆಯಲ್ಲೂ ವ್ಯಾಪಿಸಿದ ತೇಜಸ್ಸುಳ್ಳವನೂ ಚಂದ್ರನಿಂದಲಂಕೃತವಾದ ಸುಂದರವಾದ ಜಡೆಗಳ ಸಮೂಹದಲ್ಲಿ ದೇವಗಂಗೆಯನ್ನು ಧರಿಸಿ, ಸರ್ಪವನ್ನು ಹಾರಮಾಡಿಕೊಂಡಿರುವವನೂ, ಹಾಲಾಹಲವಿಷಭಕ್ಷಣದಿಂದ ಶೋಭಿಸುವ ಕಪ್ಪುಕಂಠವರ್ಣದವನೂ ಆದ ಪ್ರಭುವೇ, ನಮ್ಮನ್ನು ಕಾಪಾಡು. ॥೩೯॥

ಹೀಗೆ ಆ ಬಾಲಕನು ಮಹಾದೇವನನ್ನು ಸ್ತುತಿಸಿ ಪುನಃ ಪುನಃ ಶಿವ ಕ್ಷೇತ್ರಗಳಿಗೆ ನಮಸ್ಕರಿಸುತ್ತಾ ಅಲ್ಲಿದ್ದ ಬ್ರಾಹ್ಮಣರೂ ಶೈವರೂ ಆದ ಜನಗಳೊಡನೆ ಶ್ರೇಷ್ಠವಾದ ಭಸ್ಮತ್ರಿಪುಂಡ್ರಾಲಂಕೃತನಾಗಿ ಹೊರಟನು. ಹಾಗೆಯೇ ಪಾಂಡ್ಯ ರಾಜನ ಸಮೀಪವನ್ನೈದಿ ಅವನ ಅನುಮತಿಯಂತೆ ಅಲ್ಲಿ ಪ್ರಬಲರಾಗಿದ್ದ ಜೈನರನ್ನು ಸರ್ವದರ್ಶನ ಸಮರ್ಥನಾದ ಆ ಜ್ಞಾನಸಂಬಂಧನು ವೇದವಾಕ್ಯಜನ್ಯವಾದ ಮತ್ತು ತರ್ಕಮಿಶ್ರವಾದ ಶೈವಸಿದ್ಧಾಂತಗಳಿಂದ ವಾದಮಾಡಿ ಗೆದ್ದನು. ॥೪೦॥

ಸದ್ಜ್ಞಾನವೆಂಬ ದೊಡ್ಡ ಸಮುದ್ರವನ್ನು ಸ್ಥಾಪಿಸಿ, ಶೈವರೊಡನೆ ಶ್ರೇಯಸ್ಕರವಾದ ಶಾಂಭವಧರ್ಮವನ್ನೂ ನೆಲೆಗೊಳಿಸಿ, ಯಾವ ಜ್ಞಾನಸಂಬಂಧ ಭಕ್ತನು ಭಸ್ಮತ್ರಿಪುಂಡ್ರ ಮತ್ತು ರುದ್ರಾಕ್ಷಧಾರಣಾ ವಿಧಿಯನ್ನು ಆದರದಿಂದ

ಇತಿ ಶ್ರೀಶಿವರಹಸ್ಯೇ ಸದಾಶಿವಾಖ್ಯೇ ನವಮಾಂಶೇ
ಜ್ಞಾನಸಂಬಂಧಭಕ್ತಚರಿತ್ರವರ್ಣನಂ ನಾಮ ಷಟ್ಚತ್ವಾರಿಂಶೋಽಧ್ಯಾಯಃ

---

ಅನುಷ್ಠಾನಮಾಡಿದನೋ ಆ ಮಹಾತ್ಮನು ಕೊನೆಯಲ್ಲಿ ಪಾರ್ವತೀರಮಣನಾದ ಮಹೇಶ್ವರನ ದಿವ್ಯಧಾಮವಾದ ಕೈಲಾಸವನ್ನು ಹೊಂದಿ ಜನನಮರಣರೂಪವಾದ ಜನ್ಮವನ್ನು ಕಳೆದುಕೊಂಡು, ನಿತ್ಯಶ್ರೇಯಸ್ಸನ್ನು ಹೊಂದುವುದಕ್ಕೋಸ್ಕರ ಮಹಾದೇವನ ದಯೆಯಿಂದ ಕೈವಲ್ಯವನ್ನೈದಿದನೆಂದು ಕುಮಾರಸ್ವಾಮಿಯು ಜೈಗೀಷವ್ಯನಿಗೆ ಹೇಳಿದನು. ||೪೧||

ಇಲ್ಲಿಗೆ ಶ್ರೀಶಿವರಹಸ್ಯದಲ್ಲಿ ಸದಾಶಿವಸಂಜ್ಞಕವಾದ ಒಂಬತ್ತನೆಯ ಅಂಶದಲ್ಲಿ
ಜ್ಞಾನಸಂಬಂಧನೆಂಬ ಭಕ್ತನ ಕಥಾವರ್ಣನೆಯೆಂಬ ನಲವತ್ತಾರನೆಯ
ಅಧ್ಯಾಯವು ಮುಗಿದುದು.

---

|| ಶ್ರೀಃ ||

|| ಶ್ರೀ ಶಿವಾಯನಮಃ ||

# ಅಥ ಶ್ರೀಶಿವರಹಸ್ಯೇ

## ಸದಾಶಿವಾಖ್ಯೇ

## ನವಮಾಂಶೇ

## ಸಪ್ತಚತ್ವಾರಿಂಶೋಽಧ್ಯಾಯಃ

|| ಶ್ರೀಸ್ಕಂದ ಉವಾಚ ||

ಮಿಥಿಲಾದ್ವಿಜಮಾನಸ್ಯವಕ್ಷ್ಯೇ ಪೂತವತೀಂ ಕಥಾಂ ।
ಶಾಙ್ರ್ಗರಿವ ನನಾಮಾಸ್ತಿಪುರೀ ಭೂಚಕ್ರಭೂಷಣಂ ||೧||

ಯಯಾ ಚೋಲಮಹೀಕಾಂತಾವದನೇ ತಿಲಕಾಯಿತಂ ।
ಸದಾ ಧನದಕೋಟೀಭಿರುಪಾಸಿತಮಹೋಚ್ಛ್ರಯಾ ||೨||

ವಿಕಾಯತೇ ಯಯಾ ಸಾರ್ಧಂ ಸಾರ್ಧವಾಸ್ಯೋಕೆಸಾರಯಾ । (?)
ಯದ್ಗೋಪುರೈರ್ನಿಜಶಿರೋಲಸಚ್ಚಂದ್ರಾರ್ಕಮಂಡಲೈಃ ||೩||

---

## ನಲವತ್ತೇಳನೆಯ ಅಧ್ಯಾಯ

ಅಯ್ಯ ಜೈಗೀಷವ್ಯನೇ, ಮಿಥಿಲಾದೇಶದ ಬ್ರಾಹ್ಮಣರ ವಂಶದಲ್ಲಿ ಜನಿಸಿದ ಪೂತವತೀ ಎಂಬ ಭಕ್ತಳೊಬ್ಬಳ ಕಥೆಯನ್ನು ಹೇಳುವೆನು ಕೇಳು ; ಭೂಮಂಡಲಕ್ಕೇ ಅಲಂಕಾರಪ್ರಾಯವಾಗಿದ್ದ ಆ ಮಿಥಿಲಾಪಟ್ಟಣವು ವಿಷ್ಣುಧನುಸ್ಸಿನಂತೆ ವಕ್ರಾಕಾರವಾಗಿದ್ದಿತು. ಆ ಪಟ್ಟಣವು ಚೋಲಭೂಮಿಯೆಂಬ ಕಾಂತೆಗೆ ಮುಖದ ತಿಲಕದಂತೆ ಉತ್ತರಭಾಗದಲ್ಲಿ ಕಾಣುವುದು. ಆ ಊರು ಯಾವಾಗಲೂ ಕೋಟ್ಯಂತರ ಕುಬೇರರಿಗೆ ಸಮಾನರಾದ ಐಶ್ವರ್ಯವಂತರಿಂದ ಕೂಡಿ ಮಹಾವೈಭವದಿಂದ ಪ್ರಕಾಶಿಸಲ್ಪಡುತ್ತಿದ್ದಿತು. ಕುಬೇರಸಮಾನರಾದ ಅನೇಕ ಹಣವಂತರು ಆ ಪಟ್ಟಣದಲ್ಲಿ ವಾಸಿಸುತ್ತಾ ಆ ದೇಶವನ್ನೇ ಐಶ್ವರ್ಯದಲ್ಲಿ ಪ್ರಸಿದ್ಧಿಗೆ ತಂದಿದ್ದರು. ||೧-೨||

ಶ್ರೀಮಂತವರ್ಗದ ವರ್ತಕರಿಂದಲೂ ಸಾರವತ್ತಾದ ವಸ್ತುಗಳಿಂದಲೂ

ವಿಡಂಬ್ಯತೇ ಮುಹುಃ ಶಂಭೋಸ್ತ್ರಸುರರ್ಧೇಂದುಶೇಖರಾ ।
ಯತ್ರ ಸೌಧಾನವಸುಧಾಧವಲಾಭೂರಿಭೂತಯಃ ॥೪॥

ಭಜಂತಿ ಶಿವಸಾರೂಪ್ಯಂ ವಿಲಸತ್ಪೂರ್ವಮಂಗಲಾ ।
ಧನವಂತಂ ಸುಸಂಪೂರ್ಣಾಃ ಜಾನತಾ ಹಸತಿ ಸ್ಫುಟಂ ॥೫॥

ಅಷ್ಟಾಭಿರೇವ ವಸುಭಿಃ ಸಹಿತಾಮಮರಾವತೀಂ ।
ನಿಧ್ಯಾ ಭವಜಟಾಸಿಂಧುಪೃಷಿತಾಸಿತಮೂರ್ತಿಭಿಃ ॥೬॥

ಭೂಯಸೇ ಯತ್ರ ನಿಖಿಲೈರ್ಜನೈರ್ಭುವನಪಾವನೈಃ ।
ತತ್ರಾಸೀನ್ನಗರೇ ಕಶ್ಚಿದ್ಧನದತ್ತಾಭಿಧೋ ವಣಿಕ್ ॥೭॥

ಧನೇಽಲಕಾಪತಿರ್ಯಸ್ಯ ಸಂಪದೇ ಸ್ಪೃಹಯಾಲುತಾಂ ।
ತಸ್ಮಾತ್ಪೂತವತೀ ನಾಮ ಜಜ್ಞೇಽಕಾಚನ ಕನ್ಯಕಾ ॥೮॥

---

ಆ ನಗರವು ಸರ್ವದಾ ಕಂಗೊಳಿಸುತ್ತಿದ್ದಿತು. ಆ ಊರಿನ ದೇವಾಲಯಗಳ ಗೋಪುರಗಳು ತಮ್ಮ ತಲೆಯಮೇಲೆ ರಾರಾಜಿಸುತ್ತಿರುವ ಚಂದ್ರಸೂರ್ಯಮಂಡಲ ಗಳಿಂದ ಅರ್ಧಚಂದ್ರಶೇಖರನಾದ ಪರಮೇಶ್ವರನ ದೇಹವನ್ನು ಪದೇ ಪದೇ ಅನುಕರಿಸುತ್ತಿದ್ದುವು. ಆ ಊರಿನ ಉಪ್ಪರಿಗೆಗಳು ಹೊಸದಾಗಿ ಸುಣ್ಣದಿಂದ ಬಳಿಯಲ್ಪಟ್ಟು, ಅಪಾರ ಅಮೂಲ್ಯವಸ್ತುಗಳಿಂದ ಅಲಂಕೃತವಾಗಿದ್ದಿತು. ||೩-೪||

ಭಸ್ಮ, ಚಂದ್ರ, ಗಂಗಾಧವಳ ಮುಂತಾದ ವಸ್ತುಗಳ ಕಾಂತಿಲಕ್ಷ್ಮಿಯಿಂದ ಆ ಗೋಪುರಗಳು ಶಿವಸಾರೂಪ್ಯವನ್ನು ಹೊಂದಿದ್ದವು. ಮತ್ತು ಪೂರ್ಣ ಹಣವಂತ ರಿರುವರೆಂದು ತಿಳಿದು ಅವರನ್ನು ಸ್ಪಷ್ಟವಾಗಿ ಹಾಸ್ಯಮಾಡುತ್ತಿರುವುವೋ ಎಂಬಂತೆ ಸರ್ವಾಂಗಸುಂದರವಾಗಿರುವುವು. ಅಷ್ಟೈಶ್ವರ್ಯಗಳಿಂದ ಯುಕ್ತವಾದ ಅಮರಾವತಿ ಯನ್ನು ನವನಿಧಿಗಳಿಂದ ಕೂಡಿದ ಆ ನಗರವು ತಿರಸ್ಕರಿಸುತ್ತಿದ್ದಿತು. ಚಂದ್ರ ಮತ್ತು ಗಂಗಾನದಿಗಳನ್ನು ಶಿರದಲ್ಲಿ ಧರಿಸಿರುವ ಮಹಾದೇವನ ಪೃಥಿವ್ಯಾದಿ ಅಷ್ಟಮೂರ್ತಿ ಗಳಿಗೆ ಆವಾಸಸ್ಥಾನವೋ ಎಂಬಂತೆ ಅದು ಶಿವಕ್ಷೇತ್ರವೆನಿಸಿದ್ದಿತು. ||೫-೬||

ಹೀಗೆ ಪ್ರಪಂಚವನ್ನೇ ಪವಿತ್ರಗೊಳಿಸುವ ಸಕಲವಿಧ ಜನರಿಂದಲೂ ಆ ಪಟ್ಟಣವು ಭರಿತವಾಗಿ ಕಂಗೊಳಿಸುತ್ತಿದ್ದಿತು. ಅಂತಹ ಪಟ್ಟಣದಲ್ಲಿ ಧನದತ್ತನೆಂಬ ಹೆಸರಿನ ಒಬ್ಬ ವರ್ತಕನಿದ್ದನು. ಐಶ್ವರ್ಯದಲ್ಲಿ ಅವನನ್ನು ನೋಡಿ ಅಲಕಾಧಿಪತಿ

ಕಲಾಚಂದ್ರಮಸೀಕಾಂತಾ ಕಲಾಸ್ವಂಭೋನಿಧೇರಿವ ।
ಯಾ ಲಾವಣ್ಯಪಯೋಧಿಃ ಶ್ರೀರ್ಜಗಲ್ಲೋಚನಚಂದ್ರಿಕಾ ॥೯॥

ಕಮಲಾಸನಹಸ್ತಾಬ್ಜ ಕಲಾಕೌಶಲಪುಂಜಿಕಾ ।
ವಿವೃತ್ತನೇತಾಂ ಕಾಲೇನ ವಿದ್ಯಾಮಿವ ಸುಮೇಧಸಃ ॥೧೦॥

ಪ್ರಾಪ್ತಶೈಶವತಾರುಣ್ಯ ದಶಯೋರ್ಮಧ್ಯವರ್ತಿನೀಂ ।
ವಕ್ತ್ರನೋಲ್ಲಾಸಿವಾಗ್ರೇಖಾಂ ಭಾವೋರ್ನಿರ್ಮಲದೃಗಂಚಲಾಂ ॥೧೧॥

ಕಿಂಚಿದುನ್ಮೀಲರೋಮಾಲಿವ್ಯಕ್ತಾವ್ಯಕ್ತ ಪಯೋಧರಾಂ ।
ನಾಗಾಖ್ಯನಗರೀಶಸ್ಯ ವಿಶೋನಿಧಿಪತೇಃ ಸುತಃ ॥೧೨॥

ಪರಾಂ ಪರಮದತ್ತಸ್ತಾಮುಪಯೇಮೇ ಸುಮಧ್ಯಮಾಂ ।
ಧನದತ್ತೋಽಥ ವಾತ್ಸಲ್ಯಾದನುನಾಯ ಸುತಾಪತಿಂ ॥೧೩॥

---

ಯಾದ ಕುಬೇರನೂ ಸಹ ಆಸೆಪಡುವಷ್ಟು ಶ್ರೀಮಂತನಾಗಿದ್ದನು. ಇಂತಹ ಧನದತ್ತನಿಗೆ 'ಪೂತವತಿ'ಯೆಂಬ ಒಬ್ಬಳು ಮಗಳು ಜನಿಸಿದಳು. ||೭-೮||

ಸಕಲ ಕಲೆಗಳಿಗೂ ಸಿಧಿಯಂತಿರುವ ಆ ಪೂತವತಿಯು ಚಂದ್ರನ ಕಲೆಯಂತೆ ಮನೋಹರಳಾಗಿರುವಳು. ಅವಳು ಲಾವಣ್ಯಸಮುದ್ರಳಾಗಿ ಪ್ರಪಂಚದ ಜನಗಳಿಗೆಲ್ಲಾ ಬೆಳದಿಂಗಳಿನಂತೆ ಕಂಗೊಳಿಸುತ್ತಿದ್ದಳು. ಬ್ರಹ್ಮನ ಹಸ್ತಾರವಿಂದಗಳ ಕಲೆಗಳ ಕೌಶಲವನ್ನು ತೋರ್ಪಡಿಸುವ ಕುಂಚವೋ ಎನ್ನುವಂತೆ ಸುಂದರಳಾದ ಇವಳು ವೈರಾಗ್ಯಶಾಲಿಯಾದ ವಿದ್ವಾಂಸನಿಗೆ ಜ್ಞಾನವು ವೃದ್ಧಿಯಾಗುವಂತೆ ದಿನದಿನಕ್ಕೂ ಏಳಿಗೆಯನ್ನು ಪಡೆದು ಬೆಳೆಯುತ್ತಿದ್ದಳು. ||೯-೧೦||

ಬಾಲ್ಯ ಮತ್ತು ಯೌವ್ವನಗಳೆಂಬೆರಡವಸ್ಥೆಗಳ ಮಧ್ಯಮಾವಸ್ಥೆಯನ್ನು ಪಡೆದು, ತನ್ನ ಮುಖದಿಂದ ಶೋಭಿಸುವ ಮಾತುಗಳ ರೇಖೆಗಳಿಂದ ಭಾವಪೂರಿತವಾದ ಅಭಿಪ್ರಾಯವನ್ನು ಹೊರಗೆಡವುತ್ತಾ ಅಭಿಪ್ರಾಯಪೂರ್ವಕವಾದ ನೋಟವನ್ನು ಬೀರುವವಳಾಗಿ, ಕೊಂಚ ಹೊರಬಿದ್ದಿರುವ ರೋಮರಾಜಿಗಳು, ಮತ್ತು ಸರಿಯಾಗಿ ಸ್ಫುಟವಾಗದಿರುವ ಸ್ತನಗಳು ಇವುಗಳಿಂದ ಸುಂದರಿಯಾದ ಆ ಪೂತವತಿಯನ್ನು ನಾಗವೆಂಬ ಪಟ್ಟಣದೊಡೆಯನೆನಿಸಿ ದೊಡ್ಡ ವರ್ತಕನ ಮಗನಾದ ಪರಮದತ್ತನೆಂಬುವನು ಮದುವೆಯಾದನು. ||೧೧-೧೨||

ಆ ಧನದತ್ತನು ವಾತ್ಸಲ್ಯದಿಂದ ತನ್ನ ಅಳಿಯನನ್ನು ಆದರಿಸಿ, ಅವನಿಗೆ

ಸ್ವಪುರೇ ವಾಸಯಾಮಾಸ ಪ್ರದಾಯ ಬಹುಲಂ ಧನಂ ।
ತೇನ ಪೂತವತೀ ಸಾಕಂ ಮಾರೇಣೈವ ರತಿಃ ಸದಾ ॥೧೪॥

ಅಭುಂಕ್ತ ಬಹುಲಾನ್ಭೋಗಾನ್ಸಂಪತ್ಸೌಭಾಗ್ಯದೇವತಾ ।
ವಸನ್ಪರಮದತ್ತೋಽತ್ರ ಭಾರ್ಯಯಾ ಯಃ ಸಮಾನಯಾ ॥೧೫॥

ಶಿವೈಕತಾನಸ್ತದ್ಭಕ್ತಾನಿಷ್ಟದಾನೈರತೋಷಯತ್ ।
ಸಾಪಿ ಶಂಕರಕೈಂಕರ್ಯಂ ತದ್ಗತೋತ್ಸುಕಮಾನಸಾ ॥೧೬॥

ಸತತಂ ಪೂಜಯಾಮಾಸ ಮಾಹೇಶ್ವರಧುರಂಧರಾನ್ ।
ಪತ್ಯಾ ಸಮಂ ಮಹಾದೇವಮರ್ಚಯಂತೀ ಪತಿವ್ರತಾ ॥೧೭॥

ಸ್ನಾತ್ವಾ ಸ್ನಾತ್ವಾ ಚ ತೀರ್ಥೇಷು ಶಂಭುಭಕ್ತಿಮಪೋಷಯತ್ ।
ತದಾ ಪರಮದತ್ತಾಯ ಕಶ್ಚಿತ್ಪ್ರೀತಿಮುಪಾವಹನ್ ॥೧೮॥

ಸುವೃತ್ತಸಹಕಾರಸ್ಯ ಫಲದ್ವಂದ್ವಮುಪಾವಹತ್ ।
ಸುಧಾರಸಚಮತ್ಕಾರೀ ಕಲ್ಪದ್ರುಫಲಸೋದರಂ ॥೧೯॥

---

ವಿಶೇಷವಾದ ಧನವನ್ನಿತ್ತು ತನ್ನ ಊರಿನಲ್ಲಿಯೇ ನಿಲ್ಲಿಸಿಕೊಂಡನು. ಆ ಗಂಡನೊಡನೆ, ಮನ್ಮಥನೊಡಗೂಡಿದ ರತೀದೇವಿಯಂತೆ ಯಾವಾಗಲೂ, ಐಶ್ವರ್ಯ ಮತ್ತು ಸೌಭಾಗ್ಯಗಳಿಗೆ ದೇವತಾಸ್ವರೂಪಳಾಗಿರುವ ಆ ಪೂತವತಿಯು ಅನೇಕ ದಿವ್ಯಭೋಗಗಳನ್ನು ಅನುಭವಿಸಿದಳು. ॥೧೩-೧೪॥

ತನಗೆ ಅನುಗುಣಳಾದ ಹೆಂಡತಿಯೊಡನೆ ವಾಸಮಾಡುತ್ತಾ ಆ ಪರಮದತ್ತನೂ ಸಹ ಶಿವನಲ್ಲಿಯೇ ನೆಟ್ಟಮನಸ್ಸುಳ್ಳವನಾಗಿ ಶೈವರನ್ನು ವಿಶೇಷ ದಾನಗಳಿಂದ ಸಂತೋಷಪಡಿಸಿದನು. ಆ ಪೂತವತಿಯೂ ಸಹ ಶಿವಪೂಜೆಯಲ್ಲಿ ಉತ್ಸಾಹಭರಿತ ಮನಸ್ಸುಳ್ಳವಳಾಗಿ ಅನವರತವೂ ಶೈವವರ್ಯರನ್ನು ಪೂಜೆಮಾಡುತ್ತಿದ್ದಳು.॥೧೫-೧೬॥

ಪತಿವ್ರತೆಯಾದ ಆ ಪೂತವತಿಯು ಶಿವತೀರ್ಥಗಳಲ್ಲಿ ಸ್ನಾನಮಾಡಿ ತನ್ನ ಗಂಡನೊಡನೆಯೇ ಮಹಾದೇವನನ್ನು ಪೂಜೆಮಾಡುತ್ತಾ ಪರಶಿವನ ಭಕ್ತಿಯನ್ನು ಪುಷ್ಟಿಗೊಳಿಸುತ್ತಿದ್ದಳು. ಒಂದು ದಿನ ಆ ಪರಮದತ್ತನಲ್ಲಿ ಪ್ರೀತಿಯನ್ನು ಪ್ರದರ್ಶಿಸುವುದಕ್ಕೋಸ್ಕರ ಅವನ ಮಿತ್ರನೊಬ್ಬನು! ಸುಂದರವಾದ ಸಿಹಿಮಾವಿನ ಎರಡು ಹಣ್ಣುಗಳನ್ನು ತೆಗೆದುಕೊಂಡು ಬಂದನು. ಆ ಹಣ್ಣು ಅಮೃತಕ್ಕಿಂತಲೂ ರಸಭರಿತವಾಗಿಯೂ, ಕಲ್ಪವೃಕ್ಷದ ಹಣ್ಣುಗಳಿಗೆ ಸಮಾನವಾದುದಾಗಿಯೂ ಇದ್ದಿತು. ॥೧೭-೧೮-೧೯॥

ತದ್ವಂದ್ವಫಲಮಾದಾಯ ಭಾರ್ಯಾಯೈ ಸ ಸಮರ್ಪಯತ್ ।
ಪತ್ಯಾ ದತ್ತೇ ಸುಗುಪ್ತೇಽಥ ದ್ಯುತಿವತ್ಯಾ ಫಲದ್ವಯೇ ॥೨೦॥

ಆಗತ್ಯ ಕ್ಷುಧಿತಃ ಕೋಽಪಿ ಶಿವಯೋಗೀ ತದಾಲಯಂ ।
ವಿಲೋಕ್ಯ ಸಾ ಗೃಹಂ ಪ್ರಾಪ್ತಂ ಶಿವಭಕ್ತಂ ಕ್ಷುಧಾಕುಲಂ ॥೨೧॥

ಪ್ರಣಮ್ಯ ಸಲಿಲೈಸ್ತಸ್ಯ ಪಾದೌ ಪ್ರಕ್ಷಾಳಯನ್ಮುದಾ ।
ಬುಭುಕ್ಷಂತಂ ಮುನಿಂ ವೀಕ್ಷ್ಯ ಕಾಲಕ್ಷೇಪಾಸಹಂ ಸತೀ ॥೨೨॥

ದದಾವನತಿದುಃಖೇನ ಸಮುಮುನ್ನಮುದಾನ್ಮುದಾ ।
ಶಿವಾವೇಶಿತಚಿತ್ತಾ ಸಾ ಯಥೇಚ್ಛಂ ವ್ಯಂಜನೈಃ ಸಹ ॥೨೩॥

ಸಕ್ಷೀರಮನ್ನಂ ದತ್ವಾಸ್ಮೈ ತಯೋರೇಕಂ ಫಲಂ ದದೌ ।
ಯಾತೇ ತಪೋಧನೇ ತೃಪ್ತೇ ಸ ಪಕ್ವಾನ್ನಂ ಚತುರ್ವಿಧಂ ॥೨೪॥

---

ಪರಮದತ್ತನು ಆ ಎರಡು ಹಣ್ಣುಗಳನ್ನೂ ತೆಗೆದುಕೊಂಡು ತನ್ನ ಹೆಂಡತಿಗೆ ಕೊಟ್ಟನು. ಹೀಗೆ ತನ್ನ ಗಂಡನು ಬಹಳ ಪ್ರೀತಿಯಿಂದ ತನಗೆ ಕೊಟ್ಟ ಆ ಸಿಹಿ ಮಾವಿನಹಣ್ಣುಗಳನ್ನು ಆ ದ್ಯುತಿವತಿಯು(ಪೂತವತಿಗೇ ನಾಮಾಂತರವೆಂದು ತೋರುವುದು). ಕೈಯಲ್ಲಿ ಹಿಡಿದಿರಲು ಅದೇ ಸಮಯಕ್ಕೆ ಒಬ್ಬ ಶಿವಯೋಗಿಯು ಹಸಿವಿನಿಂದ ಬಳಲಿ ಆ ಮನೆಗೆ ಬಂದನು. ಆಗ ಪೂತವತಿಯು ಹಸಿವಿನಿಂದ ಪೀಡಿತನಾಗಿ ಮನೆಗೆ ಬಂದಿರುವ ಪರಶಿವಭಕ್ತನನ್ನು ಕಂಡು, ಅವನಿಗೆ ನಮಸ್ಕಾರಮಾಡಿ, ಆ ಶೈವನ ಕಾಲುಗಳನ್ನು ನೀರಿನಿಂದ ಸಂತೋಷಪೂರ್ವಕವಾಗಿ ತೊಳೆದಳು. ||೨೦-೨೧||

ಹಸಿವಿನಿಂದ ಬಳಲಿ ಊಟಮಾಡಲು ಆತುರನಾಗಿರುವ ಆ ಮುನಿಯನ್ನು ನೋಡಿ, ಕಾಲವಿಳಂಬವನ್ನು ತಾಳಲಾರದೆ, ಆ ಪತಿವ್ರತೆಯು, ಹೀಗೆ ಆಯಿತಲ್ಲಾ ಎಂದು ದುಃಖಿತಳಾಗಿ ಜಾಗ್ರತೆಯಿಂದ ಎಲ್ಲವನ್ನೂ ಸಿದ್ಧಗೊಳಿಸಿ ಬಗೆ ಬಗೆಯ ವ್ಯಂಜನಗಳೊಡನೆ ದಿವ್ಯಾನ್ನವನ್ನು ಬೇಕಾದಷ್ಟು ಬಡಿಸಿ, ಶಿವನಲ್ಲಿಟ್ಟ ಮನಸ್ಸಿನಿಂದ ಹಾಲನ್ನವನ್ನು ಸಮರ್ಪಿಸಿ, ತನ್ನ ಗಂಡನು ತನಗೆ ಕೊಟ್ಟಿದ್ದ ಎರಡು ಮಾವಿನ ಹಣ್ಣಿನಲ್ಲಿ ಒಂದು ಹಣ್ಣನ್ನೂ ಸಹ ಆ ಶೈವನಿಗೆ ಸಮರ್ಪಿಸಿದಳು. ||೨೨-೨೩||

ಇದರಿಂದ ಆ ಮುನಿಯು ತೃಪ್ತಿಹೊಂದಿ ಮನೆಯಿಂದ ಹೊರಟುಹೋದ ನಂತರ ಆ ಪೂತವತಿಯು ನಿಧಾನವಾಗಿ ವಿಧಿಗನುಸಾರ ತನ್ನ ಗಂಡನಿಗೆ ನಾಲ್ಕು ಬಗೆಯ ಅನ್ನಮಾಡಿ ಬಡಿಸಿ, ಉಳಿದಿದ್ದ ಆ ಒಂದು ಮಾವಿನ ಹಣ್ಣನ್ನೂ ಬಡಿಸಿ

ದದತೀ ವಿಧಿನಾ ಪತ್ಯೇ ಶಿಷ್ಟಂ ತಚ್ಚ ಫಲಂ ದದೌ ।
ಆಸ್ವಾದಯತ್ತದಾ ದೃಷ್ಟ್ವಾ ಸುಧಾಕರಸಹೋದರಂ ॥೨೫॥

ಮಾಧ್ವೀರ್ಝುರೀಪರೀಪಾಕಂ ವರ್ತ್ಮಕಾರಿತಚೀಲಿತಂ ।
ಸ ತತ್ಸುಸ್ವರಮಾಸ್ವಾದ್ಯ ತಸ್ಥೌ ಮುಖಮವೇಕ್ಷತ ॥೨೬॥

ಸಾ ದ್ವಿತೀಯಫಲಾಕಾಂಕ್ಷಾಂ ತಸ್ಯ ಜ್ಞಾತ್ವಾ ಕುಲಾಭವತ್ ।
ಅಪಾರಯಂತೀ ತದ್ದತ್ತುಂ ವಕ್ತುಮೇತ್ಯ ಮಹಾನಸಂ ॥೨೭॥

ಕಂಪಮಾನಾ ಕರಸ್ಥಂ ಸಾ ಕಿಂಚಿತ್ಫಲಮವೇಕ್ಷ್ಯತ ।
ಅಹೋ ತವ ಗಿರೀಶೋಽಭೂದಾಶ್ರಯೋ ಜಗತಾಂ ಪತಿಃ ॥೨೮॥

ಪುನರೀದೃಕ್ಫಲಂ ದೇಹೀತ್ಯಾಹ ತಾಂ ಸಹಸನ್ನಿವ ।
ಧ್ಯಾಯಂತ್ಯಾಂ ಗಿರಿಶಂ ತಸ್ಯಾಃ ಫಲಂ ಸದ್ಯಃ ಕರೇ ಸ್ಥಿತಂ ॥೨೯॥

---

ದಳು. ಆ ಪರಮದತ್ತನು ಅಮೃತಕ್ಕೆ ಸಮಾನವಾದ ರುಚಿಯುಳ್ಳ ಆ ಮಾವಿನ ಹಣ್ಣನ್ನು ತಿಂದು, ಜೇನುತುಪ್ಪದ ಪ್ರವಾಹದಂತೆ ನಾಲಿಗೆಯಲ್ಲಿ ರುಚಿಯನ್ನುಂಟು ಮಾಡುತ್ತಿರುವ ಆ ಹಣ್ಣಿನ ಮಾಧುರ್ಯವನ್ನೇ ಚಪ್ಪರಿಸುತ್ತಾ ಪಕ್ಕದಲ್ಲಿ ನಿಂತಿದ್ದ ಆ ತನ್ನ ಪತ್ನಿಯ ಮೊಗವನ್ನೀಕ್ಷಿಸಿದನು. ॥೨೪-೨೫-೨೬॥

ಆಗ ಆತನ ಪತ್ನಿಯು ತನ್ನ ಗಂಡನಿಗೆ ಇನ್ನೊಂದು ಮಾವಿನಹಣ್ಣಿನ ಅಪೇಕ್ಷೆಯಿರುವುದಿನ್ನರಿತು, ಭಯಗೊಂಡು, ಅದನ್ನು ಶೈವನಿಗೆ ಸಮರ್ಪಿಸಿದೆನೆಂದು ಹೇಳಲು, ಧೈರ್ಯವಿಲ್ಲದೇ ಅಡಿಗೆಮನೆಗೆ ಹೋಗಿ ನಡುಗುತ್ತಾ ನಿಂತುಬಿಟ್ಟಳು. ದಯಾಸಮುದ್ರನಾದ ಶಂಕರನು ಇದನ್ನು ತಿಳಿದು ಅದೇ ತರಹದ ಮತ್ತೊಂದು ಹಣ್ಣು ಆಕೆಯ ಕೈಯ್ಯಲ್ಲಿ ಬಂದು ನಿಲ್ಲುವಂತೆ ಅನುಗ್ರಹಿಸಿದನು. ಅದರಿಂದ ಆ ಪೂತ ವತಿಯು ಸಂತೋಷಗೊಂಡು, ಆ ಹಣ್ಣನ್ನು ಪತಿಗೆ ತಂದಿತ್ತಳು. ಇದನ್ನು ಹೇಗೋ ಅರಿತ ಪತಿಯು, ತನ್ನ ಪತ್ನಿಗೆ ದೇವದೇವನಾದ ಶಂಕರನೇ ಸಹಾಯಮಾಡಿರುವ ನೆಂದು ಭಾವಿಸಿ, ಮತ್ತೊಂದು ಈ ತರಹದ ಹಣ್ಣೇ ತನಗೆ ಬೇಕೆಂದು ಹಠಹಿಡಿ ದನು. ಇದರಿಂದ ಮತ್ತೂ ಹೆದರಿ ಪೂತವತಿಯು ಮತ್ತೆ ಮತ್ತೆ ಶಿವನನ್ನೇ ಧ್ಯಾನಿ ಸುತ್ತಾ, ಪತಿಯು ಕೇಳಿದಷ್ಟು ಹಣ್ಣುಗಳನ್ನು ಒದಗಿಸುತ್ತಾ ಬಂದಳು. ॥೨೭-೨೮॥

ಹೀಗೆ ಅವಳು ಮಹೇಶನನ್ನು ಧ್ಯಾನಮಾಡಿದಷ್ಟೂ, ಇದ್ದಕ್ಕಿದ್ದಂತೆಯೇ ಹಣ್ಣುಗಳು ಕೈಯಲ್ಲಿ ಬರುವುದಕ್ಕೆ ಆರಂಭವಾಯಿತು. ಆಗ ಆ ಪರಮದತ್ತನು,

ವಿಲೋಕ್ಯಾಸದೃಶಂ ಭೀತೋ ವಿಸ್ಮಿತಶ್ಚ ವ್ಯಚಿಂತಯತ್ ।
ಮಹತೀಂ ದೇವತಾಮೇನಾಮಜಾನನ್ನಹಮಲ್ಪಧೀಃ ॥೩೦॥

ಅವಜಾನೇ ಸ್ಮ ಜಾಯೇತಿ ಕಿಮತ್ರ ಕರವೈ ವಿಧಿಂ ।
ತ್ಯಾಗೇನ ಶಕ್ತಿತೋ ಲೋಕೇ ಗೃಹೀ ಪಾತಕಮಾಪ್ನುಯಾಂ ॥೩೧॥

ಅತೋ ದ್ವೀಪಾಂತರಂ ವ್ರಜ್ಯಾಮುಪದಿಶ್ಯ ತ್ಯಜಾಮ್ಯಹಂ ।
ಇತಿ ನಿಶ್ಚಿತ್ಯ ತಾಂ ತ್ಯಕ್ತ್ವಾ ಆರೋಪ್ಯ ತರಣೌ ವಣಿಕ್ ॥೩೨॥

ಪಣ್ಯಾನಿ ತತ್ರ ವಿಕ್ರೀಯ ಕ್ರೀತ್ವಾ ತತ್ರ ನವಾನಿ ಚ ।
ತರಣೇರಾವತೀರ್ಯಾಥ ಪಾಂಡ್ಯೇಷು ನಗರೇ ವಿಶಃ ॥೩೩॥

ಸುತಾಮುದ್ವಾಹ್ಯ ನಿವಸನ್ಕನ್ಯಾಂ ಕಾಂತಿಮಜೀಜನತ್ ।
ಸ ಪೂತವತ್ಯವಜ್ಞಾತಭವಮಾನೋ ವ್ಯಪೋಹಿತುಂ ॥೩೪॥

---

ಸಾಮಾನ್ಯವಲ್ಲದ ಆ ಸಂಘಟನೆಯನ್ನು ನೋಡಿ ಭಯಗೊಂಡು, ಆಶ್ಚರ್ಯಚಕಿತನಾಗಿ ಹೀಗೆ ಯೋಚಿಸಿದನು. ಈಕೆಯು ಭಕ್ತಿಶೀಲಳಾದ ದೇವತಾಸ್ತ್ರೀಯೆಂದು ತಿಳಿಯದೇ ದಡ್ಡನಾದ ನಾನು ಈಕೆಯನ್ನು ಪತ್ನಿಯೆಂದು ಭಾವಿಸಿದೆನಲ್ಲಾ! ಅಯ್ಯೋ! ಈ ಅದೃಷ್ಟಘಟನೆಗೆ ಈಗೇನುಮಾಡಲಿ; ॥೨೯-೩೦॥

ಈಗ ಬಲಾತ್ಕಾರವಾಗಿ ನಾನು ಇವಳನ್ನು ಬಿಡುವುದಾದರೆ ಗೃಹಸ್ಥನಾದ ನನಗೆ ಪಾಪವುಂಟಾಗುವುದು; ಆದ್ದರಿಂದ ಬೇರೆ ಯಾವುದಾದರೊಂದು ವ್ಯಾಜದಿಂದ ನಾನು ದ್ವೀಪಾಂತರವನ್ನು ಸೇರಿ ಇವಳನ್ನು ತ್ಯಜಿಸುವೆನೆಂದು ತೀರ್ಮಾನಿಸಿ, ಆ ಪರಮದತ್ತನು ತನ್ನ ಸಾಮಾನುಗಳನ್ನೆಲ್ಲಾ ಹಡಗಿನಲ್ಲಿ ತುಂಬಿಕೊಂಡು ಅಲ್ಲಿನ ಮುಖ್ಯಪದಾರ್ಥಗಳನ್ನು ಕೊಂಡು ತುಂಬಿಕೊಂಡು, ಹೊರಟು, ದೋಣಿಯಿಂದಿಳಿದು ಪಾಂಡ್ಯದೇಶದಲ್ಲಿ ವ್ಯಾಪಾರಮಾಡುತ್ತಾ ಅಲ್ಲಿಯೇ ಒಬ್ಬ ವೈಶ್ಯನ ಮಗಳನ್ನು ಮದುವೆಮಾಡಿಕೊಂಡು, ಅವಳಲ್ಲಿ ಕಾಂತಿಯೆಂಬ ಮಗಳನ್ನು ಪಡೆದನು. ॥೩೧-೩೨-೩೩॥

ಹೀಗೆ ಪರಮದತ್ತನು ಪೂತವತಿಯನ್ನು ತಿರಸ್ಕರಿಸಿದಮೇಲೆ ತನಗೆ ಪುನಃ ಅವಳಲ್ಲಿದ್ದ ಅಭಿಮಾನವನ್ನು ಹೋಗಲಾಡಿಸಿಕೊಳ್ಳುವುದಕ್ಕೋಸ್ಕರ ತನ್ನ ಮಗಳಿಗೆ ಪೂತವತಿಯೆಂಬ ಹೆಸರನ್ನಿಟ್ಟು ಅಲ್ಲಿಯೇ ಪಾಂಡ್ಯದೇಶದಲ್ಲಿ ಸುಖವಾಗಿ ವಾಸಮಾಡಿ

ಸ್ವಸುತಾಂ ಪೂತವತ್ಯಾಖ್ಯಾಂ ಕೃತ್ವಾ ತತ್ರಾವತ್ಸುಖೀ ।
ಇತಸ್ತತಃ ಪ್ರಚಾರಿಭ್ಯಃ ಪಥಿಕೇಭ್ಯಸ್ತಥಾವಿಧಾಂ ॥೩೫॥

ತದಾ ತಸ್ಯಾಶ್ರುಣೋದ್ವಾಕ್ಯಂ ಧನದತ್ತಸುಹೃಜ್ಜನಃ ।
ಸಮ್ಯಗ್ವಿಜ್ಞಾಯ ತದ್ವಾರ್ತಾಂ ಧನದತ್ತಾಯ ಬಾಂಧವಾಃ ॥೩೬॥

ಪ್ರಾಹುರ್ಯತ್ರ ಪತಿಸ್ತತ್ರ ತ್ವತ್ಸುತಾಂ ಪ್ರೇಷ್ಯತಾಮಿತಿ ।
ಧನದತ್ತಸಖೀಯುಕ್ತಾಂ ಸ್ವಸುತಾಂ ಬಂಧುಪಾಲಿತಾಂ ॥೩೭॥

ಆರೋಪ್ಯ ರತ್ನಶಿಬಿಕಾಂ ಮಹತ್ಪ್ರಸ್ಥಾಪಯತ್ಪುರಂ ।
ತನ್ಮಹತ್ಪುರಮಾಸಾದ್ಯ ಧನದತ್ತಸ್ಯ ಬಾಂಧವಾಃ ॥೩೮॥

ಅಸ್ಮೈ ಪರಮುದತ್ತಾಯ ತತ್ಪ್ರಿಯಾಂ ಪ್ರಾಹುರಾಗತಾಂ ।
ಶ್ರುತ್ವಾ ತಾಮಾಗತಾಂ ಭೀತೋ ಗೃಹಿಣೀತನಯಾಯುತಃ ॥೩೯॥

---

ಕೊಂಡಿದ್ದನು. ಇತ್ತ ಧನದತ್ತನ ಬಂಧು ಸ್ನೇಹಿತರು ಪ್ರಯಾಣಿಕರ ಮೂಲಕ ಆ ಪರಮುದತ್ತನ ಸಮಾಚಾರವನ್ನರಿತು, ಅವನ ವೃತ್ತಾಂತವನ್ನೆಲ್ಲಾ ಸರಿಯಾಗಿ ತಿಳಿದುಕೊಂಡು ಧನದತ್ತನ ಬಳಿಗೆ ಬಂದು, ಗಂಡನಿರುವ ಬಳಿಗೆ ಆತನ ಮಗಳನ್ನು ಕಳುಹಿಸಿಕೊಡುವಂತೆ ತಿಳಿವಳಿಕೆ ಹೇಳಿದರು. ॥೩೪-೩೫-೩೬॥

ಆಗ ಧನದತ್ತನು ಸಖೀಸಮೇತಳಾದ ತನ್ನ ಮಗಳನ್ನು ಬಂಧುಗಳ ರಕ್ಷಣೆಯಲ್ಲಿ ರತ್ನದ ಮೇನೆಯಲ್ಲಿ ಕೂರಿಸಿ, ಆ ಮಹಾಪಟ್ಟಣಕ್ಕೆ ಕಳುಹಿಸಿಕೊಟ್ಟನು. ಧನದತ್ತನ ಬಾಂಧವರಾದರೋ ಪೂತವತಿಯೊಡನೆ ಪರಮುದತ್ತನಿದ್ದ ಮಹಾಪಟ್ಟಣಕ್ಕೆ ಹೋಗಿ, ಆ ಪರಮುದತ್ತನಿಗೆ ಹೆಂಡತಿಯು ಬಂದಿರುವ ಸಮಾಚಾರವನ್ನು ತಿಳಿಸಿದರು. ॥೩೭-೩೮॥

ತನ್ನಲ್ಲಿಗೇ ಪೂತವತಿಯು ಬಂದಿರುವುದನ್ನು ಕೇಳಿ ಭಯಗೊಂಡು ತನ್ನ ಹೆಂಡತಿ ಮಗಳೊಡನೆ ಹೊರಟು ಆ ಸುನೀತವತಿಯ (ಪೂತವತಿಯ) ಪಾರ್ಶ್ವದಲ್ಲಿ ನಿಂತು ಅವಳಿಗೆ ಮೊದಲು ತಾನು ನಮಸ್ಕಾರಮಾಡಿ, ಅನಂತರ ತನ್ನ ಹೆಂಡತಿ ಮಕ್ಕಳನ್ನು ಅವಳ ಕಾಲಿನಮೇಲೆ ಬೀಳಿಸಿ, ಅವಳೊಡನೆ ಹೀಗೆ ಮಾತನಾಡಿದನು. ಶೋಭನೆಯೇ, ನಿನ್ನ ದಯೆಯಿಂದ ಇಲ್ಲಿ ನಾವು ಸುಖವಾಗಿ ವಾಸಮಾಡುತ್ತಿರುವೆವು.

ಪಾರ್ಶ್ವಂ ಸುನೀತವತ್ಯಾ ಸಃ ಪ್ರಾಪ್ಯತಾಂ ಪ್ರಣನಾಮ ಚ ।
ಪತ್ನೀಂ ಕನ್ಯಾಂ ಚ ತತ್ಪಾದೇ ಪಾತಯಿತ್ವಾ ವಚೋಽಬ್ರವೀತ್॥೪೦॥

ಕಲ್ಯಾಣಿ ತವ ಕಾರುಣ್ಯಾದ್ವಯಂ ವರ್ತಾಮಹೇ ಸುಖಂ ।
ತ್ವನ್ನಾಮಧರಣೀ ಹ್ಯೇಷಾ ಕನ್ಯಕೇತಿ ನನಾಮ ತಾಂ ॥೪೧॥

ದೃಷ್ಟ್ವಾ ಪುನೀತವತ್ಯೇಷಾ ಲಜ್ಜಯಾಽಭೂನ್ನತಾನನಾ ।
ನಮಸಿ ತ್ವಂ ಕಥಂ ಪತ್ನೀಂ ಕಸ್ತೇ ಭಾವಪರಿಪ್ಲವಃ ॥೪೨॥

ಇತಿ ತದ್ಬಂಧುಭಿಃ ಪೃಷ್ಟಃ ಸ ತಾನಾಹ ವಣಿಗ್ವರಃ ।
ನ ಮಾನುಷೀ ದೇವತೇಯಮಿತ್ಯುದ್ವಾಹ್ಯಾಪರಾಂ ವಧೂಂ ॥೪೩॥

ತಸ್ಯಾಂ ಪ್ರಸೂಯೇಮಾಂ ಕನ್ಯಾಮೇತನ್ನಾಮಾಹ್ವಯಂ ಚ ತಾಂ ।
ಅತೋಽಹಮೇತಾಂ ಪ್ರಣತೋ ಧನ್ಯಾಯುಷ್ಯಾಂತರಾಪ್ಯಸೌ ॥೪೪॥

ತಚ್ಛ್ರುತ್ವಾ ಬಂಧುಷು ಸ್ತಬ್ಧೇಷ್ವಾಹ ಸಂಸ್ಮೃತ್ಯ ಸಾ ಶಿವಂ ।
ಸ್ವಾಮಿನ್ನಿಶ್ಚಯ ಏಷೋಽಸ್ಯ ಪತ್ಯುರರ್ಥೇ ಮಯಾ ಸ್ಥಿತಾಂ ॥೪೫॥

---

ಈ ನನ್ನ ಮಗಳಿಗೆ ನಿನ್ನ ಹೆಸರನ್ನೇ ಇಟ್ಟಿರುವೆವು. ಎಂದು ಹೇಳಿ ಅವಳಿಂದ ನಮಸ್ಕಾರಮಾಡಿಸಿದನು. ॥೩೯-೪೦-೪೧॥

ತನ್ನ ಗಂಡನು ತನಗೆ ನಮಸ್ಕಾರಮಾಡುತ್ತಿರುವುದನ್ನು ಕಂಡು ಪುನೀತ ವತಿಯು ನಾಚಿಕೆಯಿಂದ ತಲೆಬಾಗಿ ನಿಂತುಕೊಂಡಳು. ಆಗ ಅವಳ ಬಂಧುಗಳು, ಅಯ್ಯ ಪರಮದತ್ತನೇ, ಇದೇನು ಹೆಂಡತಿಗೆ ನಮಸ್ಕಾರ ಮಾಡುತ್ತಿರುವೆ? ನಿನಗೇ ನಾದರೂ ಬುದ್ಧಿಭ್ರಮಣೆಯೇ? ಎಂದು ಕೇಳಲು ಆಗ ವರ್ತಕಶ್ರೇಷ್ಠನು, ಓ ಬಂಧು ಗಳಿರಾ! ಇವಳು ಮಾನವಳಲ್ಲ, ದೇವತಾಸ್ವರೂಪಿಣಿಯೆಂದರಿತು ನಾನು ಇಲ್ಲಿಗೆ ಬಂದು ಬೇರೆ ಹೆಣ್ಣನ್ನು ಮದುವೆಮಾಡಿಕೊಂಡೆನು ಈ ಎರಡನೆಯ ಹೆಂಡತಿ ಯಲ್ಲಿ ಈ ಮಗಳನ್ನು ಪಡೆದು ಈ ಮಗಳಿಗೆ ಆಕೆಯ ಹೆಸರನ್ನೇ ಇಟ್ಟುಕೊಂಡಿರು ವೆನು. ಆದ್ದರಿಂದಲೇ ನಾನು ಮಹಾತ್ಮಳಾದ ಈ ಸಾಧ್ವೀಮಣಿಗೆ ಪ್ರಣಾಮ ಮಾಡಿದೆನು, ಇವಳು ಸಾಮಾನ್ಯಳಲ್ಲವೆಂದು ಸಮಾಧಾನ ಹೇಳಿದನು. ॥೪೨-೪೩-೪೪॥

ಆ ಪರಮದತ್ತನ ನುಡಿಗಳನ್ನು ಕೇಳಿ ನೆಂಟರೆಲ್ಲರೂ ಸುಮ್ಮನಾಗಲು, ಆಗ ಆ ಪುನೀತವತಿಯು ಶಿವನನ್ನು ಸ್ಮರಿಸಿಕೊಂಡು, ಸ್ವಾಮಿ! ನನ್ನ ಗಂಡನಿಗಾಗಿ ಈ

ವ್ಯಪೋಹ್ಯ ಮಾಂಸಭಾರಂ ಮೇ ಪಿಶಾಚಂ ಕುರುತಾಮಿತಿ ।
ದೇವೇಶೋಽಪಿ ದಯಾಂ ತಸ್ಯಾಮಕರೋದ್ಭಕ್ತವತ್ಸಲಃ ॥೪೬॥

ಸಮಾಂಸಭಾರಂ ಸಹಸಾ ಸರ್ವಗಾತ್ರೇಷು ಚಾಧುನೋತ್ ।
ವಿಧೂತಾಶೇಷಮಾಂಸತ್ವಾದಸ್ಥಿಶೇಷವಪುಶ್ಚ ಸಾ ॥೪೭॥

ಸಾಮುತ್ರೈವಮುಮರ್ತ್ಯೈರ್ಲಕ್ಷ್ಯ ರೂಪಂ ಪೈಶಾಚಮಾಸ್ಥಿತಾ ।
ಪುಷ್ಪಾಣಿ ವವೃಷುರ್ದೇವಾ ನೇದುರ್ದುಂದುಭಯೋ ದಿವಿ ॥೪೮॥

ನನೃತುಶ್ಚಾಪ್ಸರಃಸಂಘಾ ಜಗುರ್ವಿದ್ಯಾಧರಾದಯಃ ।
ತಾಂ ತ್ಯಕ್ತ್ವಾ ಬಾಂಧವಾಃ ಸರ್ವೇ ಭೀತಾ ಯಾತಾ ಯಥಾಗತಂ ॥೪೯॥

ದೇವತಾಂ ದಿವಿ ಚೈಕೈಕಾಂ ಜಗೌ ಜ್ಞಾನಯುತಾ ಚ ಸಾ ।
ಬಂಧವೋ ವಿದ್ರುವಂತ್ಯೇತೇ ಪಿಶಾಚೇತಿ ವಿಚಿಂತ್ಯ ತಾಂ ॥೫೦॥

---

ನನ್ನ ಈ ಶರೀರ ಮಾಂಸಭಾರವೆಲ್ಲವನ್ನೂ ಇಟ್ಟುಕೊಂಡು ಕಾಲಕಳೆಯುತ್ತಿದ್ದೆನು. ಈಗಪತಿಯೇ ಇದನ್ನು ತ್ಯಾಗಮಾಡಲು, ಉಪಯೋಗವಿಲ್ಲದ ಈ ಚರ್ಮಮಾಂಸ ಗಳೆಲ್ಲವೂ ಹೋಗುವಂತಾಗಿ ನನ್ನನ್ನು ಪಿಶಾಚಳನ್ನಾಗಿ ಮಾಡು; ಇದೇ ನನ್ನ ನಿಶ್ಚಯವೆಂದು ಧ್ಯಾನಿಸಲು, ಭಕ್ತವತ್ಸಲನಾದ ಆ ಮಹಾದೇವನೂ ಅವಳ ಪ್ರಾರ್ಥನೆಯನ್ನಂಗೀಕರಿಸಿ ಅವಳ ಮೇಲೆ ಅನುಗ್ರಹಮಾಡಿದನು. ॥೪೫-೪೬॥

ಮಹಾದೇವನು ಜಾಗ್ರತೆಯಾಗಿ ಅವಳ ಅವಯವಗಳಲ್ಲಿದ್ದ ಮಾಂಸದ ತುಂಡು ಗಳೆಲ್ಲಾ ಶುಷ್ಕವಾಗಿ ಮಾಯವಾಗುವಂತೆ ಮಾಡಿದನು. ಮಾಂಸದ ಮುದ್ದೆ ಗಳೆಲ್ಲವೂ ನಷ್ಟವಾದ ಮೇಲೆ ಅವಳು ಕೇವಲ ಮೂಳೆಮಾತ್ರದಿಂದ ಕೂಡಿದ ದೇಹ ಯಾದಳು. ಬುದ್ಧಿಪೂರ್ವಕವಾಗಿ ದೇವತೆಗಳಿಂದಲೂ ಪಡೆಯಲಸಾಧ್ಯವಾದ ಇಂತಹ ಪೈಶಾಚರೂಪವನ್ನು ಆ ಪೂತವತಿಯು ಶಿವಾನುಗ್ರಹದಿಂದ ಕ್ಷಣಕಾಲದಲ್ಲಿ ಪಡೆದಳು. ಅದನ್ನು ನೋಡಿ ದೇವತೆಗಳು ಹೂಮಳೆಗರೆದರು. ದೇವನಗಾರಿಗಳು ಅಂಬರದಲ್ಲಿ ಮೊಳಗಿದವು. ಅಪ್ಸರೆಯರು ಗುಂಪಾಗಿ ನಾಟ್ಯವಾಡಿದರು. ವಿದ್ಯಾಧರರೇ ಮುಂತಾದ ದೇವತೆಗಳು ಇಂಪಾಗಿ ಗಾನಮಾಡಿದರು. ॥೪೭-೪೮॥

ಬಂಧುಗಳೆಲ್ಲರೂ ಆ ಪೂತವತಿಯನ್ನು ಬಿಟ್ಟು ತಾವು ಬಂದ ದಾರಿಯನ್ನನು ಸರಿಸಿ ಭಯಗೊಂಡು ಓಡಿದರು. ಆಗ ಆ ಪಿಶಾಚರೂಪಧಾರಿಣಿಯಾದ ಪೂತವ

ಭೂತನಾಥಃ ಸ ಭೂತಾರ್ಥೋ ಮದ್ರೂಪಂ ವೇತ್ತಿ ಕಿಂಸರೈಃ ।
ಇತಿ ಕೈಲಾಸಶೈಲೇಶಂ ದ್ರಷ್ಟುಂ ತತ್ಪ್ರೇರಿತಾಶಯಾ ॥೫೧॥

ಸಾಚೋದೀಚೀಂ ದಿಶಂ ಪ್ರಾಪ್ಯ ಲಂಘಿತಾದ್ರಿವನಾಪಗಾ ।
ಕ್ಷುತ್ಪಿಪಾಸಾಶ್ರಮೈರ್ಹೀನಾ ವಹಂತೀಂ ಸ್ವಾಂ ತತಃ ಶಿವಾಂ ॥೫೨॥

ಕೈಲಾಸಾಪತ್ಯಕಾಂ ಪ್ರಾಪ್ಯ ದಿನೈರ್ಬಹುಭಿರೇವ ಸಾ ।
ಶಂಕರಾಚರಿತಃ ಶೈಲಃ ಪದ್ಭ್ಯಾಂ ಸ್ಪ್ರಷ್ಟುಂ ನ ಯುಜ್ಯತೇ ॥೫೩॥

ಇತಿ ಮೂರ್ಧ್ನಾ ತಮಾರುಕ್ಷದಸೌ ಪ್ರಾಙ್ಮುಖವೈಭವಾ ।
ಆರೋಹಂತೀಂ ವರಾರೋಹಾಂ ದುರಾರೋಹಮಿಮಂ ಗಿರಿಂ ॥೫೪॥

---

ತಿಯು ಸ್ವರ್ಗವಾಸಿಗಳಾದ ಒಂದೊಂದು ದೇವತೆಯನ್ನೂ ಉದ್ದೇಶಿಸಿ ನಾನಾರೀತಿ ಧ್ಯಾನಿಸಿದಳು. ಈ ಬಂಧುಗಳೆಲ್ಲರೂ ಅವಳನ್ನು ಪಿಶಾಚಿಯೆಂದು ತಿಳಿದು ಓಡುತ್ತಿರಲು, ಸಕಲ ಭೂತಗಳಿಗೂ ಒಡೆಯನಾದ ಶಂಕರನು ಮಾತ್ರ ನಿಜವಾದ ತನ್ನ ಸ್ವರೂಪವನ್ನು ಕಿನ್ನರರ ಮುಖಾಂತರ ತಿಳಿಯುತ್ತಾನೆಂದು ಅವಳು ಅರಿತಳು. ಶಿವನ ಪ್ರೇರಣೆಯಿಂದ ಕೈಲಾಸಗಮನವುಳ್ಳವಳಾಗಿ ಕೈಲಾಸೇಶ್ವರನನ್ನು ನೋಡಲು ಪ್ರಯಾಣ ಹೊರಟಳು. ॥೪೯-೫೦-೫೧॥

ಅದರಂತೆ ಉತ್ತರದಿಕ್ಕಿಗೆ ಹೋಗಿ ಅಲ್ಲಿರುವ ಬೆಟ್ಟ, ಕಾಡು ಮತ್ತು ನದಿಗಳನ್ನು ಬಳಲಿಕೆಯಿಲ್ಲದೇ, ತನ್ನ ಮನಸ್ಸಿನಲ್ಲಿ ಪಾರ್ವತೀದೇವಿಯನ್ನು ನೆನೆಯುತ್ತಾ ಕೈಲಾಸ ಪರ್ವತದ ತಪ್ಪಲು ಜಾಗವನ್ನು ಅನೇಕ ದಿವಸಗಳಲ್ಲಿ ಬಂದು ಸೇರಿದಳು. ಹಾಗೆಯೇ ಅವಳು ಶಂಕರನಿಂದ ಆಶ್ರಿತವಾದ ಈ ಪರ್ವತವನ್ನು ಕಾಲಿನಿಂದ ಮುಟ್ಟಲು ಯೋಗ್ಯವಲ್ಲವೆಂದು ಭಾವಿಸಿ, ತಲೆಯಿಂದಲೇ ಆ ಕೈಲಾಸಪರ್ವತವನ್ನು ಹತ್ತಲು ಪೂರ್ವಮುಖಮಾಡಿಕೊಂಡು ವೈಭವದಿಂದ ಏರತೊಡಗಿದಳು. ॥೫೨-೫೩॥

ಸಾಮಾನ್ಯರಿಂದ ಹತ್ತಲಸಾಧ್ಯವಾದ ಈ ಕೈಲಾಸಪರ್ವತವನ್ನು ಹತ್ತುತ್ತಿರುವ ಪೈಶಾಚರೂಪಧಾರಿಣಿಯಾದ ಆ ಪೂತವತಿಯನ್ನು ಪರಶಿವನ ಅರ್ಧಾಂಗಿಯಾದ ಪಾರ್ವತಿಯು ನೋಡಿದಳು. ಕೂಡಲೇ ಭಯದಿಂದ ಪ್ರಭೋ! ಯಾವುದೋ ಒಂದು ಮೂಳೆಮಾತ್ರ ವಿಶಿಷ್ಟವಾದ ಆಕೃತಿಯು ನಡುಗುತ್ತಾ ತಲೆಯಿಂದಲೇ ಈ ಗಿರಿ

ತಾಂ ದದರ್ಶಾಚಲಾಪಾಂಗಾಂ ಶಿವನಾಮಾಂಗದೇವತಾ ।
ಶಿರಸಾರೋಹತಿ ಗಿರಿಂ ಕಾಚಿದಸ್ಥಿಮಯಾಕೃತಿಃ ॥೫೫॥

ವೀಕ್ಷ್ಯತಾಮಿತಿ ಸಾಶ್ಚರ್ಯಂ ಹರೋ ಗೌರೀಮುದಾಹರತ್ ।
ಇಮಾಮುಮೇಶಮಾಯಾಂತೀಂ ಮದ್ಭಕ್ತಾಂ ವಿಧಿವದ್ಗಿರಾ ॥೫೬॥

ಪರಂ ರೂಪಮಿದಂ ಪ್ರಾಪ್ತಾಂ ಭಕ್ತಿವೈಭವಸಂಭೃತಾಂ ।
ಶಿರಸಾ ಸೇಯಮಾಯಾತಿ ಮಾಮಭ್ಯೇತ್ಯಂಬಿಕಾಪತಿಂ ॥೫೭॥

ಉಕ್ತಾ ಶಿವೇನ ಸಾಭ್ಯೇತ್ಯ ಪ್ರಾಣಂಸೀತ್ತಮುಮಾಸಖಂ ।
ಅಂಬ ಕಿಂ ಶೇರವಾಣ್ಯದ್ಯ ತಥೇತ್ಯುಕ್ತ್ವಾಗಜೇನ ಸಾ ॥೫೮॥

ತಾವದ್ಗತಂ ತವ ದ್ರಷ್ಟುಮಿಚ್ಛಾಮಿ ನಯನಾಮೃತಂ ।
ಕಿಂಚ ಜಾಯೇಯಮಾಹೂಯ ಉತಜಾಯೇಯ ತತ್ತ್ರದಾ ॥೫೯॥

---

ಯನ್ನು ಹತ್ತಿಬರುತ್ತಿದೆ; ನೋಡೆಂದು ಆಶ್ಚರ್ಯಚಕಿತಳಾಗಿ ದೇವಿಯು ಮಹಾದೇವನಿಗೆ ಹೇಳಲು, ಆಗ ಶಂಕರನು ಅವಳ ವಿಷಯವನ್ನು ಈ ರೀತಿ ತಿಳಿಸಿದನು. ॥೫೪-೫೫॥

ದೇವಿ! ಉಮಾರಮಣನಾದ ನನ್ನನ್ನುದ್ದೇಶಿಸಿ ಇಲ್ಲಿ ಬರುತ್ತಿರುವ ಇವಳು ನನ್ನ ಭಕ್ತಳು; ಇವಳು ವಿಧಿಪೂರ್ವಕವಾದ ನನ್ನ ಸ್ತುತಿಯಿಂದ ಶ್ರೇಷ್ಠವೂ, ಭಕ್ತ ವೈಭವಸಂಪನ್ನವೂ ಆದ ಈ ಪಿಶಾಚರೂಪವನ್ನು ಹೊಂದಿ, ಅಂಬಿಕಾರಮಣನಾದ ನನ್ನ ಬಳಿಗೆ ಕೇವಲ ತಲೆಯಿಂದಲೇ ನಡೆದು ಬರುತ್ತಿರುವಳೆಂದು ಶಿವನು ಪಾರ್ವತಿಗೆ ಹೇಳಲು, ಅಷ್ಟುಹೊತ್ತಿಗೆ ಸರಿಯಾಗಿ ಆ ಪೂತವತಿಯು ಉಮಾರಮಣನ ಬಳಿ ಗೈತಂದು ಅವನಿಗೆ ಪ್ರಣಾಮಮಾಡಿ ನಿಂತಳು. ಪರಶಿವನಾದರೋ ದಯೆಯಿಂದ ಅವಳನ್ನು ಕುರಿತು, ॥೫೬-೫೭॥

ಅಮ್ಮಾ! ಈಗ ನಿನಗೇನು ವರ ಬೇಕೆಂದು ಕೇಳಲು, ಹಾಗೆ ಶಿವನಿಂದ ಕೇಳಲ್ಪಟ್ಟ ಆ ಪೂತವತಿಯು, ಸ್ವಾಮಿ! ಯಾವಾಗಲೂ ನಿನ್ನ ದಿವ್ಯರೂಪವನ್ನು ಸಂದರ್ಶಿಸಲು ನನಗೆ ದಿವ್ಯನೇತ್ರವನ್ನು ಕರುಣಿಸುವವನಾಗು. ಅಲ್ಲದೇ ಈ ನನ್ನನ್ನು ನಿನ್ನ ಪತ್ನಿಯೆಂದು ಕರೆದುಕೊ. ಅಥವಾ ಅದಕ್ಕಾಗಿ ಬೇರೆ ಜನ್ಮವನ್ನಾದರೂ ಕೊಡು. ನಿನ್ನ ಸಕಲಭೋಗಗಳನ್ನೂ ಅನುಭವಿಸಬೇಕೆಂದು ನಾನು ಇಚ್ಛಿಸುತ್ತೇನೆಂದು ಪತಿವ್ರತೆಯಾದ ಆ ಸಾಧ್ವೀಮಣಿಯು ಹೇಳಿದಳು. ॥೫೮-೫೯॥

ಭುಜಿಷ್ಯತೇ ಭವಿಷ್ಯಾಮಿ ಇತ್ಯವಾದೀದನಿಂದಿತಾ ।
ತಸ್ಯಾ ಭಕ್ತಿಪರೀವಾಹಸೌರಭೀಮೇದುರಂ ವಚಃ ॥೬೦॥

ಆಕರ್ಣ್ಯ ಸಸ್ಮಿತಂ ಪ್ರಾಹ ತಥಾಸ್ತ್ವಿತಿ ಮಹಾನಟಃ ।
ಗಚ್ಛ ಭದ್ರೇ ವಟಾರಣ್ಯಂ ನೃತ್ಯಂ ಮೇ ದ್ರಕ್ಷ್ಯಸಿ ಸ್ಫುಟಂ ॥೬೧॥

ಮತ್ಪಾರ್ಶ್ವೇ ಚ ವಸೇತ್ಯುಕ್ತ್ವಾ ಸಾ ತೇನ ಪ್ರಾಪ ತದ್ವನಂ ।
ದರ್ಶಯಾಮಾಸ ತದ್ದೃಶ್ಯಂ ಸಚ್ಚಿದಾನಂದವಿಗ್ರಹಂ ॥೬೨॥

ಚಂಚಜ್ಜಟಾಪತಚ್ಚಂದ್ರಝುಲಝುಲ ಸುರಧ್ವನಿ ।
ಉಷ್ಣೀಷಯನ್ಭುಜಾದಂಡಭ್ರಾಮ್ಯದ್ಬ್ರಹ್ಮಾಂಡಮಂಡಲಃ ॥೬೩॥

ನಟಃ ಡಮರುಗೋಲ್ಲಾಸಿ ಕರಸ್ಥಾಮರಪಾವಕಃ ।
ಕಿಂಚಿತ್ಕುಂಚಿತಸವ್ಯಾಂಘ್ರಿನಾಟ್ಯೋಲ್ಲಾಸಮದರ್ಶಯತ್ ॥೬೪॥

---

ಆ ಪೂತವತಿಯ ಭಕ್ತಿಪರಿಪಾಕಪೂರ್ಣವಾದ ಆ ಮಧುರವಾಕ್ಯಗಳನ್ನು ಕೇಳಿ, ಆ ಮಹಾನಟನು ಹಾಗೆಯೇ ಆಗಲೆಂದು ಹೇಳಿ; ಎಲೌ ಮಂಗಳಾಂಗಿಯೇ! ವಟಾರಣ್ಯಕ್ಕೆ ನಡೆ, ಅಲ್ಲಿ ನನ್ನ ನಾಟ್ಯವನ್ನು ನೋಡುವೆಯೆಂದು ಸ್ಫುಟವಾಗಿ ಹೇಳಿ, ಆ ಪೂತವತಿಗೆ ಇನ್ನು ಮುಂದೆ ನೀನು ನನ್ನ ಪಾರ್ಶ್ವದಲ್ಲಿಯೇ ವಾಸಮಾಡೆಂದು ವರವಿತ್ತು ಅವಳೊಡನೆ ವಟಾರಣ್ಯಕ್ಕೆ ಹೋದನು. ॥೬೦-೬೧॥

ಅನಂತರ ಆ ವಟಾರಣ್ಯದಲ್ಲಿ ಮಹಾದೇವನು ನೋಡಲು ಯೋಗ್ಯವಾದ (ದರ್ಶನೀಯವಾದ) ತನ್ನ ಆ ಸಚ್ಚಿದಾನಂದ ಸ್ವರೂಪವನ್ನು ಅವಳಿಗೆ ತೋರ್ಪಡಿಸಿದನು. ಅಲುಗುತ್ತಿರುವ ಜಡೆಗಳಲ್ಲಿ ಕಾಣುವ ಚಂದ್ರನು, ನಾಟ್ಯವಾಡುವಾಗ ಅಲುಗಾಡಿ ಕೆಳಗೆ ಬೀಳುತ್ತಾ ಅಂತರಿಕ್ಷದಲ್ಲಿ ಝುಲಝುಲ ಎಂದು ಧ್ವನಿಮಾಡುತ್ತಿರುವನು. ಮಹಾದೇವನು ಬ್ರಹ್ಮಾಂಡಮಂಡಲವನ್ನೇ ಕವಚವನ್ನಾಗಿ ಮಾಡಿಕೊಂಡು ತನ್ನ ದಂಡದಂತಿರುವ ಭುಜಗಳಿಂದ ಬ್ರಹ್ಮಾಂಡವನ್ನು ಚಂಚಲಗೊಳಿಸುತ್ತಿರುವನು. ಕೈಯಲ್ಲಿ ಡಮರುಗವನ್ನು ಹಿಡಿದು ಬಾರಿಸುತ್ತಾ, ತನ್ನ ಆ ಡಮರುಗಧ್ವನಿಯ ಉಲ್ಲಾಸನಾದಗಳಿಂದ ನಟಸಾರ್ವಭೌಮನಾದ ಶಂಕರನು ದೇವತೆಗಳನ್ನೆಲ್ಲಾ ಪಾವನಗೊಳಿಸುತ್ತಿರುವನು. ಹೀಗೆ ಕೊಂಚ ಬಾಗಿದ ಬಲಗಾಲುಳ್ಳವನಾಗಿ ಉಲ್ಲಾಸಯುಕ್ತವಾದ ತನ್ನ ದಿವ್ಯನಾಟ್ಯಸ್ವರೂಪವನ್ನು ಆ ಪೂತವತಿಗೆ ತೋರಿಸಿದನು. ॥೬೨-೬೩-೬೪॥

ಸಾ ತತ್ರ ದೇವದೇವಸ್ಯ ಪಶ್ಯಂತೀ ತಾಂಡವಂ ಮುಹುಃ ।
ವಸತ್ಯದ್ಯಾಪಿ ತತ್ಪಾರ್ಶ್ವೇ ಪರಮಾನಂದಮಂಥರಾ ॥೬೫॥

ಅಹೋ ಸರ್ವಸ್ಯ ಜಗತಃ ಸ್ವಯಂ ಜನಯಿತಾಪಿ ವಾ ।
ಅಂಬೇತ್ಯಾದಿ ಭವಸ್ತಸ್ಯಾ ಮಹಿಮಾ ಕೇನ ವರ್ಣ್ಯತೇ ॥೬೬॥

ತದಾಪ್ರಭೃತಿ ದೇವಸ್ಯ ತತ್ರಾಧಿವಸತೋ ವನೇ ।
ಅಂಬಾತಾತೇಶ ಇತ್ಯಾಖ್ಯಾ ವಿಖ್ಯಾತಾ ಧರಣೀತಲೇ ॥೬೭॥

ಸಾ ಶೈಲಕನ್ಯೇವ ಸದೈವ ಶಂಭೋ
ರಾನಂದನೃತ್ತಂ ಪ್ರವಿಲೋಕಯಂತೀ ।
ಪ್ರಮೋದಭೂಮಪ್ರಥಮಾನಚೇತಾ-
ಶ್ಚಕಾಸ್ತಿ ಮುಕ್ತೇರಧಿದೇವತೈವ ॥೬೮॥

ಯೇ ಪೂತವತ್ಯಾಶ್ಚರಿತಂ ಪಠಂತಿ
ಶೃಣ್ವಂತಿ ವಾ ಶಾಂಭವಮೂರ್ತಿಭುಕ್ತೇಃ ।

---

ಆ ಪೂತವತಿಯು ದೇವದೇವನಾದ ಶಂಕರನ ತಾಂಡವನಾಟ್ಯವನ್ನು ಬಾರಿ ಬಾರಿಗೂ ನೋಡುತ್ತಾ, ಈಗಲೂ ಪರಮಾನಂದಭರಿತಳಾಗಿ ಆ ಮಹಾದೇವನ ಪಕ್ಕದಲ್ಲಿಯೇ ವಾಸಮಾಡುತ್ತಿರುವಳು. ಆಹಾ! ಸಕಲ ಪ್ರಪಂಚಗಳಿಗೂ ತಾನೇ ಸೃಷ್ಟಿಕರ್ತನಾದರೂ ಆ ಮಹಾದೇವನನು 'ಅಂಬ' ಮುಂತಾಗಿ ಸಂಬೋಧಿಸಿದ ವ್ಯಕ್ತಿಯ ಪ್ರಭಾವವನ್ನು ಯಾರಿಂದ ತಾನೇ ವರ್ಣಿಸಲು ಸಾಧ್ಯವಾದೀತು. ॥೬೫-೬೬॥

ಅಲ್ಲಿಂದ ಮುಂದೆ ಅದೇ ವಟಾರಣ್ಯದಲ್ಲಿ ವಾಸಮಾಡುವ ಮಹಾದೇವನಿಗೆ 'ಅಂಬಾತಾತೇಶ' ಎಂಬ ಹೆಸರು ಭೂಮಂಡಲದಲ್ಲಿ ಪ್ರಖ್ಯಾತವಾಯಿತು. ॥೬೭॥

ಆ ಪೂತವತಿಯು ಪಾರ್ವತಿಯಂತೆ ಯಾವಾಗಲೂ ಆ ಶಂಕರನ ಆನಂದ ನಾಟ್ಯವನ್ನು ನೋಡುತ್ತಾ, ಅತ್ಯಾನಂದಭರಿತವಾದ ಮನವುಳ್ಳವಳಾಗಿ, ಮೋಕ್ಷಾಧಿದೇವತೆಯೋ ಏನೋ ಎಂಬುವಂತೆ ಪ್ರಕಾಶಿಸುತ್ತಿರುವಳು. ॥೬೮॥

ಶಂಭುವಿನ ನಾಟ್ಯಮೂರ್ತಿಯ ಭೋಗವನ್ನು ಸಾಕ್ಷಾದನುಭವಿಸಿದ ಈ ಪೂತವತಿಯ ಕಥೆಯನ್ನು ಓದುವವರೂ ಅಥವಾ ಕೇಳುವವರೂ ಲೋಕದಲ್ಲಿ

ತ್ರೈರ್ಭುಕ್ತ್ವಮಾನಂದಭೃತಾಂ ಸಮೇತ್ಯ
ಪ್ರಯಾಂತಿ ಶಂಭೋಃ ಪದಮಂತ್ಯಕಾಲೇ ॥೬೯॥

ಇತಿ ಶ್ರೀಶಿವರಹಸ್ಯೇ ಸದಾಶಿವಾಖ್ಯೇ ನವಮಾಂಶೇ ಪೂತವತೀಚರಿತ್ರ ವರ್ಣನಂ ನಾಮ ಸಪ್ತಚತ್ವಾರಿಂಶೋಽಧ್ಯಾಯಃ

---

ಸಕಲ ಆನಂದಗಳನ್ನೂ ಅನುಭವಿಸಿ, ಕೊನೆಗಾಲದಲ್ಲಿ ಶ್ರೀ ಶಂಕರನ ಸ್ಥಾನವನ್ನು ಪಡೆಯುತ್ತಾರೆಂದು ಕುಮಾರಸ್ವಾಮಿಯು ಜೈಗೀಷವ್ಯನಿಗೆ ನುಡಿದನು. ॥೬೯॥

ಇಲ್ಲಿಗೆ ಶ್ರೀಶಿವರಹಸ್ಯದಲ್ಲಿ ಸದಾಶಿವಸಂಜ್ಞಕವಾದ ಒಂಬತ್ತನೆಯ ಅಂಶದಲ್ಲಿ ಪೂತವತೀಚರಿತ್ರೆಯ ವರ್ಣನೆಯ ನಲವತ್ತೇಳನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಸದಾಶಿವಾಖ್ಯೇ

## ನವಮಾಂಶೇ

## ಅಷ್ಟಾಚತ್ವಾರಿಂಶೋಽಧ್ಯಾಯಃ

॥ ಶ್ರೀ ಸ್ಕಂದ ಉವಾಚ ॥

ತದ್ಭೂತಿನಾಮ್ನೋ ಭಕ್ತಸ್ಯ ಭೂತಿಭೂಷಸ್ಯ ಸತ್ತಮ ।
ಚರಿತ್ರಂ ತೇ ಪವಿತ್ರಂ ಚ ತ್ರಿನೇತ್ರಪ್ರೇಮಪಾತ್ರಿಣಃ ॥೧॥

ವಕ್ಷ್ಯಾಮಿ ಪಾಪನಾಶಾಯ ಪಾವನಾಯ ಚ ಭೂತಯೇ ।
ಶಶಾಂಕಪುರವಾಸಾಸೀಚ್ಚೋಲೇ ಕಶ್ಚಿದ್ದ್ವಿಜಾಗ್ರಣೀಃ ॥೨॥

ತದ್ಭೂತಿರಿತಿ ವಿಖ್ಯಾತಃ ಸದಾ ಶಂಕರಕಿಂಕರಃ ।
ಸಂಶ್ರುತ್ವಾ ವಾಕ್ಪತೇರ್ವೃತ್ತಂ ತಸ್ಯ ನಾಮ್ನಾಂಕಿತಾಃ ಪ್ರಪಾಃ ॥೩॥

---

## ನಲವತ್ತೆಂಟನೆಯ ಅಧ್ಯಾಯ

ಅಯ್ಯ ಸಾಧುವರ್ಯನೇ, ವಿಭೂತ್ಯಲಂಕೃತನಾಗಿ ಆ ತ್ರಿಲೋಚನನ ಪ್ರೇಮಕ್ಕೆ ಪಾತ್ರನಾದ ತದ್ಭೂತಿಯೆಂಬ ಹೆಸರಿನ ಶೈವನ ಪವಿತ್ರವಾದ ಕಥೆಯನ್ನು ಹೇಳುವೆನು ಕೇಳು ; ಈ ಕಥೆಯು ಸಕಲ ಪಾಪಗಳನ್ನೂ ನಾಶಮಾಡಿ ಪಾವನತೆಯನ್ನುಂಟು ಮಾಡುವುದಲ್ಲದೇ ಐಶ್ವರ್ಯಪ್ರಾಪ್ತಿಗೂ ಸಾಧಕವಾಗಿರುವುದು. ಚೋಲದೇಶದಲ್ಲಿ ಶಶಾಂಕಪುರವೆಂಬ ಒಂದು ಪಟ್ಟಣದಲ್ಲಿ ಒಬ್ಬ ಬ್ರಾಹ್ಮಣಶ್ರೇಷ್ಠನು ವಾಸವಾಗಿದ್ದನು. ॥೧-೨॥

ಯಾವಾಗಲೂ ಶಂಕರಧ್ಯಾನಮಗ್ನನಾದ ಆ ಬ್ರಾಹ್ಮಣೋತ್ತಮನು 'ತದ್ಭೂತಿ' ಯೆಂಬ ಹೆಸರಿನಿಂದ ಪ್ರಖ್ಯಾತನಾಗಿದ್ದನು. ಅವನು ವಾಗೀಶನೆಂಬ ಶಿವಕಿಂಕರನ ಚರಿತ್ರೆಯನ್ನು ಕೇಳಿ, ಅವನ ಹೆಸರಿನಲ್ಲಿಯೇ ಅನೇಕ ಅರವಟ್ಟಿಗೆಗಳನ್ನಿಡಿಸಿ

ಅನ್ವತಿಷ್ಠತ್ಪ್ರಪಾಧರ್ಮಂ ಸ ದ್ವಿಜೋ ವಾಕ್ಪತೇಸ್ತದಾ ।
ಕದಾಚಿದ್ವಾಕ್ಪತಿಸ್ತತ್ರ ಶಿವಧಾಮಾನಿ ಪರ್ಯಟನ್ ॥೪॥

ತತ್ಪ್ರಪಾಂ ವೀಕ್ಷ್ಯ ಹೃಷ್ಟಾತ್ಮಾ ಮನ್ನಾಮ್ನಾ ಕೇನ ಕಾರಿತಾ ।
ಇತ್ಯಪ್ರಾಕ್ಷೀತ್ಸಮೀಪಸ್ಥಾಂ ತೇ ಚ ವಾಕ್ಪತಿಮಬ್ರುವನ್ ॥೫॥

॥ ಪರಿಚರಾ ಊಚುಃ ॥

ಆದಿತಾಪಸಮೂರ್ಧನ್ಯ ಗಣಪ ಶ್ರೂಯತಾಮಿದಂ ।
ತದ್ಭೂತಿನಾಮ್ನಾ ವಿಪ್ರೇಣ ಶಶಾಂಕಪುರವಾಸಿನಾ ॥೬॥

ವಾಗೀಶಪ್ರೇಮಭಕ್ತೇನ ನಾಮೇದಂ ಲಿಖಿತಂ ವಿಭೋ ।
ವಾಪೀಕೂಪತಟಾಕಾನಿ ಕ್ಷೇತ್ರಾರಾಮಗೃಹಾಣಿ ಚ ॥೭॥

ಪ್ರಪೇಯಂ ಧರ್ಮಶಾಲಾಶ್ಚ ಸರ್ವಂ ವಾಗೀಶನಾಮತಃ ।
ಇತಿ ಶ್ರುತ್ವಾ ವಚಸ್ತೇಷಾಂ ತಾನಪೃಚ್ಛತ್ಸವಾಕ್ಪತಿಃ ॥೮॥

---

ಶಿವಾರ್ಪಣಬುದ್ಧಿಯಿಂದ ಅರವಟ್ಟಿಗೆಯ ಧರ್ಮವನ್ನು ನಡೆಸಿಕೊಂಡು ಬರುತ್ತಿದ್ದನು. ಹೀಗೆ ನಡೆಯುತ್ತಿರಲು ಒಂದು ಸಲ ಆ ವಾಗೀಶನು ಶಿವಕ್ಷೇತ್ರಗಳಲ್ಲಿ ಸಂಚರಿಸುತ್ತಾ ಅಕಸ್ಮಾತ್ತಾಗಿ ಅಲ್ಲಿಗೆ ಬಂದನು. ॥೩-೪॥

ಆಗ ಅಲ್ಲಿದ್ದ ಅರವಟ್ಟಿಗೆಯನ್ನು ಕಂಡು, ಸಂತುಷ್ಟಾಂತರಂಗನಾಗಿ ಈ ದೊಡ್ಡ ಅರವಟ್ಟಿಗೆಯನ್ನು ನನ್ನ ಹೆಸರಿನಿಂದ ಮಾಡಿಸಿದವರು ಯಾರೆಂದು ಆ ವಾಗೀಶನು ಸಮೀಪದಲ್ಲಿದ್ದವರನ್ನು ಕೇಳಲು, ಅಲ್ಲಿದ್ದವರು ಆ ವಾಕ್ಪತಿಗೆ ಇಂತೆಂದರು. ॥೫॥

ಆದಿತಾಪಸರಲ್ಲಿ ಶ್ರೇಷ್ಠನಾದ ಗಣಪನೇ, ಈ ನಮ್ಮ ಮಾತನ್ನು ಲಾಲಿಸು ; ಶಶಾಂಕಪುರದಲ್ಲಿ ವಾಸವಾಗಿರುವ ತದ್ಭೂತಿಯೆಂಬ ಬ್ರಾಹ್ಮಣನು, ವಾಗೀಶನಲ್ಲಿರುವ ಪ್ರೇಮಭಕ್ತಿಯಿಂದ ಈ ಹೆಸರನ್ನಿಡಿಸಿ ಬಾವಿ, ಕೂಪ (ಇಳಿಯುವ ಬಾವಿ) ಕೆರೆ, ಕ್ಷೇತ್ರಗಳು, ಉದ್ಯಾನ, ಮನೆ, ಈ ಅರವಟ್ಟಿಗೆ ಮತ್ತು ಇನ್ನೂ ಅನೇಕ ಧರ್ಮಶಾಲೆಗಳನ್ನು ಆ ವಾಗೀಶನ ಹೆಸರಿನಿಂದಲೇ ರಚಿಸಿರುವನು. ಎಂದು ನುಡಿದ ಪರಿಚಾರಕರ ಮಾತುಗಳನ್ನು ಕೇಳಿ ಆ ವಾಗೀಶನಿಂತೆಂದನು. ॥೬-೭-೮॥

॥ ವಾಕ್ಪತಿರುವಾಚ ॥

ಕ್ವ ವರ್ತತೇ ಸ ತದ್ಭೂತಿರಿತ್ಯಥಾಪುಚ್ಛ ತೇ ಪುನಃ ।
ವೇಲಾಮತೀತ್ಯ ಮಾತ್ರಾಂ ಸ ಸ್ಥಿತ್ವಾ ಯಾತೋ ನಿಜಾಲಯಂ ॥೯॥

ತತೋ ವಾಗ್ಮೀ ಸ ತಿಗ್ಮಾಂಶುಕಿರಣೈಸ್ತಾಪಿತೋ ಯಯೌ ।
ಸ ಭೂತಿಮದ್ಗೃಹಂ ಪ್ರಾಹ ತದ್ಭೂತೇರ್ಗೃಹಮಾಸದತ್ ॥೧೦॥

ಶಿವಭಕ್ತಂ ಚ ತಂಪ್ರಾಪ್ತಂ ದೃಷ್ಟ್ವಾ ಚಾಪ್ತತಮಂ ದ್ವಿಜಃ ।
ನಿಕೇತನಾತ್ಸ ನಿರ್ಗತ್ಯ ಪ್ರಣಮ್ಯ ವಿನಯಾನ್ವಿತಃ ॥೧೧॥

ನನಾಮ ವಾಚಾಂ ನಾಥೋಽಸೌ ಮನ್ಮಥಾರಾತಿಭಾವಿತಃ ।
ಭಾಸುರಾಭಾಸುರಾಚಾರಸ್ತಂ ಪ್ರಾಣಂಸೀಚ್ಚ ಭಾವಿತಃ ॥೧೨॥

ಅನ್ಯೋನ್ಯಂ ಪ್ರವಯೋಕ್ತ್ಯಾ ತೌ ಪೂರ್ವಪುಣ್ಯಬಲೋಕ್ತಿಭಿಃ ॥೧೩॥

॥ ದ್ವಿಜ ಉವಾಚ ॥

ಪಚೇಲಿತತಪೋಲಬ್ಧಮಲಭ್ಯಂ ತವ ದರ್ಶನಂ ।
ಕುತಃ ಸಮಾಗತಂ ದೇಶಾದ್ಬ್ರೂಹಿ ಶಾಂಕರಸತ್ತಮ ॥೧೪॥

---

ಓ ಪರಿಚಾರಕರೇ, ಆ ನಿಮ್ಮ ತದ್ಭೂತಿಯೆಂಬುವನೆಲ್ಲಿರುವನೆಂದು ವಾಗೀಶನು ಕೇಳಲು, ಆಗ ಅವರು ಇಲ್ಲಿಯವರೆಗೂ ತಾಯಿಯೊಡನೆ ಇಲ್ಲಿಯೇ ಕಾಲಕಳೆದು, ಈಗ ಕಾಲ ಮೀರಿತೆಂದು ತನ್ನ ಮನೆಗೆ ಹೋಗಿದ್ದಾನೆಂದು ಹೇಳಲು, ಆಗ ಆ ವಾಗೀಶನು ಆ ಚಂಡಕಿರಣನ ಬಿಸಿಲಿನಲ್ಲಿ ಬಳಲಿ ಈಶ್ವರಭಕ್ತನೆನಿಸಿದ್ದ ಆ ತದ್ಭೂತಿಯ ಮನೆಗೆ ಹೋಗಿ ಸೇರಿದನು. ॥೯-೧೦॥

ಅಕಸ್ಮಾತ್ತಾಗಿ ಆಪ್ತನಾದ ಶೈವಬ್ರಾಹ್ಮಣನು ಬಂದದ್ದನ್ನು ನೋಡಿ, ಆ ತದ್ಭೂತಿಯು ಮನೆಯಿಂದ ಹೊರಟು, ವಿನಯದಿಂದ ಅವನನ್ನು ಇದಿರ್ಗೊಂಡು ನಮಸ್ಕರಿಸಿ ಈತನೇ ಮನ್ಮಥಾಂತಕನಾದ ಶಿವನ ಭಕ್ತನಾದ ವಾಗೀಶನು ; ಎಂದರಿತನು. ಈತನ ಪ್ರಕಾಶಮಾನತೇಜಸ್ಸನ್ನು ಕಂಡು ಈತನೇ ತದ್ಭೂತಿಯೆಂದರಿತು ತಾನೂ ಭಕ್ತಿಭರಿತನಾಗಿ ಅವನಿಗೆ ನಮಸ್ಕಾರಮಾಡಿದನು. ಅನಂತರ ಇವರಿಬ್ಬರೂ ಹಿಂದಿನ ಜನ್ಮದ ಪುಣ್ಯಬಲಯುಕ್ತವಾದ ಮಾತುಗಳಿಂದ ಅನ್ಯೋನ್ಯವಾಗಿ ಪ್ರೇಮಪೂರ್ವಕವಾಗಿ ಕುಶಲಪ್ರಶ್ನೆಗೈದರು. ॥೧೧-೧೨.೧೩॥

ಅಯ್ಯ ಶೈವಪುಂಗವನೇ, ಪರಿಪಕ್ವವಾದ ತಪಸ್ಸಿನಿಂದ ಮಾತ್ರ ನಿನ್ನ

ಇತ್ಯುಕ್ತಸ್ತೇನ ವಿಪ್ರೇಣ ತಂ ಪ್ರಹೃಷ್ಟಂ ಪ್ರಾಹ ವಾಕ್ಪತಿಃ ॥೧೫॥

॥ ವಾಕ್ಪತಿರುವಾಚ ॥

ತ್ವಂ ಚ ಪ್ರಪಾಕರೋ ನಿತ್ಯಮೂಷರಕ್ಷಾರಸಂಯುತೇ ।
ಸ್ವಯಂ ಶ್ರಮಾರ್ತಃ ಕಸ್ಯೇದಂ ನಾಮ ಸಂಲಿಖ್ಯತೇ ವದ ॥೧೬॥

ಇತಿ ಬ್ರುವಾಣಂ ವಾಗೀಶಂ ತದ್ಭೂತಿರ್ಭೂತಿಭೂಷಿತಃ ।
ಕೃತಾಂಜಲಿಪುಟೋ ಭೂತ್ವಾ ಪ್ರಾಹ ಸಂಹರ್ಷಿತಾನನಃ ॥೧೭॥

॥ ವಿಪ್ರ ಉವಾಚ ॥

ಅಹಂ ನ ಸಾಧು ತ್ವತ್ಪ್ರೋಕ್ತಂ ಯಚ್ಛ್ರುತ್ವಾ ವ್ಯಾಕುಲೋಽಸ್ಮ್ಯಹಂ ।
ದೃಷ್ಟಂ ಮೃಡಾಬ್ಜಪಾದೋತ್ಥಮರಂದಾನಂದಮೇದುರಃ ॥೧೮॥

ಜೈನಾನಾಜೌ ವಿನಿರ್ಜಿತ್ಯ ಕೃತ್ವಾ ಭಸ್ಮಪ್ರಕಾಶನಂ ।
ತಸ್ಯ ವಾಣೀಪತೇಸ್ತುಲ್ಯಪ್ರಭಾವಸ್ಯೈವ ವಾಕ್ಪತೇಃ ॥೧೯॥

---

ದರ್ಶನವು ನಮಗೆ ದೊರೆಯುಬಲ್ಲದು. ಸ್ವಾಮಿ, ತಾವು ಎಲ್ಲಿಂದ ಬರೋಣವಾಯಿತು, ಆ ದೇಶವನ್ನು ತಿಳಿಸೋಣವಾಗಲಿ" ಎಂದು ತದ್ಭೂತಿಯೆಂಬ ಬ್ರಾಹ್ಮಣನು ಕೇಳಲು ಆಗ ವಾಗೀಶನು ವಿನೀತನಾಗಿರುವ ಅವನನ್ನು ಕುರಿತು ಇಂತೆಂದನು. ||೧೪-೧೫||

ಮರುಭೂಮಿಯೋ ಮುಂತಾದ ಉಪ್ಪಿನಿಂದ ಯುಕ್ತವಾದ ಭೂಭಾಗಗಳಲ್ಲಿ ನೀನು ಶ್ರಮಪಟ್ಟು ಅರವಟ್ಟಿಗೆಗಳನ್ನಿಡಿಸಿ, ಏತಕ್ಕಾಗಿ ಬೇರೆಯವರ ಹೆಸರನ್ನಿಡಿಸುತ್ತಿರುವೆ? ಹೇಳೆಂದು ವಾಗೀಶನು ಕೇಳಲು, ಆಗ ಭಸ್ಮಾಲಂಕೃತನಾದ ಆ ತದ್ಭೂತಿಯು ಕೈಮುಗಿದುಕೊಂಡು ಸಂತುಷ್ಟವದನನಾಗಿ ಇಂತೆಂದನು. ||೧೬-೧೭||

ಓ ಮಹಾತ್ಮನೇ, ನೀನು ಹೇಳುವ ಮಾತುಗಳನ್ನು ಕೇಳಿ ನಾನು ವ್ಯಾಕುಲಪಡುವೆನು. ನಾನಾದರೋ ಆ ಮಹಾದೇವನ ಪಾದಕಮಲಮಕರಂದಪಾನತೃಪ್ತನಾಗಿ ವಾಗ್ವಾದದಲ್ಲಿ ಜೈನರನ್ನೆಲ್ಲಾ ಗೆದ್ದು ಭಸ್ಮಧಾರಣೆಯವಿಧಿ ಮತ್ತು ಅದರ ಮಹಿಮೆಯನ್ನು ಪ್ರಕಾಶಪಡಿಸಿ ಆ ಬ್ರಹ್ಮನ ಸಮಾನನೇ ಆದ ವಾಗೀಶನ ಹೆಸರುಗಳನ್ನು ನನ್ನ ಈ ಕಾರ್ಯಗಳಲ್ಲೆಲ್ಲಾ ಮುಖನಾಮವಾಗಿ ಬರೆಯುತ್ತಿರುವೆನು. ಓ ಭಕ್ತನೆ, ಇದರಲ್ಲಿ

ಅಲಿಖಾಮ್ಯಹಮೇವಾದ್ಯ ನಾಮಲೇಶೇಷು ವಿಸ್ಮಯಂ ।
ಭಕ್ತಸ್ಯ ವಾ ಮಹೇಶಸ್ಯ ನಾಮ್ನೋರ್ನಾಸ್ತಿ ಸದಾಂತರಂ ॥೨೦॥

ಕ್ವಾಹಂ ಮಹೇಶಃ ಕಿಂ ವಾದ್ಯ ಶಂಭುಭಕ್ತಪದಾಶ್ರಯಃ ।
ಭಕ್ತಭೃತ್ಯೋಽಸ್ಮ್ಯಹಂ ಶಂಭೋಃ ನಾಸ್ತಿ ಮೇಽನ್ಯಚ್ಚ ತಾಪಸ ॥೨೧॥

ಇತ್ಥಂ ತದ್ಭೂತಿವಚಸಾ ತುಷ್ಟ ಏವಾಹ ವಾಕ್ಪತಿಃ ॥೨೨॥

॥ ವಾಗೀಶ ಉವಾಚ ॥

ಧನ್ಯಸ್ತ್ವಂ ಸರ್ವಮಾನ್ಯೋಽಸಿ ಭಾಸುರೋ ಭೂಸುರೋ ಯತಃ ।
ತ್ವತ್ಪ್ರೇಮಭಾವಂ ಭಾವೇಷು ದ್ರಷ್ಟುಮುತ್ಕಂಠಿತಂ ಮನಃ ॥೨೩॥

ಸಮಾಗತೋಽಗಜಾಜಾನಿಂ ಪ್ರಣಮ್ಯ ಶಿವಧಾಮಸು ।
ವಾಕ್ಪತಿಶ್ಚಾಹಮೇವಾಸ್ಮೀತ್ಯುಕ್ತೋಽಪಿ ಚ ಸ ಭೂಸುರಃ ॥೨೪॥

ಜಹರ್ಷ ನಿತರಾಂ ದೃಷ್ಟ್ವಾ ಪ್ರಾಣಂಸೀತ್ಸ್ವಸುತಾನ್ವಿತಃ ।
ಪ್ರಾಹ ಪ್ರೇಮಭರಾಭ್ರಾಂತಮನುವಿಶ್ರಾಂತಾಶ್ರುಲೋಚನಃ ॥೨೫॥

---

ಆಶ್ಚರ್ಯ ಸಂಗತಿಯೇನಿದೆ, ಮಹೇಶ ಮತ್ತು ಅವನ ಭಕ್ತರಿಗೆ ಹೆಸರಿನಲ್ಲಿ ಯಾವಾಗಲೂ ವ್ಯತ್ಯಾಸವೇ ಇಲ್ಲವಲ್ಲಾ! ॥೧೯-೨೦॥

ಅಯ್ಯ ತಪಸ್ವಿಯೇ, ನಾನೆಲ್ಲಿ? ಆ ಮಹೇಶ್ವರನೆಲ್ಲಿ? ಆ ಶಂಕರನ ಭಕ್ತರ ಪಾದಸೇವಕನಾದ ನಾನು ಯಾವಾಗಲೂ ಶೈವನ ಕಿಂಕರನೇ ಸರಿ. ಶಂಭುವೇ ಸರ್ವವು. ಇದಕ್ಕಿಂತ ಬೇರೆಯ ಭಾವನೆಯೇ ನನ್ನಲ್ಲಿಲ್ಲವೆಂದು ತದ್ಭೂತಿಯು ನುಡಿದ ವಾಕ್ಯಗಳನ್ನು ಕೇಳಿ, ಸಂತುಷ್ಟನಾಗಿ ಆ ವಾಗೀಶನಿಂತೆಂದನು. ॥೨೧-೨೨॥

ಅಯ್ಯ! ನೀನೇ ಧನ್ಯನು, ಎಲ್ಲರಿಂದಲೂ ನೀನು ಮಾನ್ಯನಾಗಿರುವೆ. ತೇಜಸ್ವಿಯಾದ ಬ್ರಾಹ್ಮಣನಾಗಿರುವುದರಿಂದ ಶೈವರಲ್ಲಿ ನಿನಗಿರುವ ಪ್ರೇಮಭಾವವನ್ನು ನೋಡಲು ನನ್ನ ಮನಸ್ಸು ಕುತೂಹಲಹೊಂದಿತು. ಆದ್ದರಿಂದ ಶಿವಕ್ಷೇತ್ರಗಳಲ್ಲಿ ದೇವನಿಗೆ ನಮಸ್ಕಾರಮಾಡುತ್ತಾ ಇಲ್ಲಿಗೆ ಬಂದಿರುವೆನು. ನಾನೇ ವಾಗೀಶನೆಂಬ ಬ್ರಾಹ್ಮಣನೆಂದು ತಿಳಿ. ಎಂಬುದಾಗಿ ವಾಗೀಶನು ನುಡಿದನು. ॥೨೩-೨೪॥

ಆಗ ಆ ತದ್ಭೂತಿಯು ಭಕ್ತಿಯಿಂದ ಆ ವಾಗೀಶನನ್ನು ನೋಡಿ ಸಂತೋಷ

॥ ದ್ವಿಜ ಉವಾಚ ॥

ಧನ್ಯೋಽಸ್ಮಿ ನಿತರಾಂ ತಾತ ಮಾತಾ ತ್ವಂ ಶಾಂಭವೋತ್ತಮಃ ।
ಯಸ್ಮೇ ಗೃಹಂ ಸಮಾಯಾತಸ್ತೃಪ್ತಾ ಮೇ ಪ್ರಪಿತಾಮಹಾಃ ॥೨೬॥

ಯತ್ರ ಶಾಂಭವಪಾದಾಬ್ಜರಜೋಲೇಶಃ ಪತಿಷ್ಯತಿ ।
ಯತ್ರ ತಿಷ್ಠತಿ ಯೋಗೀಂದ್ರಃ ಶಾಂಭವಃ ಶಿವಭಾವನಃ ॥೨೭॥

ತತ್ರೈವ ಶಂಭೋಃ ಕ್ಷೇತ್ರಾಣಾಮುತ್ತಮಂ ಪಾಪತಾಪಹಂ ।
ಯಸ್ಮಿನ್ಗೃಹೇ ಶಾಂಗಲಿಂಗಂ ಶಾಂಭವೋ ವಾಧಿತಿಷ್ಠತಿ ॥೨೮॥

ತತ್ರ ತಿಷ್ಠತಿ ಗೌರೀಶಃ ಶಿಪಿವಿಷ್ಟೋಽತಿಹರ್ಷಿತಃ ।
ಧನ್ಯಸ್ತ್ವತ್ಪೂತಪಾದಾಬ್ಜರೇಣೌ ರೇಣುತರೋಽಪ್ಯಣು ॥೨೯॥

---

ಭರಿತನಾಗಿ ತನ್ನ ಮಗನೊಡನೆ ಪ್ರೇಮದಿಂದ ತುಂಬಿದ ಕಣ್ಣೀರನ್ನು ಸುರಿಸುವ ಕಣ್ಣುಗಳುಳ್ಳವನಾಗಿ ನಮಸ್ಕಾರಮಾಡಿ, ಇಂತೆಂದನು. ||೨೫||

ತಂದೆಯೇ, ಶೈವವರ್ಯನಾದ ನೀನೇ ತಂದೆಯೂ, ತಾಯಿಯೂ ಸರ್ವವೂ ಆಗಿರುವೆ; ಸ್ವಾಮಿ, ನಿನ್ನ ಆಗಮನದಿಂದ ನಾನು ಅತ್ಯಂತ ಧನ್ಯನಾದೆನು. ನೀನು ನನ್ನ ಮನೆಗೆ ಬಂದುದರಿಂದ ನನ್ನ ಅಜ್ಜಂದಿರು ತೃಪ್ತರಾದರು. ಶೈವವರ್ಯನ ಪಾದಕಮಲಧೂಳಿಯ ಲೇಶಭಾಗವು ಎಲ್ಲಿ ಬೀಳುವುದೋ, ಎಲ್ಲಿ ಶಿವಭಕ್ತಿಪೂರ್ಣ ನಾದ ಶಾಂಭವಯೋಗಿವರ್ಯನಿರುವನೋ, ಅಲ್ಲಿಯೇ ಸಕಲ ಪಾಪ ಮತ್ತು ದುಃಖ ಗಳನ್ನೂ ನಾಶಮಾಡುವ ಶಂಭುವಿನ ಉತ್ತಮವಾದ ಕ್ಷೇತ್ರವು ಸನ್ನಿಹಿತವಾಗಿರುವುದು. ||೨೬-೨೭||

ಯಾರ ಮನೆಯಲ್ಲಿ ಶಿವಲಿಂಗ ಅಥವಾ ಶೈವನಿರುವನೋ ಅಲ್ಲಿ ಕಿರಣಸ್ವರೂಪ ನಾದ ಆ ಗೌರೀರಮಣನು ಪೂರ್ಣ ಸಂತುಷ್ಟನಾಗಿ ನೆಲಸಿರುವನು. ನಿನ್ನ ಪಾವನವಾದ ಪಾದಕಮಲ ರೇಣುವಿನ ರೇಣುವಿನಲ್ಲಿ ಅಣುರೂಪವಾದ ಪರಾಗವೂ ಸಹ ಧನ್ಯವೇ ಸರಿ; ಸ್ವಾಮಿ, ನನ್ನ ಅತ್ಯಲ್ಪವಾದ ತಪಸ್ಸಿನಿಂದಾಗಲೀ, ಮನಸ್ಸಿ ನಲ್ಲಾಗಲೀ ತಮ್ಮ ಆಗಮನವುಂಟಾಗುವುದೆಂದು ಯೋಚಿಸಿರಲಿಲ್ಲವೆಂದು ಹೇಳಿದನು. ||೨೮-೨೯||

ನಾಣೀಯಸಾ ನೋ ತಪಸಾ ಮನಸಾಽಪಿ ವಿಚಿಂತಿತಃ ।
ಸ ತಂ ಪ್ರವೇಶ್ಯೈಸನೇ ಚ ಉಪವೇಶ್ಯ ತದಾ ದ್ವಿಜಃ ॥೩೦॥

ಪ್ರಕ್ಷಾಲ್ಯ ವಿಧಿವತ್ಪಾದೌ ಪಾವನೈರ್ಜೀವನೈಸ್ತದಾ ।
ತತ್ಪಾದೋದಕಮಾಚಮ್ಯ ಮೂರ್ಧ್ನಿ ಸಂಪ್ರೋಕ್ಷ್ಯ ಚಾಗಹೃತ್ ॥೩೧॥

ಗಂಧಾಕ್ಷತಾಜ್ಯೈಃ ಸಂಪೂಜ್ಯ ಭೋಜನಾಯ ನ್ಯಮಂತ್ರಯತ್ ।
ಅತ್ರೈವ ಭೋಜ್ಯಂ ಭೋಕ್ತಾಸಿ ಪ್ರಾಜ್ಯಾಜ್ಯಾದ್ಯನ್ನಮುತ್ತಮಂ ॥೩೨॥

ಇತ್ಯಭ್ಯರ್ಥನಯಾ ತಸ್ಯ ತದ್ಭೂತೇರ್ಭಕ್ತಿಪೂತಯಾ ।
ವಶೀಕೃತಾತ್ಮಾ ವಾಗೀಶಸ್ತತ್ತಥೇತ್ಯಭ್ಯಮನ್ಯತ ॥೩೩॥

ತತೋಽಂತರ್ಗೃಹಮಾಸಾದ್ಯ ಸ್ವಪ್ರಿಯಾಂ ಪ್ರಾಹ ಭೂಸುರಃ ॥೩೪॥

॥ ದ್ವಿಜ ಉವಾಚ ॥

ಅಸ್ಮದ್ಭಾಗ್ಯವಶಾತ್ಪ್ರಾಪ್ತಃ ಶಾಂಭವಃ ಶಂಭುಭಾವನಃ ।
ಭುವನೇ ಚ ಸದಾ ಮಾನ್ಯೋ ನಾನ್ಯಸ್ತುಲ್ಯೋಽಸ್ಯ ಕಶ್ಚನ ॥೩೫॥

---

ಅನಂತರ ಆ ತದ್ಭೂತಿಯು ಆ ವಾಗೀಶನನ್ನು ಆಸನದ ಮೇಲೆ ಕೂರಿಸಿ ವಿಧಿ ಪ್ರಕಾರ ಪರಿಶುದ್ಧವಾದ ನೀರಿನ ಧಾರೆಯಿಂದ ಕಾಲುಗಳನ್ನು ತೊಳೆದು, ಪಾಪನಾಶಕ ವಾದ ಆ ಕಾಲುತೊಳೆದ ನೀರನ್ನು ತಾನು ಆಚಮನಮಾಡಿ, ತಲೆಯ ಮೇಲೆ ಪ್ರೋಕ್ಷಣೆಮಾಡಿಕೊಂಡು, ಗಂಧ, ಅಕ್ಷತೆ, ತುಪ್ಪ ಮುಂತಾದವುಗಳಿಂದ ಪೂಜೆ ಮಾಡಿ ಅನಂತರ ಭೋಜನಕ್ಕೆ ಆಹ್ವಾನಿಸಿದನು. ॥೩೦-೩೧॥

ಸ್ವಾಮಿ, ಈ ನನ್ನ ಮನೆಯಲ್ಲಿ ವಿಶೇಷವಾದ ತುಪ್ಪವೇ ಮೊದಲಾದ ವಸ್ತುಗಳಿಂದ ಕೂಡಿದ ಅನ್ನ, ಮತ್ತು ಭಕ್ಷ್ಯಭೋಜ್ಯಾದಿಗಳಿಂದ ಪೂರ್ಣವಾದ ಭೋಜನಕ್ಕೆ ಏಳಬೇಕೆಂದು ತದ್ಭೂತಿಯು ವಾಗೀಶನನ್ನು ಪ್ರಾರ್ಥಿಸಲು, ಅವನ ಪರಿಶುದ್ಧವಾದ ಭಕ್ತಿಯಿಂದ ಸೆಳೆಯಲ್ಪಟ್ಟ ಅಂತರಂಗವುಳ್ಳವನಾಗಿ ಹಾಗೆಯೇ ಆಗಲೆಂದು ಅವನು ಅನುಮತಿಸಿದನು. ಆಮೇಲೆ ಆ ತದ್ಭೂತಿಯು ಮನೆಯ ಒಳಗೆ ಹೋಗಿ ತನ್ನ ಹೆಂಡತಿಗೆ ಹೀಗೆ ಹೇಳಿದನು. ॥೩೨-೩೩-೩೪॥

ಪ್ರಿಯೆ, ನಮ್ಮ ಭಾಗ್ಯವಶದಿಂದ ಶಂಕರಪ್ರಿಯಭಕ್ತನಾದ ಈ ಶಾಂಭವನು ದೊರೆತಿರುವನು ; ಯಾವಾಗಲೂ ಇವನು ಪ್ರಪಂಚಕ್ಕೆಲ್ಲಾ ಮಾನ್ಯನೆಂದು ತಿಳಿ ; ಇವನಿಗೆ ಸಮನಾದ ಮತ್ತೊಬ್ಬ ಶೈವನೇ ಬೇರೆ ಇಲ್ಲವು. ಆ ಮಹಾದೇವನ

ದೇವೇಶದಯಯಾ ಯಾತೋ ವಾಗೀಶೋ ನೋ ಗೃಹಂ ಯತಃ ।
ಪಾಕಾದಿಷು ಕ್ರಿಯಾಶಕ್ತಿಂ ಕುರುಷ್ವೇತಿ ತದಾಽವದತ್ ॥೩೭॥

ಪಕ್ತ್ವಾ ಚಾನ್ನಾದಿಕಂ ಭಕ್ಷ್ಯಂ ಸ್ವಸುತಂ ಸಾಭ್ಯಭಾಷತ ॥೩೭॥

॥ ಮಾತಾ ಉವಾಚ ॥

ಉದ್ಯಾನಮೇತ್ಯಾನಯ ತ್ವಂ ವಿಶಾಲಂ ಕದಲೀದಲಂ ।
ಭೋಕ್ತುಸಕ್ತ್ವಾನ್ಯಥಾದಾತುಮತ್ತುಮನ್ನಾದಿಕಂ ಬಹಿಃ ॥೩೮॥

ಇತಿ ಮಾತ್ರಾ ನಿಯುಕ್ತಃ ಸನ್ಪಿತ್ರಾ ಸೋದ್ಯಾನಮೇತ್ಯಸಃ ।
ಕರಂ ಪ್ರಸಾರಯಾಮಾಸ ಕದಳೀದಳಕೃಂತನೇ ॥೩೯॥

ತಂ ಮಹಾನದಶತ್ಸರ್ಪೋ ದರ್ಪೋತ್ಥಿತಪಣಸ್ತದಾ ।
ಬಿಲೇಶಯಮಹಾಭೋಗವೇಷ್ಟಿತಂ ಸ್ವಕರಂ ತದಾ ॥೪೦॥

ವಿಧೂಯ ಸ ವಿಷಾರ್ತೋಽಪಿ ರಭಸಾ ಕದಲೀದಲಂ ।
ಸಮಾನೀಯ ದದೌ ಮಾತ್ರೇ ಧರಿತ್ರ್ಯಾಂ ಮೂರ್ಛಿತೋಽಪತತ್ ॥೪೧॥

---

ದಯೆಯಿಂದ ಈ ವಾಗೀಶನು ನಮ್ಮ ಮನೆಗೆ ಬಂದಿರುವನು. ಆದ್ದರಿಂದ ಅಡಿಗೆ ಮಾಡುವುದರಲ್ಲಿ ನಿನ್ನ ಚಾತುರ್ಯವನ್ನು ತೋರಿಸು ಎಂದು ಹೆಂಡತಿಗೆ ಹೇಳಿದನು. ಅವಳು ಅದರಂತೆಯೇ ದಿವ್ಯವಾದ ಅನ್ನ, ಭಕ್ಷ್ಯ, ಭೋಜ್ಯಾದಿಗಳನ್ನು ಮಾಡಿ, ಅನಂತರ ತನ್ನ ಮಗನನ್ನು ಕರೆದು ಅವನಿಗೆ ಇಂತೆಂದಳು. ॥೩೫-೩೬-೩೭॥

ಮಗನೇ, ಉದ್ಯಾನವನಕ್ಕೆ ಹೋಗಿ ನಾನಾರೀತಿಯ ಊಟದ ಪದಾರ್ಥಗಳನ್ನೂ ಅನ್ನವನ್ನೂ ಬಡಿಸಲು, ಮತ್ತು ಊಟಮಾಡಲೂ ಸಹ ಅನುಕೂಲವಾಗಿರುವಂತೆ ಅಗಲವಾದ ಬಾಳೆಯೆಲೆಯನ್ನು ಕೊಯ್ದು ತಾರೆಂದು ತಾಯಿಯು ಅಪ್ಪಣೆಮಾಡಲು, ಮಗನು ಹಾಗೆಯೇ ಆಗಲೆಂದು ಹೇಳಿ ತಾಯಿಯ ಅಪ್ಪಣೆಯಂತೆ ತಂದೆಯ ಅನುಮತಿ ಪಡೆದು ಉದ್ಯಾನಕ್ಕೆ ಹೋಗಿ ಅಲ್ಲಿ ಬಾಳೆಯ ಎಲೆಯನ್ನು ಕತ್ತರಿಸಲು ಕೈನೀಡಿದನು. ॥೩೮-೩೯॥

ಕೊಬ್ಬಿನಿಂದ ಹೆಡೆಯೆತ್ತಿದ್ದ ಒಂದು ದೊಡ್ಡ ಸರ್ಪವು ಆಗಲೇ ಆ ತದ್ಭೂತಿ ಕುಮಾರನನ್ನು ಕಚ್ಚಿತು. ಆಗ ಅವನು ದೊಡ್ಡ ಹೆಡೆಯುಳ್ಳ ಆ ಹಾವಿನಿಂದ ಕಚ್ಚ

ವಿಷವಿಹ್ವಲಮಾಲೋಕ್ಯ ಪಿತರೌ ವಿಹ್ವಲಂ ಸುತಂ ।
ವಿಷಾಲ್ಲೀಢಂ ವ್ಯಜಾನೀತಾಂ ವೀತಶೋಣಿತವಿಗ್ರಹಂ ॥೪೨॥

ಮೃತೇ ವಿನೀತತನಯೇ ಧೈರ್ಯಮಾಲಂಬ್ಯ ದಂಪತೀ ।
ವಾಕ್ಪತೇರ್ಭೋಜನೇ ಯುಕ್ತೌ ಸೋತ್ಸಾಹೌ ತೌ ಬಭೂವತುಃ ॥೪೩॥

ಅವಿಕಾರಾ ತದಾ ಭೋಕ್ತುಂ ಸಮಾಹ್ವಯತ ಶಾಂಭವಂ ।
ಸೋಽಪಿ ಚೋತ್ಥಾಯ ಧೌತಾಂಘ್ರಿರ್ಭೋಜನಾಸನಮೇತ್ಯ ಸಃ ॥೪೪॥

ಧೃತ್ವಾ ಭಸ್ಮ ಸ್ವಯಂ ತಾಭ್ಯಾಂ ಧಾರಿತುಂ ಭಸ್ಮ ತದ್ದದೌ ।
ಪ್ರಿಯಪುತ್ರಾಯ ವಾ ಭಸ್ಮ ದದತಂ ಸರ್ವಭಾಗ್ಯದಂ ॥೪೫॥

---

ಲ್ಪಟ್ಟ ತನ್ನ ಕೈಯನ್ನು ಕೊಡವುತ್ತಾ (ಒದರುತ್ತಾ) ವಿಷಪೀಡಿತನಾದರೂ ಬಾಳೆಯ ಎಲೆಯನ್ನು ತಂದು ತಾಯಿಗೆ ಕೊಟ್ಟನಂತರ ನೆಲದಮೇಲೆ ಮೂರ್ಛೆಹೊಂದಿ ಬಿದ್ದುಬಿಟ್ಟನು. ॥೪೦-೪೧॥

ಹಾವಿನ ವಿಷದಿಂದ ವ್ಯಾಪ್ತನಾಗಿ ಭಯವನ್ನುಂಟುಮಾಡುವಂತೆ ಬಿದ್ದಿರುವ ತಮ್ಮ ಮಗನನ್ನು ಕಂಡು, ಆ ತಂದೆತಾಯಿಗಳು ರಕ್ತವನ್ನು ಸುರಿಸುತ್ತಿರುವ ದೇಹದಿಂದ ಮಗನು ವಿಷಮೂರ್ಛಿತನಾಗಿರುವನೆಂದು ತಿಳಿದರು. ಆದರೆ ಕೊಂಚಹೊತ್ತಿನಲ್ಲಿ ವಿಷಪ್ರಭಾವದಿಂದ ವಿನಯಸಂಪನ್ನನಾದ ಮಗನು ಮರಣಹೊಂದಲು ಆ ದಂಪತಿಗಳು ಧೈರ್ಯವನ್ನವಲಂಬಿಸಿ ಆ ವಾಗೀಶನ ಭೋಜನಸಮಾರಂಭದಲ್ಲಿಯೇ ಉತ್ಸಾಹಭರಿತರಾದರು. ॥೪೨-೪೩॥

ಮಗನು ಸತ್ತಿದ್ದರೂ ಸ್ವಲ್ಪವೂ ದುಃಖಿಸದೇ ಯಾವ ವಿಕಾರಕ್ಕೂ ಒಳಗಾಗದೇ ಆ ದಂಪತಿಗಳು, ಶೈವವರ್ಯನಾದ ವಾಗೀಶನನ್ನು ಊಟಮಾಡಲು ಕರೆದರು. ಅವನೂ ಸಹ ಎದ್ದು ಕಾಲುತೊಳೆದುಕೊಂಡು ಊಟದ ಮಣೆಯಮೇಲೆ ಬಂದು ಕುಳಿತು, ತಾನು ಭಸ್ಮಧಾರಣೆಮಾಡಿಕೊಂಡು, ಆ ದಂಪತಿಗಳಿಗೂ ಧರಿಸಲು ಭಸ್ಮವನ್ನು ಕೊಟ್ಟನು. ಅಲ್ಲದೇ 'ನಿಮ್ಮ ಪ್ರಿಯಕುಮಾರನಿಗೂ ಸಹ ಸಕಲೈಶ್ವರ್ಯಪ್ರದವಾದ ಈ ಭಸ್ಮವನ್ನು ಕೊಡಿರೆಂದು' ಹೇಳಲು ಆಗ ಆ ಮಾತನ್ನು ಕೇಳಿ ಅವರು ಆ ಮಗನಿಲ್ಲಿಲ್ಲವೆಂದು ನುಡಿದರು. ॥೪೪-೪೫॥

ಇತಿ ತೇನೇರಿತಾವೇತೌ ಸೋಽತ್ರ ನಾಸ್ತೀತ್ಯವೋಚತಾಂ ।
ತಚ್ಛ್ರುತ್ವಾ ವಿಕ್ರಿಯಾಂ ತಾಭ್ಯಾಂ ಜ್ಞಾತ್ವಾ ಧ್ಯಾನೇನ ತತ್ಸ್ಥಿತಂ॥೪೬॥

ಯಥಾರ್ಥಂ ವದತಂ ಯುಷ್ಮತ್ಪ್ರಿಯಂ ಕರ್ತಾಸ್ಮಿ ಸಾಂಪ್ರತಂ ।
ಇತ್ಯುಕ್ತಂ ತದ್ವಚಃ ಶ್ರುತ್ವಾ ಉದ್ವಿಗ್ನೌ ಪ್ರಾಹತುಸ್ತದಾ ॥೪೭॥

॥ ದಂಪತೀ ಊಚತುಃ ॥

ಯಥಾರ್ಥಕಥನೇ ಚಾದ್ಯ ಭುಕ್ತಿವಿಘ್ನೋ ಭವೇತ್ತವ ।
ನ ಚೇನ್ಮಹೇಶ್ವರವಚೋಲ್ಲಂಘನಂ ದೋಷಕಾರಣಂ ॥೪೮॥

ಕಿಂ ಕುರ್ಮೋ ಗಿರಿಶೋ ವೇತ್ತೀತ್ಯಂತಶ್ಚಿಂತಾಭರಾಂತರೌ ॥೪೯॥

ತನಯೋ ವಾಂ ವನೇ ದಂತಶೂಕದಷ್ಟೋ ದೃಷ್ಟವಶಾದ್ಧಿ ವಾಂ ।
ಕಿಂ ವಾ ನೋ ತನಯೇನಾದ್ಯ ವಿಲಂಬಂ ತವ ನೋತ್ಸಹೇ ॥೫೦॥

ಭೋಜನೇ ಭಾಜನೇ ಸಿದ್ಧಂ ವ್ಯಜನೇನಾದ್ಯ ವೀಜಯೋ ।
ಇತಿ ತತ್ಪ್ರೇರಿತೋ ಪ್ರೋಕ್ತಂ ಸದಯೋ ಮುದವರ್ಜಿತಃ ॥೫೧॥

---

ಆ ಮಾತನ್ನು ಕೇಳಿ ಅನಂತರ ಅವರಿಬ್ಬರ ಮನೋವಿಕಾರವನ್ನರಿತು, ಜ್ಞಾನಶಕ್ತಿಯಿಂದ ಅವನ ವಿಷಯವನ್ನೆಲ್ಲಾ ತಿಳಿದು, ಎಲೈ ದಂಪತಿಗಳೇ, ನಿಜವನ್ನು ಹೇಳಿರಿ, ನಿಮಗೆ ಪ್ರಿಯವನ್ನೀಗ ಎಸಗುವೆನೆಂದು ಹೇಳಲು, ಆ ವಾಗೀಶನ ಮಾತುಗಳನ್ನು ಕೇಳಿ ಉದ್ವಿಗ್ನರಾದ ಆ ದಂಪತಿಗಳು ಆಗ ಹೀಗೆ ನುಡಿದರು. ॥೪೬-೪೭॥

ಸ್ವಾಮಿ, ನಿಜವಾದಸಂಗತಿಯನ್ನರುಹಿದರೆ ನಿಮ್ಮ ಊಟಕ್ಕೆ ವಿಘ್ನವುಂಟಾಗುತ್ತದೆ. ಇಲ್ಲದಿದ್ದರೆ ಮಹೇಶ್ವರನ ಮಾತನ್ನು ಮೀರಿದ ದೋಷಕ್ಕೆ ಕಾರಣರಾಗುವೆವು. ಏನು ಮಾಡುವುದು; ಎಲ್ಲವನ್ನೂ ಆ ಮಹೇಶನೇ ಅರಿತಿರುವನೆಂದು ಚಿಂತಾಕುಲಿತಮಾನಸರಾದ ಆ ದಂಪತಿಗಳು ಪರಸ್ಪರ ಯೋಚಿಸುತ್ತಾ ಇಂತೆಂದರು. ॥೪೮-೪೯॥

ಸ್ವಾಮಿ, ನನ್ನ ಮಗನು ಕಾಡಿನಲ್ಲಿ ನಮ್ಮ ಅದೃಷ್ಟವಶದಿಂದ ಹಾವಿನಿಂದ ಕಡಿಯಲ್ಪಟ್ಟು ಮೃತನಾದನು. ಆ ಮಗನಿಂದೀಗೇನಾಗಬೇಕಾಗಿದೆ ಪ್ರಭೋ!

ಕರ್ಮೈವ ಹಿ ಕೃತಂ ಕೇನೇತ್ಯುತ್ತಸ್ಥೌ ಭಕ್ತವತ್ಸಲಃ ।
ಸಂಜೀವಯಿತುಮಾಕಾಂಕ್ಷನ್ಸ ಶವಂ ವಿಪ್ರನಂದನಂ ॥೫೨॥

ಏವಂ ಧ್ಯಾತ್ವಾ ಜಗೌ ವಾಗ್ಮೀ ಸೋಽಭೂತ್ಸುಪ್ತ ಇವೋತ್ಥಿತಃ॥೫೩॥

॥ ವಾಗೀಶ ಉವಾಚ ॥

ಕಿಂ ಕಾಲಕೂಟಗರಲಾದಪಿ ಘೋರಮೇತ-
ಚ್ಛಂಭೋ ಗರಂ ಗರಗಲಸ್ಯ ತವಾನುಮೇಯಂ ।
ಬಾಲೋಽಪ್ಯಯಂ ಭುಜಗವಕ್ತ್ರರದೋರುದಷ್ಟೋ
ದಿಷ್ಟ್ಯಾ ತವೈಷ ಲಭತಾಂ ಖಲು ಜೀವಿತಂ ಹಿ ॥೫೪॥

ಪಾಪಘ್ನಂ ಸಕಲಾಸ್ಯಗಂ ಕಿಲ ವಿಭೋ ಜ್ಞಾನಪ್ರಭಾವೇಽಸಮಂ
ಶಬ್ದಪ್ರೋಚ್ಚರಣೇನ ಶೀಘ್ರಮುಗಜಾಕಾಂತಪ್ರಭಾಬೋಧಕಂ ।

---

ತಮಗೆ ಊಟಕ್ಕೆ ವಿಲಂಬವಾಗುವುದನ್ನು ನಾನು ಸಹಿಸಲಾರೆ; ಭೋಜನಕ್ಕೆ ಬೇಕಾದ ಸಲಕರಣೆಗಳೆಲ್ಲವೂ ಸಿದ್ಧವಾಗಿರುವುವು. ನಾನು ಭೋಜನದ ಸಮಯದಲ್ಲಿ ಬೀಸಣಿಗೆಯಿಂದ ನಿಮಗೆ ಬೀಸುವೆನು" ಎಂದು ಪ್ರೀತಿಯಿಂದ ನುಡಿದ ಆ ತದ್ಭೂತಿಯ ಮಾತನ್ನು ಕೇಳಿ, ಕರುಣಾಳುವೂ, ಗರ್ವಹೀನನೂ ಆದ ಆ ವಾಗೀಶನು, ಎಲ್ಲವೂ ಕರ್ಮಾನುಗುಣವು, ಯಾರಿಂದ ತಾನೇ ಏನುಮಾಡಲ್ಪಟ್ಟೀತು, ಎಂದು ಚಿಂತಿಸಿ ಭಕ್ತವಾತ್ಸಲ್ಯದಿಂದ ಮೇಲಕ್ಕೆದ್ದು ವಿಪ್ರಕುಮಾರನ ಶವವನ್ನು ಬದುಕಿಸಲು ಅಪೇಕ್ಷಿಸಿ, ನಿಂತು ವಾಗೀಶನು ಮುಂದೆ ಹೇಳುವಂತೆ ಮಹೇಶನನ್ನು ಧ್ಯಾನಿಸಲು, ಆ ಬ್ರಾಹ್ಮಣಕುಮಾರನು ನಿದ್ದೆಯಿಂದೆಚ್ಚತ್ತವನಂತೆ ಮೇಲಕ್ಕೆದ್ದನು. ॥೫೦-೫೧-೫೨-೫೩॥

"ಶಂಭುವೇ, ಈ ಬ್ರಾಹ್ಮಣಕುಮಾರನಿಗೊದಗಿರುವ ವಿಷವು ಕಾಲಕೂಟವಿಷಕ್ಕಿಂತಲೂ ಭಯಂಕರವಾದುದೆಂದು ವಿಷಕಂಠನಾದ ನೀನು ಭಾವಿಸುವೆಯಾ" ಪ್ರಭೋ! ಹಾವಿನ ವಿಷದ ಹಲ್ಲಿನಿಂದ ಬಲವಾಗಿ ಕಚ್ಚಲ್ಪಟ್ಟಿರುವ ಈ ಹುಡುಗನು ಈಗ ನಿನ್ನ ದಿವ್ಯ ದಯೆಯಿಂದ ಜೀವಿಸಲಿ. ॥೫೪॥

ಪ್ರಭುವೇ! ನಿನ್ನ ದಿವ್ಯನಾಮವು ಪಾಪನಾಶಕವಾದುದು, ಎಲ್ಲರ ವದನದಲ್ಲಿಯೂ ಉಚ್ಚರಿಸಲ್ಪಡುವುದಕ್ಕೆ ಯೋಗ್ಯವಾದುದು. ಜ್ಞಾನಪ್ರಭಾವವನ್ನುಂಟು

ಸಂಸಾರಾರ್ಣವತಾರಣೇ ಸುಖತರಂ ಶಂಭೋ ಶಿವೇತ್ಯಾದರಾ
ದಾರಾನ್ಮೇ ಹೃದಿ ಸನ್ನಿಧತ್ಸ್ವ ಭಗವನ್ನಾಮ್ನೈವ ರೂಪಂ ದೃಶೇ ॥೫೫॥

ಮನಾಮಹೇ ಚಾರುದೇವಸ್ಯ ನಾಮ
ಪಾಪೌಘಭಿತ್ಕೇವಲಶಬ್ದಮಾತ್ರಾತ್ ।
ತ್ವನ್ನಾಮ ಸನ್ಮಂತ್ರಿತಭಸ್ಮಸಂಗಾ-
ದುಜ್ಜೀವತಾಮೇಷ ಸುತೋ ದ್ವಿಜಸ್ಯ ॥೫೬॥

ಇತ್ಯುಕ್ತ್ವಾ ತಂ ಸ ಭಸ್ಮಾಂಕಂ ಕೃತ್ವಾ ಫಾಲಂ ಗಲಂ ತಥಾ ।
ಹೃದಿ ಸರ್ವಾಂಗಪಾದಾಂತಂ ಸಂಸ್ಪೃಶ್ಯ ಶವ ಬಾಲಕಂ ॥೫೭॥

ಶಿವನಾಮಾನುಷಂಗಾಂಕ ಭಸ್ಮನೋಜ್ಜೀವಯುತ್ಸುತಂ ।
ಸ ಸುಪ್ತ ಇವ ಚೋತ್ತಸ್ಥೌ ತದಾ ಭಸ್ಮಪ್ರಭಾವತಃ ॥೫೮॥

---

ಮಾಡುವುದರಲ್ಲಿ ಅಸದೃಶವಾದುದು. ಶಬ್ದದ ಉಚ್ಚಾರಣಮಾತ್ರದಿಂದಲೇ ಅದು ಪಾರ್ವತೀರಮಣನಾದ ನಿನ್ನ ತೇಜಸ್ಸನ್ನು ತಿಳಿಸುವುದು. ಸಂಸಾರವೆಂಬ ಸಮುದ್ರವನ್ನು ದಾಟಿಸುವುದರಲ್ಲಿ ತುಂಬಾ ಸುಖಕರವಾಗಿರುವುದು. ಭಗವಂತನೇ! ಶಂಭು, ಶಿವ ಎಂದು ಆದರದಿಂದ ನಾಮರೂಪವಾಗಿ ಹೇಳಲ್ಪಡುವ ನೀನು ನನ್ನ ಹೃದಯದಲ್ಲಿ ನೆಲಸು. ಸ್ವಾಮಿ! ನಿನ್ನ ನಾಮವಿರುವಂತೆಯೇ ನಿನ್ನ ದಿವ್ಯರೂಪವನ್ನೂ ನಾನು ನೋಡುವೆನು. ॥೫೫॥

ಸ್ವಾಮಿ, ಕ್ರೀಡಾದಿಗುಣಸಂಪನ್ನನಾದ ನಿನ್ನ ಮನೋಹರವಾದ ಪವಿತ್ರನಾಮಗಳು ಕೇವಲ ಶಬ್ದಮಾತ್ರದಿಂದ ಸಕಲಪಾಪರಾಶಿಗಳನ್ನೂ ಭೇದಿಸುವುವೆಂದರಿತಿರುವೆನು. ನಿನ್ನ ಈ ದಿವ್ಯನಾಮಗಳಿಂದ ಮಂತ್ರಿಸಲ್ಪಟ್ಟಿರುವ ಈ ಭಸ್ಮಸಂಬಂಧದಿಂದ ಈ ಬ್ರಾಹ್ಮಣಕುಮಾರನು ಬದುಕಲಿ. ॥೫೬॥

ಎಂದು ಆ ವಾಗೀಶನು ಮಹಾದೇವನನ್ನು ಧ್ಯಾನಿಸಿ, ಬ್ರಾಹ್ಮಣಕುಮಾರನ ಶವಕ್ಕೆ ಹಣೆ, ಕೊರಳು, ಹೃದಯ ಮೊದಲಾಗಿ ಕಾಲಿನಿಂದ ತಲೆಯವರೆಗೂ ಎಲ್ಲಾ ಅವಯವಗಳಿಗೂ ಶಿವನಾಮಾಂಕಿತವಾದ ಭಸ್ಮವನ್ನು ಲೇಪಿಸಿ, ಅದರ ಪ್ರಭಾವದಿಂದ ಆ ಮಗನನ್ನು ಬದುಕಿಸಿದನು. ಅವನು ಆ ವಿಭೂತಿಯ ಮಹಿಮೆಯಿಂದ ಆಗ ಮಲಗಿ ಎದ್ದವನಂತೆ ಮೇಲೆದ್ದನು. ॥೫೭-೫೮॥

ನಾಮ್ನೋ ಮಾಹಾತ್ಮ್ಯತಃ ಶಂಭೋಸ್ತಂ ದೃಷ್ಟ್ವಾ ಜಾತವಿಸ್ಮಯಾಃ ।
ಜನಾ ನೃಪಶ್ಚ ತತ್ರತ್ಯಾ ಸ ಪುತ್ರಸ್ತತ್ಪಿತಾ ವಶೀ ॥೫೯॥

ವಾಚಾಮಧೀಶಪದಯೋಃ ಪಾತಯಿತ್ವಾ ಸುತಂ ತದಾ ।
ವವೃಷುಃ ಕುಸುಮಾಸಾರಂ ದೇವಾ ದಿವಿ ಮುದಂ ವ್ಯಧುಃ ॥೬೦॥

ತೇನ ವಾಕ್ಪತಿನಾ ವಿಪ್ರಃ ಪುತ್ರೇಣ ಬುಭುಜೇ ವಶೀ ।
ಸಂಸ್ತುತಂ ತೇನ ವಿಪ್ರೇಣ ಯಯೌ ನಂತುಂ ಸಭಾಪತಿಂ ॥೬೧॥

ವಾಮಾಲಾಲಿತವಾಮಾಂಗಸಭಾನಟಪದಂ ಯಯೌ ॥೬೨॥

ಯಚ್ಛೃಣ್ವತಾಂ ವಾಂಛಿತಕಾಮಧೇನುಃ
ಶೃಣೋತಿ ತದ್ಭೂತಿಚರಿತ್ರಮೇತತ್ ।
ಛಿತ್ವಾಖಿಲಾನ್ಸಂಸ್ಮೃತಿ ಪಾಶಬಂಧಾ-
ನ್ಪ್ರಯಾತಿ ಶೈವಂ ಪರಮಂ ಪದಂ ಸಃ ॥೬೩॥

ಇತಿ ಶ್ರೀಶಿವರಹಸ್ಯೇ ಸದಾಶಿವಾಖ್ಯೇ ನವಮಾಂಶೇ ತದ್ಭೂತಿಚರಿತ್ರ
ವರ್ಣನಂ ನಾಮ ಅಷ್ಟಚತ್ವಾರಿಂಶೋಽಧ್ಯಾಯಃ

---

ಶಂಭುವಿನ ನಾಮಮಹಿಮೆಯಿಂದ ಬದುಕಿದ ಆ ಮಗನನ್ನು ನೋಡಿ, ಅಲ್ಲಿದ್ದ ಜನಗಳೂ ರಾಜನೂ, ಅಲ್ಲದೇ ಅವನ ತಂದೆತಾಯಿಗಳೂ ಆಶ್ಚರ್ಯಚಕಿತರಾದರು. ಅನಂತರ ಜಿತೇಂದ್ರಿಯನಾದ ಆ ತದ್ಭೂತಿಯು ತನ್ನ ಮಗನನ್ನು ಆ ವಾಗೀಶನ ಕಾಲುಗಳಿಗೆ ಬೀಳಿಸಿ ನಮಸ್ಕಾರಮಾಡಿಸಿದನು. ಆ ಸಮಯದಲ್ಲಿ ಪುಷ್ಪವೃಷ್ಟಿಯಾಯಿತು. ಆಕಾಶದಲ್ಲಿ ದೇವನಗಾರಿಗಳು ಸಂತೋಷವಾಗಿ ಮೊಳಗಿದವು. ಅನಂತರ ತದ್ಭೂತಿಯು ಪೂಜ್ಯವಾಗೀಶ ಮತ್ತು ಮಗನೊಡನೆ ಸಂತೋಷದಿಂದ ಭೋಜನಮಾಡಿದನು. ಊಟವಾದನಂತರ ಆ ವಾಗೀಶನು ತದ್ಭೂತಿಯಿಂದ ಸ್ತುತಿಸಲ್ಪಟ್ಟವನಾಗಿ ಸಭಾಪತಿಯನ್ನು ನಮಸ್ಕರಿಸಲು ಅಲ್ಲಿಂದ ಹೊರಟನು. ಪಾರ್ವತಿಯಿಂದ ಲಾಲಿಸಲ್ಪಟ್ಟು ಅರ್ಧನಾರೀಶ್ವರನಾದ ಆ ಸಭಾಪತಿಯ ಕ್ಷೇತ್ರಕ್ಕೆ ಅಲ್ಲಿಂದ ಹೊರಟ ವಾಗೀಶನು ಸುಖವಾಗಿ ಬಂದು ಸೇರಿದನು. ॥೫೯-೬೦-೬೧-೬೨॥

ಯಾವ ಕಥೆಯು ಶ್ರವಣಮಾಡುವವರಿಗೆ ಬೇಕಾದ ಇಷ್ಟಾರ್ಥಗಳನ್ನೂ ಕೊಡುವುದರಲ್ಲಿ ಕಾಮಧೇನುಸಮಾನವಾಗಿರುವುದೋ ಅಂತಹ ಈ ತದ್ಭೂತಿಯ

ಚರಿತ್ರೆಯನ್ನು ಕೇಳುವವನು ಸಕಲ ಸಾಂಸಾರಿಕವಾದ ಬಂಧನಗಳನ್ನು ಕತ್ತರಿಸಿ ಪರಮೇಶ್ವರನ ಉತ್ತಮವಾದ ಪದವಿಯನ್ನು ಹೊಂದುತ್ತಾನೆಂದು ಕುಮಾರ ಸ್ವಾಮಿಯು ಜೈಗೀಷವ್ಯನಿಗೆ ಹೇಳಿದನು. ||೬೩||

ಇಲ್ಲಿಗೆ ಶ್ರೀಶಿವರಹಸ್ಯದಲ್ಲಿ ಸದಾಶಿವಸಂಜ್ಞಕವಾದ ಒಂಬತ್ತನೆಯ ಅಂಶದಲ್ಲಿ ತದ್ಭೂತಿಯ ಕಥಾವರ್ಣನೆಯೆಂಬ ನಲವತ್ತೆಂಟನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಸದಾಶಿವಾಖ್ಯೇ

## ನವಮಾಂಶೇ

## ಅಥೈಕೋನಪಂಚಾಶೋಽಧ್ಯಾಯಃ

॥ ಶ್ರೀಸ್ಕಂದ ಉವಾಚ ॥

ಅಸ್ತ್ಯಶೇಷಮಹೀಕಾಂತಾಲಂಕಾರೇ ಚೋಲಮಂಡಲೇ ।
ಶಾಸ್ತ್ರಮಂಗಲನಾಮಶ್ರೀನಗರಂ ಸಹ್ಯಜಾತಟೇ ॥೧॥

ತತ್ರಾಸ್ತಿ ನೀಲಲಗ್ನಾಖ್ಯಃ ಕಶ್ಚಿದ್ಭೂಸುರಶೇಖರಃ ।
ಶಿವಪಾದಾಂಬುಜಧ್ಯಾನವಿನಿರ್ಧೂತಾನ್ಯಬಂಧನಃ ॥೨॥

ಅಧೀತವೇದವೇದಾಂಗತದುಪಾಂಗಪ್ರವಿಸ್ತರಃ ।
ಅಷ್ಟಾವಿಂಶತಿಕೋಟೀನಾಮಾಗಮಾನಾಂ ಚ ದೇಶಿಕಃ ॥೩॥

---

## ನಲವತ್ತೊಂಬತ್ತನೆಯ ಅಧ್ಯಾಯ

ಅಯ್ಯ ಜೈಗೀಷವ್ಯನೇ, ಸಮಸ್ತಭೂಮಂಡಲವೆಂಬ ರಮಣಿಗೆ ಅಲಂಕಾರಪ್ರಾಯವಾಗಿರುವ ಚೋಲದೇಶದ ಕಾವೇರೀ ನದಿಯ ದಡದಲ್ಲಿ ಶಾಸ್ತ್ರಮಂಗಳವೆಂಬ ಹೆಸರಿನ ಶ್ರೀನಗರವಿದ್ದಿತು. ಆ ಊರಿನಲ್ಲಿ ಶಿವಪಾದಕಮಲಧ್ಯಾನದಿಂದ ತನ್ನ ಸಕಲ ಸಂಸಾರಬಂಧನಗಳನ್ನೂ ಕತ್ತರಿಸಿಹಾಕಿರುವ ನೀಲಲಗ್ನನೆಂಬ ಹೆಸರಿನ ಒಬ್ಬ ಬ್ರಾಹ್ಮಣೋತ್ತಮನಿದ್ದನು. ॥೧-೨॥

ಅವನು ಋಗ್ಯಜುಸ್ಸಾಮಾಥರ್ವಣಗಳೆಂಬ ಚತುರ್ವೇದಗಳನ್ನೂ ಶಿಕ್ಷಾ, ವ್ಯಾಕರಣ, ಛಂದಸ್ಸು, ನಿರುಕ್ತ, ಜ್ಯೋತಿಷ ಮತ್ತು ಕಲ್ಪಗಳೆಂಬ ಆರು ಅಂಗಗಳೊಡನೆ ಓದಿ, ಇಪ್ಪತ್ತೆಂಟುಕೋಟಿ ವಿಧಗಳಿಂದ ಆಗಮಗಳನ್ನೂ ಅರಿತು

ಜ್ಞಾನಯೋಗಕೃತಾಚಾರ್ಯಪಾದೇಷು ಕೃತಸಂಸ್ತವಃ ।
ದೀಕ್ಷಿತೋ ದೀಕ್ಷಯತ್ಯನ್ಯಾನ್ದಯಯಾ ಶರಣಾಗತಂ ॥೪॥

ತ್ರಿಪದಾರ್ಥವಿವೇಕಾಂಭಃಪ್ರಕ್ಷಾಳಿತಮಲತ್ರಯಃ ।
ವಾಜಪೇಯಾದಿಭಿರ್ಯಜ್ಞೈರಾರಾಧಿತಮಹೇಶ್ವರಃ ॥೫॥

ಕದಾಚಿತ್ರ್ಯಕ್ಷನಕ್ಷತ್ರೇ ಭಾರ್ಯಯಾ ಸಹ ಸ ದ್ವಿಜಃ ।
ಭಯಭಕ್ತ್ಯಾ ಪತಿಂ ಶಂಭುಮಾರಾಧ್ಯ ಪುರತಃ ಸ್ಥಿತಃ ॥೬॥

ಜಪನ್ಪಂಚಾಕ್ಷರಂ ಮಂತ್ರಂ ಶಿವೈಕಾಹಿತಲೋಚನಃ ।
ಪತ್ನೀ ಚ ಸಾಂಜಲಿಸ್ತಸ್ಯ ಸಿಷೇವೇ ತಂ ಮಹೇಶ್ವರಂ ॥೭॥

ತದಾ ಪತ್ನೀ ಮಹೇಶಸ್ಯ ಲೂತಾ ಕಾಚನ ಮೂರ್ಧನಿ ।
ಸಾನಭ್ರಾಮ ಶಿವಸ್ಯಾಂಗೇ ತಂತುಂ ಜಾಲವಿಧಾಯಿನೀ ॥೮॥

---

ಆಚಾರ್ಯನೆನಿಸಿಕೊಂಡಿದ್ದನು. ಜ್ಞಾನ, ಯೋಗ ಮುಂತಾದ ಮೋಕ್ಷಮಾರ್ಗಗಳನ್ನು ತಿಳಿದು, ಪೂಜ್ಯರಾದ ಆಚಾರ್ಯರನ್ನು ಸ್ತೋತ್ರಮಾಡುತ್ತಿದ್ದನು. ಈತನು ತಾನು ದೀಕ್ಷಿತನೆನಿಸಿ ತನ್ನನ್ನು ಮರೆಹೋಗುವ ಶಿಷ್ಯರನ್ನೆಲ್ಲಾ ಕೃಪೆಯಿಂದ ದೀಕ್ಷಿತರನ್ನಾಗಿ ಮಾಡುತ್ತಿದ್ದನು. ॥೩-೪॥

ಪಶು, ಪಾಶ, ಪತಿ ಎಂಬ ಶೈವಸಿದ್ಧಾಂತದ ಮೂರು ಪದಾರ್ಥಗಳ ವಿವೇಚನೆಯೆಂಬನೀರಿನಿಂದ ತೊಳೆಯಲ್ಪಟ್ಟ ಬಾಹ್ಯ, ಅಭ್ಯಂತರ ಮತ್ತು ಸಾಂಸರ್ಗಿಕ ರೂಪವಾದ ಮೂರು ಅಜ್ಞಾನಗಳುಳ್ಳವನಾಗಿ, ವಾಜಪೇಯವೇ ಮೊದಲಾದ ಯಾಗಗಳಿಂದ ಮಹೇಶ್ವರನನ್ನು ಸಂತೋಷಪಡಿಸುತ್ತಿದ್ದನು. ಇಂತಹ ನೀಲಲಗ್ನನೆಂಬ ಬ್ರಾಹ್ಮಣನು ಒಂದುಸಲ ತನ್ನ ಹೆಂಡತಿಯೊಡನೆ ಆರಿದ್ರಾನಕ್ಷತ್ರದಲ್ಲಿ ಭಯಭಕ್ತಿಯಿಂದ ಕೂಡಿದವನಾಗಿ ಸಕಲ ಲೋಕಪತಿಯೆನಿಸಿದ ಶಂಭುವನ್ನು ಪೂಜಿಸಿ ಮುಂದೆ ನಿಂತುಕೊಂಡನು. ॥೫-೬॥

ತದೇಕಧ್ಯಾನದಿಂದ ಶಿವನಲ್ಲಿಯೇ ನೆಟ್ಟ ದೃಷ್ಟಿಯುಳ್ಳವನಾಗಿ, ಶಿವಪಂಚಾಕ್ಷರ ಮಂತ್ರವನ್ನು ಜಪಿಸುತ್ತಾ ನಿಂತುಬಿಟ್ಟನು. ಅವನ ಹೆಂಡತಿಯೂ ಅವನಂತೆಯೇ ಕೈಮುಗಿದುಕೊಂಡು ಮಹೇಶ್ವರನನ್ನು ಧ್ಯಾನಮಾಡುತ್ತಿದ್ದಳು. ಆಗ ಒಂದು ಜೇಡರ ಹುಳುವು ಬಲೆ ಕಟ್ಟಲು ಶಿವನ ತಲೆಯ ಮೇಲೆ ಹಾರಾಡುತ್ತಾ ತನ್ನ ಬಾಯಿನಿಂದ ಜೊಲ್ಲನ್ನು ಸುರಿಸಿ ಬಲೆ ಕಟ್ಟಲು ಪ್ರಾರಂಭಿಸಿತು. ॥೭-೮॥

ಶಿವೇ ನಿಪತಿತಾಂ ದೃಷ್ಟ್ವಾಲೂತಾಂ ಸಾ ಸಹಸಾಕುಲಾ ।
ತಾಂ ವಿನ್ಯುಜ್ಯಚ ಲಿಲೇಹ ಜಿಹ್ವಯಾಸ್ರುತಿಲೀಲಯಾ ॥೯॥

ಲಿಹಂತೀ ಜಿಹ್ವಯಾ ತಾಂ ವೈ ವೀಕ್ಷ್ಯಮಾಣೋ ಮೃಗೀದೃಶಂ ।
ಚುಕೋಪ ನೀಲಲಗ್ನೋऽಸೌ ದೂಯಮಾನೇನ ಚೇತಸಾ ॥೧೦॥

ತಾದೃಶೀಂ ಸ ದ್ವಿಜಃ ಪತ್ನೀಂ ಸ ಪಾಪೇ ಶಿವದೂಷಣಂ ।
ಕಥಂ ಕೃತಂ ತ್ವಯೇತ್ಯುಕ್ತ್ವಾ ಸಹಸಾ ಪಿದಧೇ ದೃಶೌ ॥೧೧॥

ಸ ಶಿವದ್ರೋಹಿಣೀಂ ಮತ್ವಾ ತ್ಯಕ್ತ್ವಾತಾಂ ಸ್ವಗೃಹಂ ಯಯೌ ।
ಸಾಪಿ ತತ್ರೈವ ದೇವೇಶಂ ಧ್ಯಾಯತೀ ನ್ಯವಸನ್ನಿಶಿ ॥೧೨॥

ನೀಲಲಗ್ನಃ ಸ್ವಕೇ ಗೇಹೇ ವಿಹಾಯ ಗೃಹಿಣೀಂ ಸ್ವಯಂ ।
ಅಸ್ವಾಪ್ಸೀದಂತರೀಶಾನಮನುಸಂಧಾಯ ನಿರ್ಭರಃ ॥೧೩॥

---

ಇದನ್ನು ನೋಡಿದ ನೀಲಲಗ್ನನ ಹೆಂಡತಿಯು ಹಾಗೆ ಶಿವನ ಮೇಲೆ ಬಿದ್ದ ಜೇಡರಹುಳುವಿನ ಎಂಜಲನ್ನು ನೋಡಿ, ಭಯಪಟ್ಟು ಶಿವಸೇವೆಮಾಡುವ ಮನಸ್ಸಿನಿಂದ ಅದನ್ನು ಒರೆಸಿ, ನೀರು ಸುರಿಯುತ್ತಿದ್ದ ತನ್ನ ನಾಲಿಗೆಯಿಂದ ಪರಶಿವನ ಅಂಗಗಳನ್ನು ಲೀಲೆಯಿಂದ ನೆಕ್ಕಿದಳು. ಹೀಗೆ ನಾಲಿಗೆಯಿಂದ ಶಿವಲಿಂಗವನ್ನು ನೆಕ್ಕುತ್ತಿರುವ ತನ್ನ ಹೆಂಡತಿಯನ್ನು ನೋಡಿ ನೀಲಲಗ್ನನು ಖಿನ್ನಮನಸ್ಕನಾಗಿ ಶಿವದ್ರೋಹವಾಯಿತೆಂದು ತಿಳಿದು ಕೋಪಗೊಂಡನು. ॥೯-೧೦॥

ಆ ರೀತಿ ಅಪಚಾರವೆಸಗಿದ ತನ್ನ ಹೆಂಡತಿಯನ್ನು ಕಂಡು, ನೀಲಲಗ್ನನು ಎಲೌ ಪಾಪಿಷ್ಠಳೇ, ನೀನು ಹೀಗೆ ಶಿವನನ್ನು ಎಂಜಲುಮಾಡಬಹುದೇ? ಎಂದು ಗದರಿಸಿ, ಕೂಡಲೇ ತನ್ನ ಎರಡು ಕಣ್ಣುಗಳನ್ನೂ ಮುಚ್ಚಿಕೊಂಡನು. ಅನಂತರ ಅವಳು ಶಿವದ್ರೋಹಿಣಿಯೆಂದು ತಿಳಿದು, ಪತ್ನಿಯನ್ನು ಮತ್ತೆ ನೋಡದೆ ಅಲ್ಲಿಯೇ ಬಿಟ್ಟು ತಾನೊಬ್ಬನೇ ಮನೆಗೆ ಹೋದನು. ಆ ಪತ್ನಿಯಾದರೋ ಸ್ಥಿರಮನಸ್ಸಿನಿಂದ ಅಲ್ಲಿಯೇ ದೇವೇಶ್ವರನಾದ ಮಹಾದೇವನನ್ನು ಧ್ಯಾನಮಾಡುತ್ತಾ ರಾತ್ರಿಯೆಲ್ಲಾ ಕಾಲಕಳೆದಳು. ॥೧೧-೧೨॥

ಇತ್ತ ನೀಲಲಗ್ನನಾದರೋ ಹೆಂಡತಿಯನ್ನು ದೇವಾಲಯದಲ್ಲಿಯೇ ಬಿಟ್ಟು ತನ್ನ ಮನಸ್ಸಿನಲ್ಲಿ ಈಶ್ವರನನ್ನೇ ಧ್ಯಾನಿಸುತ್ತಾ ಧೈರ್ಯದಿಂದ ತನ್ನ ಮನೆಯಲ್ಲಿ

ತತಃ ಸ್ವಪ್ನೇ ಮಹಾದೇವಮದ್ರಾಕ್ಷೀತ್ಕರುಣಾನಿಧಿಂ ।
ಭುಜಂಗಪುಂಗವೋನ್ನದ್ಧಂ ತಟಿತ್ಸಂಭಾರಸಂನಿಭಂ ॥೧೪॥

ಗಂಗಾತರಂಗಸಂಘೈಶ್ಚ ಸ್ಫುಟಾತ್ಕಾರಂ ಮಹಾಧ್ವನಿಂ ।
ಬಿಭ್ರಾಣಮುನ್ನತೈಕಾಗ್ರಶಶಿಖಂಡಜಟಾಧರಂ ॥೧೫॥

ಅಂಕುರಿತಜಗನ್ಮೂಲಕಂದೋಽಯಮಿತಿ ಭಾವಿತಂ ।
ಜ್ವಲಲ್ಲಲಾಟನೇತ್ರಾಗ್ನಿದ್ರವಚ್ಚಂದ್ರಸುಧಾರಸೈಃ ॥೧೬॥

ಶ್ವಸತ್ಪದ್ಮಜಸುಃ ಕೋಟೀ ಕರೋತಿ ಘಟಿತಸ್ರಜಂ ।
ದಯಾಮೃತಪರೀವಾಹಮನೋಹರ ದೃಗಂಚಲಂ ॥೧೭॥

ಸಮುನ್ನತನಸಂ ಭಾಸ್ವತ್ಪನ್ನಗಾಧಿಪಕುಂಡಲಂ ।
ಮಂದಸ್ಮಿತರುಚಿಜ್ಯೋತ್ಸ್ನಾಸ್ನಪಿತಾಧರಪಲ್ಲವಂ ॥೧೮॥

---

ಮಲಗಿಕೊಂಡನು. ಮಲಗಿ ನಿದ್ರಿಸುತ್ತಿರಲು ಅವನಿಗೆ ಕನಸಿನಲ್ಲಿ ದಯಾನಿಧಿಯೂ ಸರ್ಪರಾಜಭೂಷಣನೂ, ಮಿಂಚಿನ ಸಮೂಹಸದೃಶನೂ ಆದ ಮಹೇಶ್ವರನು ಕಾಣಿಸಿಕೊಂಡನು. ॥೧೩-೧೪॥

ಗಂಗಾನದಿಯ ಅಲೆಗಳ ಸಮೂಹಗಳಿಂದ ಭೋರ್ಗರೆಯುತ್ತಿರುವ ಮಹಾಧ್ವನಿಯುಳ್ಳ ಜಡೆಯುಳ್ಳವನೂ, ಎತ್ತರವಾಗಿರುವ ತನ್ನ ಜಡೆಯಲ್ಲಿ ನೀಳವಾದ ಅರ್ಧಚಂದ್ರನನ್ನು ಧರಿಸಿರುವವನೂ, ಸಕಲ ಪ್ರಪಂಚಕ್ಕೂ ಮೂಲಭೂತವಾಗಿ ಮೊಳಕೆಯನ್ನೊದಗಿಸುವ ಗೆಡ್ಡೆಯೋ ಎನ್ನುವಂತೆ ಭಾವಿಸಲ್ಪಡುವವನೂ, ಹಣೆಯಲ್ಲಿ ಪ್ರಜ್ವಲಿಸುತ್ತಿರುವ ಅಗ್ನಿನೇತ್ರವುಳ್ಳವನೂ, ಚಂದ್ರನ ಅಮೃತಕಿರಣಗಳಿಂದ ತೊಯ್ದಿರುವವನೂ ಆದ ಪರಶಿವನು ದೃಗ್ಗೋಚರನಾದನು. ॥೧೫-೧೬॥

ಶ್ವಾಸಬಿಡುತ್ತಿರುವ ಬ್ರಹ್ಮನ ಶಿರಃಕಪಾಲಮಾಲೆಯುಳ್ಳವನೂ, ದಯೆಯೆಂಬ ಅಮೃತದ ಪ್ರವಾಹದಿಂದ ಮನೋಹರವಾಗಿರುವ ನೇತ್ರಾಂಚಲವುಳ್ಳವನೂ, ಎತ್ತರವಾದ ಮೂಗುಳ್ಳವನೂ, ಪ್ರಕಾಶಿಸುತ್ತಿರುವ ಸರ್ಪರಾಜನನ್ನೇ ಕುಂಡಲವನ್ನಾಗಿ ಧರಿಸಿರುವವನೂ, ಮಂದಹಾಸದ ಕಾಂತಿಯೆಂಬ ಬೆಳದಿಂಗಳಿಂದ ಶುಭ್ರವಾಗಿ ಕಂಡುಬರುತ್ತಿರುವ ಚಿಗುರುದುಟಿಯುಳ್ಳವನೂ ಆದ ಮಹೇಶ್ವರನು ಅವನಿಗೆ ಸ್ವಪ್ನದಲ್ಲಿ ಗೋಚರಿಸಿದನು. ॥೧೭-೧೮॥

ಗೌರೀವದನಲಾವಣ್ಯಾದರ್ಶಗಂಡತಲದ್ವಯಂ ।
ಲಾಕ್ಷಾಮುದ್ರಿತಸರ್ವಜ್ಞದ್ರವಿಣಂ ಹೃದಿ ವಿಭ್ರಮಂ ॥೧೯॥

ಬಿಭ್ರಂತಂ ಭೃತಕಾಕೋಲಕಾಲಿಮಾನಮಹಾಗಲಂ ।
ಸಮೇರುಪೀವರಸ್ಕಂಧಬಂಧಬಂಧುರಕಂಧರಂ ॥೨೦॥

ಭುಜಗೇಂದ್ರಬೃಹದ್ಭೋಗಪರೀಣಾಹ ಮಹಾಭುಜಂ ।
ಅಶೇಷಭುವನತ್ರಾಣಪ್ರತಿಭಾವ್ಯಕರೈಃ ಕರೈಃ ॥೨೧॥

ಪರಶ್ವಥಮೃಗಾಭೀತಿವರೋದ್ಭಾಸಿಭಿರಂಚಿತಂ ।
ಗೌರೀಘನಕುಚಾಭೋಗದೃಢವಿಸ್ತಾರವಕ್ಷಸಂ ॥೨೨॥

ನಾಭಿಕ್ಷೀರಾರ್ಣವಾವರ್ತಸನಾಭಂ ಪ್ರತಿಬಿಂಬಿತಂ ।
ಮತ್ತೈರಾವತಹಸ್ತೋರು ಸುವೃತ್ತಯುಗಭಾಸುರಂ ॥೨೩॥

---

ಗಿರಿರಾಜಕುಮಾರಿಯ ಮುಖಕಾಂತಿಗೆ ಕನ್ನಡಿಯಂತೆ ಪರಶಿವನ ಎರಡು ಕಪೋಲಗಳೂ ಶೋಭಿಸುತ್ತಿದ್ದುವು. ಸರ್ವಜ್ಞತ್ವವೆಂಬ ದ್ರವ್ಯವನ್ನು ಲಾಕ್ಷಾರಸ ದಿಂದ ಮುದ್ರಿಸಲ್ಪಟ್ಟಿರುವಂತೆ ತೋರುವ ವಿಭ್ರಮವು, ಪರಶಿವನ ಮುಖದಲ್ಲಿ ಕಂಡು ಬರುತ್ತಿದ್ದಿತು. ಹಾಲಾಹಲವಿಷಪಾನದಿಂದ ಕಪ್ಪಾದ ಕೊರಳಿನಲ್ಲಿ ಸರ್ಪವನ್ನು ಧರಿಸಿ ಸುಮೇರುಪರ್ವತದಂತೆ ದಪ್ಪವೂ ಎತ್ತರವೂ ಆದ ಹೆಗಲುಗಳ ಜೋಡಣೆಯಿಂದ ಮನೋಹರವಾಗಿರುವ ಕೊರಳುಳ್ಳ ಮಹಾದೇವನ ಆ ದಿವ್ಯರೂಪು ಅವನಿಗೆ ಸ್ವಪ್ನದಲ್ಲಿ ಗೋಚರವಾಯಿತು. ||೧೯-೨೦||

ಆದಿಶೇಷನ ದೊಡ್ಡ ದೇಹದಂತೆ ವಿಸ್ತಾರವಾಗಿರುವ ದೊಡ್ಡ ತೋಳ್ಗಳುಳ್ಳ ವನೂ, ಸಮಸ್ತಪ್ರಪಂಚವನ್ನೂ ಕಾಪಾಡಲು ಸಮರ್ಥವಾಗಿರುವಂತೆ ತೋರುತ್ತಿರುವ ಸುಂದರವಾದ ಕೈಗಳುಳ್ಳವನೂ, ಕೊಡಲಿ, ಜಿಂಕೆ, ಅಭಯ ಮತ್ತು ವರದರೂಪವಾದ ಚಿಹ್ನೆಗಳಿಂದ ಶೋಭಿಸುತ್ತಿರುವವನೂ, ಗೌರೀದೇವಿಯ ಕಠಿಣವಾದ ಸ್ತನಗಳ ಆಲಿಂಗನಭೋಗಕ್ಕೆ ಅನುಗುಣವಾದ ದೃಢವೂ ವಿಶಾಲವೂ ಆದ ವಕ್ಷಃಸ್ಥಳವುಳ್ಳ ವನೂ ಆದ ಪರಮೇಶ್ವರನ ದರ್ಶನವು ನೀಲಲಗ್ನನಿಗೆ ಸ್ವಪ್ನದಲ್ಲಿ ಲಭಿಸಿತು. ||೨೧-೨೨||

ಕ್ಷೀರಸಮುದ್ರದ ಸುಳಿಗೆ ಸಮಾನವಾದ ನಾಭಿಯನ್ನು ಹೊಂದಿರುವವನೂ, ಕೊಬ್ಬಿದ ಐರಾವತದ ದೊಡ್ಡ ಸೊಂಡಲಿನಂತೆ ದುಂಡೂ ನೀಳವೂ ಆದ ಎರಡು

ಸಾರಂಗಧರಭೂತೇಜ್ಯನಿಷೂದಿತಸಜಂಘಿಕಂ ।
ಅಶೇಷಲೋಕತಮಸಾಮವಸಾನಂ ಪದೇ ಪದೇ ॥೨೪॥

ಸುರಕೋಟೀರರತ್ನಾಂಶು ಪುಂಜಕಿಂಜಲ್ಕಚಾರುಣೀ ।
ಸುಮನಃ ಸುಮನೋದ್ಯಾನಸುಘನಸ್ತಬಕೋಚ್ಛ್ರಯಂ ॥೨೫॥

ದಯಿತಂ ಸಹಜಾನೋದ್ಯೈರಧಿವಾಸಿತದಿಕ್ತಟಂ ।
ಕಿರೀಟಹಾರಕೇಯೂರಸಾರಿಬರ್ಹಿವಿರಾಜಿತಂ ॥೨೬॥

ಮಹಾರ್ಹಮಣಿಮಂಜೀರಸಮಂಚಿತಪದಾಂಬುಜಂ ।
ಆಸೇಚನಕಲಾವಣ್ಯಮಶೇಷದಿವಿಷದ್ವ್ರಜಂ ॥೨೭॥

ಪುಂಡರೀಕಾಜಿನವಸಂ ಪುಂಡರೀಕನಿಭದ್ಯುತಿಂ ।
ಪುರಸ್ತಾದೃಗ್ಯಜುಃ ಸಾಮಾಥರ್ವವೇದೈಃ ಸವಿಗ್ರಹೈಃ ॥೨೮॥

---

ತೋಳುಗಳಿಂದ ಪ್ರಕಾಶಿಸುವವನೂ, ಚಂದ್ರನಿಂದಲೂ ಸಕಲ ಪ್ರಾಣಿಜಾಲದಿಂದಲೂ ಸೇವಿತವಾದ ಪಾದಪದ್ಮವುಳ್ಳವಳೂ, ಮಹಾಮಹಿಮನೂ, ಹೆಜ್ಜೆಹೆಜ್ಜೆಗೂ ಸಕಲ ಲೋಕಗಳ ಅಜ್ಞಾನವನ್ನು ನಾಶಮಾಡುವವನೂ ಆದ ಶಂಕರನು ಅವನಿಗೆ ದರ್ಶನ ವಿತ್ತನು. ॥೨೩-೨೪॥

ನಮಸ್ಕಾರಮಾಡಿದ ದೇವತೆಗಳ ರತ್ನ ಕಿರೀಟ ಕಾಂತಿಗಳ ಸಮೂಹದ ಕೇಸರ ಗಳಿಂದ ಮಹಾದೇವನ ಪಾದಪದ್ಮಗಳು ಮನೋಹರಗಳಾಗಿದ್ದವು. ದೇವತೆಗಳ ನಂದನವನದ ಗಂಭೀರವಾದ ಹೂಗೊಂಚಲುಗಳಿಂದಲಂಕೃತನಾಗಿ ಸ್ವಭಾವಸಿದ್ಧವಾದ ಪರಿಮಳವುಳ್ಳವನಾದ ಮಹೇಶ್ವರನು ದಿಗಂತಗಳನ್ನೆಲ್ಲಾ ಪರಿಮಳಗೊಳಿಸುತ್ತಿದ್ದನು. ಅವನ ಅಂಗಗಳಲ್ಲಿ ಕಿರೀಟ, ಹಾರ, ಭುಜಕೀರ್ತಿ (ಕೇಯೂರ) ಮತ್ತು ನವಿಲು ಗರಿಗಳೂ ವಿರಾಜಿಸುತ್ತಿದ್ದುವು. ॥೨೫-೨೬॥

ವಿಶೇಷವಾಗಿ ಬೆಲೆಬಾಳುವ ರತ್ನದ ಕಾಲ್ಗಡಗಗಳಿಂದ ಅಲಂಕೃತವಾದ ಪಾದಕಮಲಗಳೂ, ಎಷ್ಟುನೋಡಿದರೂ ತೃಪ್ತಿಹೊಂದದಿರುವಷ್ಟುಶರೀರಲಾವಣ್ಯವೂ, ಸಕಲ ದೇವತೆಗಳ ಗುಂಪಿಗೂ ತನ್ನ ದಿವ್ಯದರ್ಶನವೀಯುತ್ತಿರುವ ದಯಾರಸವೂ, ಹುಲಿಯಚರ್ಮ (ನರ್ತನದಲ್ಲಿ) ವನ್ನು ಧರಿಸಿರುವ ಒಂದು ಭಯಾನಕದೃಶ್ಯವೂ, ಕಮಲಸಮಾನವಾದ ತೇಜಸ್ಸುಳ್ಳ ಮುಖಕಾಂತಿಯೂ, ಮುಂದುಗಡೆ ಮೂರ್ತಿ

ಆಗಮೈಶ್ಚಾಂಜಲಿಕರೈಃ ಸ್ತೂಯಮಾನಸ್ವವೈಭವಂ ।
ಯಕ್ಷಕಿನ್ನರಗಂಧರ್ವಸಿದ್ಧವಿದ್ಯಾಧರೈರಪಿ ॥೨೯॥

ಚತುರ್ವಿಧಮಹಾವಾದ್ಯವಿದ್ಯುನ್ನಿಭಸಮಾರವೈಃ ।
ಸೋಮಧಾಮಸಮಚ್ಛತ್ರವಾಲವ್ಯಜನದರ್ಪಣೈಃ ॥೩೦॥

ಬಿಭ್ರದ್ಭಿರ್ಗಣಪಶ್ರೇಷ್ಠೈಶ್ಶಾರದಾಭ್ರೋಪಮೈಃ ಸಮೈಃ ।
ಭವಪಾಶನಿಬದ್ಧಾನಾಂ ಪಶೂನಾಂ ಪಾಶಮೋಚನಂ ॥೩೧॥

ಸ್ವಪ್ನೇ ದೃಷ್ಟಸ್ತದಾ ಶಂಭುರವದತ್ತಂ ದಯಾನಿಧಿಃ ॥೩೨॥

॥ ಈಶ್ವರ ಉವಾಚ ॥

ತ್ವಂ ಮೂರ್ಖ ನ ವಿಜಾನೀಷೇ ತತ್ತ್ವಂ ಮದ್ಭಕ್ತಿಸಂಶ್ರಯಂ ।
ದಧಾನಮಪಿ ವಾತ್ಸಲ್ಯಮಧಿಕಂ ಸ್ವಸ್ತನಂಧಯಾತ್ ॥೩೩॥

---

ಮತ್ತಾಗಿರುವ ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವಣವೇದ, ಆಗಮಗಳ ತೇಜೋಮೂರ್ತಿಗಳೂ, ಪರಶಿವನಲ್ಲಿ ಕಂಡುಬರುತ್ತಾ ವೇದವೇದಾಂಗಗಳಿಂದ ಸ್ತುತಿಸಲ್ಪಡುತ್ತಿದ್ದ ದಿವ್ಯವಾದ ಆತ್ಮವೈಭವವುಳ್ಳ ಪರಶಿವನು ಸ್ವಪ್ನದಲ್ಲಿ ಗೋಚರಿಸಿದನು. ॥೨೭-೨೮॥

ಅಲ್ಲದೆ ಯಕ್ಷ, ಕಿನ್ನರ, ಗಂಧರ್ವ, ಸಿದ್ಧ ಮತ್ತು ವಿದ್ಯಾಧರರೇ ಮುಂತಾದ ದೇವತೆಗಳಿಂದ ಸ್ತೋತ್ರಮಾಡಲ್ಪಡುತ್ತಿರುವವನೂ; ಸಿಡಿಲಿಗೆ ಸಮಾನವಾದ ಮೃದಂಗ, ಭೇರಿ, ತಮಟೆ ಮತ್ತು ಶಂಖವೆಂಬ ನಾಲ್ಕು ಮಹಾವಾದ್ಯಗಳ ಧ್ವನಿಯನ್ನು ಕೇಳುತ್ತಿರುವವನೂ, ಚಂದ್ರಮಂಡಲಕ್ಕೆ ಸಮನಾದ ಛತ್ರಿ, ಚಮರೀಮೃಗದ ಕೇಶದಿಂದ ನಿರ್ಮಿತವಾದ ಚಾಮರ, ಬೀಸಣಿಗೆ ಮತ್ತು ಕನ್ನಡಿಗಳನ್ನು ಧರಿಸಿ ನಿಂತಿರುವ ಶರತ್ಕಾಲದ ಮೇಘಸದೃಶ ದೇಹಕಾಂತಿಗಳುಳ್ಳ ಗಣಾಧಿಪರಿಂದ ಸೇವೆಹೊಂದುತ್ತಿರುವವನೂ, ಸಂಸಾರ ಬಂಧನಕ್ಕೊಳಗಾದ ಪಶುಗಳ (ಪ್ರಾಣಿಗಳು) ಪಾಶವನ್ನು ಬಿಡಿಸಿ ಉದ್ಧಾರಮಾಡುವವನೂ, ದಯಾಸಾಗರನೂ ಆದ ಶಂಕರನು ಕನಸಿನಲ್ಲಿ ಆ ನೀಲಲಗ್ನನಿಗೆ ಕಾಣಿಸಿಕೊಂಡು ಇಂತೆಂದನು. ॥೨೯-೩೦-೩೧-೩೨॥

ಎಲೈ ಮೂರ್ಖನೇ, ನನ್ನಲ್ಲಿ ತನ್ನ ಮಗುವಿಗಿಂತಲೂ ಹೆಚ್ಚಿನ ವಾತ್ಸಲ್ಯವುಳ್ಳವಳಾದ ನಿನ್ನ ಹೆಂಡತಿಯ ವಿಷಯವಾಗಿ ನೀನು ದೂಷಣೆ ಮಾಡಿದೆ. ನಿನಗೇ

ಯಲ್ಲಿಲೇಹ ಮಮಾಂಗಂ ಸಾ ತತ್ತ್ವಸ್ಯ ಕನಕೋಜ್ಜ್ವಲಂ ।
ತವ ನಿರ್ಭರ್ತ್ಸನಾದ್ಭೀತಾಯನ್ನಲೀಢವತೀ ಸತೀ ॥೩೪॥

ತದೇತದ್ವ್ರಣಸಂಕ್ಲೃಪ್ತಮತ್ಯುಜ್ಜೃಂಭಿಮಹಾವ್ಯಥಂ ।
ಇತಿ ಸ್ವಪ್ನಾತ್ಪ್ರಬುಧ್ಯೈವ ಭಯವಿಹ್ವಲಮಾನಸಃ ॥೩೫॥

ಭಯಹರ್ತೇಶ್ವರಂ ನತ್ವಾ ಪತ್ನೀಂ ತಾಮುಪ್ಯಸಾಂತ್ವಯತ್ ।
ವಿಜ್ಞಾನಮೋದಸಂಬಂಧಮಾಗತಂ ಸ್ವನಿಕೇತನಂ ॥೩೬॥

ಪ್ರತ್ಯುದ್ಗಮ್ಯ ಸಪರ್ಯಾಭಿರಾರ್ಯಂ ತಂ ಪರ್ಯತೋಷಯತ್ ।
ಸ ಭಾರ್ಯಂ ನೀಲಕಂಠಾಖ್ಯಂ ಗಾಯಂತಂ ಚ ಸಮಾಗತಂ ॥೩೭॥

ಸಂಪೂಜ್ಯ ವಾಸಯಾಮಾಸ ನಿತರಾಂ ಸುಖಿತಂ ನಿಶಿ ।
ಪ್ರಾತರ್ವಿಜ್ಞಾನಸಂಬಂಧೋ ಭಯಪಂಕ್ತೀಶ್ವರಸ್ತವಂ ॥೩೮॥

---

ನನ್ನ ಭಕ್ತಿಗೆ ಆಶ್ರಯವಾದ ನಿಜತತ್ವವೇ ತಿಳಿಯದು. ನಿನ್ನ ಹೆಂಡತಿಯು ನಾಲಿಗೆಯಿಂದ ಯಾವ ನನ್ನ ಅಂಗಗಳನ್ನು ನೆಕ್ಕಿದಳೋ ಅವು ಚಿನ್ನದಂತೆ ಈಗ ಹೊಳೆಯುತ್ತಿರುವುವು. ದೃಷ್ಟಿಯಿಟ್ಟು ನೋಡು. ಅನಂತರ ನಿನ್ನ ನಿಂದೆಗೆ ಗುರಿಯಾಗಿ ಭಯಪಟ್ಟು ಪತಿವ್ರತೆಯಾದ ಅವಳು ನೆಕ್ಕದೇ ಬಿಟ್ಟ ಉಳಿದ ಅವಯವಭಾಗವು ಗಾಯಗಳಿಂದ ತುಂಬಿ ನನಗೆ ಹೆಚ್ಚಿನ ನೋವನ್ನುಂಟು ಮಾಡುತ್ತಾ, ಬಾಧಿಸುತ್ತಿದೆಯೆಂದು ಈಶ್ವರನು ಆ ನೀಲಲಗ್ನನಿಗೆ ಹೇಳಿದನು. ॥೩೩-೩೪॥

ಹೀಗೆ ಕನಸಿನಲ್ಲಿ ಶಿವನಿಂದ ಹೇಳಲ್ಪಟ್ಟು ಎಚ್ಚರ ಪಡೆದ ಆ ನೀಲಲಗ್ನನು ಭಯಾಕುಲಿತ ಹೃದಯನಾಗಿ, ಭಯಹರ್ತೃವಾದ ಪರಮೇಶ್ವರನಿಗೆ ನಮಸ್ಕರಿಸಿ, ಅನಂತರ ಶಿವಾಲಯಕ್ಕೆ ಹೋಗಿ ಮೊದಲು ತನ್ನ ಹೆಂಡತಿಯನ್ನು ಸಮಾಧಾನಪಡಿಸಿದನು. ಸ್ವಲ್ಪಹೊತ್ತಿನ ಮೇಲೆ ತನ್ನ ಮನೆಗೆ ಪತ್ನಿಯೊಡನೆ ಬಂದು, ಆಗ ತಾನೇ ತನ್ನ ಮನೆಗೆ ಬಂದಿದ್ದ ವಿಜ್ಞಾನಮೋದಸಂಬಂಧನೆಂಬ ಭಕ್ತನನ್ನು ಉಚಿತವಾದ ಉಪಚಾರಗಳಿಂದ ಎದುರುಗೊಂಡು ಪೂಜಿಸಿ, ಪೂಜ್ಯನಾದ ಅವನನ್ನು ಅತಿಥಿಸತ್ಕಾರಗಳಿಂದ ಸಂತೋಷಪಡಿಸಿದನು. ॥೩೫-೩೬॥

ಸ್ವಲ್ಪಕಾಲಾನಂತರ ಅಲ್ಲಿಗೆ ಹಾಡುತ್ತಾ ತನ್ನ ಹೆಂಡತಿಯೊಡನೆ ಬಂದ ನೀಲಕಂಠನೆಂಬ ಭಕ್ತನನ್ನೂ ಪೂಜಿಸಿ, ರಾತ್ರಿಯನ್ನು ಸುಖವಾಗಿ ಕಳೆದನು.

ವಿದಧೇ ನೀಲಕಂಠಸ್ಯ ಶಂಭೋರ್ನಾಮಪದಾಂಕಿತಂ ॥೩೯॥

॥ ಜ್ಞಾನಸಂಬಂಧ ಉವಾಚ ॥

ಜ್ಯಾಸೂತ್ರೀಕೃತಭೋಗಕರ್ಷಣಭರಕ್ವಾಯತ್ಫಣೆಗ್ರಾಮಣೀ
ನಿಶ್ವಾಸಾನಿಲಮುಕ್ತದೂರಗರಲಜ್ವಾಲಾವಲೀ ಲೀಲಯಾ ।
ನಿರ್ದಗ್ಧತ್ರಿತಯೇ ಪುರೇ ಪರಿಪತದ್ಭೂರೀಜಟಾವಾಸನಾ
ವ್ಯಾಪಾರೈಕಫಲೋ ಬಭೂವ ತರಲೋ ಯದ್ಬಾಣಜನ್ಮಾನಲಃ ॥೪೦॥

ಮೌರ್ವೀಭೂಷಣ ಕುಂಡಲೀ ಧನುರಹೋ ಧಾಮುಸ್ವಕೀಯಂ ಶರೋ
ಲಕ್ಷ್ಮೀಶೋ ಗರುಡಾಸನೋಂಬುಜಭವೋ ಮಂತಾ ಸರೋಜಪ್ರಿಯಃ ।
ಚಕ್ರೇ ಚೇನೇಂದುಚಕ್ರೇ ನಯನವರಪರೌ ಶ್ವಾಸಜಾಲಾತುರಂಗಾಃ
ಶೇಷಾನ್ಯಷ್ಟತನೂಭವಾನಿ ಶಿವ ತೇ ತ್ವದ್ಭಾಗಧೇಯಂ ಜಗತ್ ॥೪೧॥

---

ಬೆಳಗಾಗಲು ವಿಜ್ಞಾನಸಂಬಂಧನು ಭಯಪಂಕ್ತೀಶ್ವರನ ಸ್ತೋತ್ರವನ್ನು ವಿಷಕಂಠ ನಾದ ಆ ಶಂಕರನ ನಾಮರೂಪವಾದ ಪದಗಳಿಂದ ಈರೀತಿ ರಚಿಸಿದನು. ॥೩೭-೩೮-೩೯॥

ತ್ರಿಪುರಾಸುರರ ನಾಶಕಾಲದಲ್ಲಿ ಶಿವನು ಹೆದೆಯಾಗಿ ಮಾಡಲ್ಪಟ್ಟ ಆದಿಶೇಷನ ದೊಡ್ಡ ದೇಹವನ್ನು ಬಲವಾಗಿ ಎಳೆಯಲು, ಆಗ ಹೊರಟ ಆದಿಶೇಷನ ನಿಶ್ವಾಸ ರೂಪವಾದ ಬೆಂಕಿಯಿಂದ ದೂರದ ವರೆಗೂ ವ್ಯಾಪಿಸಿದ ವಿಶೇಷ ಜ್ವಾಲೆಗಳ ಮಾಲೆ ಗಳಿಂದ ತ್ರಿಪುರಗಳೂ, ಲೀಲಾಮಾತ್ರದಲ್ಲಿ ಭಸ್ಮವಾಗಿ ಕೆಳಗೆ ಬಿದ್ದವು. ಇದರಿಂದ ಜಟಾಧಾರಿಯಾದ ಮಹೇಶ್ವರನ ಬಾಣಪ್ರಯೋಗದಿಂದ ಉದ್ಭವಿಸಿದ ಸರ್ವವನ್ನೂ ದಹಿಸುವ ಅಗ್ನಿಯು ತನಗೆ ಸರಿಯಾದ ಲಕ್ಷ್ಯವೇ ಇಲ್ಲದೇ ಸುಮ್ಮನೆ ಶಾಂತವಾ ಯಿತು. ಅಂದರೆ ಮಹೇಶ್ವರನ ಧನುಷ್ಟಂಕಾರಜನ್ಯಭಯದಿಂದ ಹೊರಟ ಆದಿಶೇಷನ ವಿಷಜ್ವಾಲೆಗಳಿಂದಲೇ ತ್ರಿಪುರಗಳು ಭಸ್ಮವಾದವೆಂದ ಮೇಲೆ ಮಹಾದೇವನ ದಿವ್ಯ ಸಾಮರ್ಥ್ಯವು ಅವರ್ಣನೀಯವಾದುದೆಂದು ಭಾವವು. ॥೪೦॥

ಪರಶಿವನು ತ್ರಿಪುರದಹನ ಕಾಲದಲ್ಲಿ ತಾನು ನಿತ್ಯದಲ್ಲಿ ಧರಿಸುವ ಕುಂಡಲಾ ಭರಣರೂಪಿಯಾದ ಆದಿಶೇಷನನ್ನೇ ಬಿಲ್ಲಿನ ಹೆದೆಯನ್ನಾಗಿಯೂ ತನ್ನ ವಾಸಸ್ಥಳವೆನಿ ಸಿದ ಮೇರುಗಿರಿಯನ್ನೇ ಧನುಸ್ಸನ್ನಾಗಿಯೂ ಗರುಡವಾಹನನಾದ ಲಕ್ಷ್ಮೀಕಾಂತನನ್ನೇ ಮುಖ್ಯ ಬಾಣವನ್ನಾಗಿಯೂ, ಸಾಕ್ಷಾತ್ಕಮಲಪ್ರಿಯನಾದ ಬ್ರಹ್ಮನನ್ನು ಸಾರಥಿಯ

ಸ್ತುತ್ವಾ ವಿಜ್ಞಾನಸಂಬಂಧೇ ಪ್ರಯಾತೇ ನಿಜವೇಶ್ಮನಿ ।
ಉವಾಸ ಸುಚಿರಂ ಧ್ಯಾಯನ್ನುಮಾಲಂಕೃತವಿಗ್ರಹಂ ॥೪೨॥

ತತೋ ವಿಜ್ಞಾನಸಂಬಂಧ ವಿವಾಹೋತ್ಸವದರ್ಶಿಭಿಃ ।
ಸಹ ಸರ್ವೈಶ್ಚ ಸಾಯುಜ್ಯಮಗಮತ್ಸಹಸಾ ದ್ವಿಜಃ ॥೪೩॥

ಸಂಪ್ರಾಪ್ಯ ಸಾಯುಜ್ಯಮಶೇಷಕರ್ತುರ್
ವಿಧೂಯ ದೂರೇಽಖಿಲಪಂಚಪಾಶಾನ್ ।
ಆನಂದಸಾಮ್ರಾಜ್ಯಪದಾಧಿರೂಢಃ
ಸಂಪ್ರಾಪ್ಯ ಸಾಮ್ಯಂ ಪರಮಂ ಶಿವೇನ ॥೪೪॥

---

ನ್ನಾಗಿಯೂ, ತನ್ನ ನೇತ್ರಗಳೆನಿಸಿದ್ದ ಸೂರ್ಯಚಂದ್ರರನ್ನೇ ರಥಚಕ್ರಗಳನ್ನಾಗಿಯೂ ತನ್ನ ಶ್ವಾಸರೂಪವಾದ ನಾಲ್ಕು ವೇದಗಳನ್ನೇ ನಾಲ್ಕು ಕುದುರೆಗಳನ್ನಾಗಿಯೂ ಮಾಡಿಕೊಂಡನು. ಅಷ್ಟಮೂರ್ತಿಸ್ವರೂಪನಾದ ಮಹೇಶ್ವರನು ಹಾಗೆ ತನ್ನ ಅಷ್ಟ ವಿಧಸ್ವರೂಪದಿಂದಲೂ ಕೂಡಿದವನಾಗಿ ಶತ್ರುಸಂಹಾರಕಾರ್ಯದಲ್ಲಿ ಜಯಶಾಲಿ ಯಾದನು. ಮಹೇಶ್ವರನ ಐಶ್ವರ್ಯವನ್ನು ಎಷ್ಟೆಂದು ಹೇಳಲಿ ? ಪ್ರಭೋ, ಇವೆಲ್ಲವೂ ನಿನ್ನ ಎಂಟು ಶರೀರಗಳು ; ಶಂಕರನೇ, ಈ ಪ್ರಪಂಚವೆಲ್ಲವೂ ನಿನ್ನ ಶರೀರರೂಪವೇ ಆಗಿರುವುದು. ॥೪೧॥

ಹೀಗೆ ವಿಜ್ಞಾನಸಂಬಂಧನು ಸ್ತೋತ್ರಮಾಡಿ ಅಲ್ಲಿಂದ ಹೊರಟುಹೋಗಲು ಇತ್ತ ನೀಲಲಗ್ನನು ತನ್ನ ಮನೆಯಲ್ಲಿ ಉಮಾಕಾಂತನನ್ನು ನಿಶ್ಚಲವಾಗಿ ಧ್ಯಾನಿ ಸುತ್ತಾ ಇದ್ದನು. ಆಮೇಲೆ ವಿಜ್ಞಾನಸಂಬಂಧನ ವಿವಾಹಸಂರಂಭವನ್ನು ನೋಡ ಬಯಸುವ ಎಲ್ಲ ಜನಗಳೊಡನೆಯೂ ಈ ನೀಲಲಗ್ನನು ಶಿವನ ಸಾಯುಜ್ಯವನ್ನು ಜಾಗ್ರತೆಯಾಗಿ ಸೇರಿದನು. ॥೪೨-೪೩॥

ಹಾಗೆ ಸಕಲ ಜಗತ್ಸೃಷ್ಟಿ, ಸ್ಥಿತಿ, ಸಂಹಾರಕರ್ತೃವಾದ ಶಂಕರನ ಸಾಯುಜ್ಯ ವನ್ನು ಹೊಂದಿ, ಆ ಮೂಲಕ ಸಕಲ ಪಂಚಪಾಶಗಳನ್ನೂ ಅಂದರೆ ಪಂಚೇಂದ್ರಿಯ ಜನ್ಯವಾದ ವಿಷಯಲಾಲಸೆಯನ್ನು ಕಿತ್ತೊಗೆದು, ಶಿವಜ್ಞಾನದಿಂದ ಶಿವಸಾಮ್ಯವನ್ನು ಹೊಂದಿ ಆ ನೀಲಲಗ್ನನು ಆನಂದಸಾಮ್ರಾಜ್ಯಪದವಿಯನ್ನೇರಿದನು. ಅಂದರೆ ಶಿವ ಸಾರೂಪ್ಯವಾದ ಮುಕ್ತಿಯನ್ನು ಪಡೆದು ಪುನರ್ಜನ್ಮರಹಿತನಾದನು. ॥೪೪॥

ಯೇ ನೀಲಲಗ್ನಸ್ಯ ಚರಿತ್ರಮೇತ
ಚ್ಛೃಣ್ವಂತಿ ವಾ ಸರ್ವಜಗತ್ಪವಿತ್ರಂ ।
ತೇ ಭುಕ್ತಿಲಕ್ಷ್ಮೀಮನುಭೂಯ ಭೂಮೌ
ಮಹೇಶ್ವರಸ್ಯಾಂಘ್ರಿಯುಗಂ ಪ್ರಯಾಂತಿ ॥೪೫॥

ಇತಿ ಶ್ರೀಶಿವರಹಸ್ಯೇ ಸದಾಶಿವಾಖ್ಯೇ ನವಮಾಂಶೇ
ನೀಲಲಗ್ನಾಖ್ಯಭಕ್ತಚರಿತ್ರವರ್ಣನೇ ಏಕೋನಪಂಚಾಶೋಽಧ್ಯಾಯಃ

---

ಸಕಲಲೋಕಪಾವನವಾದ ಈ ನೀಲಲಗ್ನನ ಚರಿತೆಯನ್ನು ಕೇಳುವವರು ಇಹದಲ್ಲಿ (ಭೂಮಿಯಲ್ಲಿ) ಸಕಲ ಭೋಗಸಂಪತ್ತುಗಳನ್ನೂ ಅನುಭವಿಸಿ, ಕೊನೆಯಲ್ಲಿ ಆ ಮಹಾದೇವನ ಪಾದಯುಗ್ಮಗಳನ್ನೈದುವರೆಂದು ಕುಮಾರಸ್ವಾಮಿಯು ಜೈಗೀಷವ್ಯನಿಗೆ ನಿರೂಪಿಸಿದನು. ॥೪೫॥

ಇಲ್ಲಿಗೆ ಶ್ರೀಶಿವರಹಸ್ಯದಲ್ಲಿ ಸದಾಶಿವಸಂಜ್ಞಕವಾದ ಒಂಬತ್ತನೆಯ ಅಂಶದಲ್ಲಿ
ನೀಲಲಗ್ನನೆಂಬ ಹೆಸರಿನ ಶೈವಕಥಾವರ್ಣನೆಯೆಂಬ ನಲವತ್ತೊಂಬತ್ತನೆಯ
ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಸದಾಶಿವಾಖ್ಯೇ

## ನವಮಾಂಶೇ

## ಪಂಚಾಶೋಽಧ್ಯಾಯಃ

॥ ಶ್ರೀಸ್ಕಂದ ಉವಾಚ ॥

ಪ್ರಣಮ್ಯ ನೀಲಲಗ್ನಸ್ಯ ಶಿವಸಾಯುಜ್ಯಮೀಯುಷಃ ।
ಬಹುಧಾ ಚರಣೌ ಪೀಡ್ಯ ನಮಿನಂತಿಕಥಾಂ ಶುಭಾಂ ॥೧॥

ಯದಾಜ್ಞಾಃ ಸರ್ವಭೂಪಾಲಾ ವಹಂತೋ ನಿಜಮೂರ್ಧಭಿಃ ।
ನೀರಾಜಯಂತಿ ಕೋಟೀರರತ್ನದೀಪೈಃ ಪದಾಂಬುಜಂ ॥೨॥

ನಟನ್ಮೃಡಪದಾಂಗುಷ್ಠನಖಾಗ್ರಕೃತರಂಧ್ರತಃ ।
ಯತ್ಪ್ರತಾಪಾನಲಜ್ವಾಲಾಜಾಲೈರುತ್ಸರ್ಪಿಭಿರ್ಮುಹುಃ ॥೩॥

---

## ಐವತ್ತನೆಯ ಅಧ್ಯಾಯ

ಜೈಗೀಷವ್ಯಮಹರ್ಷಿಯೇ, ಈಶ್ವರಭಕ್ತನಾದ ನೀಲಲಗ್ನನಿಗೆ ನಮಸ್ಕರಿಸಿ, ಶಿವಸಾಯುಜ್ಯಪಡೆದ ಆ ಮಹಾತ್ಮನ ಪಾದಗಳನ್ನು ಭಕ್ತಿಯಿಂದ ಧ್ಯಾನಿಸಿ, ಅನಂತರ ಶುಭಕರವಾದ 'ನಮಿನಂತಿ'ಯೆಂಬ ಶೈವನ ಕಥೆಯನ್ನು ಹೇಳುವೆನು ಕೇಳು; ಮಹಾತ್ಮನಾದ ಆ ನಮಿನಂತಿಯ ಅಪ್ಪಣೆಯಂತೆ ಸಮಸ್ತ ರಾಜರೂ ನಡೆಯುತ್ತಾ, ತಮ್ಮ ತಲೆಯಲ್ಲಿ ಧರಿಸಿರುವ ಕಿರೀಟಗಳ ರತ್ನದೀಪಗಳಿಂದ ಅವನ ಪಾದಕಮಲವನ್ನು ಬೆಳಗಿಸುತ್ತಾ ರಾಜ್ಯಭಾರಮಾಡುತ್ತಿರುವರು. ॥೧-೨॥

ಅಂತಹ ನಮಿನಂತಿಯು ನೆಲಸಿದ್ದ ದೇಶವೇ ಚೋಲದೇಶವೆಂಬುದು. ಆ ದೇಶವನ್ನು ಚೋಲರಾಜರು ಬಹು ವಿಚಕ್ಷಣೆಯಿಂದ ಪರಿಪಾಲಿಸುತ್ತಿರುವರು.

ಬ್ರಹ್ಮಾಂಡಮುಖನಿಕ್ಷಿಪ್ತನವಪಲ್ಲವಸಂಹತೇಃ ।
ಸುವರ್ಣಪೂರ್ಣಕುಂಭಸ್ಯ ವಿಭ್ರಮಂ ವಹತಿ ಸ್ಫುಟಂ ॥೪॥

ಮನುಮಾಂಧಾತೃ ನಹುಷನಲರಾಮಮುಖಾನ್ನೃಪಾನ್ ।
ಅನ್ಯಾನ್‌ಶೇರಯತೇ ಚಿತ್ರಚರಿತೈರ್ವಿಕ್ರಮಾರ್ಜಿತೈಃ ॥೫॥

ತಾದೃಶೈಃ ಸೂರ್ಯವಂಶಾನಾಂ ಕೊಟಿಸ್ಥೈರ್ಬಾಹುಜೋತ್ತಮೈಃ ।
ರಕ್ಷಿತೇ ಚೋಲಭೂಪಾಲ್ಯೈಃ ಕವೇರತನಯಾತಟೇ ॥೬॥

ಹೇಮಲಾಭಪುರೇ ಕಶ್ಚಿನ್ನಮಿನಂತ್ಯಾಖ್ಯಯಾ ಶ್ರುತಃ ।
ಯಸ್ತ್ರೇತಾಗ್ನೌ ರವೌ ಲಿಂಗೇ ಚಿತ್ತೇ ಚಾನರ್ಚ್ಯ ಶಂಕರಂ ॥೭॥

ಶಿವೈಕತಾನಃ ಸತತಂ ಶಿವಭಕ್ತಾಭಿಪೂಜಕಃ ।
ಜಿತಾರಿವರ್ಗಃ ಸುಮನಾ ಯಶ್ಚಚಾರ ತ್ರಯೀಪಥಿ ॥೮॥

---

ಚೋಲರಾಜರ ಪ್ರತಾಪಾಗ್ನಿಯು ಸರ್ವತ್ರ ವ್ಯಾಪಿಸಿ ಸರ್ವದೇಶವನ್ನೂ ಅಚ್ಚರಿಗೊಳಿಸಿರುವುದು. ಮಂಡಲಾಕಾರದಲ್ಲಿರುವ ಚೋಲದೇಶವಾದರೋ, ಬ್ರಹ್ಮಾಂಡವೆಂಬ ಒಂದು ಪಲ್ಲವಸಮೂಹದಲ್ಲಿ ಅಡಗಿರುವ ಚಿನ್ನದ ಗಡಿಗೆಯ ಸಾಮ್ಯವನ್ನು ಪಡೆದು ಸರ್ವತ್ರ ವಿರಾಜಿಸುತ್ತಿರುವುದು. ಸುವರ್ಣಘಟದ ವೈಭವವೇ ಚೋಲದೇಶದಲ್ಲಿ ತೋರಿಬರುತ್ತಿದ್ದಿತು. ॥೩-೪॥

ಮನು, ಮಾಂಧಾತೃ, ನಹುಷ, ನಳ, ರಾಮನೇ ಮೊದಲಾದ ಪ್ರಸಿದ್ಧರಾಜರನ್ನೂ, ಇತರ ಸಾಮಾನ್ಯ ರಾಜರನ್ನೂ ಮೀರಿಸಿ ತಮ್ಮ ಬಾಹುಪರಾಕ್ರಮದಿಂದ ಮೆರೆದ ಚೋಲರಾಜರು ದಿವ್ಯಚರಿತ್ರೆಗಳಿಂದ ಲೋಕದಲ್ಲಿ ಪ್ರಸಿದ್ಧಿಗೆ ಬಂದಿರುವರು. ಇಂತಹ ಕ್ಷತ್ರಿಯೋತ್ತಮರಾದ ಸೂರ್ಯವಂಶೀಯ ರಾಜರಿಂದ ಕಾಪಾಡಲ್ಪಟ್ಟ ಚೋಲಮಂಡಲದಲ್ಲಿ ಕಾವೇರೀನದೀ ದಡದಲ್ಲಿರುವ 'ಹೇಮಲಾಭ' ಎಂಬ ಪಟ್ಟಣದಲ್ಲಿ 'ನಮಿನಂತಿ' ಎಂಬ ಹೆಸರಿನಿಂದ ಪ್ರಸಿದ್ಧನಾದ ಈಶ್ವರಭಕ್ತನಿದ್ದನು. ॥೫-೬॥

ಇವನು ದಕ್ಷಿಣಾಗ್ನಿ, ಗಾರ್ಹಪತ್ಯ ಮತ್ತು ಆಹವನೀಯಗಳೆಂಬ ತ್ರೇತಾಗ್ನಿಗಳಲ್ಲಿಯೂ, ಸೂರ್ಯ, ಈಶ್ವರ, ಲಿಂಗ ಮತ್ತು ತನ್ನ ಮನಸ್ಸಿನಲ್ಲಿಯೂ ಸಹ ಯಾವಾಗಲೂ ಶಿವನನ್ನೇ ಧ್ಯಾನಿಸಿ, ಪೂಜಿಸಿ ಯಾವಾಗಲೂ ಶಿವನಲ್ಲಿಟ್ಟ ಮನಸ್ಸಿನಿಂದ ಶಾಂಭವರ ಪೂಜೆಯನ್ನು ಮಾಡುತ್ತಿದ್ದನು. ಈತನು ಎಲ್ಲಾ ಶತ್ರುಗಳನ್ನೂ

ಸ ತತ್ರ ನಿವಸನ್ವಿಪ್ರಃ ಸಾಕ್ಷಾದಗ್ನಿರಿವಾಪರಃ ।
ಸರ್ವವೇದಾರ್ಥವಿಜ್ಞಾನಸ್ತದನುಷ್ಠಾನನಿರ್ಮಲಃ ॥೯॥

ಶಿವಮೇವ ಪರಂ ದೇವಂ ಪ್ರಾಪ ಯಃ ಶರಣಂ ಪ್ರಭುಂ ।
ತ್ರಿವಿಧೈಃ ಕರಣೈರೇನಮಾರರಾಧ ಗತಸ್ಪೃಹಃ ॥೧೦॥

ಕಮಲಾಲಯಮಭ್ಯೇತ್ಯ ಕದಾಚಿಜ್ಜಗದೀಶ್ವರಂ ।
ಪ್ರಣಮ್ಯ ನಿಶಿ ದೇವಸ್ಯ ದೀಪಾರೋಪಣಮುದ್ದಿಶನ್ ॥೧೧॥

ಘೃತಂ ಯಾಚಿತುಮೇಕಸ್ಯ ಜಿನಸ್ಯ ಸದನಂ ಗತಃ ।
ಜಗದೇ ತೇನ ತತ್ರೈಷಃ ಸೋಪಾಲಂಭಮಿದಂ ವಚಃ ॥೧೨॥

ವಿಪ್ರಮೂಢಪ್ರದೀಪೈಃ ಕಿಂ ತದ್ದೇವಸ್ಯ ಯತೋಽಹ್ಯಯಂ ।
ಸೋಮಸೂರ್ಯಾಗ್ನಿನಯನಃ ಸ್ವಯಂ ಚೈತತ್ತಥಾತ್ಮಕಃ ॥೧೩॥

---

(ಅಥವಾ ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯಗಳೆಂಬ ಅರಿಷಡ್ವರ್ಗವನ್ನೂ) ಸಾಧನೆಯಿಂದ ಗೆದ್ದು ಒಳ್ಳೆಯ ಮನಸ್ಸಿನಿಂದ ಶಿವಧ್ಯಾನ ಮಾಡುತ್ತಾ ವೇದಮಾರ್ಗದಲ್ಲಿ ನಡೆಯುತ್ತಿದ್ದನು. ಸಾಕ್ಷಾದಗ್ನಿಯಂತೆ ತೇಜಸ್ವಿಯಾದ ಈ ಬ್ರಾಹ್ಮಣನು ಆ ಹೇಮಲಾಭಪುರದಲ್ಲಿಯೇ ವಾಸಮಾಡುತ್ತಾ, ಸಕಲ ವೇದಾರ್ಥಗಳನ್ನೂ ಅರಿತು, ಅದರಂತೆ ನಡೆಯುತ್ತಾ ಪರಿಶುದ್ಧಸ್ವಭಾವದಿಂದಿದ್ದನು. ॥೭-೮-೯॥

ಅವನು ಕ್ರೀಡಾದಿಗುಣವಿಶಿಷ್ಟನೂ, ಸರ್ವಸಮರ್ಥನೂ, ಶ್ರೇಷ್ಠನೂ ಆದ ಶಿವನನ್ನೇ ಪರಮದೈವವೆಂದು ತಿಳಿದು ಅವನನ್ನೆ ಮರೆಹೊಕ್ಕಿದ್ದನು. ಕಾಯ, ವಾಕ್ಕು, ಮನಸ್ಸೆಂಬ ಮೂರು ಕರಣಗಳಿಂದಲೂ ಪರಮಶಿವನನ್ನು ಪೂಜಿಸುತ್ತಾ ನಿರ್ಲಿಪ್ತನಾಗಿದ್ದನು. ಈ ನಮಿನಂತಿಯು ಒಂದುಸಲ ಕಮಲಾಲಯಕ್ಷೇತ್ರಕ್ಕೆ ಹೋಗಿ ಅಲ್ಲಿ ಜಗದೊಡೆಯನಾದ ಮಹೇಶ್ವರನಿಗೆ ಪ್ರಣಾಮಮಾಡಿ, ರಾತ್ರಿಯಲ್ಲಿ ಆ ಮಹಾದೇವನಿಗೆ ದೀಪೋತ್ಸವವನ್ನು ನಡೆಸಬೇಕೆಂದು ಉದ್ದೇಶಿಸಿ, ಒಬ್ಬ ಜೈನನ ಮನೆಗೆ ತುಪ್ಪವನ್ನು ಬೇಡಲು ಹೋದನು. ॥೧೦-೧೧॥

ಆಗ ಆ ಜೈನನು ಇವನನ್ನು ನೋಡಿ ನಿಂದಾಪೂರ್ವಕವಾಗಿ ಹೀಗೆ ನುಡಿದನು. ಓ ಮೂರ್ಖಬ್ರಾಹ್ಮಣನೇ, ಆ ನಿಮ್ಮ ದೇವರಿಗೆ ದೀಪಗಳಿಂದೇನು ಪ್ರಯೋಜನ? ಸಾಕ್ಷಾತ್ ಪರಶಿವನೇ ಚಂದ್ರ, ಸೂರ್ಯ ಮತ್ತು ಅಗ್ನಿಗಣ್ಣುಗ

ತನ್ಮೂರ್ತೇರ್ವಹ್ನಿಜಲಯೋರ್ನಾಸ್ತೀತ್ಯಾತ್ಯಂತಿಕೀ ತದಾ ।
ಅತೋ ಜಲೈರ್ಭವಾನ್ದೀಪಂ ಪ್ರಭೂತಂ ಪರಿಣಾಮಯ ॥೧೪॥

ಇತಿ ಶ್ರುತ್ವಾ ವಚಸ್ತಸ್ಯ ದ್ವಿಜೋ ವ್ಯಥಿತಮಾನಸಃ ।
ವಲ್ಮೀಕಪತಿಮಭ್ಯೇತ್ಯ ವವಂದೇ ಶಿರಸಾ ವಿಭುಂ ॥೧೫॥

ತತ್ರ ವಾಚಾ ಶರೀರಿಣ್ಯಾ ಕುರು ದೀಪಾನ್ಜಲೈರಿತಿ ।
ಉಕ್ತಃ ಪ್ರಮುದಿತಶ್ಚಕ್ರೇ ತಯೈವೇತಾಂತ್ಸಹಸ್ರಶಃ ॥೧೬॥

ತೇನ ವಿಸ್ಮಾಯಿತಾಶೇಷಜನತಾವಿಹಿತಸ್ತವಃ ।
ಪುನಃ ಪುನರುಪಾಗಮ್ಯ ಪೂಜಯಾಮಾಸ ಶಂಕರಂ ॥೧೭॥

ಸ ತತ್ರೋತ್ತರಫಲ್ಗುನ್ಯಾಂ ಜಾತು ಯಾತ್ರೋತ್ಸವೇ ದ್ವಿಜಃ ।
ಮಣಿಲಸ್ಥಲಮಾಯಾಂತಂ ತ್ಯಾಗಾಧೀಶ್ವರಮೀಶ್ವರಂ ॥೧೮॥

---

ಳುಳ್ಳವನು. ಅಲ್ಲದೆ ಅವನ ಅಷ್ಟಮೂರ್ತಿಗಳಲ್ಲಿ ಅಗ್ನಿ ಮತ್ತು ನೀರಿಗೆ ಹೆಚ್ಚಿನ ತಾರತಮ್ಯವೇನೂ ಕಾಣಬರುವುದಿಲ್ಲವಾದ್ದರಿಂದಲೂ ಅವೆರಡೂ ಅವನ ರೂಪಗಳೇ ಆದುದರಿಂದಲೂ ನೀನು ವಿಶೇಷವಾಗಿ ನೀರಿನಿಂದಲೇ ದೇವರಿಗೆ ದೀಪವನ್ನು ಹೊತ್ತಿಸೆಂದು ಹಾಸ್ಯಮಾಡುತ್ತಾ ಹೇಳಿದನು. ॥೧೨-೧೩-೧೪॥

ಹೀಗೆ ನುಡಿದ ಜೈನನ ಮಾತುಗಳನ್ನು ಕೇಳಿ ಆ ಬ್ರಾಹ್ಮಣನು ಖಿನ್ನ ಮನಸ್ಕನಾಗಿ, ವಲ್ಮೀಕೇಶ್ವರನ ಬಳಿಗೆ ಬಂದು ಆ ಸ್ವಾಮಿಗೆ ತಲೆಬಾಗಿ ನಮಸ್ಕಾರ ಮಾಡಿ ಪ್ರಾರ್ಥಿಸುತ್ತಾ, ಆ ಜೈನನು ಆಡಿದ ಮಾತುಗಳನ್ನು ನೆನೆಯುತ್ತಾ ದುಃಖ ಪಡುತ್ತಿದ್ದನು. ಕೂಡಲೇ, " ಜೈನನು ಹೇಳಿದಂತೆಯೇ ನೀರಿನಿಂದಲೇ ದೀಪಗಳನ್ನು ಹೊತ್ತಿಸು. ಅದು ಉರಿಯುವುದು " ಎಂದು ಅಶರೀರವಾಣಿಯಾಯಿತು. ಅದನ್ನು ಕೇಳಿ ಸಂತುಷ್ಟನಾಗಿ ಅದರಂತೆಯೇ ಕೇವಲ ನೀರಿನಿಂದಲೇ ಸಾವಿರಾರು ದೀಪ ಗಳನ್ನು ಹೊತ್ತಿಸಿದನು. ॥೧೫-೧೬॥

ಇದನ್ನು ನೋಡಿ ಆಶ್ಚರ್ಯಗೊಂಡ ಸಕಲ ಜನಸಮೂಹವೂ ಇವನನ್ನು ಸ್ತೋತ್ರಮಾಡಲುಪಕ್ರಮಿಸಿತು. ಪದೇ ಪದೇ ಈ ನಮಿನಂತಿಯು ಇದೇ ರೀತಿ ವಲ್ಮೀಕೇಶ್ವರನ ಬಳಿಗೆ ಬಂದು ಶಂಕರನನ್ನು ಪೂಜೆಮಾಡತೊಡಗಿದನು. ಒಂದು ಸಲ ಇವನು ಉತ್ತರಾಭಾದ್ರ ನಕ್ಷತ್ರದಲ್ಲಿ ನಡೆಯುತ್ತಿದ್ದ ಯಾತ್ರೋತ್ಸವದಲ್ಲಿ

ಕಮಲಾಲಯವಾಸ್ತವ್ಯಂ ಸಮಸ್ತಜನಸುಸ್ಥಿರಂ ।
ಅನುವ್ರಜ್ಯ ಪುನಃ ಸಾಯಂ ಪ್ರಿಯಯಾ ನಿಜಮಂದಿರಂ ॥೧೯॥

ಶಯಾನಃ ಸ ಬಹಿರ್ವೇದ್ಯಾಂ ಪೂಜಾಭೋಜನಕರ್ಮಣೇ ।
ಬೋಧಯಂತೀಂ ನಿಜಾಂ ಪತ್ನೀಂ ಪ್ರಬುದ್ಧೋ ಗಿರಮಭ್ಯಧಾತ್ ॥೨೦॥

ಅದೃಶ್ಯೈರ್ಬಹುಭಿಸ್ಸ್ಪೃಷ್ಟಸ್ತತ್ರ ಯಾತ್ರೋತ್ಸವೇ ವಿಭೋಃ ।
ಸ್ನಾತ್ವಾಭ್ಯವಹರಾಮೀತಿ ತಾಂ ಪ್ರೇಷ್ಯ ಸ್ವಯಮಸ್ವಪತ್ ॥೨೧॥

ಕಮಲಾಲಯಜಾನ್ಸರ್ವಾನ್ಜಾನೀಹಿ ಸರ್ವಶಂಕರಾನ್ ।
ಇತಿ ವಾಚಂ ವಿಭೋಃ ಶ್ರುತ್ವಾ ಬುಬುಧೇ ಧೃತವಿಸ್ಮಯಃ ॥೨೨॥

ತಂ ಪತ್ನ್ಯೈ ಸ್ವಪ್ನವೃತ್ತಾಂತಂ ನಿವೇದ್ಯ ಸಮಗಾದ್ದ್ವಿಜಃ ।
ಕಮಲಾಲಯಮಭ್ಯೇತ್ಯ ದದರ್ಶ ನಿಖಿಲಾನ್ಜನಾನ್ ॥೨೩॥

---

ಭಾಗಿಯಾಗಿ, ಕಮಲಾಲಯಕ್ಷೇತ್ರವಾಸಿಯೂ ತ್ಯಾಗಾಧೀಶನೂ ಆದ ಮಹೇಶ್ವರನು ಸಕಲ ಭಕ್ತಜನರಿಂದ ತಾನು ಸೇವಿತನಾಗಿರುವುದನ್ನು ನೋಡಿ, ಆಶ್ಚರ್ಯಪಡುತ್ತಾ ಉತ್ಸವದ ಹಿಂಭಾಗದಲ್ಲಿಯೇ ಮಣಿಸ್ಥಲಕ್ಕೆ ಬಂದು ಸೇರಿದನು. ॥೧೭-೧೮॥

ಆ ಉತ್ಸವದಲ್ಲಿ ಭಾಗವಹಿಸಿ ನಮಿನಂತಿಯು ಹಾಗೆಯೇ ಸಾಯಂಕಾಲದಲ್ಲಿ ಮನೆಗೆ ಹಿಂದಿರುಗಿ ಬಂದು ಹೊರಗಡೆ ಜಗಲಿಯ ಮೇಲೆ ಮಲಗಿರಲು, ಅವನ ಹೆಂಡತಿಯು ಸಾಯಂಕಾಲದ ಪೂಜೆಗೂ ಮತ್ತು ಭೋಜನಕ್ಕೂ ತನ್ನ ಗಂಡನನ್ನು ಎಚ್ಚರಿಸಿದಳು. ಹಾಗೆ ತನ್ನನ್ನು ಎಚ್ಚರಿಸಿದ ತನ್ನ ಧರ್ಮಪತ್ನಿಗೆ "ಪ್ರಿಯೆ, ಅಪರಿಚಿತರಾದ ಅನೇಕ ಮಂದಿ ಜನರು ಮಹೇಶ್ವರನ ಉತ್ಸವಸಮಾರಂಭದಲ್ಲಿ ನನ್ನನ್ನು ಮುಟ್ಟಿರುವರು, ಆದ್ದರಿಂದ ನಾನು ಸ್ನಾನಮಾಡಿದನಂತರ ಊಟಮಾಡುತ್ತೇನೆ" ಎಂದು ಹೇಳಿ ಅವಳನ್ನು ಅತ್ತ ಕಳುಹಿಸಿ ತಾನು ಮಾತ್ರ ಹಾಗೆಯೇ ಮಲಗಿಕೊಂಡನು. ॥೧೯-೨೦-೨೧॥

ಆಗ ಕನಸಿನಲ್ಲಿ ಮಹಾದೇವನು, "ಓ ನಮಿನಂತಿಯೇ, ಕಮಲಾಲಯದಲ್ಲಿರುವವರೆಲ್ಲರೂ ಶೈವೋತ್ತಮರೆಂದು ತಿಳಿ, ಅವರೆಲ್ಲರೂ ಪವಿತ್ರರು" ಎಂದು ಹೇಳಿದಂತಾಗಲು, ಆಗ ಆ ಮಾತುಗಳನ್ನು ಕೇಳಿ ಆಶ್ಚರ್ಯಚಕಿತನಾಗಿ ಕೂಡಲೇ ಎದ್ದು ತನ್ನ ಕನಸಿನ ಸಮಾಚಾರವನ್ನು ಹೆಂಡತಿಗೆ ತಿಳಿಸಿ ಆ ಬ್ರಾಹ್ಮಣನು

ಪರಶ್ವಥಮೃಗಾಭೀತಿವರಹಸ್ತಾನ್ತ್ರಿಲೋಚನಾನ್ ।
ಚಂದ್ರಖಂಡಧರಾನುದ್ಯತ್ತಪನಾಯುತತೇಜಸಃ ॥೨೪॥

ಸ ವಿಸ್ಮಯಸ್ತಾನಖಿಲಾನಭಿವಂದ್ಯ ತತೋ ಹರಂ ।
ಪ್ರಣಿಪತ್ಯಾಂಜಲಿಧರಃ ಪ್ರಾಹ ಭಕ್ತ್ಯಾನುಕಂಪನಂ ॥೨೫॥

ಪ್ರಸೀದ ಪಾರ್ವತೀನಾಥ ಪ್ರಸೀದ ಪರಮೇಶ್ವರ ।
ಪ್ರಸೀದ ಸಚ್ಚಿದಾನಂದ ಪ್ರಸೀದ ಕರುಣಾನಿಧೇ ॥೨೬॥

ನಮಸ್ತೇ ಸರ್ವಜಗತಾಂ ನಾಥ ಕಾರಣ ಶಂಕರ ।
ಪಾಲಕಾಯ ನಮಸ್ತುಭ್ಯಂ ಸಂಹರ್ತ್ರೇ ಚ ನಮೋ ನಮಃ ॥೨೭॥

ಸತ್ವಂ ರಜಸ್ತಮಶ್ಚೇತಿ ತ್ರಿಭಿರ್ಮಾಯಾಗುಣೈರ್ವೃತಃ ।
ತ್ರಿಧಾ ಸ್ಥಿತಂ ತ್ವಮಖಿಲಂ ಸೃಜಸ್ಯವಸಿ ಹಂಸಿ ಚ ॥೨೮॥

---

ಅಲ್ಲಿಂದ ಮತ್ತೆ ಕಮಲಾಲಯಕ್ಕೆ ಹೊರಟು, ಅಲ್ಲಿನ ಎಲ್ಲ ಜನರನ್ನೂ ಶೈವೋತ್ತಮ ರೆಂಬ ಭಾವನೆಯಿಂದ ನೋಡಲಾರಂಭಿಸಿದನು. ॥೨೨-೨೩॥

ಅವನ ಭಾವನೆಯಂತೆ ಅವರೆಲ್ಲರೂ ಪರಶು, ಜಿಂಕೆ, ಅಭಯ ಮತ್ತು ವರದಹಸ್ತರೂ, ಮುಕ್ಕಣ್ಣರೂ, ಚಂದ್ರಖಂಡವನ್ನು ತಲೆಯಲ್ಲಿ ಧರಿಸಿರುವವರೂ, ಉದಯಿಸುತ್ತಿರುವ ಹತ್ತುಸಾವಿರ ಸೂರ್ಯತೇಜಸ್ಸುಳ್ಳವರೂ ಆಗಿರಲು, ಆ ನಮಿನಂತಿಯು ಅವರನ್ನು ನೋಡಿ ಆಶ್ಚರ್ಯಗೊಂಡು ಎಲ್ಲರಿಗೂ ನಮಸ್ಕರಿಸಿ, ಆಮೇಲೆ ಪರಮೇಶ್ವರನಿಗೂ ವಂದಿಸಿ, ಭಕ್ತಿವಿನಯಗಳಿಂದ ಕೈಮುಗಿದುಕೊಂಡು ಮಹಾದೇವನನ್ನು ಇಂತು ಸ್ತೋತ್ರಮಾಡಿದನು. ॥೨೪-೨೫॥

ಓ ಪಾರ್ವತೀರಮಣನೇ, ಪ್ರಸನ್ನನಾಗು; ಹೇ ಪರಮೇಶ್ವರನೇ, ಅನುಗ್ರಹಿಸು; ಸಚ್ಚಿದಾನಂದಸ್ವರೂಪನೂ, ದಯಾನಿಧಿಯೂ ಆದ ಶಂಕರನೇ, ನನ್ನನ್ನು ಸಲಹು. ಸಕಲ ಜಗತ್ಕಾರಣಭೂತನಾದ ಶಿವನೇ, ನಿನಗೆ ನಮಸ್ಕಾರವು; ಈ ಜಗದ್ರಕ್ಷಕನೂ ಕೊನೆಯಲ್ಲಿ ನಾಶಮಾಡುವವನೂ ನೀನೇ ಆಗಿರುವೆ; ಶಂಕರನೇ, ನಿನಗೆ ಅನಂತ ನಮಸ್ಕಾರಗಳು. ॥೨೬-೨೭॥

ಸತ್ವ, ರಜಸ್ಸು ಮತ್ತು ತಮಸ್ಸುಗಳೆಂಬ ಮೂರು ಮಾಯಾದೇಹಗಳಿಂದ ವ್ಯಾಪ್ತನಾಗಿ, ತ್ರಿಗುಣಾತ್ಮಕವಾದ ಈ ಪ್ರಪಂಚವನ್ನೆಲ್ಲಾ ನೀನೇ ಸೃಷ್ಟಿಸಿ,

ಕಾರ್ಯಾದ್ಯೈರ್ನವಭಿರ್ಲಿಂಗೈಸ್ತಥೈವಾಷ್ಟತನುಂ ವಿಭುಂ ।
ಸರ್ವಜ್ಞಂ ಸರ್ವಕರ್ತಾರಮಾಹುಸ್ತ್ವಾಂ ಮಾನವೇದಿನಃ ॥೨೯॥

ಜೀವಾದಿಭಿನ್ನಮೇಕಂ ತ್ವಾಂ ಜೀವಂ ಕೇಚಿತ್ಪ್ರಚಕ್ಷತೇ ।
ಭಿನ್ನಾಭಿನ್ನ ಪರೇ ಕೇಽಪಿ ಭೇದಾಭೇದವಿವರ್ಜಿತಂ ॥೩೦॥

ಚಿನ್ಮಯಾಖ್ಯಾಯಿನಂ ನಿತ್ಯಂ ಶಾಂತಮೇಕಂ ಸದಾಶಿವಂ ।
ಸರ್ವಾನುಗ್ರಾಹಕಂ ಶಂಭುಂ ತ್ವಾಂ ವದಂತಿ ತ್ವದಾಗಮಾಃ ॥೩೧॥

ನಿಗಮಾಶ್ಚ ವದಂತಿ ತ್ವಾಂ ಮಹೇಶಂ ಪುರುಷೋತ್ತಮಂ ।
ಸರ್ವಜ್ಞಂ ಸುಗತಾಃ ಸಿದ್ಧಾಃ ಪರಮೇಷ್ಠಿನ ಮಾರ್ಹತಾಃ ॥೩೨॥

ಹಾಹಂತ ಕಾರಮೋಸ್ಯಾಹುರ್ವಿಶ್ವಕರ್ಮೇತಿ ಶಂಕರಂ ।
ತ್ವಾಂ ಲೋಕವ್ಯಾಪಿಕಾಶ್ಚಾಪಿ ಲೋಕಸಿದ್ಧೇಶ್ವರಂ ವಿದುಃ ॥೩೩॥

---

ಬ್ರಹ್ಮ, ವಿಷ್ಣು, ಮಹೇಶ್ವರರೆಂಬ ಮೂರು ರೂಪಗಳನ್ನು ಪಡೆದು, ಜಗತ್ತಿನ ಸೃಷ್ಟಿ, ಸ್ಥಿತಿ, ಲಯ ಕಾರ್ಯಗಳನ್ನು ಎಸಗುತ್ತಿರುವೆ. ಕಾರ್ಯಕಾರಣ ಭಾವಗಳನ್ನು ಸ್ಪಷ್ಟವಾಗಿ ಅರಿತಿರುವ ವಿಜ್ಞಾನಿಗಳೆಲ್ಲರೂ ನಿನ್ನನ್ನು ಸಕಲ ಪ್ರಪಂಚಕ್ಕೂ ಕರ್ತೃವನ್ನಾಗಿಯೂ, ಕಾರ್ಯವನ್ನಾಗಿಯೂ ಅರಿತು ಜಗತ್ತೆಲ್ಲಾ ಶಿವಸ್ವರೂಪವೆಂದೇ ಭಾವಿಸಿರುವರು. ಆದರಿಂದ ಒಂಬತ್ತು ಲಿಂಗಗಳಿಂದಲೂ, ಹಾಗೆಯೇ ಪೃಥಿವ್ಯಪ್ತೇಜೋವಾಯು ರಾಕಾಶ, ಸೂರ್ಯಚಂದ್ರರು ಮತ್ತು ಯಜಮಾನರೂಪವಾದ ಎಂಟು ದೇಹಗಳುಳ್ಳ ವನೂ, ಸರ್ವವ್ಯಾಪಕನೂ, ಸರ್ವಜ್ಞನೂ (ಎಲ್ಲವನ್ನೂ ತಿಳಿದವನೂ) ಸಕಲ ಕರ್ತೃವೂ ನೀನೇ ಎಂದು ಪ್ರಮಾಣಜ್ಞರು ಹೇಳುತ್ತಾರೆ. ॥೨೮-೨೯॥

ಜೀವಾದಿಗಳಿಗಿಂತಲೂ ಭಿನ್ನನೂ ಅದ್ವಿತೀಯನೂ ಆದ ನಿನ್ನನ್ನು ಕೆಲವರು ಜೀವಾತ್ಮನೆಂದು ವ್ಯವಹರಿಸುವರು. ಭೇದಾಭೇದವಾದಿಗಳಾದ ಮತ್ತೆ ಕೆಲವರು ಭೇದಾಭೇದರಹಿತನೆನ್ನುವರು. ನಿನ್ನ ಆಗಮಗಳಾದರೋ (ಶೈವಾಗಮಗಳಾದರೋ) ನಿನ್ನನ್ನು ಜ್ಞಾನಸ್ವರೂಪನೆಂದೂ, ನಾಶರಹಿತನೆಂದೂ, ಶಾಂತಗುಣವುಳ್ಳವನೆಂದೂ, ಅದ್ವಿತೀಯನೆಂದೂ, ನಿತ್ಯಮಂಗಳಮೂರ್ತಿಯೆಂದೂ, ಸಕಲ ಲೋಕಾನುಗ್ರಹ ಕರ್ತನೆಂದೂ, ಸುಖಪ್ರದನೆಂದೂ ಸರ್ವದಾ ಹೊಗಳುತ್ತಿರುವುವು. ॥೩೦-೩೧॥

ವೇದಗಳು ನಿನ್ನನ್ನು ಪುರುಷಶ್ರೇಷ್ಠನಾದ ಮಹೇಶ್ವರನೆಂದು ಹೇಳುವುವು. ಸಿದ್ಧರೆನಿಸಿದ ಬುದ್ಧರು 'ಸರ್ವಜ್ಞ'ನೆಂದೂ, ಜೈನರು 'ಪರಮೇಷ್ಠಿ'ಯೆಂದೂ,

ತ್ವತ್ಕೃಪಾಮೃತನಿಷ್ಯಂದನಯನಾಂತವಿಲೋಕಿತೈಃ ।
ಭೂಯತೇ ಮುಕ್ತಿತರುಣೀ ಪರಿಣಾಹೋ ವರ್ಯೈರ್ನರೈಃ ॥೩೪॥

ದ್ರಷ್ಟುಮಿಚ್ಛನ್ ಶಿರೋ ಯಸ್ಯ ನ ವೇಧಾಶ್ಚರಣಂ ಹರಿಃ ।
ತಸ್ಯ ತೇ ಮಹಿಮಾನಂ ಕಃ ಕ್ಷಮೋ ವರ್ಣಯಿತುಂ ವಿಭೋ ॥೩೫॥

ಅಸ್ತಾತಿಶಯಸಾಮ್ಯಸ್ತ್ವಂ ವಿಶ್ವಾಧಿಕ ಇತಿ ಶ್ರುತೌ ।
ಗೀಯಸೇ ತ್ವಾಂ ವಿದಿತ್ವೈವ ಮುಕ್ತಿರ್ನಾನ್ಯೇನ ಹೇತುನಾ ॥೩೬॥

ಅಪರಾಧ ಸಹಸ್ರಾಣಾಂ ಭಾಜನಂ ಮಾಮನುಕ್ಷಣಂ ।
ಕೃಪಯಾ ಕೇವಲಂ ನಾಥ ಕೃತಾರ್ಥಂ ಕುರು ಶಂಕರ ॥೩೭॥

---

ಶಿಲ್ಪಿಗಳು ವಿಶ್ವಕರ್ಮನೆಂದೂ, ಹೀಗೆ ಜಗನ್ಮಂಗಳಕರನಾದ ನಿನ್ನನ್ನೇ ನಾನಾನಾಮ ಗಳಿಂದ ಕರೆಯುವರು. ಲೋಕಾಯತಮತಾವಲಂಬಿಗಳಾದರೋ ನಿನ್ನನ್ನು ಲೋಕ ಸಿದ್ಧೇಶ್ವರನೆಂದೂ ವ್ಯವಹರಿಸುತ್ತಿರುವರು. ॥೩೨-೩೩॥

ನಿನ್ನ ದಯಾಮೃತಪ್ರವಾಹವುಳ್ಳ ಕಡೆಗಣ್ಣ ನೋಟದಿಂದಲೇ ಮೋಕ್ಷಾಂಗ ನೆಯ ಪಾಣಿಗ್ರಹಣವು ಉತ್ತಮಜನಗಳಿಗೆ ಸುಲಭವಾಗಿ ಲಭಿಸುವುದು. ಯಾವ ನಿನ್ನ ತಲೆಯ ಮೂಲವನ್ನು ಬ್ರಹ್ಮನೂ, ಪಾದಮೂಲವನ್ನು ವಿಷ್ಣುವೂ ಹುಡುಕ ಲಿಚ್ಛಿಸಿ, ಅಸಮರ್ಥರಾದರೋ, ಅಂತಹ ನಿನ್ನ ಪ್ರಭಾವವನ್ನು ಯಾರಿಂದತಾನೇ ವರ್ಣನೆಮಾಡಲು ಸಾಧ್ಯ? ॥೩೪-೩೫॥

'ವಿಶ್ವಾಧಿಕ' ಶಬ್ದಸಿಷ್ಟವಾದ ಶ್ರುತಿಯಲ್ಲಿ (ಎಲ್ಲರಿಗಿಂತಲೂ ಶ್ರೇಷ್ಠನೆಂದರ್ಥ ಕೊಡುವ ವೇದದಲ್ಲಿ) ನೀನು ನಿನಗಿಂತಲೂ ಉತ್ಕೃಷ್ಟವಸ್ತುವಿಲ್ಲದ್ದರಿಂದ ಸಾಮ್ಯ ರಹಿತನಾಗಿರುವೆಯೆಂದು ಹೇಳಲ್ಪಟ್ಟಿರುವೆ; ಪ್ರಭೋ! ನಿನ್ನ ನಿಜರೂಪವನ್ನರಿತರೆ ಮೋಕ್ಷವು ಸುಲಭವಾಗಿ ದೊರೆಯುವುದೇ ವಿನಾ ಬೇರೆ ಯಾವ ರೀತಿಯಿಂದಲೂ ಸಾಧಕರಿಗೆ ಮೋಕ್ಷವುಂಟಾಗಲಾರದು. ಒಡೆಯನಾದ ಶಂಕರನೇ! ಸಾವಿರಾರು ಅಪರಾಧಗಳಿಗೆ ಪ್ರತಿಕ್ಷಣದಲ್ಲೂ ಪಾತ್ರನಾಗಿರುವ ನನ್ನನ್ನು ದಯೆಯಿಂದ ಈಗ ಕಾಪಾಡಿ ಕೃತಕೃತ್ಯನನ್ನಾಗಿ ಮಾಡು. ॥೩೬-೩೭॥

ಇತಿ ಸ್ತುತ್ವಾ ಜಗನ್ನಾಥಂ ನಮಿನಂತಿರ್ವಚಃಕ್ರಮೈಃ ।
ತದಾಪ್ರಭೃತಿ ತತ್ರೈವ ಚಕಾರ ವಸತಿಂ ಪುರೇ ॥೩೮॥

ತತಃ ಕದಾಚಿದ್ವಾಗೀಶಃ ಕಮಲಾಲಯಮಾಗತಃ ।
ತಸ್ಯ ನಾಮಾಂಕಿತೈಃ ಸೂಕ್ತೈರಸ್ತಾವೀಜ್ಜಗತಾಂ ಪತಿಂ ॥೩೯॥

ತದನು ತದನುಭಾವಂ ಭಾವಯನ್ಭಾವಿತಾತ್ಮಾ
ಭವಚರಣಸರೋಜಧ್ಯಾನ ನಿರ್ಧೂತಪಾಶಃ ।
ಅಭಜತ ಯಜಮಾನೋ ಯಜ್ಞದಾನೈರಲಭ್ಯಾಂ
ಮುದಮಪದಮಘಾನಾಮೀಶ ಭೂಯಾಹ್ವಯಂ ಸಃ ॥೪೦॥

ಯಲ್ಲೇಶಸ್ಯ ವಿಭೂತ್ಯಯಾಸ್ತ್ರಿಜಗತೀ ನಿರ್ಮಾಣರಕ್ಷಾಲಯ
ವ್ಯಾಪಾರಃ ಕ್ರಿಯತೇ ತದಿಂದ್ರಪದವೀಸಂಪ್ರಾಪಣೇ ನೈಪುಣಂ ।
ಯಲ್ಲೀಲಾಯಿತಮುನ್ನತಾಮೃತಪದಾವಾಪ್ತಿಸ್ತಿರಶ್ಚಾಮಪಿ
ಸ್ತೋತುಂ ಕಃ ಕರುಣಾಮಿಮಾಂ ಪ್ರಭವತಿ ಶ್ರೀಚಂದ್ರಚೂಡಾಮಣೇಃ ॥೪೧॥

---

ಎಂದು ಪ್ರಾರ್ಥಿಸಿದ ಆ ನಮಿನಂತಿಯು ವಚೋಭಂಗಿಯಿಂದ ಜಗನ್ನಾಥನನ್ನು ಸ್ತುತಿಸಿ, ಅದು ಮೊದಲುಗೊಂಡು ಆ ಕಮಲಾಲಯಪಟ್ಟಣದಲ್ಲಿಯೇ ವಾಸ ಮಾಡತೊಡಗಿದನು. ಹೀಗೆಯೇ ಕೆಲವು ದಿನ ಕಳೆಯಲು ಒಂದು ಸಲ ವಾಗೀಶನು ಕಮಲಾಲಯಕ್ಷೇತ್ರಕ್ಕೆ ಬಂದನು. ಆಗ ಈ ನಮಿನಂತಿಯು ಅವನ ಹೆಸರಿನಿಂದ ಚಿಹ್ನಿತವಾದ ಸೂಕ್ತಗಳಿಂದ ಜಗದೊಡೆಯನೆನಿಸಿದ ವಾಗೀಶನನ್ನು ನುತಿಸಿದನು. ॥೩೮-೩೯॥

ಭಕ್ತಿಯುತವಾದ, ಶಿವಪಾದಾಂಬುಜಧ್ಯಾನದಿಂದ ಬಂಧಮುಕ್ತನೆನಿಸಿ ಪರಿಶುದ್ಧಾಂತಃಕರಣನಾದ ನಮಿನಂತಿಯು ಆಗಂತುಕನಾದ ಶೈವನನ್ನು ಭಕ್ತಿಯಿಂದ ಸೇವಿಸುತ್ತಾ,ಯಜ್ಞ, ದಾನ ಮುಂತಾದವುಗಳಿಂದ ಹೊಂದಲಸಾಧ್ಯವೂ, ಸಂತೋಷಪ್ರದವೂ, ವಿಪತ್ತುಗಳಿಗೂ ಪಾಪಗಳಿಗೂ ಆಸ್ಪದವಿಲ್ಲದುದೂ, ಈಶ್ವರನ ಅಪರಿಮಿತವಾದ ನಾಮಗಳಿಂದ ಅಂಕಿತವೂ ಆದ ದಿವ್ಯಧಾಮವನ್ನು ಪಡೆದನು. ॥೪೦॥

ಯಾವ ಮಹೇಶ್ವರನ ಲೇಶಾಂಶಗಳಾದ ವಿಭೂತಿಗಳೇ ಮೂರುಲೋಕಗಳ ಸೃಷ್ಟಿ, ಸ್ಥಿತಿಗಳ ವ್ಯಾಪಾರಕ್ಕೆ ಆಶ್ರಯವಾಗಿರುವುವೋ, ಯಾವುದರಿಂದ ಇಂದ್ರಪದವೀ

ನಮಿನಂತಿಕಥಾಮಿಮಾಂ ಪಠೇ
ದಪಿ ವಾ ಯಃ ಶೃಣುಯಾತ್ಸ ಮಾನವಃ ।
ಭುವಿ ಭೋಗಮವಾಪ್ಯ ನಿಸ್ತುಲಂ
ನಿಯತಂ ಧಾಮ ತದೇತಿ ಶಾಂಭವಂ ॥೪೨॥

ಇತಿ ಶ್ರೀ ಶಿವರಹಸ್ಯೇ ನವಮಾಂಶೇ ಸದಾಶಿವಾಖ್ಯೇ
ನಮಿನಂತಿಕಥಾವರ್ಣನಂ ನಾಮ ಪಂಚಾಶೋಽಧ್ಯಾಯಃ

---

ಪ್ರಾಪ್ತಿಯಲ್ಲಿ ನಿಪುಣತೆಯುಂಟಾಗುತ್ತದೋ, ಯಾವ ದೇವನ ಲೀಲಾವ್ಯಾಪಾರವೇ ತಿರ್ಯಕ್ಪ್ರಾಣಿಗಳಿಗೂ ಅತ್ಯುನ್ನತವಾದ ದೇವಪದವಿಯ ಪ್ರಾಪ್ತಿಗೆ ಕಾರಣವಾಗಿರುವುದೋ ಅಂತಹ ಈ ಚಂದ್ರಮೌಳೀಶ್ವರನ ದಯೆಯನ್ನು ಯಾರಿಂದತಾನೆ ಸ್ತುತಿಸಲು ಸಾಧ್ಯ? ॥೪೧॥

ಅಯ್ಯ ಜೈಗೀಷವ್ಯನೇ! ಈ ನಮಿನಂತಿಯ ಕಥೆಯನ್ನು ಓದುವ ಅಥವಾ ಕೇಳುವ ಮಾನವನು ಭೂಮಿಯಲ್ಲಿ ಅಪರಿಮಿತವಾದ ಭೋಗಭಾಗ್ಯಗಳನ್ನನುಭವಿಸಿ, ಕೊನೆಯಲ್ಲಿ ಸತ್ಯವಾಗಿಯೂ ಆ ಪರಶಿವನ ದಿವ್ಯಧಾಮವನ್ನೈದುವನೆಂದು ಕುಮಾರ ಸ್ವಾಮಿಯು ಜೈಗೀಷವ್ಯನಿಗೆ ನಿರೂಪಿಸಿದನು. ॥೪೨॥

ಇಂತು ಶ್ರೀಶಿವರಹಸ್ಯದಲ್ಲಿ ಸದಾಶಿವಸಂಜ್ಞಕವಾದ ಒಂಬತ್ತನೆಯ ಅಧ್ಯಾಯದಲ್ಲಿ
ನಮಿನಂತಿಯ ಕಥಾವರ್ಣನೆಯೆಂಬ ಐವತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಸದಾಶಿವಾಖ್ಯೇ

## ನವಮಾಂಶೇ

## ಅಥೈಕಪಂಚಾಶೋಽಧ್ಯಾಯಃ

॥ ಶ್ರೀಸ್ಕಂದ ಉವಾಚ ॥

ಜ್ಞಾನಸಂಬಂಧನಾಥಸ್ಯ ಚರಣಂ ಶರಣಂ ಸತಾಂ ।
ಕಲಿಕಾಲಜಿತೋ ವಕ್ಷ್ಯೇ ಕಲಿಕಾಮಸ್ಯ ವೈಭವಂ ॥೧॥

ಪ್ರಕಾಶೇ ಚೋಲದೇಶೇಽಸ್ತಿ ಕಾವೇರೀತೀರಗೋಚರಂ ।
ಚಿರಂ ಸುಚಿರಪ್ರಖ್ಯಂ ಚ ಶ್ರೀಮಹಾಮಂಗಲಾಹ್ವಯಂ ॥೨॥

ಆಯುತಾ ವೀಥಯೋ ಯಸ್ಯ ಸೌಧಾ ಉತ್ಸೇಧಶಾಲಿನಃ ।
ಗಿರಿಪ್ರಕಾರಪ್ರಾಕಾರಾ ಆರಾಮಾನಂದನೋಪಮಾಃ ॥೩॥

---

## ಐವತ್ತೊಂದನೆಯ ಅಧ್ಯಾಯ

ಓ ಜೈಗೀಷವ್ಯನೇ! ಸಾಧುಗಳಿಗೆ ಆ ಜ್ಞಾನಸಂಬಂಧನಾಥನ ಪಾದಗಳೇ ಶರಣು. ಅಯ್ಯ ಶೈವನೇ! ಕಲಿಕಾಲವೈಭವವನ್ನು ಜಯಿಸಿದ ಕಲಿಕಾಮನೆಂಬ ಭಕ್ತನ ವೈಭವವನ್ನರುಹುವೆನು ಕೇಳು; ಪ್ರಖ್ಯಾತವಾದ ಚೋಲದೇಶದಲ್ಲಿ, ಕಾವೇರೀನದಿಯ ದಡದಲ್ಲಿ ಬಹುಕಾಲದಿಂದಲೂ ಅತ್ಯಂತ ಹೆಸರುವಾಸಿಯಾದ ಶ್ರೀ ಮಹಾಮಂಗಳಸಂಜ್ಞಕವಾದ ಪಟ್ಟಣವೊಂದಿದ್ದಿತು. ॥೧-೨॥

ಆ ಊರಿನ ಬೀದಿಗಳು ವಿಶಾಲವಾಗಿಯೂ, ಮಳಿಗೆ ಮನೆಗಳು ಬಹಳ ಎತ್ತರವಾಗಿಯೂ ಇದ್ದವು. ಆ ಪಟ್ಟಣದ ಪ್ರಾಕಾರಗಳು ಬೆಟ್ಟಗಳಂತೆ ಎತ್ತರ ವಾಗಿಯೂ, ಉದ್ಯಾನಗಳು ನಂದನವನಗಳಂತೆಯೂ ಕಂಗೊಳಿಸುತ್ತಿದ್ದುವು.

ಕಲಿಕಾಮಾಹ್ವಯಃ ಕಶ್ಚಿದ್ದೇವಗೋಪಕುಲೋದ್ಭವಃ ।
ಅಭವದ್ವಿಭವೋದಾರೇ ತತ್ಪುರೇ ಶೂದ್ರಸತ್ತಮಃ ॥೪॥

ಸೇನಾಪತಿಶ್ಚೋಲಪತೇರುಮಾಪತಿಲಸನ್ಮತಿಃ ।
ವಾಙ್ಮನಃಕರ್ಮಭಿಃ ಸರ್ವೈಃ ಶರ್ವಭಕ್ತೈರಪೂಜಕಃ ॥೫॥

ಶ್ರೀಕರಂಜಪುರೇಶ ಶ್ರೀಕರ್ಮ ಏವ ವಿಧಾಯ ಸಃ ।
ಶಿವಭಕ್ತಾಂಘ್ರಿಯುಗಲಮಮಂಸ್ತ ನಿಧಿಮಾತ್ಮನಃ ॥೬॥

ಸೌಮ್ಯೇಶೇನ ಮಹೇಶೋಽಭೂತ್ಪ್ರೇಷಿತೋ ಯೋಷಿತಂ ಪ್ರತಿ ।
ಇತಿ ಶ್ರುತ್ವಾ ಪ್ರಚುಕ್ರೋಧ ಕಲಿಕಾಮಃ ಸಮಾಕುಲಃ ॥೭॥

ದೂತ್ಯೇ ನಿಪುತ್ರಕೇನಾಪಿ ಮಾನಿನೀಂ ಪ್ರತಿಕಾಮಿನಾ ।
ವೀಕ್ಷ್ಯೈಂ ನಿಶೀಥೇ ಮನ್ನಾಥೋ ಯಾತಾಯಾತಂ ಬತವ್ಯಥಾಂ॥೮॥

---

ಉದಾರವಾದ ಸಂಪತ್ತಿನಿಂದ ಕೂಡಿದ ಆ ಪಟ್ಟಣದಲ್ಲಿ (ದೇವಗೋಪ) ಗೊಲ್ಲರ ವಂಶದಲ್ಲಿ ಹುಟ್ಟಿದ ಕಲಿಕಾಮನೆಂಬ ಹೆಸರಿನ ಶೂದ್ರವರ್ಯನೊಬ್ಬನಿದ್ದನು. ॥೩-೪॥

ಚೋಲದೇಶರಾಜನ ಸೇನಾಪತಿಯಾದ ಈತನು ಉಮಾರಮಣನಲ್ಲಿಟ್ಟ ಭಕ್ತಿಭಾವನೆಯುಳ್ಳವನಾಗಿ ವಾಕ್ಕು, ಮನಸ್ಸು ಮತ್ತು ಕರ್ಮಗಳೆಂಬ ತ್ರಿಕರಣಗಳಿಂದಲೂ ಶೈವರನ್ನೇ ಪೂಜಿಸುವುದರಲ್ಲಿ ನಿರತನಾಗಿದ್ದನು. ಶ್ರೀಕರಂಜೇಶ್ವರನ ಚರಣಕಮಲಸೇವಾಕಾರ್ಯಗಳನ್ನೇ ನಿತ್ಯವೂ ಮಾಡುತ್ತಾ, ಶೈವರ ಪಾದಯುಗ್ಮಗಳನ್ನೇ ತನ್ನ ನಿಧಿಯೆಂದು ಅವನು ಭಾವಿಸಿದ್ದನು. ॥೫-೬॥

ಸೌಮ್ಯೇಶನು ತನ್ನ ಹೆಂಡತಿಯನ್ನು ಕರೆದು ತರುವ ವಿಷಯದಲ್ಲಿ ಮಹೇಶ್ವರನನ್ನು ದೂತನನ್ನಾಗಿ ಕಳುಹಿಸಿದನೆಂದು ಆ ಕಲಿಕಾಮನು ವ್ಯಾಕುಲನಾಗಿ ಕೋಪಗೊಂಡನು. ತನ್ನ ಹೆಂಡತಿಯಲ್ಲಿ ಕಾಮಾಭಿಲಾಷೆಯುಳ್ಳ ಆ ಅಧಮನು ಮಹೇಶ್ವರನನ್ನು ಈ ದೌತ್ಯದಲ್ಲಿ ನಿಯಮಿಸಿದನಲ್ಲಾ! ಅಯ್ಯೋ, ನನ್ನ ಸ್ವಾಮಿಯು ರಾತ್ರಿಯಲ್ಲಿ ಹೇಗೆ ಹೋಗುವನು ಹೇಗೆ ಬರುವನೆಂದು ಕಲಿಕಾಮನು ವ್ಯಥಿತನಾದನು. ॥೮-೮॥

ದೇವತೆಗಳಿಂದ ಸ್ತೋತ್ರಾರ್ಹನಾದರೂ ಆ ಪರಶಿವನು ಭಕ್ತನ ಪ್ರೀತಿಗೋಸ್ಕರ ದೂತಕಾರ್ಯದಲ್ಲಿ ಹೋಗುತ್ತಾನೆ. ಹೀಗಿದ್ದರೂ ದೂರಾಲೋಚನೆಮಾಡದೆ ಮೂಢನು, ಅಯ್ಯೋ! ಆ ಮಹೇಶ್ವರನನ್ನು ಆ ಕೆಲಸದಲ್ಲಿ ಕಳುಹಿಸಿದಲ್ಲಾ, ಇರಲಿ,

ಸ್ತುತ್ಯಃ ಸುರೈಃ ಶಿವೋ ದೌತ್ಯೇ ಭೃತ್ಯಪ್ರೀತ್ಯರ್ಥಮೇತ್ಯಸೌ ।
ಅದೀರ್ಘದರ್ಶಿತೋ ಮೂರ್ಖೋ ಹಾಮುಹೇಶಂ ಸಮಾದಿಶತ್ ॥೯॥

ತಂ ದ್ರಕ್ಷ್ಯಾಮಿ ಕದಾ ನಿಂದ್ಯಂ ಕಿಂ ವಾ ದೃಷ್ಟೇನ ತೇನ ಮೇ ।
ಇತ್ಯುಕ್ತ್ವಾ ಕಲಿಕಾಮೋಽಭೂತ್ಸರೋಷಕಲುಷಾಶಯಃ ॥೧೦॥

ಕಲಿಕಾಮೋದಿತಂ ಕ್ರೌರ್ಯಂ ಸೌಮ್ಯಃ ಶ್ರುತ್ವಾಥ ಶೂಲಿನೇ ।
ನ್ಯಪೋಹ್ಯೋ ಮೇಽಪರಾಧೋಽಯಮಿತಿ ಪ್ರಹ್ವೋ ವ್ಯಜಿಜ್ಞಪತ್ ॥೧೧॥

ಶಿವೋ ಘಟಯಿತುಂ ಭಾವಂ ಸೌಮ್ಯೇಶಕಲಿಕಾಮಯೋಃ ।
ಕಲಿಕಾಮೇಽಕ್ಷಿಪಚ್ಛೂಲಂ ಸ ಚಾಭೂತ್ತೇನ ಪೀಡಿತಃ ॥೧೨॥

ಕಲಿಕಾಮಃ ಶೂಲಪಾಣಿಮಸ್ತೌಷೀಚ್ಛೂಲಪೀಡಿತಃ ।
ತಂ ಭಕ್ತಂ ತತ್ಸ್ತುತಿಪ್ರೀತಃ ಸ್ವಪ್ನೇ ಪ್ರಾಹ ಚ ಶಂಕರಃ ॥೧೩॥

ವರ್ಯ ಮದ್ಭಕ್ತವರ್ಯಾಣಾಂ ತವೈತಾಂ ಶೂಲವೇದನಾಂ ।
ಸೌಮ್ಯಂ ವಿನಾ ಶಮಯಿತುಂ ನಾಪರಃ ಶಕ್ನುಯಾದಿತಿ ॥೧೪॥

---

ಆ ನಿಂದಾರ್ಹನನ್ನು ಯಾವಾಗ ನೋಡುವೆನೋ, ಅಥವಾ ಅವನನ್ನು ನೋಡಿ ಆಗಬೇಕಾದ್ದೇನು, ಎಂದು ಹೇಳಿ ಆ ಕಲಿಕಾಮನು ಕೋಪದಿಂದ ಕಲುಷಿತಚಿತ್ತನಾದನು. ॥೯-೧೦॥

ಕಲಿಕಾಮನು ನುಡಿದ ಈ ಕ್ರೂರಮಾತುಗಳನ್ನು ಸೌಮ್ಯನು ಕೇಳಿ, ಅವನು ಶಿವನ ಬಳಿಗೆ ಬಂದು, ಶೂಲಪಾಣಿಯೇ, ನನ್ನ ಈ ತಪ್ಪನ್ನು ಕ್ಷಮಿಸೆಂದು ವಿನಯದಿಂದ ವಿಜ್ಞಾಪಿಸಿಕೊಂಡನು. ಆಗ ಪರಮೇಶನು ಈ ಸೌಮ್ಯೇಶ ಮತ್ತು ಕಲಿಕಾಮರಿಬ್ಬರಿಗೂ ಸ್ನೇಹಭಾವವನ್ನು ಕಲ್ಪಿಸಲು, ಯೋಚಿಸಿ ಕಲಿಕಾಮನಿಗೆ ಉದರಶೂಲೆಯನ್ನುಂಟುಮಾಡಿದನು. ಅದರಿಂದ ಕಲಿಕಾಮನು ಪೀಡಿತನಾಗಿ ವಿಶೇಷವಾಗಿ ನರಳತೊಡಗಿದನು. ॥೧೧-೧೨॥

ಉದರಶೂಲಪೀಡಿತನಾದ ಆ ಕಲಿಕಾಮನು ಶೂಲಪಾಣಿಯಾದ ಶಂಕರನನ್ನು ಸ್ತುತಿಸಿದನು. ಆ ಸ್ತೋತ್ರಪ್ರೀತನಾದ ಮಹೇಶನು ತನ್ನ ಭಕ್ತನಿಗೆ ಕನಸಿನಲ್ಲಿ, 'ಎಲೈ ಶ್ರೇಷ್ಠನೇ, ನನ್ನ ಭಕ್ತವರ್ಯನಾದ ನಿನಗುಂಟಾಗಿರುವ ಈ ಶೂಲವೇದನೆ

ಅಥಾಹ ಕಲಿಕಾಮಸ್ತಂ ಸಪ್ತಜನ್ಮಾದ್ಯನುಕ್ರಮಾತ್ ।
ವಯಂ ತ್ವತ್ಕಿಂಕರಾ ನಾಥ ತ್ವದೃತೇ ಸೋಽಸ್ಮದರ್ತಿಹಾ ॥೧೫॥

ಸೌಮ್ಯಾದ್ಯಚ್ಛೂಲಶಮನಾದ್ವರಂ ತದ್ವೇದನಾ ಮಮ ।
ತಸ್ಯ ತ್ವತ್ಪ್ರಿಯಭೃತ್ಯಸ್ಯ ತ್ವಯಾಽಶಾ ಪೂರ್ಯತಾಮಿತಿ ॥೧೬॥

ತದಾ ಶಿವಸ್ತಿರೋಭೂತಃ ಸೌಮ್ಯಮೇತ್ಯಾಬ್ರವೀದ್ವಚಃ ।
ಕಲಿಕಾಮಸ್ಯ ಶೂಲಾರ್ತಿಂ ಶಮಯತ್ವಚಿರಾದಿತಿ ॥೧೭॥

ಶೂಲಂ ಶಮಯಿತುಂ ಸೌಮ್ಯ ಆಯಾತೀತಿ ನಿಶಮ್ಯ ಸಃ ।
ಕಲಿಕಾಲೋ ಭೃಶಂ ಶೂಲವ್ಯಸನಾದಪಿ ವಿವ್ಯಥೇ ॥೧೮॥

ಸ ತಚ್ಛೂಲಂ ಶಮಯಿತುಂ ನಿವಾಸಾನ್ನಿರ್ಯಯೌ ನಿಜಾತ್ ।
ಸ ಚ ಸೌಮ್ಯಾಗತಿಂ ಶ್ರುತ್ವಾ ಕಲಿಕಾಮೋ ವ್ಯಚಿಂತಯತ್ ॥೧೯॥

---

ಯನ್ನು ಹೋಗಲಾಡಿಸಲು, ಆ ಸೌಮ್ಯನನ್ನು ಬಿಟ್ಟರೆ ಮತ್ತಾರಿಂದಲೂ ಸಾಧ್ಯವಿಲ್ಲ' ಎಂದು ' ನುಡಿದನು. ॥೧೩-೧೪॥

ಆಗ ಆ ಕಲಿಕಾಮನು, ಸ್ವಾಮಿ! ಏಳು ಜನ್ಮಗಳಿಂದ ಕ್ರಮವಾಗಿ ನಿನ್ನ ಸೇವಕರು ನಾವು, ಹೀಗಿರುವಾಗ ನಿನ್ನನ್ನು ಬಿಟ್ಟು ನಮ್ಮ ಪೀಡೆಯನ್ನು ಹೋಗಲಾಡಿಸುವವನು ಬೇರೆ ಯಾರಿರುವನು ? ಆ ಸೌಮ್ಯನು ಬಂದು ಶೂಲವ್ಯಾಧಿಯನ್ನು ಶಮನಮಾಡುವುದಕ್ಕಿಂತ ನನಗೆ ಈ ವೇದನೆಯಿರುವುದೇ ಸಹ್ಯವು; ಆ ನಿನ್ನ ಪ್ರಿಯಭೃತ್ಯನ ಆಶೆಯನ್ನೇ ನೀನು ಪೂರ್ಣ ಮಾಡೆಂದು ಕಲಿಕಾಮನು ಶಿವನಿಗೆ ಸ್ವಪ್ನದಲ್ಲಿ ಹೇಳಿದನು. ॥೧೫-೧೬॥

ಆ ಮಾತನ್ನು ಕೇಳಿ ಶಿವನು ಆಗ ಮರೆಯಾಗಿ ಸೌಮ್ಯನ ಸ್ವಪ್ನದಲ್ಲಿ ಬಂದು, 'ಓ ಸೌಮ್ಯನೇ, ನೀನು ಹೋಗಿ ಕಲಿಕಾಮನ ಶೂಲಪೀಡೆಯನ್ನು ಜಾಗ್ರತೆ ಶಮನಮಾಡೆಂದು' ಹೇಳಿದನು. ಆಗ ಸೌಮ್ಯನು ಅದರಂತೆ ನಡೆಸಲು ಸಿದ್ಧನಾದನು. ಇತ್ತ ತನ್ನ ಶೂಲವ್ಯಾಧಿಯನ್ನು ಹೋಗಲಾಡಿಸಲು ಸೌಮ್ಯನು ತಾನಾಗಿ ಬರುತ್ತಾನೆಂದು ತಿಳಿದು ಕಲಿಕಾಮನು ತನಗಿದ್ದ ಉದರಶೂಲಬಾಧೆಗಿಂತಲೂ ಹೆಚ್ಚು ವ್ಯಥೆಪಟ್ಟನು. ॥೧೭-೧೮॥

ಸೌಮ್ಯನು ಕಲಿಕಾಮನ ಶೂಲವ್ಯಾಧಿಯನ್ನು ಶಮನಮಾಡಲು ತನ್ನ ಮನೆಯಿಂದ ಹೊರಟನು. ಇತ್ತ ಕಲಿಕಾಮನು ಸೌಮ್ಯನ ಬರುವಿಕೆಯನ್ನು

ಸ ಯಾವದನಿರೀಕ್ಷೋ ಮೇ ಶೂಲಂ ಶಮಯಿತುಂ ಸ್ವಯಂ ।
ದಾರಯಾಮ್ಯುದರಂ ತಾವದಿತಿ ಕುಕ್ಷಿಂ ವ್ಯದಾರಯತ್ ॥೨೦॥

ಗತಾಸೋಃ ಕಲಿಕಾಮಸ್ಯ ಭಾರ್ಯಾನುಮರಣೋದ್ಯತಾ ।
ನಿಶಮ್ಯ ಸೌಮ್ಯಾಗಮನಕ್ಷಣಂ ತಸ್ಯಾವರೋದನಂ ॥೨೧॥

ಪ್ರಚ್ಛಾದ್ಯ ಸಾ ಪತಿಂ ಸದ್ಯಃ ಕೃತಂ ಗೃಹಮಲಂಕೃತಂ ।
ಆಗತಂ ಸೌಮ್ಯಮಾನರ್ಚ್ಯ ನಿರ್ವ್ಯಥೈವೋಪಚಾರತಃ ॥೨೨॥

ಕಲಿಕಾಮೋದರರುಜಂ ಶಮನಾಯಾಹಮಾಗತಃ ।
ಇತಿ ವಾದಿನಮಾಹುಸ್ತಂ ತಸ್ಯಾಃ ಪಾರ್ಶ್ವಗತಾ ಜನಾಃ ॥೨೩॥

ಶಾಂತಾಚ ದೈವತಶ್ಚಾರ್ತಿಸ್ತ್ವದಾಗಮನವೈಭವಾತ್ ।
ಸೌತ್ಯಸ್ಥಿತ್ವಾದ್ಯಶೇತೇ ಹಿ ಸುಖೇನಾಂತರ್ಗೃಹಾಂತರೇ ॥೨೪॥

ಇತ್ಯುಕ್ತಃ ಸಪುನಃ ಪ್ರಾಹ ದ್ರಷ್ಟುಮಿಚ್ಛಾಮಿ ತಂತ್ವಿತಿ ।
ಅದರ್ಶಯಂಶ್ಚ ತೇ ತಸ್ಮೈ ಮೃತಂ ತಂ ನಿರ್ಗತಾಂತಕಂ ॥೨೫॥

---

ಅರಿತು ವಿಶೇಷವಾಗಿ ಚಿಂತಿಸತೊಡಗಿದನು. ನನ್ನ ಶೂಲವ್ಯಾಧಿಯನ್ನು ಅವನು ಇಲ್ಲಿಗೆ ಬಂದು ನೋಡುವಷ್ಟರಲ್ಲಿ ನಾನು ನನ್ನ ಹೊಟ್ಟೆಯನ್ನು ಸೀಳಿಕೊಳ್ಳುವೆನೆಂದು ತೀರ್ಮಾನಿಸಿ ಅದರಂತೆಯೇ ತನ್ನ ಹೊಟ್ಟೆಯನ್ನು ಸೀಳಿಕೊಂಡು ಮೃತನಾದನು. ॥೧೯-೨೦॥

ಪ್ರಾಣತ್ಯಾಗಮಾಡಿದ ಆ ಕಲಿಕಾಮನ ಹೆಂಡತಿಯು ಪತಿಯನ್ನನುಸರಿಸಿ ತಾನೂ ಸಾಯಲನುವಾದಳು. ಆದರೆ ಸೌಮ್ಯನು ಆಕ್ಷಣದಲ್ಲಿಯೇ ಬಂದದ್ದನ್ನು ಕೇಳಿ ಅವಳು ಅದನ್ನು ಸದ್ಯದಲ್ಲಿ ತಡೆದು ತನ್ನ ಗಂಡನನ್ನು ಮುಚ್ಚಿ ಮರೆಮಾಡಿ ಕೂಡಲೇ ಮನೆಯನ್ನೆಲ್ಲಾ ಅಲಂಕರಿಸಿ, ಬಂದಿರುವ ಸೌಮ್ಯನಿಗೆ ಸ್ವಲ್ಪವೂ ದುಃಖವಿಲ್ಲದವಳಂತೆ ಉಪಚರಿಸಿದಳು. ಆ ಉಪಚಾರಸ್ವೀಕಾರಾನಂತರದಲ್ಲಿ ಸೌಮ್ಯನು ಕಲಿಕಾಮನ ಉದರಶೂಲೆಯನ್ನು ನಿವಾರಣೆಮಾಡಲು ತಾನು ಇಲ್ಲಿಗೆ ಬಂದಿರುತ್ತೇನೆಂದು ಹೇಳಲು, ಕಲಿಕಾಮನ ಪತ್ನಿಯ ಪಕ್ಕದಲ್ಲಿ ನಿಂತಿದ್ದ ಜನಗಳು ಅವನನ್ನು ಕುರಿತು ಇಂತೆಂದರು. ॥೨೧-೨೨-೨೩॥

ಓ ಸೌಮ್ಯನೇ, ನೀನು ದೈವಪ್ರೇರಿತನಾಗಿ ಬಂದಮಾತ್ರದಿಂದಲೇ ಆ ಕಲಿಕಾಮನ ಉದರಶೂಲೆಯು ಶಾಂತವಾಯಿತು. ಈಗ ಅವನು ಅಸ್ಥಿಮಾತ್ರಶೇಷನಾಗಿ

ತಂ ದೃಷ್ಟ್ವಾ ಹಂತ ಹಂತೇತಿ ಸೌಮ್ಯೋಽಸ್ಮಾಧಿತಮಾನಸಃ ।
ಪ್ರಾಣಾನ್ಸ್ವಯಂ ಪರಿತ್ಯಕ್ತುಮಗ್ರಹೀದಸಿಧೇನುಕಂ ॥೨೬॥

ದಯಯಾ ದೇವದೇವಸ್ಯ ಕಲಿಕಾಮಃ ಸಮುತ್ಥಿತಃ ।
ಹಾ ಹತೋಽಸ್ಮೀತ್ಯತಿಸ್ನೇಹಾದಗೃಹೀತ್ತತ್ಕರಾಯುಧಂ ॥೨೭॥

ಅನ್ಯೋನ್ಯಮತಿಮಾನ್ಯೌ ತೌ ನೇಮತುಃ ಸ್ನಿಗ್ಧಮಾನಸೌ ।
ತತ್ಕರ್ಮ ವಿಸ್ಮಿತೋ ದೇವಾ ವವೃಷುಃ ಪುಷ್ಪಮೇತಯೋಃ ॥೨೮॥

ತೌ ಸ್ನಿಗ್ಧಸುಹೃದೌ ಭೂತ್ವಾ ಕರಂಜಪುರಶಂಕರಂ ।
ಪ್ರಣೇಮತುಃ ಸ ತಂ ಸೌಮ್ಯಃ ಶ್ರೀಗಾನೈಃ ಶಂಕರಂ ಜಗೌ ॥೨೯॥

---

ಮಲಗಿ ಅಂತರ್ಗೃಹದ ಒಳಗೆ ಸುಖವಾಗಿ ಮಹಾದೇವನನ್ನು ಸ್ತುತಿಸುತ್ತಿರುವನು, ಎಂದು ಹೇಳಲು, ಆ ಮಾತುಗಳನ್ನು ಕೇಳಿದ ಸೌಮ್ಯನು ತಿರುಗಿ ಅವನನ್ನು ಹೇಗಾದರೂ ನಾನು ನೋಡಬೇಕೆಂದಿರುವನೆಂದು ಹೇಳಲು, ಅವರು ಪ್ರಾಣಹೋಗಿ ಮೃತನಾಗಿದ್ದ ಆ ಕಲಿಕಾಮನನ್ನು ಅವನಿಗೆ ತೋರಿಸಿದರು. ॥೨೪-೨೫॥

ಆ ಕಲಿಕಾಮನ ಮೃತದೇಹವನ್ನು ನೋಡಿ ಅಯ್ಯಯ್ಯೋ! ಎಂದು ಗೋಳಿಡುತ್ತಾ ಸೌಮ್ಯನೂ ಪೀಡಿತಮನಸ್ಕನಾಗಿ ತಾನೂ ಪ್ರಾಣತ್ಯಾಗಮಾಡಲು ಕತ್ತಿಯನ್ನು ಹಿರಿದು ಹಿಡಿದುಕೊಂಡನು. ಅಷ್ಟರಲ್ಲಿಯೇ ಆ ದೇವಾದಿದೇವನ ಕರುಣೆಯಿಂದ ಮೃತನಾಗಿದ್ದ ಕಲಿಕಾಮನೂ ಎದ್ದು ನಿಂತು, ಅಯ್ಯೋ! ಕೆಟ್ಟೆನೆಂದು ಹೇಳುತ್ತಾ ಆ ಸೌಮ್ಯನ ಕೈಯ್ಯಲಿದ್ದ ಆಯುಧವನ್ನು ಬಹಳ ಸ್ನೇಹದಿಂದ ಹಿಡಿದುಕೊಂಡನು. ॥೨೬-೨೭॥

ಆಗ ಆ ಕಲಿಕಾಮ, ಸೌಮ್ಯರಿಬ್ಬರೂ ಪೂಜ್ಯರಾದರೂ ಪರಸ್ಪರ ಪ್ರೇಮ ಭಾವನೆಯಿಂದ ಒಬ್ಬರಿಗೊಬ್ಬರು ನಮಸ್ಕರಿಸಿದರು. ಈ ಸಂದರ್ಭವನ್ನು ಕಂಡು ಆಶ್ಚರ್ಯಗೊಂಡ ದೇವತೆಗಳು ಇವರಿಬ್ಬರಮೇಲೂ ಪುಷ್ಪವೃಷ್ಟಿಗರೆದರು. ಆಮೇಲೆ ಅವರಿಬ್ಬರೂ ಅತ್ಯಂತ ಆಪ್ತಸ್ನೇಹಿತರಾಗಿ ಕರಂಜಪುರಾಧಿಪನಾದ ಈಶ್ವರನನ್ನು ನಮಸ್ಕರಿಸಿ ಪೂಜಿಸಿದರು. ಆಗ ಆ ಸೌಮ್ಯನು ಶ್ರೀಗಾನದಿಂದ (ಶ್ರೀರಾಗದಿಂದ) ಶಂಕರನನ್ನು ವಿಧವಿಧವಾಗಿ ಸ್ತುತಿಸಿ ಹಾಡಿದನು. ॥೨೮-೨೯॥

ಕಲಿಕಾಮಯುತಃ ಸೌಮ್ಯಃ ಸಮೇತ್ಯ ಕಮಲಾಲಯಂ ।
ದೇವಪುಷ್ಪಾಲಯಾವಾಸಂ ನತ್ವಾ ತತ್ರಾವಸಚ್ಚಿರಂ ॥೩೦॥

ತತ್ರೋಷಿತ್ವಾ ಚಿರಂ ಕಾಲಂ ಸುಂದರೇಶೇನ ಮಾನಿತಃ ।
ಕಲಿಕಾಮೋ ನಿಜಂ ಧಾಮ ಜಗಾಮ ತದನುಜ್ಞಯಾ ॥೩೧॥

ದಾಸ್ಯೇನ ಚಿರಮೀಶಾನಂ ಸಂತೋಷ್ಯಾವ್ಯಭಿಚಾರಿಣಾ ।
ಸರ್ವಥಾ ಕಲಿಕಾಮೋಽಸೌ ಶೈವಂ ಧಾಮ ಜಗಾಮ ತತ್ ॥೩೨॥

ಪ್ರಥಿತಸ್ಯ ಪವಿತ್ರಕೀರ್ತನಂ ।
ಕಲಿಕಾಮಸ್ಯ ಚರಿತ್ರಮುತ್ತಮಂ ॥
ಪಠತಿ ಸ್ಥಿರಧೀಃ ಶೃಣೋತಿ ಯಃ ।
ಪರಮಾಪ್ನೋತಿ ಪದಂ ಮಹೇಶಿತುಃ ॥೩೩॥

ಇತಿ ಶ್ರೀಶಿವರಹಸ್ಯೇ ಸದಾಶಿವಾಖ್ಯೇ ನವಮಾಂಶೇ ಕಲಿಕಾಮಚರಿತ್ರ
ವರ್ಣನಂ ನಾಮೈಕಪಂಚಾಶೋಽಧ್ಯಾಯಃ

---

ಅನಂತರ ಸೌಮ್ಯನು ಕಲಿಕಾಮನೊಡನೆ ಕಮಲಾಲಯಕ್ಷೇತ್ರಕ್ಕೆ ಬಂದು ಅಲ್ಲಿ ಮಹಾದೇವನ ಪುಷ್ಪಾಲಯವಾಸದಲ್ಲಿ ನಮಸ್ಕರಿಸಿ ಅಲ್ಲಿಯೇ ಬಹುಕಾಲ ವಾಸ ಮಾಡಿದನು. ಅವನು ಅಲ್ಲಿ ವಾಸಮಾಡುವಷ್ಟು ಕಾಲವು ಸುಂದರೇಶನಿಂದ ಗೌರವಿಸಲ್ಪಟ್ಟು ಜೀವಿಸಿದನು. ಇತ್ತ ಆ ಕಲಿಕಾಮನೂ ಅವನ ಅನುಮತಿಯನ್ನು ಪಡೆದು ತನ್ನ ಸ್ವಂತ ಸ್ಥಳಕ್ಕೆ ಬಂದು ಶಿವಧ್ಯಾನನಿರತನಾಗಿದ್ದನು. ॥೩೦-೩೧॥

ಹಾಗೆ ಸ್ವಲ್ಪವೂ ತಪ್ಪದೇ ಕಲಿಕಾಮನು ಸೇವೆಯಿಂದ ಈಶ್ವರನನ್ನು ಸಂತೋಷಪಡಿಸಿ, ಕೊನೆಗೆ ಆ ಮಹೇಶನ ಅನುಗ್ರಹದಿಂದ ನಿಶ್ಚಯವಾಗಿಯೂ ಆ ಶಿವಧಾಮವಾದ ಕೈಲಾಸವನ್ನು ಪಡೆದನು. ॥೩೨॥

ಪ್ರಖ್ಯಾತವೂ ಪವಿತ್ರವೂ ಕೀರ್ತಿಯನ್ನುಂಟುಮಾಡುವುದೂ ಆದ ಈ ಕಲಿಕಾಮನ ಉತ್ತಮವಾದ ಚರಿತ್ರೆಯನ್ನು ಸ್ಥಿರಬುದ್ಧಿಯಿಂದ ಓದುವವನೂ, ಮತ್ತು

ಕೇಳುವವನೂ ಶ್ರೀ ಮಹೇಶ್ವರನ ಪರಮಪದವನ್ನೈದುವನೆಂದು ಕುಮಾರ ಸ್ವಾಮಿಯು ಜೈಗೀಷವ್ಯನಿಗೆ ಹೇಳಿದನು. ॥೩೩॥

ಇಂತು ಶ್ರೀಶಿವರಹಸ್ಯದಲ್ಲಿ ಸದಾಶಿವಸಂಜ್ಞಕವಾದ ಒಂಬತ್ತನೆಯ ಅಂಶದಲ್ಲಿ
ಕಲಿಕಾಮನೆಂಬ ಶೈವನ ಕಥಾವರ್ಣನೆಯೆಂಬ ಐವತ್ತೊಂದನೆಯ
ಅಧ್ಯಾಯವು ಮುಗಿಯಿತು.



॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಸದಾಶಿವಾಖ್ಯೇ

## ನವಮಾಂಶೇ

## ಅಥ ದ್ವಿಪಂಚಾಶೋಽಧ್ಯಾಯಃ

॥ ಶ್ರೀಸ್ಕಂದ ಉವಾಚ ॥

ಶ್ರೀ ಮೂಲದೇವನಾಮ್ನೋಽಸ್ಯ ಭಕ್ತಸ್ಯ ಪ್ರಥಿತಾಂ ಕಥಾಂ ।
ಅಸ್ತಿ ಸರ್ವೇಶ್ವರೈಶ್ವರ್ಯ ರಕ್ಷಕಾಧ್ಯಕ್ಷತಾಂ ಗತಃ ॥೧॥

ಕೈಲಾಸ ಇತಿ ವಿಖ್ಯಾತೋ ಮಹಾದೇವಸ್ಯ ವಾಸಭೂಃ ।
ತಸ್ಮಿನ್ಸಂತಿ ಮಹಾತ್ಮಾನಃ ಶಿವಸಾಮೀಪ್ಯವರ್ತಿನಃ ॥೨॥

ಭಸ್ಮರುದ್ರಾಕ್ಷಸಂಪನ್ನಾಃ ಶಿವಲಿಂಗಾರ್ಚನೋದ್ಯತಾಃ ॥೩॥

---

## ಐವತ್ತೆರಡನೆಯ ಅಧ್ಯಾಯು

ಜೈಗೀಷವ್ಯನೇ! ಶ್ರೀಮೂಲದೇವನೆಂಬ ಹೆಸರುಳ್ಳ ಒಬ್ಬ ಭಕ್ತನ ಶುಭಕರವಾದ ಕಥೆಯನ್ನು ಹೇಳುತ್ತೇನೆ ಕೇಳು, ಸಕಲ ಶ್ರೀಮಂತರ ಐಶ್ವರ್ಯಗಳನ್ನೂ ಕಾಪಾಡುವುದರಲ್ಲಿ ಅಧ್ಯಕ್ಷಪದವಿಯನ್ನು ಹೊಂದಿ, ಮಹಾದೇವನಿಗೆ ವಾಸಸ್ಥಾನವಾದ ಕೈಲಾಸಕ್ಷೇತ್ರವು ಅನಾದಿಕಾಲದಿಂದ ಪ್ರಖ್ಯಾತವಾಗಿರುವುದು. ಆ ಕ್ಷೇತ್ರದಲ್ಲಿ ಶಿವನ ಸಮೀಪದಲ್ಲಿಯೇ ಅನೇಕ ಮಹಾತ್ಮರು ವಾಸಮಾಡುತ್ತಿರುವರು. ॥೧-೨॥

ಅವರೆಲ್ಲರೂ ಭಸ್ಮರುದ್ರಾಕ್ಷಿಗಳನ್ನು ಧರಿಸಿ, ಸದಾ ಶಿವಲಿಂಗ ಪೂಜಾನಿರತರಾಗಿರುವರು. ಚಂದ್ರಕಿರಣಗಳಂತೆ ಶುಭ್ರವಾಗಿರುವ ಆ ಕೈಲಾಸಪರ್ವತದಲ್ಲಿ ಶಿಖರಭಾಗಗಳೆಲ್ಲಾ ಶಿವಲಿಂಗಸಮೂಹಗಳಿಂದ ವ್ಯಾಪ್ತವಾಗಿರುವುವು. ಆಕಾಶಮಾರ್ಗದಲ್ಲಿ ಗೋಚರಿಸುವ ರತ್ನಗೋಪುರಗಳು ಉತ್ತಮವಾಗಿ ಶೋಭಿಸುವ ಕುಂಭಗಳಕಾಂತಿ

ತಸ್ಮಿನ್ಕೈಲಾಸಶೈಲೇ ಶಶಿಕರಧವಳೇ ಲಿಂಗಸಂಘೋವ ಮೌಲಾ ।
ಯಾನೋದ್ಯನ್ಮಣಿಗೋಪುರೋತ್ತಮಲಸತ್ಕುಂಭಪ್ರಭಾಭಿಸ್ತತೇ ॥
ನಾನಾಸಾರರಸಾಲತಾಲಲಿಕುಚ ಶ್ರೀವೃಕ್ಷಸಂಘಾವೃತೇ ।
ಶ್ರೀಖಂಡದ್ರುಮದೇವದಾರುತಗರಾವೋದೈಕ ದಿಙ್ಮಂಡಲೇ ॥೪॥

ಮಂದಾರಸುಂದರವನಪ್ರಭವಾಭಿರಾಮ ।
ಸೋಮಪ್ರಭೋತ್ತಮಸುಮಪ್ರಬಲೋರುಗಂಧೇ ॥
1 ಬದ್ಧದ್ವಿರೇಫಪದಚಂಕ್ರಮಣಪ್ರಕಾಂತೇ ।
॥೫॥
ಸರಸ್ತೀರ ಪ್ರಾಂತದ್ರುಮಗಲಿತ ಪುಷ್ಪವ್ರಜರಜೋ ।
ಮರಂದಾಸಾರೋತ್ಥೇ ಭುವಿ ಕರಟಿಕಟಸುಸ್ರಾವಿಸಲಿಲೇ ॥೬॥

ಸಮೀರಣರಣದ್ರವಪ್ರಬಲವೇಣುಝುಂಕಾರಕೃತ್ಸು ।
ಪಕ್ಷಿವಿರುತಾವೃತೇ ಪರಮಕೋಕಿಲಾಲಾಪಿತೇ ॥೭॥

---

ಯಿಂದ ಯುಕ್ತವಾಗಿರುವುವು. ಅನೇಕಸಾರವತ್ತಾದ ಸಿಹಿಮಾವು, ತಾಳೆ, ಗಜನಿಂಬೆ, ಬಿಲ್ವವೃಕ್ಷಗಳ ಗುಂಪುಗಳು ಎಲ್ಲೆಲ್ಲೂ ವ್ಯಾಪಿಸಿರುವುವು. ಗಂಧದಮರ, ದೇವದಾರು (ತಗರ) ಚಂದನವೃಕ್ಷಗಳ ಗಂಧಗಳಿಂದ ದಿಗಂತವೆಲ್ಲಾ ಸುವಾಸಿತವಾಗಿರುವುದು. ॥೩-೪॥

ಮಂದಾರವೃಕ್ಷಗಳಿಂದ ನಿಬಿಡವಾದ ಸುಂದರವನಗಳೂ, ವನವೃಕ್ಷಗಳಲ್ಲಿ ಮಾಲಾಕಾರದಿಂದ ಕಂಡುಬರುತ್ತಾ, ಚಂದ್ರಮಂಢಲದಂತೆ ಶುಭ್ರವಾಗಿ ದುಂಡಾಗಿ ಕಾಣುವ ಪುಷ್ಪರಾಶಿಗಳೂ, ಅಂತಹ ಹೂವುಗಳಲ್ಲಿರುವ ಮಕರಂದವನ್ನು ಪಾನ ಮಾಡಲಿಚ್ಛಿಸುವ ದುಂಬಿಗಳ ಸಾಲುಗಳೂ, ಆ ಕ್ಷೇತ್ರದ ಸೊಬಗನ್ನು ಅತಿಶಯಗೊಳಿಸುತ್ತಿದ್ದುವು. ದಿವ್ಯವನಾರಾಮಗಳಿಂದ ಕಂಗೊಳಿಸುತ್ತಿದ್ದ ಆ ಶಿವಕ್ಷೇತ್ರವು ಪ್ರಕೃತಿದೇವಿಯ ವಾಸಸ್ಥಾನದಂತೆ ವಿರಾಜಿಸುತ್ತಿದ್ದಿತು. ॥೫॥

ಸರಸ್ಸುಗಳ ತೀರಪ್ರದೇಶಗಳಲ್ಲಿರುವ ಗಿಡಗಳಿಂದ ಬಿದ್ದ ಹೂರಾಶಿಗಳ ರಜಸ್ಸಿನಮಕರಂದದ ಸಾರದಿಂದ ಆ ಕೈಲಾಸಪರ್ವತದ ಶಿಖರವು ಘಮಘಮಿತವಾಗಿರುವುದು. ಮದದಾನೆಗಳ ಗಂಡಸ್ಥಳದಿಂದ ಸುರಿವ ಮದೋದಕಗಳಿಂದ ನೆಲವೆಲ್ಲವೂ ತೊಯ್ದಿರುವುದು. ವಾಯುಗಳ ರಣತ್ಕಾರಗಳಿಂದ ದೊಡ್ಡದೊಡ್ಡ ಬಿದಿರುಗಳು ತಿಕ್ಕಿ

---

1 ಇಲ್ಲಿ ಒಂದು ಪಾದ ಮೂಲದಲ್ಲಿಲ್ಲ.

ಮಾತಂಗಬೃಂದಚಮರಸ್ಸೃಮರಾಭಿರಾಮೇ ।
ಖಡ್ಗೋದ್ಧತೋರುಸುವಿಷಾಣವಿಘಟ್ಟಭೂಮೌ ॥
ವೇತಂಡಬೃಂಹಿತರವೋದ್ಧತಪಕ್ಷಕಾಂಡ ।
ಪ್ರೋದ್ಯಚ್ಛಿಖಂಡಿನಟನೇ ಮುದಿರಭ್ರಮೇಣ ॥೮॥

ಗಣಗಣವರಘೋಣಪೂರ್ಣಮಾಣೇ ।
ಶ್ವರ ನಿಸ್ವಾನರವೇಣ ಪೂರ್ಣಕಾಯೇ ॥
ಹಯವೈರಿಗಹಾರಣೇ ನಗೇಂದ್ರೇ ।
ಸುರಸಂಘೃಷ್ಟಮಹೀತಲೋತ್ಥರೇಣೌ ॥೯॥

ತಸ್ಮಿನ್ಗಣವರಶ್ರೇಷ್ಠೋ ಮೂಲದೇವ ಇತಿ ಶ್ರುತಃ ।
ಸ ತು ಶರ್ವಾಜ್ಞಯಾ ಶಂಭೋಃ ಸ್ಥಾನಾನ್ನಿರೀಕ್ಷಿತುಂ ಕ್ರಮಾತ್ ॥೧೦॥

---

ಝುಂಕಾರಮಾಡುತ್ತಿರುವುವು ; ಉತ್ತಮವಾದ ಪಕ್ಷಿಗಳ ಮನೋಹರವಾದ ಧ್ವನಿಗಳು ಎಲ್ಲೆಲ್ಲೂ ವ್ಯಾಪಿಸಿರುವುವು. ಶ್ರೇಷ್ಠವಾದ ಕೋಗಿಲೆಗಳ ಇಂಪಾದ ನಾದವು ರಾಗಾಲಾಪನೆಮಾಡುತ್ತಿರುವಂತೆ ಶಿಖರಪ್ರದೇಶದಲ್ಲೆಲ್ಲಾ ಧ್ವನಿಗೈಯುತ್ತಿರುವುದು. ॥೬-೭॥

ಆನೆಗಳ ಹಿಂಡು, ಚಮರೀಮೃಗ, ಸೃಮರ (ದೊಡ್ಡಚಮರೀಮೃಗ) ಗಳ ಗುಂಪಿನಿಂದ ಮನೋಹರವಾಗಿ, ಖಡ್ಗಮೃಗಗಳ ದೊಡ್ಡಕೊಂಬುಗಳಿಂದ ಅಗೆಯಲ್ಪಟ್ಟ ಆ ಕೈಲಾಸಶಿಖರಭೂಮಿಯಲ್ಲಿ ಆನೆಗಳ ಗರ್ಜನೆಯ ಧ್ವನಿಯನ್ನು ಕೇಳಿ ನವಿಲುಗಳು ಗರಿಗಳ ಸಮೂಹಗಳನ್ನೆಲ್ಲಾ ಬಿಚ್ಚಿಕೊಂಡು, ಮೋಡದ ಗರ್ಜನೆಯೆಂಬ ಭ್ರಾಂತಿಯಿಂದ ಆನಂದದಿಂದ ನಾಟ್ಯವಾಡುತ್ತಿರುವುವು. ॥೮॥

ಶ್ರೇಷ್ಠರಾದ ಶಿವಗಣಗಳಗುಂಪಿನ ನಾದದಿಂದ ತುಂಬಲ್ಪಟ್ಟು, ಮಹೇಶ್ವರನ ಗಂಭೀರವಾದ ಡಮರುಗನಾದದಿಂದ ಪೂರ್ಣವಾದ ಸಂಪತ್ತುಳ್ಳ ಈ ಕೈಲಾಸಪರ್ವತದಲ್ಲಿ ದೇವತೆಗಳ ಪಾದಗಳ ಸಂಘರ್ಷಣದಿಂದ ಎದ್ದ ಭೂಮಿಯ ಧೂಳು ಅಂತರಿಕ್ಷದಲ್ಲೆಲ್ಲಾ ವ್ಯಾಪಿಸಿರುವುವು. ಕುದುರೆಗಳಿಗೆ ವೈರಿಯಾದ ಹುಲಿ, ಕಿರುಬ, ಕಾಡೆಮ್ಮೆ ಮುಂತಾದ ಕ್ರೂರಪ್ರಾಣಿಗಳು ಅಲ್ಲಿ ಭಯಂಕರವಾಗಿ ಗರ್ಜನೆಮಾಡುತ್ತಿರುವುವು. ॥೯॥

ಆ ಕೈಲಾಸಪರ್ವತದಲ್ಲಿ, ಗಣಮುಖ್ಯರಲ್ಲಿ ಶ್ರೇಷ್ಠನಾದ ಮೂಲದೇವನೆಂಬುವನೊಬ್ಬನು ಪ್ರಖ್ಯಾತನಾಗಿದ್ದನು. ಅವನು ಶಿವನಪ್ಪಣೆಯಂತೆ ಕ್ರಮವಾಗಿ ಶಂಕರನ

ಉರಗೇಂದ್ರಮಹಾಹಾರಂ ದೃಷ್ಟ್ವಾ ಸ ನಿರಗಾದ್ಗಿರೇಃ ।
ಸ ತು ಸಂತೀರ್ಯ ಗಂಗಾಸು ಸುಗಂಗಾದಿ ನದೀಷು ಚ ॥೧೧॥

ಶ್ರೀಶೈಲಕಾಲಹಸ್ತ್ಯಾದೌ ನ್ಯಗ್ರೋಧಾರಣ್ಯನಾಮಸು ।
ಸ್ಥಾನೇಷು ಗತ್ವಾ ದೇವೇಶಂ ಪ್ರಾಪ್ತಃ ಕಾಂಚೀಪುರೀಂ ಮುನಿಃ॥೧೨॥

ಏಕಾಮ್ರನಾಥಮಾನಮ್ಯ ತತ್ರೋಷಿತ್ವಾ ಚಿರಂ ಮುನಿಃ ।
ನತ್ವಾಲಿಕಾಪುರೇಶಂ ಚ ಪುಂಡರೀಕಪುರಂ ಯಯೌ ॥೧೩॥

ನತ್ವಾ ನಟೇಶಂ ಹೃಷ್ಟಾಂಗೋ ದೃಷ್ಟ್ವಾಹ್ಯಾನಂದತಾಂಡವಂ ।
ತತೋ ನಿರ್ಗತ್ಯ ಧಾಮಾನಿ ಮಾನ್ಯಾನ್ಯನ್ಯಾನಿ ಚಾನಮತ್ ॥೧೪॥

ನತ್ವಾ ಗೋವಟತೀರ್ಥೇಶಂ ಸ ಗಚ್ಛನ್ಸಹ್ಯಜಾತಟೇ ।
ಅಪಶ್ಯಂ ಗೋಕುಲಂ ದೀನಂ ಪರಿಭ್ರಾಮ್ಯನ್ನಿತಸ್ತತಃ ॥೧೫॥

---

ಕ್ಷೇತ್ರಗಳನ್ನು ನೋಡಲು ಹೊರಡಬೇಕೆಂದು ನಿಶ್ಚಯಿಸಿ ಮೊದಲು ಸರ್ಪಹಾರನಾದ ಆ ಮಹಾದೇವನ ದರ್ಶನಮಾಡಿ ಅನಂತರ ಕೈಲಾಸಪರ್ವತದಿಂದ ಹೊರಟನು. ಅಲ್ಲಿಂದ ಮುಂದೆ ಗಂಗೆ ಮುಂತಾದ ನದಿಗಳನ್ನು ದಾಟಿ, ಅಲ್ಲಲ್ಲಿ ಮಿಂದು ಸ್ನಾನ ಮಾಡಿ ಶ್ರೀಶೈಲ, ಕಾಲಹಸ್ತಿ, ವಟಾರಣ್ಯ ಮುಂತಾದ ಸ್ಥಾನಗಳನ್ನು ನೋಡಿ ಕೊಂಡು, ಅಲ್ಲಿ ದೇವತೋತ್ತಮನಿಗೆ ಪ್ರಣಾಮಮಾಡಿ, ಅನಂತರ ಆ ಮುನಿವರ್ಯನು ಕಾಂಚಿ ಪಟ್ಟಣಕ್ಕೂ ಬಂದನು. ॥೧೦-೧೧-೧೨॥

ಅಲ್ಲಿ ಏಕಾಮ್ರೇಶ್ವರನಿಗೆ ನಮಸ್ಕಾರಮಾಡಿ ಬಹಳಕಾಲ ಅಲ್ಲಿಯೇ ವಾಸ ಮಾಡಿ, ಹಾಗೆಯೇ ಆಮುನಿಯು ಅಲಿಕಾಪುರಾಧಿಪತಿಗೆ ನಮಸ್ಕರಿಸಿ, ಆಮೇಲೆ ಪುಂಡರೀಕಪುರಕ್ಕೆ ಹೊರಟನು. ಅಲ್ಲಿ ನಟೇಶ್ವರನಿಗೆ ನಮಿಸಿ ಸಂತುಷ್ಟಾಂತರಂಗ ನಾಗಿ, ಆನಂದ ತಾಂಡವಮೂರ್ತಿಯ ದರ್ಶನಮಾಡಿ, ಅಲ್ಲಿಂದ ಮುಂದೆ ಹೊರಟು ಪೂಜ್ಯವಾದ ಇತರ ಶಿವಕ್ಷೇತ್ರಗಳಿಗೂ ಹೋಗಿ ಕ್ಷೇತ್ರಗಳ ಸೊಬಗನ್ನು ಕಾಣುತ್ತಾ ಮಹೇಶ್ವರನಿಗೆ ಸೇವೆ ಸಲ್ಲಿಸುತ್ತಿದ್ದನು. ॥೧೩-೧೪॥

ಆಮೇಲೆ ಗೋವಟತೀರ್ಥೇಶ್ವರನಿಗೂ ನಮಸ್ಕರಿಸಿ, ಹಾಗೆಯೇ ಕಾವೇರೀ ನದಿಯ ದಡದಲ್ಲಿಯೇ ಪ್ರಯಾಣಮಾಡುತ್ತಾ, ಇಲ್ಲಿ, ಅಲ್ಲಿ ಸಂಚರಿಸುವವನಾಗಿ ದೀನವಾಗಿರುವ ಒಂದು ಗೋಕುಲವನ್ನು ಕಂಡನು. ದೊಡ್ಡದಾದ ಈ ಗೋಸಮೂ

ಗೋಕುಲವ್ಯಾಕುಲತ್ವಸ್ಯ ಹೇತುದರ್ಶನಲಾಲಸಃ ।
ಕವೇರಕನ್ಯಾತೀರೇ ಚ ಚಚಾರ ಸ ಮುನೀಶ್ವರಃ ॥೧೬॥

ಶಾಸ್ತ್ರಗ್ರಾಮಜಗೋಕುಲಂ ಪರಾಸುಂ ಮೂಲಸಂಜ್ಞಕಂ ।
ಘ್ರಾತ್ವಾಘ್ರಾತ್ವಾ ತದಂಗಂ ಚ ಕ್ರೋಶದ್ಭಿರ್ಗೋಕುಲೈರ್ವೃತಂ॥೧೭॥

ದಯಾಲುಃ ಸ ಮುನಿರ್ದೃಷ್ಟ್ವಾ ಗೋಕುಲಂ ಚ ತದಾಕುಲಂ ।
ಉಜ್ಜೀವ್ಯ ಗೋಪಾಲಮಿಮಂ ವಿನೇಷ್ಯೇ ಗೋಕುಲವ್ಯಥಾಂ ॥೧೮॥

ಇತಿ ನಿಶ್ಚಿತ್ಯ ಸಹಸಾ ನ್ಯಸ್ಯ ಕ್ವಾಪಿ ನಿಜಾಂ ತನುಂ ।
ಪ್ರಾಣೈಃ ಸ್ವೈರ್ಗೋಪದೇಹಾಂತಃ ಪ್ರಾವಿಶತ್ಪವನಾಧ್ವನಾ ॥೧೯॥

ಮೂಲದೇವಃ ಸಮುತ್ತಸ್ಥೌ ತತ್ಪ್ರಾಣಾವೇಶನಕ್ಷಣೇ ।
ಗಾಸ್ತಾಸ್ಸಮುತ್ಥಿತಂ ದೃಷ್ಟ್ವಾ ಘ್ರಾತ್ವಾಲಿಲಿಹಿರೇ ಚ ತಾಃ ॥೨೦॥

---

ಹವು ಹೀಗೆ ವ್ಯಾಕುಲಗೊಂಡಿರುವುದಕ್ಕೆ ಕಾರಣವನ್ನು ತಿಳಿಯಲು ಇಚ್ಛೆಯುಳ್ಳವನಾಗಿ, ಹಾಗೆಯೇ ಆ ಮುನಿವರ್ಯನು ಕಾವೇರಿದಡದಲ್ಲಿಯೇ ಸಂಚರಿಸಿ. ಬಂದನು. ॥೧೫-೧೬॥

ಶಾಸ್ತ್ರಗ್ರಾಮವೆಂಬ ಒಂದೂರಿನಲ್ಲಿ ಹುಟ್ಟಿದ ಗೋಸಮೂಹವು ಸತ್ತುಹೋಗಿರುವ ಮೂಲನೆಂಬ ಹೆಸರಿನ ತಮ್ಮ ಸ್ವಾಮಿಯನ್ನು ಕಂಡು, ಅವನ ದೇಹವನ್ನು ಮೂಸಿನೋಡಿ, ಮೂಸಿನೋಡಿ ದುಃಖದಿಂದ ಕೂಗುತ್ತಿದ್ದವು. ಆರೀತಿ ಗೋಹಿಂಡುಗಳಿಂದ ಸುತ್ತುವರಿಯಲ್ಪಟ್ಟು ವ್ಯಾಕುಲಗೊಂಡಿರುವ ಹಸುಗಳಗುಂಪನ್ನು ಕಂಡು ದಯಾಳುವಾದ ಆ ಮೂಲದೇವನು ಈ ಗೋಪಾಲನನ್ನು ಬದುಕಿಸಿ ಈ ಹಸುಗಳ ಹಿಂಡಿನ ವ್ಯಥೆಯನ್ನು ಹೋಗಲಾಡಿಸುವೆನೆಂದು ನಿಶ್ಚಯಿಸಿದನು. ॥೧೭-೧೮॥

ಜಾಗ್ರತೆಯಾಗಿ ಮೂಲದೇವಭಕ್ತನು ತನ್ನ ನಿಜದೇಹವನ್ನು ಎಲ್ಲಿಯೋ ಮರೆಯಲ್ಲಿರಿಸಿ, ತನ್ನ ಪ್ರಾಣವಾಯುಗಳಿಂದ ಆ ಗೋಪಾಲನ ದೇಹದೊಳಕ್ಕೆ ವಾಯುಮಾರ್ಗದಿಂದ ಪ್ರವೇಶಿಸಿದನು. ಆಗ ಆ ಪ್ರಾಣಗಳು ಒಳಗೆ ಆವೇಶವಾದಕೂಡಲೇ ಮೂಲದೇವನು ಮೇಲೆದ್ದನು. ಹೀಗೆ ಮೇಲೆದ್ದ ತಮ್ಮ ಸ್ವಾಮಿಯನ್ನು ಕಂಡು ಆ ಹಸುಗಳು, ಮೂಸಿನೋಡಿ ಮೂಸಿನೋಡಿ, ಅವನ ದೇಹವನ್ನು ಪ್ರೀತಿವಿಶ್ವಾಸದಿಂದ ನೆಕ್ಕಿದವು. ॥೧೯-೨೦॥

ತತಸ್ತನ್ಮೂಲದೇವಸ್ತದ್ಗೋಕುಲಂ ತೃಣಶಾಲಿಷು ।
ಸ್ಥಾನೇಷು ಚಾರಯನ್ಸಿಕ್ತಂ ಕುಕ್ಷೀ ಪೀತೋದಕಂ ವ್ಯಧಾತ್ ॥೨೧॥

ದಿವಾಂತೇ ಗೋಕುಲೇ ತಸ್ಮಿನ್ಪ್ರವಿಷ್ಟೇ ಸ್ವಾನ್ಗೃಹಾನ್ಸತು ।
ಮೂಲದೇವೋ ನಿಜಾವಾಸಮಪಶ್ಯನ್ಸ್ತಿಮಿತಸ್ಥಿತಃ ॥೨೨॥

ಮೂಲದೇವಸ್ಯ ಗೃಹಿಣೀ ಮದ್ಭರ್ತಾ ಕಿಂ ವಿಲಂಬಿತಂ ।
ಇತಿ ವ್ಯಾಕುಲಚಿತ್ತಾ ಸಾ ತತ್ರಾಗಾದ್ಯತ್ರ ಸಂಸ್ಥಿತಃ ॥೨೩॥

ವಿಲಂಬಿತೇನ ನಮಿತಾ ಸಂದೇಹಸ್ಪರ್ಶನೋತ್ಸುಕಾಂ ।
ಮಾಪ್ರಾಕ್ಷೀಸ್ತೇನ ಸಂಬಂಧೋ ಮಯಾಸ್ತೀತ್ಯಭಿಧಾಯ ಸಃ ॥೨೪॥

ನವಂ ಮಠಂ ವಿವೇಶಾನ್ಯಂ ಸಾಚ ಶೋಕಭಯಾಕುಲಾ ।
ವೃತ್ತಾಂತಂ ತಾದೃಶಂ ಭರ್ತುರ್ಗ್ರಾಮಣೀಭ್ಯೋ ನ್ಯವೇದಯತ್ ॥೨೫॥

---

ಒಡನೆಯೇ ಆ ಮೂಲದೇವನು ಗೋವುಗಳ ಹಿಂಡನ್ನು ಒಳ್ಳೆಹುಲ್ಲಿನ ಮೈದಾನಗಳಲ್ಲಿ ಮೇಯಿಸಿ, ಮೇದ ಹಸುಗಳಿಗೆ ಹೊಟ್ಟೆತುಂಬಾ ನೀರನ್ನು ಕುಡಿಸಿದನು. ಸಂಜೆಯಲ್ಲಿ ಹಸುಗಳ ಗುಂಪೆಲ್ಲವೂ ತಮ್ಮತಮ್ಮ ಮನೆಗೆ ಹೋಗಲು ಆವೇಶಿತನಾಗಿದ್ದ ಮೂಲದೇವನು ತನ್ನ ಮನೆಯಾವುದೆಂದು ತಿಳಿಯದೆ ನಿಶ್ಚಲನಾಗಿ ನಿಂತುಕೊಂಡನು. ॥೨೧-೨೨॥

ಮೂಲದೇವನ ಹೆಂಡತಿಯು ಇದೇನು, ನನ್ನ ಗಂಡನು ಬರುವುದು ಇಷ್ಟು ತಡವಾಯಿತೆಂದು ವ್ಯಾಕುಲಮನಸ್ಕಳಾಗಿ, ಅವನಿದ್ದ ಬಳಿಗೆ ಹೋಗಿ, ತಾವು ತಡ ಮಾಡಿದ್ದರಿಂದ ಭಯಗ್ರಸ್ತೆಯಾಗಿ ಬಂದೆನೆಂದು ನಮಸ್ಕರಿಸಿದಳು. ಅವನ ಚರ್ಯೆಗಳಲ್ಲಿ ಸಂದೇಹದಿಂದ ಸ್ಪರ್ಶಮಾಡಲು ಹಿಂಜರಿಯುತ್ತಿರುವ ಅವಳಿಗೆ ಎಲೌ, ನನಗೆ ಬೇರೊಬ್ಬರ ಸಂಬಂಧವಿದೆಯೋ ಇಲ್ಲವೋ ಎಂಬುದನ್ನು ಕೇಳಬೇಡವೆಂದು ಹೇಳಿ ; ಬೇರೊಂದು ಹೊಸಮಠವನ್ನು ಪ್ರವೇಶಿಸಿದನು. ಆಕೆಯಾದರೋ ಶೋಕ ಮತ್ತು ಭಯದಿಂದ ಯುಕ್ತಳಾಗಿ ತನ್ನ ಗಂಡನ ಹೊಸ ವಾರ್ತೆಯನ್ನು ಆ ಗ್ರಾಮ ಮುಖ್ಯಸ್ಥರಿಗೆಲ್ಲಾ ತಿಳಿಸಿದಳು. ॥೨೩-೨೪-೨೫॥

ಗ್ರಾಮಿಣಸ್ತೇ ಚ ಬಹುಧಾ ಭೇದನೇಽಪಿಸ್ಥಿರಾಶಯಂ ।
ವಿಷಯೇಭ್ಯೋ ವಿರಕ್ತಂ ತಂ ಸ್ಪಷ್ಟಂ ದೃಷ್ಟ್ವಾ ವಚೋಽಬ್ರುವನ್ ॥೨೬॥

ಉನ್ಮಾದಭೂತಾವೇಶಾದಿರೇತಸ್ಮಿನ್ನಾಸ್ತಿ ವಿಕ್ರಿಯಾ ।
ಭಾವತಾ ಭೂಯಸೀ ಪ್ರಾಯಃ ಶಿವಯೋಗಸ್ಯ ನಿರ್ಮಲಾ ॥೨೭॥

ಇತ್ಯುಕ್ತ್ವಾ ತೇ ಗ್ರಾಮಜನಾ ಮೂಲದೇವಸ್ಯ ಗೇಹಿನೀಂ ।
ಶೋಕಾಕ್ರಾಂತಾಂ ಸಮಾಶ್ವಾಸ್ಯ ಬಾಂಧವೇಷು ನ್ಯವೇಶಯನ್ ॥೨೮॥

ಮೂಲದೇವೋಽಪಿ ಸ ಪ್ರಾತಸ್ತದನುವ್ರಜ್ಯ ಗೋಕುಲಂ ।
ನ್ಯಸ್ತಂ ದೇಹಂ ನಿಜಂ ತತ್ರ ನಾಪಶ್ಯಂ ಚ ವ್ಯಚಿಂತಯತ್ ॥೨೯॥

ಭಾಷಯಾ ಮೇ ಪ್ರಥಯಿತುಂ ಪ್ರೋಕ್ತಂ ಮೂಲಾಗಮಸ್ವಕಂ ।
ತಿರಶ್ಚಕಾರ ಮತ್ಕಾಯಂ ಪ್ರಾಯೇಣ ಪರಮೇಶ್ವರಃ ॥೩೦॥

ಏವಂ ವಿಚಾರ್ಯ ಸ್ವಾನ್ಬಂಧೂನನುನೀಯ ಸ್ವಮಾಸ್ಪದಂ ।
ಯಾಪಯಿತ್ವಾ ಚ ಬುದ್ಧೀಶಂ ಸೋಽಗಾದ್ಗೋವಟತೀರ್ಥಕಂ ॥೩೧॥

---

ಆ ಗ್ರಾಮದವರು ಬಹಳವಿಧವಾಗಿ ಒಡೆದೊಡೆದು ಕೇಳಿದರೂ ದೃಢಮನಸ್ಸುಳ್ಳವನೂ, ವಿಷಯಸುಖಗಳಿಂದ ವಿರಕ್ತನೂ ಆಗಿರುವ ಅವನನ್ನು ಪರೀಕ್ಷಿಸಲಾರದೆ ಸ್ಪಷ್ಟವಾಗಿ ಅವನ ಹೆಂಡತಿಗೆ ಈ ಮಾತುಗಳನ್ನು ಹೇಳಿದರು. ಎಲೌ ಈತನಲ್ಲಿ ಹುಚ್ಚು,ಭೂತಗಳ ಆವೇಶ ಮುಂತಾದುವುಗಳಾವುವೂ ಕಾಣದು. ಯಾವ ವಿಕಾರವೂ ಕಾಣಬರುವುದಿಲ್ಲ. ಒಟ್ಟಿನಲ್ಲಿ ನೋಡುವುದಾದರೆ ಪ್ರಾಯಶಃ ನಿರ್ಮಲವಾದ ಶಿವಯೋಗ ಮಹಿಮೆಯ ಅಪಾರ ಭಾವನೆಯೆಂದು ತೋರುವುದೆಂದು ಹೇಳಿದರು. ॥೨೬-೨೭॥

ಗ್ರಾಮಸ್ಥರು ಹೀಗೆ ಹೇಳಿ, ಮೂಲದೇವನ ದುಃಖಿತೆಯಾದ ಹೆಂಡತಿಯನ್ನು ಸಮಾಧಾನಗೊಳಿಸಿ, ಕೊನೆಗೆ ಅವಳನ್ನು ಬಂಧುಗಳ ಬಳಿ ಸೇರಿಸಿಬಿಟ್ಟರು. ಇತ್ತ ಆ ಮೂಲದೇವನೂ ಬೆಳಗಾಗುತ್ತಲೂ, ಗೋಕುಲಕ್ಕೆ ಹೋಗಿ, ಅಲ್ಲಿ ತಾನು ಹಿಂದಿಟ್ಟಿದ್ದ ನಿಜದೇಹವನ್ನು ಕಾಣದೇ ಯೋಚಿಸತೊಡಗಿದನು. ॥೨೮-೨೯॥

ತನ್ನಿಂದ ಹೇಳಲ್ಪಟ್ಟ ಮೂಲಾಗಮವನ್ನು ದೇಶಭಾಷೆಯಿಂದ ನನ್ನ ಮೂಲಕ ಪ್ರಚಾರಪಡಿಸಲು ಪ್ರಾಯಶಃ ಪರಮೇಶ್ವರನು ನನ್ನ ದೇಹವನ್ನು ತಿರಸ್ಕರಿಸುವನೆಂದು ತೋರುವುದು, ಎಂದು ಯೋಚಿಸಿ ಆ ಮೂಲದೇವನು ತನ್ನ ಬಂಧುಗಳ

ಪರಂ ತತ್ವಂ ಶಿವಂ ನತ್ವಾ ಮೂಲದೇವಃ ಶಿವಾಲಯೇ ।
ಪಶ್ಚಾದ್ಭಾಗೇಽಶ್ವತ್ಥಮೂಲಮಧ್ಯಸ್ವಸ್ಥಸ್ವಮಾನಸಃ ॥೩೨॥

ಶಿವಯೋಗಾಸನಾರೂಢಃ ಶಿವವೇದಾಂತಸಂಹಿತಂ ।
ಹೃದಯಾಂಬುರುಹಸ್ಥಂ ತಂ ಮಹಾಂತಂ ಮನಸಾ ಸ್ಮರನ್ ॥೩೩॥

ಮಾಂಸದೇಹಾದಿಸಂಬಂಧವಿಷಂ ವಿದ್ರಾವ್ಯ ದಾರುಣಂ ।
ಸಂಸಾರಸಾಗರಾಂತಸ್ಥಜನೋತ್ತಾರಣಕಾರಣಂ ॥೩೪॥

ಅಪಶ್ಯನ್ನರ್ಥಮುದ್ರೇಯಂ ಸಂಜ್ಞಾನಾದಿಚತುಷ್ಟಯಂ ।
ಪ್ರತಿವತ್ಸರಮೇಕೈಕವ್ರತೇನಾನುಭವಾತ್ಮನಾ ॥೩೫॥

ಶ್ರೀಮಂತ್ರಮಾಲಿಕಾಂ ಕೃತ್ವಾ ವರದಾಂ ಭವದೇವತಾಂ ।
ವರಾಹದಂಷ್ಟ್ರಾಲಂಕಾರಮೇಕ ಏವೇತ್ಯಪಕ್ರಮಾತ್ ॥೩೬॥

---

ನ್ನನುಸರಿಸಿ, ತನ್ನ ದೇಶಕ್ಕೆ ಹೋಗಿ ಬುದ್ಧೇಶನಿಗೆ ನಮಸ್ಕರಿಸಿ, ಅಲ್ಲಿಂದ ಗೋವಟ ತೀರ್ಥವನ್ನೈದಿದನು. ॥೩೦-೩೧॥

ಅಲ್ಲಿ ಮೂಲದೇವನು ಶಿವದೇವಾಲಯದಲ್ಲಿ ಪರಮತತ್ವಸ್ವರೂಪನಾದ ಶಿವನಿಗೆ ನಮಸ್ಕಾರಮಾಡಿ, ದೇವಾಲಯದ ಹಿಂಭಾಗದಲ್ಲಿರುವ ಅರಳೀಮರದ ಬುಡದ ಮಧ್ಯದಲ್ಲಿ ಸ್ವಸ್ಥವಾದ ಸ್ಥಿರಮನಸ್ಸಿನಿಂದ ಶಿವಯೋಗಾಸನಾಸೀನನಾಗಿ, ಶಿವ ವೇದಾಂತ ಸಂಹಿತೆಯನ್ನು ತನ್ನ ಹೃದಯಕಮಲದಲ್ಲಡಗಿದ್ದ ಆ ಮಹಾತತ್ವವನ್ನು ಮನಸ್ಸಿನಿಂದ ಸ್ಮರಣೆಮಾಡತೊಡಗಿದನು. ॥೩೨-೩೩॥

ಮಾಂಸವಿಶಿಷ್ಟಶರೀರವೇ ಮೊದಲಾದುವುಗಳಲ್ಲಿ ಸಂಬಂಧರೂಪವಾಗಿರುವ ಘೋರವಿಷಯವನ್ನು ಓಡಿಸಿ, ಈ ಸಂಸಾರವೆಂಬ ಸಾಗರದ ಮಧ್ಯದಲ್ಲಿ ಬಿದ್ದುನರಳು ತ್ತಿರುವ ಜನಗಳ ಉದ್ಧಾರಕ್ಕೆ ಕಾರಣಭೂತನಾದ ಶಿವನನ್ನು ಧ್ಯಾನಿಸುತ್ತಾ, ಅರ್ಥ ಮುದ್ರಾರೂಪವಾದ ಸಂಜ್ಞಾನವೇ ಮೊದಲಾದ ನಾಲ್ಕು ತತ್ವಗಳನ್ನು ಚಿಂತಿಸುತ್ತಾ, ಪ್ರತಿವರ್ಷವೂ ಅನುಭವಸ್ವರೂಪವಾದ ಒಂದೊಂದು ವ್ರತವನ್ನೂ ನಡೆಸಿಕೊಂಡು, ವರದ, ಮತ್ತು ಅಭಯರೂಪವಾದ ದೇವತಾತ್ಮಕವಾದ ಶ್ರೀಮಂತ್ರಮಾಲಿಕಾ ಸ್ತೋತ್ರವನ್ನು ರಚಿಸಿದನು. ॥೩೪-೩೫॥

ಮೂರುಸಾವಿರ ವೃತ್ತವುಳ್ಳ (ಪದ್ಯವುಳ್ಳ) ವರಾಹದಂಷ್ಟ್ರಾಲಂಕಾರವೆಂಬ ಒಂದು ಗ್ರಂಥವನ್ನು ರಚಿಸಿ ಪಾಡಿ, ಮೂರುಲೋಕದಲ್ಲೂ ಹರಡುವಂತೆಮಾಡಿದನು.

ತ್ರಿಸಹಸ್ರಂ ಚ ವೃತ್ತಾನಾಂ ಗೀತ್ವಾ ತ್ರಿಭುವನಂ ಸ್ಥಿತಃ ।
ತ್ರಿಸಹಸ್ರಂ ಚ ವರ್ಷಾಣಾಮನೈಷೀದ್ಭುವಿ ತತ್ತ್ವವಿತ್ ॥೩೭॥

ಸ ಮೂಲದೇವೋಽವಪುಷಾಮುನೈವ
ದೇವಾದಿದೇವಸ್ಯ ದಯಾವಿಶೇಷೈಃ ।
ವಿರಾಜಮಾನೋ ರಜತಾದ್ರಿರಾಜೇ
ಪದಂ ಪ್ರಪೇದೇ ತದವಿಪ್ರಯೋಗಂ ॥೩೮॥

ಜಗತ್ಪವಿತ್ರಂ ಜಗದೇಕಚಿತ್ರಂ
ಯನ್ಮೂಲದೇವಸ್ಯ ಚರಿತ್ರಮೇತತ್ ।
ಪಠಂತಿ ಶೃಣ್ವಂತಿ ಚ ಭಕ್ತಿಯುಕ್ತಾಃ
ಪ್ರಯಾಂತಿ ಶೈವಂ ಪರಮಂ ಪದಂ ತೇ ॥೩೯॥

ಇತಿ ಶ್ರೀ ಶಿವರಹಸ್ಯೇ ಸದಾಶಿವಾಖ್ಯೇ ನವಮಾಂಶೇ ಮೂಲದೇವಚರಿತ್ರ ವರ್ಣನಂ ನಾಮ ದ್ವಿಪಂಚಾಶೋಽಧ್ಯಾಯಃ

---

ಮೂಲದೇವನು ಭೂಮಿಯಲ್ಲಿ ಈರೀತಿ ತತ್ತ್ವವನ್ನರಿತು ಮೂರುಸಾವಿರವರ್ಷಗಳಕಾಲ ಕಾಲಕಳೆದನು. ಕೊನೆಗೆ ಮೂಲದೇವನು ಇದೇ ದೇಹದಿಂದಲೇ ದೇವಾದಿದೇವನ ದಯಾವಿಶೇಷಗಳಿಂದ ಭೂಮಿಯಲ್ಲಿ ವಿರಾಜಿಸುತ್ತಾ ಕೊನೆಗೆ ರಜತಾಚಲದ ಶಿಖರದಲ್ಲಿ ಮತ್ತೆಂದಿಗೂ ವಿಯೋಗಹೊಂದದಂತಹ ಮಹಾದೇವನ ಸನ್ನಿಧಿಯನ್ನು ಸೇರಿದನು. ॥೩೬-೩೭-೩೮॥

ಜಗತ್ಪಾವನವೂ ಲೋಕವಿಚಿತ್ರವೂ ಆದ ಈ ಮೂಲದೇವನ ಚರಿತ್ರೆಯನ್ನು ಭಕ್ತಿಯುಕ್ತರಾಗಿ ಕೇಳುವ ಮತ್ತು ಓದುವ ಜನಗಳು ಶಿವನ ಪರಮಪದವನ್ನೈದುವರೆಂದು ಜೈಗೀಷವ್ಯನಿಗೆ ಕುಮಾರಸ್ವಾಮಿಯು ಹೇಳಿದನು. ॥೩೯॥

ಇಂತು ಶ್ರೀಶಿವರಹಸ್ಯದಲ್ಲಿ ಸದಾಶಿವಾಖ್ಯವಾದ ಒಂಬತ್ತನೆಯ ಅಂಶದಲ್ಲಿ ಮೂಲದೇವನ ಕಥಾವರ್ಣನೆಯೆಂಬ ಐವತ್ತೆರಡನೆಯ ಅಧ್ಯಾಯವು ಮುಗಿಯಿತು.



॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀ ಶಿವರಹಸ್ಯೇ

## ಸದಾಶಿವಾಖ್ಯೇ

## ನವಮಾಂಶೇ

## ಅಥ ತ್ರಿಪಂಚಾಶೋಽಧ್ಯಾಯಃ

॥ ಶ್ರೀಸ್ಕಂದ ಉವಾಚ ॥

ಉದ್ದಂಡದಂಡಭಕ್ತಸ್ಯ ಚರಿತಂ ಕಥಯಾಮಿ ತೇ ।
ದಂಡಭಕ್ತ ಇತಿ ಖ್ಯಾತಃ ಕೋಽಪ್ಯಾಸೀತ್ಕಮಲಾಲಯೇ ॥೧॥

ಸೋಽಂಧೋಽಪಿ ಶಿವಭಕ್ತಾನಾಂ ದಾಸ್ಯಂ ಮೇನೇ ದೃಶೋಃ ಫಲಂ ।
ಕಮಲಾಲಯದೇವೇಶಂ ನತ್ವಾ ಸ್ತುತ್ವಾ ಚ ನಿತ್ಯಶಃ ॥೨॥

ಶಿವಭಕ್ತಿಂ ಸ್ಥಿರಾಂ ಚಕ್ರೇ ಮನುಂ ಪಂಚಾಕ್ಷರಂ ಜಪನ್ ।
ಕರ್ಮಣಾ ಮನಸಾ ವಾಚಾ ಶಿವಧರ್ಮಪರಾಯಣಃ ॥೩॥

---

## ಐವತ್ತಮೂರನೆಯ ಅಧ್ಯಾಯ

ಅಯ್ಯ ಜೈಗೀಷವ್ಯನೇ! 'ಉದ್ದಂಡದಂಡ'ನೆಂಬ ಭಕ್ತನ ಕಥೆಯನ್ನು ನಿನಗೆ ಹೇಳುವೆನು ಕೇಳು; ಕಮಲಾಲಯಕ್ಷೇತ್ರದಲ್ಲಿ 'ದಂಡಭಕ್ತ' ನೆಂಬೊಬ್ಬನು ಪ್ರಖ್ಯಾತನಾಗಿದ್ದನು. ಅವನು ಕುರುಡನಾದರೂ ಶೈವರ ಸೇವೆಯೇ ತನ್ನ ಕಣ್ಣುಗಳ ಫಲವೆಂದು ಭಾವಿಸಿದ್ದನು. ಇವನು ಕಮಲಾಲಯಕ್ಷೇತ್ರೇಶ್ವರನಿಗೆ ನಿತ್ಯವೂ ನಮಸ್ಕರಿಸಿ, ಸ್ತೋತ್ರಮಾಡುತ್ತಾ, ಶಿವಪಂಚಾಕ್ಷರಮಂತ್ರಜಪಮಾಡುವವನಾಗಿ ದೃಢವಾದ ಶಿವಭಕ್ತಿಯನ್ನು ಪಡೆದಿದ್ದನು. ॥೧-೨॥

ಕರ್ಮ, ಮನಸ್ಸು, ಮತ್ತು ವಾಗ್ರೂಪವಾದ ತ್ರಿಕರಣಗಳಿಂದಲೂ ಶಿವಧರ್ಮಪರಾಯಣನಾಗಿ ನಿತ್ಯವೂ ಭಸ್ಮರುದ್ರಾಕ್ಷಗಳನ್ನು ಅಲಂಕರಿಸಿಕೊಂಡು ಶಿವಭಕ್ತರನ್ನು

ಶಿವಭಕ್ತಾರ್ಚಕೋ ನಿತ್ಯಂ ಭಸ್ಮರುದ್ರಾಕ್ಷಭೂಷಣಃ ।
ಅನ್ಯಹಸ್ತಾವಲಂಬ್ಯಾಥ ಚಕ್ರೇ ಶಂಭೋಃ ಪ್ರದಕ್ಷಿಣಂ ॥೪॥

ಪ್ರಣಾಮಾನ್ಯಥ ಚಾಕಾರ್ಷೀದಮರ್ಷಾದಿವಿವರ್ಜಿತಃ ।
ಸ ಕದಾಚಿದ್ದಂಡಭಕ್ತೋ ಜ್ಞಾನದೃಕ್ಶಿವನಾಮತಃ ॥೫॥

ದೇವಸ್ಯ ಪಶ್ಚಿಮೇ ಭಾಗೇ ಧಾಮ್ನಃ ಪ್ರಾಪ ಜಲಾಶಯಂ ।
ಸ ವಿಶಾಲಾವಕಾಶಂ ತತ್ಕರ್ತುಂ ಚ ಖನನೋದ್ಯತಃ ॥೬॥

ಖನನಾಖ್ಯಾನಸೇವಿತ್ವಂ ವೇಣುಪಾತ್ರೈಃ ಸಮ್ಯೃತ್ಪನ್ಯೈಃ ।
ನಿಬದ್ಧರಜ್ಜುಮಾಲಾಭಿರ್ದಂಡಂ ಕೃತ್ವಾ ಗತಾಗತಂ ॥೭॥

ಮೃದಂ ಖನಿತ್ವಾ ತದ್ಭಾರೈರ್ವಹನ್ಸೇತುಮಚೀಕರತ್ ।
ಶ್ರಾಂತಃ ಖನನ್ನಪೀಶಾನಂ ಧ್ಯಾತ್ವಾ ಪಂಚಾಕ್ಷರೀಂ ಜಪನ್ ॥೮॥

ಭಕ್ತ್ಯಾ ಪ್ರತಿದಿನಂ ದಂಡೀ ವಿಶಾಲಮಖನತ್ಸರಃ ।
ವಿರಮೋತ್ಸೇಧಜನನಾತ್ಪನನಾತ್ಪ್ರಾಣಿಹಿಂಸನಾತ್ ॥೯॥

---

ಪೂಜೆಮಾಡುತ್ತಿದ್ದನು. ಕುರುಡಭಕ್ತನು ಇನ್ನೊಬ್ಬರ ಕೈಗಳನ್ನು ಹಿಡಿದು ಶ್ರೀ ಶಂಭುವಿಗೆ ಪ್ರದಕ್ಷಿಣೆಮಾಡುತ್ತಾ ಹಾಗೆಯೇ ಕೋಪಾದಿಗಳಿಲ್ಲದೇ ಆ ಮಹಾ ದೇವನಿಗೆ ನಮಸ್ಕಾರಗಳನ್ನೂ ಮಾಡುತ್ತಿದ್ದನು. ॥೩-೪॥

ಜ್ಞಾನದೃಷ್ಟಿಯುಳ್ಳ ದಂಡಭಕ್ತನಾದರೋ ಸದಾ ಶಿವನಾಮಗಳನ್ನು ಜಪಿಸುತ್ತಾ ಒಂದುಸಲ ಮಹಾದೇವನ ದೇವಾಲಯದ ಪಶ್ಚಿಮಪಾರ್ಶ್ವದಲ್ಲಿದ್ದ ಜಲಾಶಯದಬಳಿಗೆ ಹೋದನು. ಆಗ ಅವನು ಅಲ್ಪನೀರುಳ್ಳ ಆ ಸರಸ್ಸನ್ನು ವಿಶಾಲವಾದ ಜಲವಸತಿಗೆ ಅವಕಾಶವುಳ್ಳದ್ದನ್ನಾಗಿಮಾಡಬೇಕೆಂದು ಯೋಚಿಸಿ, ಅದನ್ನು ಅಗೆಯಲು ತೊಡಗಿದನು. ಅಗೆದುಅಗೆದು ಬಂದ ಮಣ್ಣನ್ನು ಅವನು ಗುದ್ದಲಿಯಿಂದ ಅಡ್ಡೆಯ ಎರಡುಕಡೆಗಳಲ್ಲಿಯೂ ಬಿದರಿನಮಂಕರಿಗಳನ್ನಿಟ್ಟು, ಆದರಲ್ಲಿ ತುಂಬಿಕೊಂಡು, ಅಲ್ಲಿಂದ ಅದನ್ನು ಹೊತ್ತು ಹೋಗಿ ಬರುತ್ತಾ ಆ ಮಣ್ಣಿನ ರಾಶಿಯಂದ ಒಂದು ಸೇತುವೆಯನ್ನು (ಕಟ್ಟೆಯನ್ನು) ಕಟ್ಟಿದನು. ॥೫-೬-೭॥

ಅಗೆಯುತ್ತಾ ಬಳಲಿದಾಗ ಈಶ್ವರನನ್ನು ಧ್ಯಾನಿಸಿ, ಶಿವಪಂಚಾಕ್ಷರಿಯನ್ನು ಜಪಿಸುತಿದ್ದನು. ಇವನು ಹೀಗೆಯೇ ಪ್ರತಿದಿನವೂ ಅಗೆಯುತ್ತಾ ಒಂದು ದೊಡ್ಡ

ಇತೀರಿತಃ ಸ ತಾನಾಹ ಹೇ ಜನಾ ಮೂಢಬುದ್ಧಯಃ।
ಶಿವಧರ್ಮೈವ ಧರ್ಮಾಣಾಂ ಸಾರಂ ನ ಜ್ಞಾಯತೇ ಜನೈಃ ॥೧೦॥

ಇತೀರಿತಾಸ್ತೇ ತಂ ಪ್ರಾಹುರ್ನಶ್ಯಣೋಷ್ಯಸ್ಮದೀರಿತಂ।
ದೃಷ್ಟೀ ನ ಕೇವಲಂ ನಷ್ಟೇ ಕಿಂ ವಾ ತೇ ಶ್ರವಣೇ ಅಪಿ ॥೧೧॥

ಇತೀರಿತಃ ಸ ತಾನಾಹ ಪಶ್ಯಂತೋಽಪ್ಯದೃಶೋ ಹಿ ತೇ ।
ಯೇ ಜ್ಞಾನಬಧಿರಾಸ್ತೇ ನ ಶ್ರುಣ್ವಂತಿ ಸ್ವಕಂ ಹಿತಂ ॥೧೨॥

ನ ಕಿಂಚಿದ್ಭುವಿ ಸಂವೀಕ್ಷ್ಯೇ ತ್ರ್ಯಕ್ಷಪಾದಾಂಬುಜಂ ವಿನಾ।
ಸರ್ವತಶ್ಚಕ್ಷುಷೀ ವೀಕ್ಷ್ಯೇ ವೀಕ್ಷಯಾ ಕಿಂ ಫಲಂ ಮಮ ॥೧೩॥

ಇತ್ಯುಕ್ತಾಸ್ತೇ ಜನಾಃ ಪ್ರಾಹುಃ ಕಿಮಂಧೇನೇತಿ ತೇ ತದಾ।
ತ್ವಮಸ್ಮದೀಕ್ಷಯಾ ಪಶ್ಯ ಇತಿ ತತ್ಕರತೋ ಜನಾಃ ॥೧೪॥

---

ಸರೋವರವನ್ನೇ ತೋಡಿಬಿಟ್ಟನು. ಆಗ ಅಲ್ಲಿನ ಜನಗಳು, ಓ ದಂಡಭಕ್ತನೇ! ನೆಲವನ್ನು ಅಗೆಯುವುದರಿಂದುಂಟಾಗುವ ಪ್ರಾಣಿಹಿಂಸಾರೂಪವಾದ ಈ ಕಟ್ಟೆಯನ್ನು ಕಟ್ಟುವ ಕೆಲಸವನ್ನು ಬಿಡೆಂದು ಹೇಳಲು, ಆ ಮಾತನ್ನು ಕೇಳಿ ದಂಡಭಕ್ತನು, ಓ ದಡ್ಡರಾದ ಜನಗಳಿರಾ! ಶಿವಧರ್ಮವೇ ಸಕಲಧರ್ಮಗಳಿಗೂ ಸಾರಭೂತ ವೆನಿಸಿರುವುದು. ಅದನ್ನು ಸಾಮಾನ್ಯಜನರು ತಿಳಿಯಲಾರರು, ಎಂದು ನುಡಿದನು. ॥೮-೯-೧೦॥

ಹಾಗೆ ಹೇಳಲ್ಪಟ್ಟ ಅವರು ಅವನನ್ನು ಕುರಿತು; ಏ! ನಾವು ಹೇಳುವುದು ನಿನಗೆ ಕೇಳುವುದಿಲ್ಲವೋ,? ಅಥವಾ ಕಣ್ಣುಗಳು ಕುರುಡಾಗಿರುವಂತೆ ಕಿವಿಗಳೂ ನಿನಗೆ ಕೇಳಿಸದೇ ಕಿವುಡಾಗಿವೆಯೋ ಏನು! ಎಂದು ಹಾಸ್ಯಮಾಡಿದರು. ಆಗ ದಂಡ ಭಕ್ತನು, ಎಲೈ ಅಜ್ಞಾನಿಗಳಿರಾ! ನೀವು ನೋಡುತ್ತಿದ್ದರೂ ಕುರುಡರಂತೆಯೇ ಆಗಿರುವಿರಿ; ಜ್ಞಾನದಿಂದ ಕಿವುಡಾದ ಜನರು ತಮ್ಮ ಕೇವಲ ಸ್ವಾರ್ಥಹಿತವನ್ನು ಬಿಟ್ಟು ಬೇರೆಯಾವುದನ್ನೂ ಕೇಳುವುದಿಲ್ಲವೆಂದು ತಿಳಿಯಿರಿ. ॥೧೧-೧೨॥

ಆ ಮುಕ್ಕಣ್ಣನ ಪಾದಾಂಬುಜವಲ್ಲದೇ ಭೂಮಿಯಲ್ಲಿ ನಾನು . ಏನನ್ನೂ ಕಾಣೆನು; ಎಲ್ಲಕಡೆಯಲ್ಲಿಯೂ ಕಣ್ಣುಗಳನ್ನು ನೋಡುತ್ತಿರುವೆನು; ಆದರೆ ಆ ಕಣ್ಣು ಗಳಿಂದ ಪ್ರಯೋಜನವೇನು ನನಗೆ; ಎಂದು ಆ ದಂಡಿಯು ಹೇಳಲು, ಆಗ ಆ ಜನ

ಖನಿತ್ರಮುತ್ಕ್ಷಿಪ್ಯ ತಾಂ ಚ ರಜ್ಜುಂ ಚಿಚ್ಛಿದುರಾಯತೀಂ ।
ದಂಡೀ ಸುದುಃಖಿತಃ ಶಂಭುಂ ರಕ್ಷೇತ್ಯುಚ್ಚೈರ್ಜಗಾದ ಸಃ ॥೧೫॥

ಅವಿಶ್ರಾಂತಂ ಮೃತ್ಖನನಾದ್ವಿಶ್ರಾಂತಃ ಶ್ರಾಂತಿಮಾಗತಃ ।
ನಿಶಿ ಸುಷ್ವಾಪ ಭೂಮೌ ಸಃ ಸ್ಮರನ್ಸ್ಮರಹರಂ ತದಾ ॥೧೬॥

ದೇವೋ ದಯಾನಿಧಿಃ ಸ್ವಪ್ನೇ ಪ್ರಾಹ ತಂ ಭಕ್ತವತ್ಸಲಃ ॥೧೭॥

॥ ಈಶ್ವರ ಉವಾಚ ॥

ದುಃಖಂ ತ್ಯಜ ಸುಖಾಲೋಕೇ ವಿಲೋಕೇ ತೇ ಭವಿಷ್ಯತಿ ।
ಜನಾಶ್ಚಾಂಧಾ ಭವಿಷ್ಯಂತಿ ತ್ವದಧಿಕ್ಷೇಪಕಾರಿಣಃ ॥೧೮॥

ತಥಾ ಪ್ರಾತಃ ಸಚೋದ್ಬುದ್ಧೋ ನೇತ್ರಾಭ್ಯಾಂ ಲೋಕಯನ್ದಿಶಂ ।
ಪ್ರತ್ಯಾಯಯೌ ಸರಸ್ತೀರಂ ತಂ ದೃಷ್ಟ್ವಾ ವಿಸ್ಮಯುರ್ಜನಾಃ ॥೧೯॥

---

ಗಳೆಲ್ಲರೂ ಈ ಕುರುಡನೊಂದಿಗೆ ನಮಗೆ ಕಲಹವೇತಕ್ಕೆ, ನೀನು ನಮ್ಮ ನೋಟದಿಂದಲೇ (ರೀತಿಯಿಂದಲೇ) ನೋಡು; ಎಂದು ನುಡಿದು ಅವನ ಕೈಲಿದ್ದ ಗುದ್ದಲಿಯನ್ನು ಕಿತ್ತೆಸೆದು ಆ ಉದ್ದವಾದ ಹಗ್ಗವನ್ನು ಕತ್ತರಿಸಿ ಬಿಸಾಡಿದರು. ॥೧೩-೧೪॥

ಆಗ ಆ ದಂಡಭಕ್ತನು ತುಂಬಾ ದುಃಖಿತನಾಗಿ, ಮಹಾದೇವ! ನನ್ನನ್ನು ಕಾಪಾಡೆಂದು ಗಟ್ಟಿಯಾಗಿ ಶಿವನಲ್ಲಿ ಮೊರೆಯಿಟ್ಟು ಕೂಗಿದನು. ಅಲ್ಲಿಯವರೆಗೂ ಅಗೆಯುವ ಕೆಲಸದಿಂದ ಬಳಲಿದ್ದ ಅವನಿಗೆ ಈಗ ಅದಿಲ್ಲದಿರುವುದು ಶ್ರಮವನ್ನು ಉಂಟುಮಾಡಿತು. ಆದ್ದರಿಂದ ಅವನು ರಾತ್ರಿ ನೆಲದಮೇಲೆ ಮನ್ಮಥಾಂತಕನನ್ನು ಸ್ಮರಣೆಮಾಡುತ್ತಾ ಮಲಗಿಕೊಂಡನು. ಆಗ ಭಕ್ತವಾತ್ಸಲ್ಯವುಳ್ಳವನೂ, ಕರುಣಾಸಾಗರನೂ ಆದ ಮಹಾದೇವನು ಅವನಿಗೆ ಕನಸಿನಲ್ಲಿ, ॥೧೫-೧೬-೧೭॥

ಓ ಭಕ್ತನೇ! ದುಃಖವನ್ನು ಬಿಡು; ಸುಖವನ್ನುಂಟುಮಾಡುವ ಕಣ್ಣುಗಳು ನಿನಗೆ ಬಹು ಜಾಗ್ರತೆ ಬರುವುವು. ನಿನ್ನನ್ನು ನಿಂದೆಮಾಡಿದ ಜನಗಳೆಲ್ಲರೂ ಕುರುಡಾಗುವರೆಂದು ಹೇಳಿದನು. ಹಾಗೆಯೇ ಬೆಳಗ್ಗೆ ಆ ದಂಡಭಕ್ತನು ಎದ್ದು ಎರಡು ಕಣ್ಣುಗಳಿಂದಲೂ ದಿಕ್ಕುಗಳನ್ನೆಲ್ಲಾ ನೋಡುತ್ತಾ ಕೊನೆಗೆ ತಾನು ತೋಡುತ್ತಿದ್ದ ಸರಸ್ಸಿನ ದಡಕ್ಕೆ ಬಂದನು. ಅವನನ್ನು ನೋಡಿ ಜನಗಳೆಲ್ಲರೂ ವಿಸ್ಮಯಹೊಂದಿದರು. ॥೧೮-೧೯॥

॥ ಜನಾ ಊಚುಃ ॥

ಅಹೋ ಬತೇದಮಾಶ್ಚರ್ಯಂ ಅಂಧೋ ವೀಕ್ಷಾಸಮನ್ವಿತಃ ।
ಜನಾಶ್ಚ ತದಧಿಕ್ಷೇಪಕಾರಿಣೋ ವೀಕ್ಷಯೋಜ್ಝಿತಾಃ ॥೨೦॥

ರಾಜಾ ಚ ರೇಜೇ ತಚ್ಛ್ರುತ್ವಾ ವಿರಜಸ್ಕಸ್ಯ ಚೇಷ್ಟಿತಂ ।
ದಂಡಿಭಕ್ತೇನ ತತ್ಕರ್ಮ ಸಹಸಾ ರುರುಧುರ್ಹತಾಃ ॥೨೧॥

ರಾಜ್ಞೇ ವಿಜ್ಞಾಪಯಾಮಾಸ ಸ್ವಸ್ಯಾಜ್ಞಾಂ ಪ್ರಾಜ್ಞದಾಯಿನೀಂ॥೨೨॥

॥ ಈಶ್ವರ ಉವಾಚ ॥

ದುಃಖಿತೋಽಯಂ ದಂಡಿಭಕ್ತೋ ತದ್ದುಃಖಂ ಖಂಡಯಾಧುನಾ ।
ಆಖಂಡಲಾಧಿಕಾಂ ಭುಂಕ್ಷ್ವ ಶ್ರಿಯಮುರ್ವೀಪತೇಽಧುನಾ ॥೨೩॥

ಇತಿ ಸ್ವಪ್ನೇ ಶಿವೇನೋಕ್ತೋ ರಾಜಾ ವಿಸ್ಮಯಮಾಗತಃ ।
ಪ್ರಬುದ್ಧಃ ಪಾರ್ಥಿವಃ ಪ್ರಾಹ ಸರಃ ಪ್ರಾಪ್ಯಾಥ ದಂಡಿನೇ ॥೨೪॥

---

ಅಯ್ಯೋ! ಇದೇನಾಶ್ಚರ್ಯವು, ಕುರುಡನಿಗೆ ಕಣ್ಣುಬಂದಿತು, ಅವನನ್ನು ನಿಂದೆಗೆ ಗುರಿಮಾಡಿದ ಜನರೆಲ್ಲರೂ ತಮ್ಮ ಕಣ್ಣುಗಳನ್ನು ಕಳೆದುಕೊಂಡರು, ಎಂದು ಜನರು ಆಡಿಕೊಳ್ಳುತ್ತಿರಲು, ಆ ದೇಶದ ರಾಜನು, ರಜೋಗುಣಹೀನನಾದ ಆ ದಂಡಭಕ್ತನ ಚರಿತ್ರೆಯನ್ನು ಕೇಳಿ ಆನಂದಪಟ್ಟನು. ರಾಜನು ಅವನೊಡನೆ ಬಂದು ಬೆರೆಯುತ್ತಿರಲು, ಪುನಃ ಆ ದಂಡಿಯು ತನ್ನ ಕೆಲಸವನ್ನು ಮತ್ತೆ ಪ್ರಾರಂಭಿಸಿದನು. ಆಗ ಮತ್ತೆ ಜನರು ಬಂದು ಮುತ್ತಿ ತಡೆಗಟ್ಟಿದರು. ಆಗ ಆ ದಂಡಭಕ್ತನು ರಾಜನಿಗೆ ಬುದ್ಧಿವಾದವನ್ನು ಹೇಳುತ್ತಾ ಶಿವನ ಅಪ್ಪಣೆಯನ್ನು ರಾಜನಲ್ಲಿ ವಿಜ್ಞಾಪಿಸಿದನು. ಅದರಂತೆಯೇ ಆ ರಾತ್ರಿ ರಾಜನಿಗೆ ಸ್ವಪ್ನವಾಯಿತು. ॥೨೦-೨೧-೨೨॥

ಓ ರಾಜನೇ, ಈ ದಂಡಿಭಕ್ತನು ದುಃಖಿತನಾಗಿರುವನು. ಹೋಗಿ ಈಗಲೇ ಅವನ ದುಃಖವನ್ನು ನಿವಾರಣೆಮಾಡಿ, ದೇವೇಂದ್ರನಿಗಿಂತಲೂ ಹೆಚ್ಚಾದ ಐಶ್ವರ್ಯವನ್ನನುಭವಿಸುತ್ತಾ ರಾಜ್ಯಭಾರಮಾಡು, ಎಂದು ಕನಸಿನಲ್ಲಿ ಶಿವನಿಂದ ಹೇಳಲ್ಪಟ್ಟ ಆ ರಾಜನು ಆಶ್ಚರ್ಯ ಹೊಂದಿ, ಎದ್ದು ಸರೋವರದ ಬಳಿಗೆ ಬಂದು ದಂಡಭಕ್ತನನ್ನು ಕುರಿತು ಹೀಗೆ ನುಡಿದನು. ॥೨೩-೨೪॥

॥ ರಾಜೋವಾಚ ॥

ಕಿಂ ವಾತೇ ಚರಿತಂ ದಂಡಿನ್ಭೂಮಂಡನಂ ತ್ವಂ ಭುವೋಽಹ್ಯಸಿ ।
ವಿಸ್ಮಾಪಕಂ ಚರಿತ್ರಂ ತೇ ನೇತ್ರದಾನಂ ಶಿವೇನ ಹಿ ॥೨೫॥

ಇತ್ಯುಕ್ತ್ತೋಽಸೌ ನೃಪೇಣಾಹ ಸ್ತವ್ಯಂ ವೃತ್ತಂ ತದದ್ಭುತಂ ॥೨೬॥

॥ ದಂಡೀ ಉವಾಚ ॥

ರಾಜನ್ಜೈನಾಃ ಶಠಾ ರುದ್ಧ್ವಾ ತಟಾಕಖನನಂ ಮಮ ।
ಕರಾತ್ಖನಿತ್ರಮಾಚ್ಛಿದ್ಯ ಛಿತ್ವಾ ಮೃದ್ವಾಹರಜ್ಜುಕಾಂ ॥೨೭॥

ಮಮಾಂಧಸ್ಯ ನ ಧೀರಸ್ತೀತ್ಯಕ್ಷಿಪನ್ಪರುಷಾಕ್ಷರಂ ।
ಶಿವಾಜ್ಞಾಲಬ್ಧದೃಶ್ಯಶ್ಚೇತ್ಕಿಂ ಕುರ್ಯಾದ್ವೇತಿ ಚಾಬ್ರುವನ್ ॥೨೮॥

ತೇ ಚಾಬ್ರುವಂ ಸ್ತ್ವಮೀಶಾನಕೃಪಾಲಬ್ಧೇಕ್ಷಣೋಽಸಿ ಚೇತ್ ।
ಸ್ಥಾನಾದಸ್ಮಾಭಿರೇತಸ್ಮಾತ್ಪ್ರಸ್ಥಾನಂ ಕ್ರಿಯತೇಽಧುನಾ ॥೨೯॥

---

ಎಲೈ ದಂಡಿಯೇ, ಇದೇನು ನಿನ್ನ ಚರಿತೆಯು ? ನೀನು ಭೂಮಂಡಲಕ್ಕೇ ಅಲಂಕಾರಪ್ರಾಯನಾಗಿದ್ದೀಯೆ. ಸಾಕ್ಷಾಚ್ಛಿವನಿಂದ ಕಣ್ಣುಗಳನ್ನು ಪಡೆಯುವಂತಹ ನಿನ್ನ ಈ ಚರಿತ್ರೆಯು ಅತ್ಯಾಶ್ಚರ್ಯಕರವಾಗಿರುವುದೆಂದು ರಾಜನು ಹೇಳಲು, ಆಗ ಆ ದಂಡಭಕ್ತನು ಸ್ತೋತ್ರಾರ್ಹವೂ ಅದ್ಭುತವೂ ಆದ ತನ್ನ ಚರಿತ್ರೆಯನ್ನು ರಾಜನಿಗೆ ಇಂತು ಹೇಳಿದನು. ॥೨೫-೨೬॥

ಅಯ್ಯ ರಾಜನೇ, ಮೂರ್ಖರಾದ ಈ ಜೈನರು ನನ್ನ ಕೆರೆಯನ್ನು ಅಗೆಯುತ್ತಿದ್ದ ಕೆಲಸವನ್ನು ತಡೆದು, ನನ್ನ ಕೈಯಲ್ಲಿದ್ದ ಗುದ್ದಲಿಯನ್ನು ಕಿತ್ತುಕೊಂಡು ಮಣ್ಣನ್ನು ಹೊರುವುದಕ್ಕೆ ಇಟ್ಟುಕೊಂಡಿದ್ದ ಹಗ್ಗವನ್ನು ತುಂಡುಮಾಡಿ, ಈ ಕುರುಡನಾದ ನನಗೆ ಬುದ್ಧಿಯೇ ಇಲ್ಲವೆಂದು ಕಠಿಣವಾಗಿ ನಿಂದಿಸಿದರು. ಅಲ್ಲದೆ ನನಗೆ ಪರಮಶಿವನ ಅನುಗ್ರಹದಿಂದ ದೃಷ್ಟಿಯುಂಟಾದ ಮೇಲೆಯೂ ನಾನು ಹಾಗೆಯೇ ಆ ಕೆರೆಯ ಕೆಲಸವನ್ನು ಮುಂದುವರಿಸುತ್ತಿರಲು, ಶಿವನ ಅಪ್ಪಣೆಯಂತೆ ಕಣ್ಣು ಬಂದವನಾದರೆ ಇವನು ನಮ್ಮನ್ನೇನು ಮಾಡಿಯಾನು, ಎಂದು ತಮ್ಮೊಳಗೇ ಮಾತನಾಡಿಕೊಂಡರು. ॥೨೭-೨೮॥

ಓ ದಂಡಿಯೇ, ನೀನು ಈಶ್ವರನ ದಯೆಯಿಂದ ಹೊಂದಿದ ಕಣ್ಣುಳ್ಳವ

ಉಕ್ತಂ ಮಯಾ ಯಥಾವೃತ್ತಂ ಮಮ ಸ್ವಾಭೀಪ್ಸಿತಂನೃಪ ।
ರಾಜನ್ಕುರು ತಥೇತ್ಯುಕ್ತ್ವೋ ನೃಪೇಣಾತಿಷ್ಠದಂತಿಕೇ ॥೩೦॥

ಅಥಾಹೂಯಾರ್ಹತಾನ್ರಾಜಾ ಯುಷ್ಮಾಭಿರ್ಯತ್ಪುರೋದಿತಂ ।
ಕ್ರಿಯತೇ ತತ್ಕಿಮಿತ್ಯೇತತ್ತಥೇತಿ ಪ್ರಾಹುರುತ್ತರಂ ॥೩೧॥

ತ್ರಿನೇತ್ರಕೃಪಯಾ ಮೇಽತ್ರ ಸಿಂಧುರತ್ರ ಪ್ರಕಾಶ್ಯತೇ ।
ತಥೇತಿ ತೇ ದಂಡಿಭಕ್ತಂ ನೃಪಂ ಪ್ರಾಹುಶ್ಚ ತೇರ್ಹತಾಃ ॥೩೨॥

ಹತೇಕ್ಷಣಾಃ ಪತನ್ಭೂಮೌ ದಂಡಿಭಕ್ತಪದೇತದಾ ।
ಪ್ರಾಹುಸ್ತದಾರ್ಹತಾಃ ಸರ್ವೇ ನೃಪಂತಂ ದಂಡಿಭಕ್ತಕಂ ॥೩೩॥

॥ ಜೈನಾ ಊಚುಃ ॥

ಪಾಹಿನೋಽಕ್ಷಿವಿಹೀನಾಂಶ್ಚ ಹೀನಾಂಗಾನ್ವಿಕಲಾಂಸ್ತಥಾ ।
ಜೈನಾನ್ಸರಿತ್ಪತೇಸ್ತೀರೇ ನಿಃಸಾರಯದಸೌ ನೃಪಃ ॥೩೪॥

---

ನಾದರೆ ಈ ಊರಿನಿಂದ ನೀನು ಹೊರಡುವಂತೆ ಮಾಡುತ್ತೇವೆಂದು ಹೇಳಿದರು. ಆಗ ನಾನು ನನ್ನ ವೃತ್ತಾಂತವನ್ನೆಲ್ಲಾ ಹೇಳಿದೆನು. ಅಯ್ಯ ರಾಜನೇ, ನಿನ್ನ ಇಷ್ಟಕ್ಕೆ ಅನುಕೂಲವಾಗುವಂತೆ ಮಾಡು, ಎಂದು ಹೇಳಿ ದಂಡಭಕ್ತನು ರಾಜನ ಬಳಿ ನಿಂತುಕೊಂಡನು. ॥೨೯-೩೦॥

ಆಮೇಲೆ ರಾಜನು ಜೈನರನ್ನು ಕರೆದು, ನೀವು ಹಿಂದೆ ಹೇಳಿಕೊಂಡಂತೆಯೇ ಕಣ್ಣಿಲ್ಲದವರಾದರೆ ಆಗ ಏನುಮಾಡುವಿರಿ, ಎಂದು ಕೇಳಲು ಅವರು ಹಾಗೆಯೇ ಆಗಲೆಂದು ಒರಟಾಗಿ ಉತ್ತರ ಹೇಳಿದರು. ಆಗ ರಾಜನು ಮುಕ್ಕಣ್ಣನಾದ ಮಹೇಶ್ವರನ ದಯೆಯಿಂದ ನನ್ನಿಂದ ಸಮುದ್ರವೇ ನಿಮಗೆ ತೋರಿಸಲ್ಪಡುವುದೆಂದು ಹೇಳಲು, ಆಗ ಜೈನರು ಹಾಗೆಯೇ ಆಗಲೆಂದು ಆ ದಂಡಿಭಕ್ತನಿಗೂ ರಾಜನಿಗೂ ಎದುರುಮಾತನಾಡಿದರು. ॥೩೧-೩೨॥

ಆ ಕೂಡಲೇ ಆ ಜೈನರ ಕಣ್ಣುಗಳೆಲ್ಲಾ ಇಂಗಿಹೋದವು. ಅವರು ನೆಲದ ಮೇಲೆ ಹೊರಳಿ ಹಾಗೆಯೇ ಆ ದಂಡಿಭಕ್ತನ ಕಾಲಿನ ಮೇಲೆ ಬಿದ್ದು, ಎಲ್ಲರೂ ಆ ದಂಡಿಭಕ್ತನನ್ನು ಕುರಿತು ಇಂತೆಂದರು. ॥೩೩॥

ಕಣ್ಣಿಲ್ಲದವರೂ, ಅಂಗಹೀನರೂ ಆದ ಈ ನಿರ್ಭಾಗ್ಯರಾದ ನಮ್ಮನ್ನು ಕಾಪಾಡೆಂದು ಆ ಜೈನರು ದಂಡಿಭಕ್ತನನ್ನು ಬೇಡಿಕೊಂಡರು. ಆಗ ಅಲ್ಲಿದ್ದ ರಾಜನು

ಅಂಧಾಸ್ತೇ ಚಾರ್ಹತಾಃ ಸರ್ವೇ ಹತಾಃ ಸ್ವೇನೈವ ಪಾಪ್ಮನಾ।
ವೇತ್ರಪ್ರಹಾರಖಿನ್ನಾಶ್ಚ ದುದ್ರುವುಃ ಕಮಲಾಲಯಾತ್ ॥೩೫॥

ಅಂಧತ್ವಾದೃಷ್ಟಮಾರ್ಗಾಸ್ತೇ ಕೇಚಿದ್ಗರ್ತೇಷ್ವಪಾತಯನ್।
ಸ್ಖಲಂತೋ ಗುಲ್ಮರುದ್ಧಾಶ್ಚ ಭ್ರಾಮ್ಯಂತಶ್ಚ ಪದೇಪದೇ ॥೩೬॥

ಸ್ಥಾಣುಪಾಷಾಣನಿರ್ಭಿನ್ನ ಮೂರ್ಧಾನೋ ನ್ಯಪತತ್ಕ್ಷಿತೌ।
ಅದೃಷ್ಟದಷ್ಟಾಸ್ತೇ ಸರ್ವೇ ತಸ್ಮಾತ್ಸ್ಥಾನಾದ್ವಿನಿರ್ಯಯುಃ ॥೩೭॥

ಆಮೂಲಾದುದ್ಧೃತೈಃ ಸರ್ವೈರ್ಜಿನಾಲಯಶಿಲಾಭರೈಃ।
ಕಾರಯಾಮಾಸ ನೃಪತಿಸ್ತಟಾಕತಟಬಂಧನಂ ॥೩೮॥

ಲಲಾಟನೇತ್ರಕರುಣಾಲಬ್ಧನೇತ್ರಸ್ಯ ದಂಡಿನಃ।
ಪಾದೌ ಪ್ರಹರ್ಷಯುಕ್ತೋಽಥ ಪ್ರಣನಾಮ ಸ ಭೂಪತಿಃ ॥೩೯॥

---

ಜೈನರನ್ನೆಲ್ಲಾ ಸಮುದ್ರತೀರಕ್ಕೆ ಕಳುಹಿಸಿದನು. ಅಲ್ಲಿ ಕುರುಡರಾದ ಜೈನರೆಲ್ಲರೂ ತಮ್ಮ ಪಾಪಗಳಿಂದಲೇ ನಾಶವಾದರು. ಉಳಿದ ಕೆಲವರು ಬೆತ್ತದೇಟನ್ನು ತಾಳಲಾರದೇ ಖಿನ್ನರಾಗಿ ಆ ಕಮಲಾಲಯಕ್ಷೇತ್ರದಿಂದ ಓಡಿದರು. ॥೩೪-೩೫॥

ಕುರುಡರಾದ್ದರಿಂದ ದಾರಿಕಾಣದೇ ಕೆಲವರು ಹಳ್ಳದಲ್ಲಿ ಬಿದ್ದರು. ಇನ್ನು ಕೆಲವರು ಎಡವುತ್ತಾ ಬೇರುಗಳಿಂದ ತಡೆಯಲ್ಪಡುತ್ತಾ ನೆಲದ ಮೇಲೆ ಬೀಳುತ್ತಿದ್ದರು. ಮತ್ತೆ ಕೆಲವರು ಕಲ್ಲು ಬಂಡೆಗಳಿಂದ ತಲೆಯೊಡೆದವರಾಗಿ ನೆಲದ ಮೇಲೆ ಬಿದ್ದರು. ಹೀಗೆ ಅದೃಷ್ಟವಂಚಿತರಾದ ಆ ಜೈನರೆಲ್ಲರೂ ಆ ಕಮಲಾಲಯವನ್ನು ಬಿಟ್ಟು ದಿಕ್ಕಾಪಾಲಾಗಿ ತೊಲಗಿದರು. ॥೩೬-೩೭॥

ಜೈನರೆಲ್ಲರೂ ಅಲ್ಲಿಂದ ತೊಲಗಿದ ಮೇಲೆ ಅವರ ಜೈನಬಸ್ತಿಗಳಲ್ಲಿ ಬುಡದಿಂದ ಮೇಲಿನವರೆಗೂ ಕಟ್ಟಿದ್ದ ಕಲ್ಲುಗಳನ್ನೆಲ್ಲಾ ಕೀಳಿಸಿ, ಅವುಗಳಿಂದ ಆ ರಾಜನು, ದಂಡಿಭಕ್ತನ ಕೆರೆಯ ಏರಿಯನ್ನು ಕಟ್ಟಿಸಿದನು. ಹಣೆಗಣ್ಣನಾದ ಮಹಾದೇವನ ಕೃಪೆಯಿಂದ ಕಣ್ಣುಗಳನ್ನು ಪಡೆದ ಆ ದಂಡಿಭಕ್ತನ ಪಾದಗಳನ್ನು ಆ ರಾಜನು ಸಂತೋಷದಿಂದ ನಮಸ್ಕರಿಸಿದನು. ॥೩೮-೩೯॥

ಮೂರ್ಖಕಾಖ್ಯಸ್ಯ ಭಕ್ತಸ್ಯ ಚರಿತ್ರಂ ಕಥಯೇ ಶುಭಾಂ ।
ಕುಂಡೀರಮಂಡಲೇ ಖ್ಯಾತೇ ಮಹೀಮಂಡಲಮಂಡನೇ ॥೪೦॥

ಶಕ್ತ್ಯಾರಣ್ಯಂ ಪುರಂ ನಾಮ ಧಾಮಾಸ್ತ್ಯೇಕಮುಮಾಪತೇಃ ।
ತಸ್ಮಿನ್ಕ್ಷೀರಸರಿತ್ತೀರೇ ಸಂತಿ ಭಕ್ತಾ ಮಹೇಶಿತುಃ ॥೪೧॥

ಭಸ್ಮರುದ್ರಾಕ್ಷಸಂಪನ್ನಾಶ್ಚಾತುರ್ವರ್ಣ್ಯೇಷು ಸಂಘಶಃ ।
ತೇಷಾಂ ಕುಲೋದ್ಭವಃ ಕಶ್ಚಿದ್ಭಕ್ತಾರ್ಚಕ ಇತಿ ಶ್ರುತಃ ॥೪೨॥

ಸ ಭಸ್ಮಫಾಲೋ ನಿಯತಂ ಭವಭಕ್ತಾರ್ಚನೇ ರತಃ ।
ಅನ್ನೈಃ ಷಡ್ರಸಸಂಪನ್ನೈರ್ವ್ಯಂಜನೈಶ್ಚಿತ್ರರಂಜನೈಃ ॥೪೩॥

ಭಕ್ತಾನತೋಷಯನ್ನಿತ್ಯಂ ವಿಶೇಷೇಣಾಂಬಿಕಾಪತೇಃ ।
ಯದ್ಯತ್ತೇಷಾಂ ವಸ್ತುಹೃದ್ಯತ್ತತ್ಸರ್ವಮದದಾತ್ಸದಾ ॥೪೪॥

---

ಓ ಜೈಗೀಷವ್ಯನೇ, ಇನ್ನು ಮುಂದೆ ಶುಭಕರವಾದ ಮೂರ್ಖಕನೆಂಬ ಭಕ್ತನ ಕಥೆಯನ್ನು ಹೇಳುತ್ತೇನೆ ಕೇಳು; ಭೂಮಂಡಲಕ್ಕೆ ಅಲಂಕಾರಪ್ರಾಯವಾಗಿರುವ ಪ್ರಸಿದ್ಧವಾದ ತುಂಡೀರಮಂಡಲಕ್ಷೇತ್ರದಲ್ಲಿ ಶಕ್ತ್ಯಾರಣ್ಯವೆಂಬ ಪಟ್ಟಣವು ಉಮಾ ರಮಣನಿಗೆ ಆಶ್ರಯವಾಗಿ ಪ್ರಖ್ಯಾತವಾಗಿರುವುದು. ಕ್ಷೀರನದೀದಡದಲ್ಲಿರುವ ಆ ಪಟ್ಟಣದಲ್ಲಿ ಅನೇಕ ಶೈವರಿರುವರು. ॥೪೦-೪೧॥

ಆ ಊರಿನಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೆಂಬ ನಾಲ್ಕು ವರ್ಣ ಗಳಲ್ಲಿಯೂ ಭಸ್ಮರುದ್ರಾಕ್ಷಸಂಪನ್ನರಾದ ಈಶ್ವರ ಭಕ್ತರು ಗುಂಪುಗುಂಪಾಗಿದ್ದರು. ಅವರ ವಂಶದಲ್ಲಿ ಭಕ್ತಾರ್ಚಕನೆಂದು ಪ್ರಸಿದ್ಧನಾದ ಒಬ್ಬ ಶೈವನಿದ್ದನು. ಅವನು ಭಸ್ಮಲಲಾಟನಾಗಿ ನಿಯಮದಿಂದ ಶೈವರ ಪೂಜೆಯಲ್ಲಿಯೇ ಆಸಕ್ತನಾಗಿದ್ದನು. ಚಿತ್ರವಿಚಿತ್ರವಾದ ಕಾಯಿಪಲ್ಯಗಳಿಂದ ಕೂಡಿದ ಷಡ್ರಸಭರಿತವಾದ ಅನ್ನಗಳಿಂದ ನಿತ್ಯವೂ ಅವನು ವಿಶೇಷವಾಗಿ ಶೈವರನ್ನು ಸಂತೋಷಪಡಿಸುತ್ತಿದ್ದನು. ॥೪೨-೪೩॥

ಈಶ ಭಕ್ತರ ಮನಸ್ಸಿಗೆ ರುಚಿಸುವ ವಸ್ತುಗಳನ್ನೆಲ್ಲಾ ಅವನು ಅವರಿಗೆ ತಪ್ಪದೇ ಕೊಡುತ್ತಿದ್ದನು. ಹೀಗೆಯೇ ಅವನು ಶೈವಪೂಜಾದಿಗಳಿಂದಲೇ ನಿಯಮಬದ್ಧನಾಗಿ ಕಾಲವನ್ನು ಕಳೆಯುತ್ತಿದ್ದನು. ಕೊನೆಗೆ ಇವನು ತನ್ನ ಹೊಲ, ಮನೆ, ತೋಟವೇ ಮೊದಲಾದವುಗಳನ್ನೆಲ್ಲಾ ಮಾರಿ ಬಂದ ಹಣದಿಂದ ಶೈವಾರಾಧನೆಗೈಯುತ್ತಿದ್ದನು.

ಕಾಲಂ ಸ ನಿನ್ಯೇ ಸನಿಯತಮೇವಂ ಭಕ್ತಜನಾರ್ಚನೈಃ ।
ಕ್ಷೇತ್ರಾರಾಮಗೃಹಾದೀನಿ ಕ್ರಮಾದ್ವಿಕ್ರೀಯ ತೈರ್ಧನೈಃ ॥೪೫॥

ಸ ಬಾಲ್ಯಾಭ್ಯಾಸವಿದ್ಯಾತೋ ದ್ಯೂತೇನ ಧನಮಾರ್ಜಯನ್ ।
ತದಾ ನಿರ್ಗತ್ಯ ದೌರ್ಗತ್ಯಾತ್ಕುಂಭಘೋಣಮುಪಾಗಮತ್ ॥೪೬॥

ತಸ್ಮಿಂಸ್ಥಾನೇ ಸ್ಥಿತೋ ನಿತ್ಯಂ ದ್ಯೂತಂ ಚೈತ್ಯಮುಪೇತ್ಯ ಸಃ ।
ತಾನ್ದ್ಯೂತವೇದಿನೋ ಜಿತ್ವಾ ತದ್ಧನೈಃ ಪಣಬಂಧನೈಃ ॥೪೭॥

ಕ್ರೀತ್ವಾನ್ನಾದಿ ಸ್ವಯಂ ಶಂಭೋರ್ಭಕ್ತೈರ್ಭುಂಜನ್ಸ್ವಯಂಸ್ಥಿತಃ ।
ತೋಷಯನ್ಪ್ರಾಪ್ತಸಂತೋಷೋ ನಿನಾಯ ದಿವಸಾನ್ಬಹೂನ್ ॥೪೮॥

ದ್ಯೂತವಾದವಿದಿತ್ಯೇಷಃ ಖ್ಯಾತೋ ಮುಖ್ಯಕ ಇತ್ಯಪಿ ।
ತತೋ ದ್ಯೂತವಿದಃ ಸರ್ವೇ ವಂಚಯಿತ್ವಾ ಕೃತಂ ತದಾ ॥೪೯॥

ತಸ್ಮಿನ್ದಿನೇ ಜಿತಂ ಯಚ್ಚ ವಸು ತಚ್ಚಾಹರನ್ಬಲಾತ್ ।
ಗ್ರಾಮಪಾಲಾಲಯಂ ನೀತ್ವಾ ತಂ ಬಧ್ವಾ ಚಿಕ್ಷಿಪುರ್ಗೃಹೇ ॥೫೦॥

---

ಆಮೇಲೆ ಆದೂ ಮುಗಿಯಲು ಬಾಲ್ಯದಲ್ಲಿ ಕಲಿತ ಜೂಜಿನಿಂದ ಧನವನ್ನು ಸಂಪಾದಿಸಿ ಜೀವನಮಾಡಲು ಯೋಚಿಸಿ ಅವನು ತನ್ನ ಊರನ್ನು ಬಿಟ್ಟು ಬಡತನದಿಂದ ಕುಂಭಘೋಣಪುರಕ್ಕೆ ಬಂದನು. ॥೪೪-೪೫-೪೬॥

ಅವನು ಆ ಕುಂಭಕೋಣದಲ್ಲಿ ವಾಸಮಾಡುತ್ತಾ ಜೂಜಿನ ಮನೆಯನ್ನು ಸೇರಿ ನಿತ್ಯವೂ ಜೂಜುಗಾರರನ್ನೆಲ್ಲಾ ಸೋಲಿಸಿ, ಅವರು ಪಣವಾಗಿಟ್ಟಿದ್ದ ಹಣಗಳಿಂದ ಅನ್ನಾದಿಗಳಿಗೆ ಬೇಕಾದ ಸಾಮುಗ್ರಿಗಳನ್ನು ಕೊಂಡು ಶೈವರೊಡನೆ ತಾನೂ ಊಟ ಮಾಡುತ್ತಾ ಶೈವರನ್ನು ಸಂತೋಷಪಡಿಸುತ್ತಾ ಅನೇಕ ದಿವಸಗಳವರೆಗೆ ಸಂತೋಷವಾಗಿ ಕಾಲಕಳೆದನು. ॥೪೭-೪೮॥

ಇವನು 'ದ್ಯೂತವಾದವಿತ್' ಮತ್ತು 'ಜೂಜಿನಲ್ಲಿ ಪಂಡಿತ' ಎಂಬುದಾಗಿ ಅಲ್ಲೆಲ್ಲಾ ಪ್ರಖ್ಯಾತನಾದನು. ಆಗ ಜೂಜುಗಾರರೆಲ್ಲರೂ ಒಟ್ಟಾಗಿ ಸೇರಿ ಇವನಿಗೆ ಮೋಸಮಾಡಿ ಆ ದಿವಸ ಅವನಿಟ್ಟಿದ್ದ ಹಣವನ್ನೆಲ್ಲಾ ಬಲಾತ್ಕಾರವಾಗಿ ಕಿತ್ತುಕೊಂಡು ಅವನನ್ನು ಗ್ರಾಮಪಾಲೀಕನ ಮನೆಯಲ್ಲಿ ಕರೆದುಕೊಂಡುಹೋಗಿ ಒಂದು ಕೊಠಡಿಯಲ್ಲಿ ಕಟ್ಟಿಬಿಟ್ಟರು. ॥೪೯-೫೦॥

ಸ ರಾತ್ರೌ ಭಕ್ತಪೂಜಾದಿ ನಿರಾಯಾಸಾಸಹೃತ್ತದಾ ।
ನಿದ್ರಾವಶಂ ನ ಚೈಷೀತ್ಸಸ್ತದ್ಗೃಹೇ ಶಂಕರಃಸ್ಥಿತಃ ॥೫೧॥

ಭಿಕ್ಷಾಂ ದೇಹೀತಿ ಚೋವಾಚ ತಂ ಭಕ್ತಂ ಕ್ಷುಧಿತೋ ಭೃಶಂ ।
ತಂ ತದಾ ಸ್ವಾಗತೇನಾಹ ನ ಭಿಕ್ಷಾಸ್ತಿ ಮಮಾಂತಿಕೇ ॥೫೨॥

ಕಿಂಚಿತ್ತ್ವದೀಯಂ ರುಧಿರಂ ಪಾತುಮಿಚ್ಛಾಮಿ ದೀಯತಾಂ ।
ಇತ್ಯುಕ್ತಃ ಕ್ಷುರಿಕಾಹಸ್ತೋ ಕಂಠಮುತ್ಕರ್ತಯನ್ಸ್ಥಿತಃ ॥೫೩॥

ತದಾ ತದ್ಧಸ್ತಮಾಲಂಬ್ಯ ಸಂಸ್ಥಿತೋ ವೃಷವಾಹನಃ ।
ಧನ್ಯೋಽಸೀತಿ ಬಭಾಣೇಶಃ ಸಾರೂಪ್ಯಮದದಾತ್ಪ್ರಭುಃ ॥೫೪॥

ತೀರ್ಥಂ ಸ ಕೃತ್ವಾ ಚಿರಮೀಶ್ವರಾತ್ತ
ನೇತ್ರಾಂಬುಜೋಭೂತ್ಸ ತದಾ ಹಿ ದಂಡೀ ।
ಭುಕ್ತ್ವಾ ಚ ಭೋಗಾನ್ಭುವಿ ಪೂರ್ಣಕಾಮಾ
ನ್ಪದಂ ಪ್ರಪೇದೇ ಪರಮೇಶ್ವರಸ್ಯ ॥೫೫॥

---

ಅವನು ಆ ರಾತ್ರಿ ಶೈವಪೂಜಾದಿಗಳಿಲ್ಲದೇ ಇದ್ದುದರಿಂದ ಆಯಾಸಗೊಂಡ ಮನವುಳ್ಳವನಾಗಿ ನಿದ್ರೆಯನ್ನು ಸಹ ಮಾಡಲಿಲ್ಲ. ಆಗ ಅವನ ಮನೆಗೆ ಮಹೇಶ್ವರನೇ ಬಂದನು. ಬಂದ ಆ ಶಿವನು 'ಭಿಕ್ಷೆಯನ್ನು ನೀಡೆಂದು' ಬೇಡಿದನು. ಸ್ವಯಂ ಹಸಿವಿನಿಂದ ಬಹಳ ಬಳಲಿದ್ದ ಅವನು ಸ್ವಾಗತಿಸಿ, ಅಯ್ಯ ಶೈವನೇ, ನನ್ನ ಬಳಿಯಲ್ಲಿ ಈ ದಿನ ಭಿಕ್ಷೆಗೆ ಏನೂ ಇಲ್ಲವೆಂದು ಹೇಳಿದನು. ॥೫೧-೫೨॥

ಆಗ ನಿನ್ನ ರಕ್ತದಲ್ಲಿ ಕೊಂಚವನ್ನಾದರೂ ಕುಡಿಯಬೇಕೆಂದು ಇಚ್ಛಿಸುತ್ತೇನೆ ಕೊಡೆಂದು ಭಿಕ್ಷುಕನು ಕೇಳಲು, ಆ ಮಾತನ್ನು ಕೇಳಿದ ಕೂಡಲೇ ಮೂರ್ಖನು ಪ್ರತಿಮಾತನಾಡದೆ ಕತ್ತಿ ತೆಗೆದುಕೊಂಡು ಕತ್ತನ್ನು ಕತ್ತರಿಸಿ ನಿಂತುಕೊಂಡನು. ಆಗ ವೃಷಭವಾಹನನಾದ ಮಹಾದೇವನು ಅವನ ಕೈಯನ್ನು ಹಿಡಿದುಕೊಂಡು, ಎಲೈ ಭಕ್ತನೇ, ನೀನು ಧನ್ಯನಾದೆ ಎಂದು ಹೇಳಿ, ಆ ಪ್ರಭುವು ಅವನಿಗೆ ಸಾರೂಪ್ಯ ಮೋಕ್ಷವನ್ನು ಕರುಣಿಸಿದನು. ॥೫೩-೫೪॥

ದಂಡಭಕ್ತನಾದರೋ, ಶಿವತೀರ್ಥವೊಂದನ್ನು ರಚಿಸಿ ಬಹಳಕಾಲ ಮಹೇಶ್ವರಾನುಗ್ರಹಪ್ರಾಪ್ತವಾದ ನೇತ್ರಕಮಲವುಳ್ಳವನಾಗಿಯೇ ಭೂಲೋಕದಲ್ಲಿ ಸಕಲ

ಕಮಲಾಲಯಧಾಮ್ನಿ ದಂಡಿನಾಮ್ನಃ
ಶಿವಭಕ್ತಸ್ಯ ತ್ರಿನೇತ್ರದತ್ತಚಕ್ಷೋಃ ।
ಮನಸಾ ವಚಸೈವ ಕರ್ಮಣಾ ವಾ
ಚರಿತಂ ವಾ ಪಠತೇ ಸ ಧನ್ಯ ಏವ ॥೫೬॥

ಸ ಮೂರ್ಖಭಕ್ತೋದ್ಯತದ್ಯೂತವೃತ್ತೇಃ
ಶ್ರೀಕುಂಭಘೋಣೇ ಕಲಿತಾದ್ಯಕೋಣೇ ।
ಭಿಕ್ಷಾಟನಧ್ವಸ್ತಸಮಸ್ತಪಾಪಾಃ
ಪದಂ ಪ್ರಪೇದೇ ಸ ಸುರೈರ್ದುರಾಪಂ ॥೫೭॥

ಇತಿ ಶ್ರೀ ಶಿವರಹಸ್ಯೇ ಸದಾಶಿವಾಖ್ಯೇ ನವಮಾಂಶೇ ದಂಡಿಭಕ್ತ ಮೂರ್ಖಭಕ್ತಚರಿತ್ರವರ್ಣನಂ ನಾಮ ತ್ರಿಪಂಚಾಶೋಽಧ್ಯಾಯಃ

---

ಭೋಗಗಳನ್ನೂ ಅನುಭವಿಸಿ ಸಂಪೂರ್ಣ ಮನೋರಥನಾಗಿ ಕೊನೆಗೆ ಆ ಪರಮೇಶ ಸನ್ನಿಧಿಯನ್ನೈದನು. ॥೫೫॥

ಕಮಲಾಲಯಕ್ಷೇತ್ರದಲ್ಲಿ ಮಹೇಶ್ವರನಿಂದ ಕಣ್ಣುಗಳನ್ನು ಪಡೆದ ಶೈವವರ್ಯ ದಂಡಿಯ ಚರಿತ್ರೆಯನ್ನು ಮನಸ್ಸು, ವಾಕ್ಕು, ಅಥವಾ ಕಾರ್ಯರೂಪವಾದ ತ್ರಿಕರಣ ಗಳಲ್ಲಿ ಯಾವುದೊಂದರಿಂದ ಪಠಿಸಿದರೂ ಅವನು ನಿಜವಾಗಿಯೂ ಧನ್ಯನೇ ಸರಿ. ॥೫೬॥

ಶ್ರೀಮೂರ್ಖಭಕ್ತನೆಂಬುವನು ಪಾಪನಾಶಕವಾದ ಶ್ರೀಕುಂಭಕೋಣಕ್ಷೇತ್ರ ದಲ್ಲಿ ಜೂಜನ್ನು ಆರಂಭಿಸಿ ಭಿಕ್ಷಾಟನೆಯಿಂದ ಸಕಲ ಪಾಪಗಳನ್ನೂ ಕಳೆದುಕೊಂಡು ಕೊನೆಗೆ ದೇವತೆಗಳಿಂದಲೂ ಹೊಂದಲಸಾಧ್ಯವಾದ ಪರಮಪದವನ್ನು ಪಡೆದನೆಂದು ಕುಮಾರಸ್ವಾಮಿಯು ಜೈಗೀಷವ್ಯನಿಗೆ ಹೇಳಿದನು. ॥೫೭॥

ಇಲ್ಲಿಗೆ ಶ್ರೀಶಿವರಹಸ್ಯದಲ್ಲಿ ಸದಾಶಿವಸಂಜ್ಞಕವಾದ ಒಂಬತ್ತನೆಯ ಅಂಶದಲ್ಲಿ ದಂಡೀಭಕ್ತ ಮತ್ತು ಮೂರ್ಖಭಕ್ತರೆಂಬುವರ ಕಥಾವರ್ಣನೆಯೆಂಬ ಐವತ್ತಮೂರನೆಯ ಅಧ್ಯಾಯವು ಮುಗಿದುದು



|| ಶ್ರೀಃ ||

|| ಶ್ರೀ ಶಿವಾಯನಮಃ ||

# ಅಥ ಶ್ರೀಶಿವರಹಸ್ಯೇ

## ಸದಾಶಿವಾಖ್ಯೇ

## ನವಮಾಂಶೇ

## ಅಥ ಚತುಃಪಂಚಾಶೋಽಧ್ಯಾಯಃ

|| ಶ್ರೀಸ್ಕಂದ ಉವಾಚ ||

ನತ್ವಾ ಶ್ರೀಮೂರ್ಖಕದ್ಯೂತಜಾತಾರ್ಥಾರ್ಚಿತಶಂಕರಂ ।
ಶ್ರೀ ಸೋಮಯಾಜಿಮಾರಸ್ಯ ಕಥಯಾಮಿ ಕಥಾಂ ಶುಭಾಂ ||೧||

ಆರಾಮೈರಾಮಕಭ್ರಾಂತೈರ್ಭ್ರಾಂತೈರ್ಗ್ರಾಮೇ ಸಮಾವೃತೇ ।
ಕಶ್ಚಿದಾಸೀತ್ಸೋಮಯಾಜೀ ಮಾರಾಖ್ಯೋ ಯಜ್ವನಃ ಕುಲೇ ||೨||

ಶೈವಾನ್ಸಂತೋಷಯನ್ನಿತ್ಯಮನ್ನೈಃ ಸಂಪನ್ನಷಡ್ರಸೈಃ ।
ದ್ರವ್ಯತ್ಯಾಗಯುತೈರ್ಯಾತೈರಸೈಃ ಶಿವಮತೋಷಯತ್ ||೩||

---

## ಐವತ್ತುನಾಲ್ಕನೆಯ ಅಧ್ಯಾಯ

ಅಯ್ಯ ಜೈಗೀಷವ್ಯನೇ, ಮೂರ್ಖಕನಿಂದ ದ್ಯೂತವಾಡಿ ಬಂದ ಹಣದಿಂದ ಪೂಜೆಗೊಂಡ ಆ ಶಂಕರನನ್ನು ನಮಿಸಿ, ಇನ್ನು ಶುಭಕರವಾದ ಶ್ರೀ ಸೋಮಯಾಜಿ ಮಾರನೆಂಬುವನ ಕಥೆಯನ್ನರುಹುವೆನು ಲಾಲಿಸು. ಆತನು ಕೇವಲ ಸುಂದರವಾದ ವನಾದಿಗಳಿಂದ ಅಲಂಕೃತವಾಗಿದ್ದ ಒಂದು ಗ್ರಾಮದಲ್ಲಿ ವಾಸಿಸುತ್ತಿದ್ದನು. ಮಾರನೆಂದು ಪ್ರಸಿದ್ಧವಾದ ಯಾಗಶೀಲರ ವಂಶದಲ್ಲಿ ಅವನು ಜನ್ಮತಾಳಿ ಮಾರಸೋಮಯಾಜಿಯೆಂಬ ಹೆಸರಿನಿಂದ ಪ್ರಸಿದ್ಧನಾಗಿದ್ದನು. ||೧-೨||

ಆತನು ನಿತ್ಯವೂ ಷಡ್ರಸಭರಿತವಾದ ಭಕ್ಷ್ಯಭೋಜ್ಯಗಳಿಂದ ಶೈವರನ್ನು ತೃಪ್ತಿಪಡಿಸುತ್ತಾ, ನಾನಾದ್ರವ್ಯತ್ಯಾಗರೂಪವಾದ ಭಕ್ತಿಯಿಂದ ಶಿವನನ್ನು ಸಂತೋಷ

ಸ ಶ್ರೌತೈಃ ಕರ್ಮಭಿಃ ಶಂಭುಂ ಸ್ತುತ್ಯ ಲೋಕಾಭಿನಂದಿತೈಃ ।
ತೋಷಯನ್ನಿವ ಭಕ್ತ್ಯೋಽಯಂ ಶ್ರೇಯಾನಿತ್ಯಭ್ಯನಂದತ ॥೪॥

ಯೈಃಕೈಶ್ಚಿದಪಿ ವಾ ವೃತ್ತೈರ್ಯುಕ್ತಾ ಸೇತುಶಿವಾರ್ಚಕಾಃ ।
ತಏವಾಸ್ಮತ್ಕುಲಾಧೀಶಾ ಇತಿ ತಾನಭ್ಯನಂದತ ॥೫॥

ಸತ್ಸ್ವಪ್ಯನೇಕಮಂತ್ರೇಷು ಮಂತ್ರಶುದ್ಧಿಪ್ರದಾಯಿಷು ।
ಜಪನ್ಪಂಚಾಕ್ಷರಂ ಮಂತ್ರಂ ಏಕಃ ಸ ಗತಿಮಾನಭೂತ್ ॥೬॥

ವಲ್ಮೀಕನಾಥನಿಲಯಂ ಕಮಲಾಲಯಮಾಗತಃ ।
ಸ ಸುಂದರೇಶನ್ಯಸ್ತಾತ್ಮಾ ಸೋಮಯಾಜೀ ಮುದಂ ಯಯೌ ॥೭॥

ಇಂದುಮೌಳೇಃ ಪದದ್ವಂದ್ವಂ ಜಗದ್ವಂದ್ಯಃ ಪ್ರಣಮ್ಯ ಸಃ ।
ಪ್ರತ್ಯಹಂ ಪ್ರೀಣಯನ್ಭಕ್ತಾನುವಾಸ ಕಮಲಾಲಯೇ ॥೮॥

---

ಪಡಿಸುತ್ತಾ ಕಾಲಕಳೆಯುತ್ತಿದ್ದನು. ಅವನು ಲೋಕವಿಖ್ಯಾತವಾದ ಶ್ರೌತಕರ್ಮಗಳಿಂದ ಸರ್ವಲೋಕಾಧಿಪತಿಯಾದ ಶಿವನನ್ನು ಸಂತೋಷಪಡಿಸುವುದೇ ಶ್ರೇಯಸ್ಸೆಂದು ನಂಬಿ, ಅದರಂತೆ ಶ್ರೌತಕರ್ಮಗಳನ್ನು ನಡೆಸುವುದರಲ್ಲಿ ಆಸಕ್ತನಾಗಿದ್ದನು. ॥೩-೪॥

ಶೈವರು ಎಂತಹ ಆಚಾರವ್ಯವಹಾರಗಳಿಂದ ನಡೆಯುತ್ತಿದ್ದರೂ ಶಿವಪೂಜಕರಾದ ಅವರೇ ನಮ್ಮ ವಂಶಾಧಿಪತಿಗಳೆಂದು ತಿಳಿದು, ಆ ಶೈವರನ್ನು ಸರ್ವದಾ ಪೂಜಿಸುತ್ತಿದ್ದನು. ಶರೀರಶುದ್ಧಿಯನ್ನುಂಟುಮಾಡುವ ಅನೇಕ ಮಂತ್ರಗಳಿದ್ದರೂ ಅವನು ಸರ್ವದಾ ಶಿವಪಂಚಾಕ್ಷರವನ್ನೇ ಜಪಿಸುತ್ತಾ, ಅದ್ವಿತೀಯಗತಿಯನ್ನು ಹೊಂದಿದನು. ॥೫-೬॥

ಇವನು ಒಂದು ಸಲ ವಲ್ಮೀಕೇಶ್ವರಸ್ವಾಮಿಯ ನಿವಾಸಸ್ಥಾನವಾದ ಕಮಲಾಲಯಕ್ಷೇತ್ರಕ್ಕೆ ಬಂದು ಅಲ್ಲಿದ್ದ ಸುಂದರೇಶ್ವರಸ್ವಾಮಿಯಲ್ಲಿಯೇ ನೆಟ್ಟಮನವುಳ್ಳವನಾಗಿ ಆ ಸೋಮಯಾಜಿಯು ಬ್ರಹ್ಮಾನಂದಹೊಂದಿದನು. ಜಗದ್ವಂದ್ಯನಾದ ಆ ಸೋಮಯಾಜಿಯು ಚಂದ್ರಮೌಳಿಯ ಪಾದಯುಗ್ಮಗಳಿಗೆ ನಮಸ್ಕರಿಸಿ, ಪ್ರತಿದಿನವೂ ಆ ಕಮಲಾಲಯದಲ್ಲಿದ್ದ ಶೈವರನ್ನು ಸಂತೋಷಪಡಿಸುತ್ತಾ ವಾಸಮಾಡುತ್ತಿದ್ದನು. ॥೭-೮॥

ಶಿವಭಕ್ತಾರ್ಚನಾತ್ಸಿದ್ಧಮನಃಶುದ್ಧೇರ್ಮಹಾತ್ಮನಃ ॥೯॥

ಸೋಮೋ ಸೋಮರಸೇನ ಸೋಮಶಕಲಾಲಂಕಾರಮೌಲಿಂ ಹೃದಾ
ಧ್ಯಾಯನ್ಸುಂದರನಾಥಕೋಕ್ತವಿಧಿನಾ ಜುಹ್ವನ್ದ್ವಿಜೋಽಸೌ ಹವಿಃ ।
ತದ್ಭಕ್ತಿಪ್ರಥನಾಯ ಕುತ್ಸಿತತನುಂ ಕೃತ್ವಾಭ್ಯಗಾಚ್ಛಂಕರೋ
ವೀಕ್ಷ್ಯಾಸ್ಯ ಸ್ಥಿರನಿಶ್ಚಯಂ ಶಿವಮತಿಂ ಪ್ರೀತಃ ಸ್ವರೂಪಂ ದದೌ ॥೧೦॥

ಶ್ರೀಸೋಮಯಾಜಿಮಾರಸ್ಯ ಪ್ರಣಮ್ಯ ಪದಯೋರ್ಯುಗಂ ।
ಪತ್ಯುಃ ಷಟ್ಸಮಯೀಗೋಪ್ತುರ್ಭೃತ್ಯೋ ಯಃ ಶಾಕ್ಯರೂಪಭಾಕ್ ॥೧೧॥

ತಸ್ಯ ಶ್ರೀಶಾಕ್ಯನಾಥಸ್ಯ ಚರಿತಂ ಪ್ರವದಾಮಿ ವಃ ।
ಪುರೇ ಶ್ರೀಸಂಗಮಾಂಗಾಖ್ಯೇ ಕಶ್ಚಿತ್ಪಾದಜವಂಶಜಃ ॥೧೨॥

ದಯಾಲುಃ ಸರ್ವಭೂತೇಷು ವಿಪುಲಾರ್ಥವಿಶೇಷವಿತ್ ।
ಸ ವಿಚಾರವಿಧಿರ್ನಾಮ್ನಾ ಬಹುದೇಶಾನ್ಪರಿಭ್ರಮನ್ ॥೧೩॥

---

ಮಹಾತ್ಮನಾದ ಈ ಸೋಮಯಾಜಿಯ ಮನಸ್ಸು ಶೈವಪೂಜೆಯಿಂದ ಶುದ್ಧವಾಗಿ ಪರಿಪಕ್ವವಾಗಿತ್ತು. ಸೋಮಯಾಗದಲ್ಲಿ ಸೋಮರಸ ಪಾನಮಾಡಿ ಚಂದ್ರಶಕಲಾಲಂಕಾರಮೌಳಿಯಾದ ಮಹೇಶನನ್ನು ಮನಸ್ಸಿನಿಂದ ಧ್ಯಾನಿಸುತ್ತಾ, ಆ ಸುಂದರೇಶನು ಹೇಳಿರುವ ವಿಧಿಗನುಸಾರವಾಗಿ ಆ ಬ್ರಾಹ್ಮಣನು ಹವಿಸ್ಸನ್ನು ಹೋಮ ಮಾಡುತ್ತಾ ಇದ್ದನು. ಇಂತಹ ಈ ಸೋಮಯಾಜಿಮಾರನ ಭಕ್ತಿಯನ್ನು ಜಗತ್ತಿನಲ್ಲೆಲ್ಲಾ ಪ್ರಕಟಿಸುವುದಕ್ಕೋಸ್ಕರ ಶಿವನು ನೀಚವೇಷವನ್ನು ಧರಿಸಿ ಅವನ ಬಳಿಗೆ ಹೋಗಿ ಬಹುವಾಗಿ ಪರೀಕ್ಷಿಸಿ, ಕೊನೆಗೆ ಅವನು ತನ್ನಲ್ಲಿ ದೃಢಮನಸ್ಸಿಟ್ಟಿರುವುದನ್ನರಿತು ಸಂತುಷ್ಟನಾಗಿ ಅವನಿಗೆ ಸಾರೂಪ್ಯಮೋಕ್ಷವನ್ನು ಕರುಣಿಸಿದನು. ॥೯-೧೦॥

ಓ ಜೈಗೀಷವ್ಯಾದಿಮುನಿಗಳಿರಾ, ಅಂತಹ ಈಶ್ವರಭಕ್ತಾಗ್ರಣಿಯಾದ ಶ್ರೀ ಸೋಮಯಾಜಿಮಾರನ ಪಾದಯುಗ್ಮಗಳಿಗೆರಗಿ ಸ್ವಾಮಿಯಾದ ಷಟ್ಸಮಯಿಗೋಪ್ತುವಿನ ಸೇವಕನೂ, ಶಾಕ್ಯರೂಪಧಾರಿಯೂ (ಜೈನನೂ) ಆದ ಶಾಕ್ಯನಾಥನೆಂಬುವನ ಕಥೆಯನ್ನು ನಿಮಗೆ ಹೇಳುವೆನು ಕೇಳಿರಿ; ಶ್ರೀ ಸಂಗಮಸಂಜ್ಞಕವಾದ ಒಂದು ಪಟ್ಟಣದಲ್ಲಿ ಒಬ್ಬ ಶೂದ್ರವಂಶಜನಿದ್ದನು. ಅವನು ಸಕಲ ಪ್ರಾಣಿಗಳಲ್ಲೂ ದಯಾಳುವಾಗಿ, ಅನೇಕ ವಿಷಯಗಳನ್ನೆಲ್ಲಾ ಚೆನ್ನಾಗಿ ಅರಿತಿದ್ದನು. ಈತನು

ಪ್ರಾಪ್ಯ ಕಾಂಚೀಪುರಂ ಶಾಕ್ಯಂ ಧರ್ಮಂ ಜ್ಞಾತುಮುಗಾಹತ ।
ಸ ಶಾಕ್ಯಂ ತತ್ತ್ವಮಾಲೋಕ್ಯ ಸಮಯಾನಿತರಾನಪಿ ॥೧೪॥

ನೈತಾನಿ ತತ್ತ್ವಮಿತ್ಯೇಷಃ ಶೈವತತ್ತ್ವಮುಗಾಹತ ।
ಕರ್ಮಕರ್ತಾಫಲಂ ದಾತೇತ್ಯೇಷಾ ನೀತಿಶ್ಚತುರ್ವಿಧಾ ॥೧೫॥

ನಾನ್ಯತ್ರ ಶೈವೇ ಸಿದ್ಧಾಂತೇ ಹ್ಯುಪಾಸ್ಯೋ ನಃ ಶಿವೋ ಮಹಾನ್ ।
ಇತಿಜ್ಞಾತ್ವಾ ಸ್ಥಿತಃ ಶೈವೇ ತತ್ತ್ವೇ ಶುದ್ಧಮನಾಶ್ಚ ಸಃ ॥೧೬॥

ವೇಷೇಣ ಯೇನ ಕೇನಾಪಿ ಸ್ಥಿತೌ ಕಸ್ಯಾಂಚನಾನಿಶಂ ।
ಸ್ಮರಾರಿಸ್ಮೃತಿರೇವೇದಂ ಪರಂ ತತ್ತ್ವಮಿತಿಸ್ಮರನ್ ॥೧೭॥

ಅಮುಂಚನ್ ತಂ ನಿಜಂ ವೇಷಂ ಶಿವಾಂಘ್ರ್ಯರ್ಪಿತಧೀರಭೂತ್ ।
ಅದೃಶ್ಯತಾಗ್ರೇ ಯಜ್ಜ್ಯೋತಿರೂಪಂ ಬ್ರಹ್ಮಾಂಬುಜಾಕ್ಷಯೋಃ॥೧೮॥

---

'ವಿಚಾರನಿಧಿ' ಎಂಬ ಹೆಸರಿನಿಂದ ಅನೇಕ ದೇಶಗಳನ್ನು ಸಂಚರಿಸಿದನು. ॥೧೧-೧೨-೧೩॥

ಇವನು ಕಾಂಚೀಪಟ್ಟಣಕ್ಕೆ ಬಂದು ಅಲ್ಲಿ ಜೈನಧರ್ಮವನ್ನು ತಿಳಿಯಬೇಕು ಎಂದು ಪ್ರಯತ್ನಿಸಿದನು. ಹಾಗೆಯೇ ಸ್ವಲ್ಪಕಾಲದಲ್ಲಿ ಆ ಜೈನಮತತತ್ತ್ವವನ್ನರಿತು ಇತರ ಮತಗಳ ಧರ್ಮಗಳನ್ನೂ ನೋಡಿ, ಇವೆಲ್ಲವೂ ನಿಜವಾದ ತತ್ತ್ವಮಾರ್ಗ ವಲ್ಲೆಂದು ತಿಳಿದು ಕೊನೆಗೆ ಶೈವತತ್ತ್ವವನ್ನವಲಂಬಿಸಿದನು. ಕರ್ಮ, ಕರ್ತೃ, ಫಲ ಮತ್ತು ಕೊಡುವವನು ಇವು ಬೇರೆ ಬೇರೆ ಎಂಬುದಾಗಿ ನೀತಿಯು ನಾಲ್ಕು ಬಗೆ ಯಾಗಿದೆ. ॥೧೪-೧೫॥

ಇವುಗಳನ್ನು ಪೂರ್ಣವಾಗಿ ಉಳಿದ ಈ ಶೈವಸಿದ್ಧಾಂತದಲ್ಲಾದರೋ ನಮಗೆ ಆ ಪರಶಿವನೊಬ್ಬನೇ ದೊಡ್ಡವನು. ಅವನೇ ಸೇವ್ಯನೆಂದಿರುವುದೆಂದು ತಿಳಿದು ಪರಿಶುದ್ಧಮನಸ್ಸಿನಿಂದ ಆ ಶೈವತತ್ತ್ವವನ್ನೇ ಅವಲಂಬಿಸಿದನು. ಯಾವ ಯಾವ ವೇಷ, ಸ್ಥಿತಿಗಳಲ್ಲಿ ಯಾವಾಗ ಹೇಗಿದ್ದರೂ, ಆ ಸ್ಮರಾಂತಕನ ಸ್ಮರಣೆಯೇ ಪರಮ ರಹಸ್ಯವೆಂದು ತಿಳಿದು ಹಾಗೆಯೇ ಶಿವನಾಮವನ್ನು ಸ್ಮರಿಸುತ್ತಾ ಇದ್ದನು.॥೧೬-೧೭॥

ತನ್ನ ನಿಜವೇಷವನ್ನು ತ್ಯಜಿಸಿ ಶಿವನಪಾದದಲ್ಲಿಟ್ಟ ಮನಸ್ಸುಳ್ಳವನಾದನು. ಬ್ರಹ್ಮ ವಿಷ್ಣುಗಳಿಗೂ ಕಾಣದಿರುವ ತುದಿಯುಳ್ಳ ಜ್ಯೋತಿಸ್ವರೂಪನಾದ ಆ ಶಿವನೇ ನನ್ನ

ದೈವತಂ ಮೇ ತದೇವೇತಿ ಶಿವಲಿಂಗಾರ್ಚಕೋಽಭವತ್ ।
ವೀಕ್ಷ್ಯೈವಾನುದಿನಂ ಲಿಂಗಂ ಭೋಕ್ಷ್ಯೇಯಮಿತಿ ನಿಶ್ಚಿತಃ ॥೧೯॥

ದರ್ಶನಂ ಶಿವಲಿಂಗಸ್ಯ ಕೃತ್ವಾನ್ವಹಮಭುಂಕ್ತ ಸಃ ।
ಅಶ್ಮನಾವೃತಮಾಲೋಕ್ಯ ಶಿವಲಿಂಗಂ ಸ ಜಾತುಚಿತ್ ॥೨೦॥

ಶಿಲಾಂ ತಸ್ಮಿನ್ಸ್ವಚಿಕ್ಷೇಪ ಭಕ್ತಿಹರ್ಷಪ್ರಕರ್ಷಿತಃ ।
ಶಿಶೋಃ ಪ್ರಹಾರೇಣ ಪಿತಾ ಯಥಾಪ್ರೀತಿಂ ಪ್ರಪದ್ಯತೇ ॥೨೧॥

ಶಿಲಾಘಾತಾತ್ತತಸ್ತಸ್ಯ ಶಿವಃ ಪ್ರೀತಿಮವಾಪ ಸಃ ।
ಅಪರೇದ್ಯುರಪಿ ಪ್ರಾಪ್ತೇ ಪಾಷಾಣಕ್ಷೇಪಣೇಕ್ಷಣೇ ॥೨೨॥

ಪಾಷಾಣಕ್ಷೇಪಣೇ ಬುದ್ಧಿರ್ದತ್ತಾಮೇ ಶಂಭುನೇತ್ಯಸೌ ।
ಇದಮೇವ ಪರಂ ದೇವಸಮರ್ಚನಮಿತಿ ಸ್ಮರನ್ ॥೨೩॥

---

ದೈವವೆಂದು ತಿಳಿದು ಶಿವಲಿಂಗಪೂಜಾನಿರತನಾದನು. ಅಲ್ಲದೇ ಪ್ರತಿದಿನವೂ ಶಿವಲಿಂಗವನ್ನು ದರ್ಶನಮಾಡಿಯೇ ಊಟಮಾಡುತ್ತೇನೆಂದು ನಿಶ್ಚಯಿಸಿ, ಅದರಂತೆಯೇ ತಪ್ಪದೇ ನಿತ್ಯವೂ ಶಿವಲಿಂಗದರ್ಶನಾನಂತರದಲ್ಲಿಯೇ ಅವನು ಊಟಮಾಡುತ್ತಿದ್ದನು. ॥೧೮-೧೯॥

ಹೀಗಿರಲೊಂದುದಿನ ಶಿವಲಿಂಗವು ಕಲ್ಲುಗಳಿಂದ ನಿರ್ಮಿತವಾಗಿರುವುದನ್ನು ನೋಡಿ, ಪರಮೇಶ್ವರನಿಗೆ ಕಲ್ಲು ಪ್ರಿಯವಾದುದೆಂದು ತಿಳಿದು, ಭಕ್ತಿಸಂತೋಷಗಳಿಂದ ಕೂಡಿದವನಾಗಿ, ಶಿವಲಿಂಗದ ಸುತ್ತಲೂ ಕಲ್ಲುಗಳನ್ನು ಎಸೆದನು. ಮಗುವು ಹೊಡೆದರೆ ತಂದೆಯು ಸಂತೋಷಪಡುವಂತೆ ಭಕ್ತಿಪೂರ್ವಕವಾದ ಇವನ ಶಿಲಾಘಾತದಿಂದ ಪರಶಿವನು ಸಂತುಷ್ಟನಾದನು. ಹೀಗೆಯೇ ಪ್ರತಿದಿನವೂ ಶಿಲಾಸೇವೆಯನ್ನು ನಡೆಸುತ್ತಿದ್ದನು. ಕ್ರಮಕ್ರಮವಾಗಿ ಆತನ ಶಿವಾರ್ಚನೆಯೆಂದರೆ, ಶಿಲಾಘಾತವೇ ಆಯಿತು. ॥೨೦-೨೧-೨೨॥

ಕಾಲಕ್ರಮದಲ್ಲಿ ಅವನು ಆ ಶಂಭುವೇ ನನಗೆ ಈ ರೀತಿ ಕಲ್ಲು ಎಸೆಯುವಂತೆ ಬುದ್ಧಿಕೊಟ್ಟನೆಂದೂ, ಇದೇ ಮಹಾದೇವನಿಗೆ ಉತ್ತಮವಾದ ಪೂಜೆಯೆಂದೂ ನಂಬಿಕೊಂಡು, ಶಿವಾರ್ಚಕನಂತೆ ನಿತ್ಯವೂ ತಪ್ಪದೆ ಶಿವಲಿಂಗಕ್ಕೆ ಕಲ್ಲೆಸೆಯು

ಪಾಷಾಣಕ್ಷೇಪಣಂ ಚಕ್ರೇ ಶಿವಲಿಂಗಂ ಮುದಾನ್ವಹಂ ।
ಸರ್ವೇ ವೇಷಾಃ ಶಿವಸ್ಯೇತಿ ಶಾಕ್ಯವೇಷಾನಧಾತ್ಸದಾ ॥೨೪॥

ಶಿಲಾಘಾತಾರ್ಚನಂ ಶಂಭೋಃ ಸಚಕ್ರೇ ಪ್ರತಿವಾಸರಂ ।
ಹೃದ್ಯಂ ತಂ ಚ ಯಮೀಶಸ್ಯ ಗ್ರಾವ್ಣಾ ಶಾಕ್ಯಕೃತಾಹಿತಃ ॥೨೫॥

ಮೂರ್ಧ್ನಿ ನೇತ್ರಾರ್ಪಕೋ ಯಾತೌ ಪಾನಪಾದಾರ್ಪಣಂ ಚ ತತ್ ।
ಏತದ್ವಯಂ ಜನೋ ಲೋಕೇ ನ ವೇತ್ತಿ ಕುಸುಮಾರ್ಪಣಂ ॥೨೬॥

ಸ ವಿಸ್ಮೃತ್ಯ ಶಿಲಾಕ್ಷೇಪಂ ಕದಾಚಿದ್ಭೋಕ್ತುಮುದ್ಯಯೌ ।
ವಿಸ್ಮೃತೋ ಹಾ ಶಿಲಾಕ್ಷೇಪ ಇತಿ ಸ್ಮೃತ್ವಾ ಧೃತೌದನಃ ॥೨೭॥

ಸಭಕ್ತಿಪ್ರೇರಿತೋ ದೇವಸಮೀಪಮುಗಮುದ್ದ್ರುತಂ ।
ಆದಾಯ ಕಂಚಿದಶ್ಮಾನಂ ಭಾವಯನ್ಭಕ್ತಿತಃ ಶಿವಂ ॥೨೮॥

---

ತ್ತಿದ್ದನು. ಹೀಗೆಯೇ ಅವನು ಪ್ರತಿದಿನವೂ ಸಂತೋಷದಿಂದ ಶಿವಲಿಂಗದ ಮೇಲೆ ಕಲ್ಲೆಸೆಯುತ್ತಾ, ಎಲ್ಲಾ ವೇಷಗಳೂ ಆ ಶಿವನದೇ ಎಂದು ತಾನು ಆ ಶಾಕ್ಯವೇಷವನ್ನೇ ಧರಿಸಿಕೊಂಡನು. ॥೨೩-೨೪॥

ಆಗಲೂ ಪ್ರತಿದಿನವೂ ಶಂಭುವಿಗೆ ಕಲ್ಲಿನ ಏಟಿನ ಪೂಜೆಯನ್ನು ನಡೆಸುತ್ತಿದ್ದನು. ಮನೋಹರವಾದ ಆ ಕಲ್ಲಿನ ಸಮೂಹವು ಆ ಶಾಕ್ಯನಿಂದ ಹೊಡೆಯಲ್ಪಟ್ಟದ್ದು ಪರಶಿವನಿಗೆ ಸಂತೋಷಕರವಾಗಿದ್ದಿತೇ ಹೊರತು ಕೋಪಕ್ಕೆ ಕಾರಣವಾಗಲಿಲ್ಲ. ನಿಜವಾಗಿಯೂ ಶಿವನನ್ನು ತೃಪ್ತಿಪಡಿಸಬೇಕಾದರೆ ಹಣೆಯ ಮೇಲಿರುವ ತಮ್ಮ ಕಣ್ಣನ್ನು ಶಿವನಿಗೆ ಸಮರ್ಪಿಸುವುದೂ, ಅಂದರೆ ಭಕ್ತಿಯಿಂದ ಶಿವನ ದರ್ಶನ ಮಾಡುವುದೂ, ತಮ್ಮ ಪಾದಗಳನ್ನೇ ಶಿವಾರ್ಪಣಗೊಳಿಸುವುದು, ಅಂದರೆ ಸದಾ ಶಿವಕ್ಷೇತ್ರಗಳಿಗೆ ನಡೆದು ಹೋಗುವುದು, ಈ ಎರಡು ಸೇವೆಗಳನ್ನೇ ನಡೆಸಬೇಕು. ಆದರೆ ಸಾಮಾನ್ಯ ಜನರು ಹೀಗೆ ಮಾಡಲಾರದೆ, ಸುಮ್ಮನೆ ಹೂವುಗಳನ್ನು ಮಾತ್ರ ಸ್ವಾಮಿಗೆ ಅರ್ಪಿಸುವರು. ॥೨೫-೨೬॥

ಹೀಗೆ ನಡೆಯುತ್ತಿದ್ದ ಇವನು ಒಂದುಸಲ ಶಿವನ ಮೇಲೆ ಕಲ್ಲೆಸೆಯುವುದನ್ನು ಮರೆತು ಊಟಮಾಡಲು ಪ್ರಾರಂಭಿಸಿದನು. ಅರ್ಧ ಊಟದಲ್ಲಿಯೇ, 'ಅಯ್ಯೋ, ಶಿವನಿಗೆ ಶಿಲಾಕ್ಷೇಪಮಾಡುವುದನ್ನೇ ಮರೆತೆನಲ್ಲಾ, ಎಂದು ಅನ್ನವನ್ನು

ಸಾಕ್ಷಾಲ್ಲಕ್ಷ್ಯಂ ಸಮೀಕ್ಷ್ಯೈನಂ ಚಿಕ್ಷೇಪ ಸ್ತಿಮಿತೇಕ್ಷಣಃ ।
ಆಗಸೋಽಯಮುಭುಂಕ್ತೇತಿ ತದ್ಭಕ್ತಿಪ್ರೀತಿರಾಶಯಃ ॥೨೯॥

ದದೃಶೇ ದಯಯಾ ಯುಕ್ತಸ್ತ್ರ್ಯಂಬಕೋಽಂಬಿಕಾಂಬರೇ ॥೩೦॥

ವಿಲೋಕ್ಯ ಶಾಕ್ಯೋ ವೃಷವಾಹನಂ ತಂ
ಪ್ರಣಮ್ಯ ಭಕ್ತ್ಯಾ ಪ್ರವಣೋ ನನಾಮ ।
ದೇವೋ ದಯಾಸಾಧುರಥಾನಪಾಯಂ
ನಿನಾಯ ಜೈನಂ ನಿಜಮಾಸ್ಪದಂ ತತ್ ॥೩೧॥

ಭರಿತಂ ಶಿವಭಕ್ತಿಭಾವನೈ
ಶ್ಚರಿತಂ ಶಾಕ್ಯಪತೇಃ ಶೃಣೋತಿ ಯಃ ।
ದುರಿತೈರಭಿತಃ ಸ ಮೇದುರ
ಶ್ಚರಿತಂ ಲೋಕಮುಪೈತಿ ಶಾಶ್ವತಂ ॥೩೨॥

---

ಹಾಗೆಯೇ ಹಿಡಿದುಕೊಂಡು ಭಕ್ತಿಭಾವಭರಿತನಾಗಿ ಮಹಾದೇವನ ಸಮೀಪಕ್ಕೆ ಜಾಗ್ರತೆಯಾಗಿ ಓಡಿಹೋದನು. ಕೂಡಲೇ ಅಲ್ಲಿದ್ದ ಒಂದು ಕಲ್ಲನ್ನು ತೆಗೆದು ಕೊಂಡು ಭಕ್ತಿಪೂರ್ವಕವಾಗಿ ಶಿವನನ್ನು ನೆನೆಯುತ್ತಾ ನೆಟ್ಟದೃಷ್ಟಿಯಿಂದ ಸರಿಯಾಗಿ ಗುರಿಯಿಟ್ಟು ಈಶ್ವರನ ಕಡೆಗೆ ಎಸೆದನು. ॥೨೭-೨೮॥

ಹಾಗೆ ಶಿಲಾಸೇವೆಯನ್ನು ಸಲ್ಲಿಸಿ, ಮನೆಗೆ ಬಂದು ದೇವ, ನಿನ್ನ ಸೇವೆಮಾಡಿ ಈಗ ಊಟಮಾಡುತ್ತೇನೆಂದು ಹೇಳುತ್ತಾ ತನ್ನ ಭೋಜನವನ್ನು ಪೂರ್ತಿಗೊಳಿಸಿ ದನು. ಆಗ ಶಿವನು ಅವನ ಭಕ್ತಿಯಿಂದ ಪ್ರೀತನಾದ ಮನವುಳ್ಳವನಾಗಿ ದಯಾ ಯುಕ್ತನಾಗಿ ಅಂಬಿಕೆಯೊಡನೆ ಕೂಡಿ ಬಂದು ಅವನಿಗೆ ಅಂತರಿಕ್ಷದಲ್ಲಿ ದರ್ಶನ ಕೊಟ್ಟನು. ॥೨೯-೩೦॥

ಆಗ ಶಾಕ್ಯನು ವೃಷಭವಾಹನನಾಗಿ ಎದುರಿಗೆ ನಿಂತಿರುವ ಪರಶಿವನನ್ನು ಕಂಡು ಭಕ್ತಿಯಿಂದ ತಲೆಬಾಗಿ ನಮಸ್ಕಾರಮಾಡಿದನು. ದಯಾಸಾಗರನಾದ ಮಹಾದೇವನಾದರೋ ನಿರ್ದುಷ್ಟಸ್ವಭಾವವುಳ್ಳ ಆ ಜೈನನನ್ನು ಸಮಾಧಾನಗೊಳಿಸಿ ತನ್ನ ನಿಜಸ್ಥಾನಕ್ಕೆ ಕರೆದುಕೊಂಡು ಹೋದನು. ॥೩೧॥

ಹೀಗೆ ಶಿವಭಕ್ತಿಭಾವನೆಗಳಿಂದ ಪೂರ್ಣವಾದ ಈ ಶಾಕ್ಯಪತಿಯ ಕಥೆಯನ್ನು

ಷಡೂರ್ಮಿಜೇತಾ ವಿಜಿತಾಖಿಲೇಂದ್ರಿಯಃ
ಪ್ರಸಾದ್ಯ ಭಕ್ತಪ್ರವರಾನ್ಸ ಸಂಪದಾ।
ವರೇಣ್ಯ ಸೌಮ್ಯೇಶಕಟಾಕ್ಷವೈಭವಾತ್
ಸ ಸೋಮಯಾಜೀ ಶಿವಲೋಕಮಭ್ಯಗಾತ್ ॥೩೩॥

ಪ್ರಖ್ಯಾತಮೇತದ್ಭುವಿ ಸೋಮಯಾಜೀ
ಮಾರಸ್ಯ ನಾನ್ಯೈರ್ಮಹನೀಯಕೀರ್ತೇಃ।
ಚರಿತ್ರಮೌದಾರ್ಯಗುಣೋಪಪನ್ನಂ
ಶೃಣೋತಿ ಯಃ ಶೈವಪದಂ ಸ ಯಾತಿ ॥೩೪॥

ಇತಿ ಶ್ರೀ ಶಿವರಹಸ್ಯೇ ಸದಾಶಿವಾಖ್ಯೇ ನವಮಾಂಶೇ ಸೋಮಯಾಜೀಮಾರ ಶಾಕ್ಯನಾಥಚರಿತ್ರವರ್ಣನಂ ನಾಮ ಚತುಃಪಂಚಾಶೋಽಧ್ಯಾಯಃ

---

ಕೇಳುವವನು ಇಹಪರಗಳಲ್ಲಿ ಒದಗುವ ಸಕಲ ಪಾಪಗಳಿಂದಲೂ ಮುಕ್ತನಾಗಿ ಶಾಶ್ವತವಾದ ಶಿವಲೋಕವನ್ನೈದುವನು ಎಂಬುದರಲ್ಲಿ ಸಂಶಯವಿಲ್ಲ. ॥೩೨॥

ಶೀತ, ಉಷ್ಣ, ಸುಖ, ದುಃಖ, ಶೋಕ, ಅಲಾಭಗಳೆಂಬ ಆರು ಅಲೆಗಳನ್ನು ಗೆದ್ದವನೂ, ಜಿತೇಂದ್ರಿಯನೂ, ತನ್ನ ಸಂಪತ್ತಿನಿಂದ ಶೈವರನ್ನು ಸಂತೋಷಗೊಳಿಸಿದವನೂ, ಆದ ಆ ಸೋಮಯಾಜಿಯು ಶ್ರೇಷ್ಠನಾದ ಸೌಮ್ಯೇಶನ ಕಟಾಕ್ಷವೈಭವದಿಂದ ಶಿವಲೋಕವನ್ನು ಹೊಂದಿದನು. ॥೩೩॥

ಮತ್ತಾರಿಂದಲೂ ಹೊಂದಲಸಾಧ್ಯವಾದ ಉತ್ತಮವಾದ ಕೀರ್ತಿಯುಳ್ಳ ಪ್ರಸಿದ್ಧವೂ, ಉದಾರಗುಣಭರಿತವೂ ಆದ ಸೋಮಯಾಜಿಮಾರನೆಂಬ ಈ ಭಕ್ತನ ಚರಿತ್ರೆಯನ್ನು ಕೇಳುವವನು, ಪರಶಿವನ ಸಾಯುಜ್ಯವನ್ನೈದುವನೆಂದು ಕುಮಾರಸ್ವಾಮಿಯು ಜೈಗೀಷವ್ಯಾದಿಗಳಿಗೆ ನುಡಿದನು. ॥೩೪॥

ಇಂತು ಶ್ರೀಶಿವರಹಸ್ಯದಲ್ಲಿ ಸದಾಶಿವಸಂಜ್ಞಕವಾದ ಒಂಬತ್ತನೆಯ ಅಂಶದಲ್ಲಿ ಸೋಮಯಾಜಿಮಾರ ಮತ್ತು ಶಾಕ್ಯನಾಥರ ಕಥಾವರ್ಣನೆಯೆಂಬ ಐವತ್ತನಾಲ್ಕನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಸದಾಶಿವಾಖ್ಯೇ

## ನವಮಾಂಶೇ

## ಅಥ ಪಂಚಪಂಚಾಶೋಽಧ್ಯಾಯಃ

॥ ಶ್ರೀಸ್ಕಂದ ಉವಾಚ ॥

ಅನಂತಕೀರ್ತೇಃ ಶ್ರೀಭಕ್ತಭದ್ರಸ್ಯ ಪ್ರೋಚ್ಯತೇ ಕಥಾ ।
ಚೋಲಭೂಮೌ ಭೂರಿಭೂಮ್ನಿ ಕಾವೇರೀತೀರಗೋಚರೇ ॥೧॥

ಅರುಣಾರಣ್ಯನಾಮಾಸ್ತಿ ತದ್ಧಾಮೇಂದುಶಿಖಾಮಣೇಃ ।
ತತ್ರ ಕೇಚಿನ್ಮಹಾಭಕ್ತಾ ಅರುಣಾರಣ್ಯಧಾಮನಿ ॥೨॥

ಸಂತಿ ಶಂಭುಸ್ಮೃತಿಕೃತಃ ಶಿವದಾಸ್ಯೈಕಸಂಪದಃ ।
ಶ್ರೀಭಸ್ಮಾಲಂಕೃತೀನಾಂ ಚ ಪ್ರಾಣರಕ್ಷಣಕಾರಿಣೀಂ ॥೩॥

---

## ಐವತ್ತೈದನೆಯ ಅಧ್ಯಾಯ

ಅಯ್ಯ ಜೈಗೀಷವ್ಯನೇ, ಅಪಾರ ಕೀರ್ತಿವಂತನಾದ ಶ್ರೀಭಕ್ತಭದ್ರನ ಕಥೆಯು ಇನ್ನು ಮುಂದೆ ನಿನಗೆ ಹೇಳಲ್ಪಡುವುದು. ಅದನ್ನು ಕೇಳು, ಚೋಲದೇಶದಲ್ಲಿ ಅತ್ಯಂತ ವಿಶಾಲವಾದ ಭೂಭಾಗವುಳ್ಳ ಕಾವೇರೀನದಿಯ ದಡದಲ್ಲಿ ಚಂದ್ರಮೌಳಿಯ ವಾಸಭೂಮಿಯಾದ ಅರುಣಾರುಣ್ಯವೆಂಬ ಒಂದು ಶಿವಕ್ಷೇತ್ರವಿರುವುದು. ಆ ಆರಣ್ಯಕ್ಷೇತ್ರದಲ್ಲಿ ಶಂಭುಸ್ಮರಣನಿರತರೂ, ಶಿವಸೇವೆಯೇ ಮುಖ್ಯವಾದ ಸಂಪತ್ತೆಂದು ತಿಳಿದವರೂ ಆದ ಅನೇಕ ಮಹಾಶೈವರು ವಾಸಮಾಡುತ್ತಿರುವರು. ॥೧-೨॥

ಪರಿಶುದ್ಧವಾದ ಭಸ್ಮಾಲಂಕಾರವೇ ಪ್ರಾಣರಕ್ಷಣೆಯನ್ನುಂಟುಮಾಡುವ ಸಾಧನವೆಂಬುದಾಗಿ ಅಲ್ಲಿನವರು ಭಾವಿಸಿದ್ದರು. ಅವರ ವಂಶದಲ್ಲಿ ಪರಂಜ್ಯೋತಿ

ತೇಷಾಂ ಕುಲೇ ಕಶ್ಚಿದಾಸೀತ್ ಪರಂಜ್ಯೋತಿರಿತಿ ಶ್ರುತಃ ।
ಆಯುರ್ವೇದಾದ್ಯಾಯುಧಾಸು ವಿದ್ಯಾಸು ಸಕಲಾಸ್ವಪಿ ॥೪॥

ಗಜವಾಜಿಸಮಾರೋಹೇಷ್ಯತಿಕೌಶಲಮಾಪ ಸಃ ।
ಪರಮೇಶ್ವರಪಾದಾಬ್ಜಂ ಪರಂ ತತ್ವಮಿತಿ ಸ್ಮರನ್ ॥೫॥

ಶಿವಭಕ್ತಿರಸಸ್ರೋತೋ ನಿಮ್ನಭೂಮಿರಭೂಚ್ಚ ಸಃ ।
ಸಮರ್ಥಂ ಸರ್ವಕಾರ್ಯೇಷು ಮಂತ್ರತಂತ್ರಾದಿಷು ಸ್ವಯಂ ॥೬॥

ಮಹಾಪ್ರಧಾನಮೇವೈನಮಕರೋಚ್ಚೋಲಭೂಪತಿಃ ।
ಚತುರಂಗಬಲೋಪೇತಶ್ಚತುರಃ ಸಮರೇಷು ಸಃ ॥೭॥

ದಿಗ್ಪಾಲಾಂಶ್ಚತುರೋ ಜಿತ್ವಾ ಚೋಲಮೂಲಮಪಾಲಯತ್ ।
ತತಃ ಸ ವಾತಾಪಿಪುರೀಂ ಸುರಾಸುರ ದುರಾಸದಾಂ ॥೮॥

ನಿರುದ್ಧನಿಜಸೈನ್ಯೈಸ್ತಾಂ ದಭ್ರಾಂ ಜಿತ್ವಾ ಭಟೋ ಭಟೈಃ ।
ಸ ಗೃಹೀತ್ವಾಥ ಜೀವಂತಂ ಭೂಪತಿಂ ತಂ ಪುರೇಶ್ವರಂ ॥೯॥

---

ಯೆಂದು ಪ್ರಖ್ಯಾತನಾದವನೊಬ್ಬನು ಉದಯಿಸಿದನು. ಅವನು ಆಯುರ್ವೇದ, ಆಯುಧಪ್ರಯೋಗವೇ ಮೊದಲಾದ ಸಕಲ ವಿದ್ಯೆ ಮತ್ತು ಕಲೆಗಳಲ್ಲಿಯೂ, ಕುದುರೆ, ಮತ್ತು ಆನೆಗಳ ಸವಾರಿಯಲ್ಲಿಯೂ ವಿಶೇಷ ನೈಪುಣ್ಯವನ್ನು ಪಡೆದಿದ್ದನು. ॥೩-೪॥

ಇವನು ಪರಮೇಶ್ವರನ ಪಾದಕಮಲವೇ ಪರಮತತ್ವವೆಂದು ಸ್ಮರಿಸುತ್ತಾ ಶಿವಭಕ್ತಿರಸಪ್ರವಾಹಕ್ಕೆ ತಗ್ಗಾದ ಭೂಮಿಯಂತೆ ಶಿವಜ್ಞಾನಕ್ಕೆ ಪೂರ್ಣ ಆಶ್ರಯನಾಗಿದ್ದನು. ಸಕಲ ಮಂತ್ರ ಮತ್ತು ತಂತ್ರರೂಪವಾದ ಸಕಲ ಕಾರ್ಯಗಳಲ್ಲಿಯೂ ಸ್ವತಃ ಶಕ್ತನಾಗಿರುವ ಇವನನ್ನು ಚೋಲದೇಶದ ರಾಜನು ಮಹಾಮಂತ್ರಿಯನ್ನಾಗಿ ಮಾಡಿಕೊಂಡನು. ॥೫-೬॥

ಚತುರನಾದ ಅವನು ಹಸ್ತಿ (ಆನೆ), ಕುದುರೆ, ರಥ ಮತ್ತು ಕಾಲಾಳುಗಳೆಂಬ ಚತುರಂಗಬಲಸಮೇತನಾಗಿ ಯುದ್ಧಕ್ಕೆ ಹೊರಟು, ನಾಲ್ಕು ದಿಕ್ಕುಗಳನ್ನೂ ಜಯಿಸಿ, ಚೋಳದೇಶವನ್ನು ರಕ್ಷಣೆಮಾಡಿಕೊಂಡನು. ಅನಂತರ ಇವನು ದೇವ ದೈತ್ಯರಿಂದಲೂ ಪ್ರವೇಶಿಸಲಸಾಧ್ಯವಾದ ವಾತಾಪಿಪುರಿಗೆ ಹೊರಟು, ತನ್ನ ನಿಜಸೈನ್ಯ ಸನ್ನಾಹಗಳಿಂದ ಆ ಪಟ್ಟಣವನ್ನು ಮುತ್ತಿ ತನ್ನ ಭಟರಿಂದ ಆ ದೊಡ್ಡಪಟ್ಟಣವನ್ನು

ತುರಂಗತುಂಗಮಾತಂಗಶತಾಂಗಾದೀನ್ಯನೇಕಶಃ ।
ತಸ್ಯ ರಾಜ್ಞಃ ಕೋಶಗತಂ ದಾಸೀದಾಸಧನಾದಿಕಂ ॥೧೦॥

ಸ ಚೋಲಭೂಮಿಪಾಲಾಯ ಸಮಸ್ತಾನಿ ಸಮರ್ಪಯತ್ ।
ಅಭ್ಯನಂದಚ್ಚ ರಾಜೈನಂ ಜಯಿನಂ ಧನದಾಯಿನಂ ॥೧೧॥

ಅನೇನ ಹಿ ಕೃತಂ ಕರ್ಮ ದುಷ್ಕರಂ ವಿಕ್ರಮಾದಿತಿ ।
ರಾಜನ್ನ ಸೈನ್ಯಬಾಹುಲ್ಯಾದ್ವಿಜಯನ್ನಸೌ ರಿಪೂನ್ ॥೧೨॥

ಮಹೇಶಭಕ್ತಿಮಾಹಾತ್ಮ್ಯಾದಿತಿ ಜ್ಞಾತ್ವಾ ತದಬ್ರುವನ್ ।
ಮಾಹಾತ್ಮ್ಯಂ ಮಂತ್ರಿಣಸ್ತಸ್ಯ ಶಿವಭಕ್ತಿಸಮುದ್ಭವಂ ॥೧೩॥

---

ಗೆದ್ದು ಆ ಪಟ್ಟಣಾಧೀಶನಾದ ರಾಜನನ್ನು ಜೀವಸಹಿತವಾಗಿ ಹಿಡಿದು ತಂದನು. ॥೭-೮-೯॥

ಆ ರಾಜನಿಗೆ ಸೇರಿದ್ದ ಕುದುರೆ, ದೊಡ್ಡದೊಡ್ಡ ಆನೆಗಳೂ, ರಥಗಳೇ ಮುಂತಾದುವುಗಳಲ್ಲಿ ಅನೇಕವಸ್ತುಗಳೂ, ಅಲ್ಲದೇ ಆ ರಾಜನ ಭಂಡಾರದ ದಾಸ, ದಾಸಿ, ಧನ, ಕನಕ ವಸ್ತುವಾಹನಾದಿಗಳೆಲ್ಲವೂ ಬಲಾತ್ಕಾರವಾಗಿ ಆ ಚೋಲದೇಶದ ರಾಜನಿಗೆ ಸೇರಿಹೋದವು. ಆ ಯುದ್ಧದಲ್ಲಿ ದಭ್ರಾನಗರದ ರಾಜನನ್ನು ಗೆಲ್ಲಿಸುವುದಕ್ಕೂ, ಅವನಿಂದ ಧನವನ್ನು ಹೇರಳವಾಗಿ ಸುಲಿದು ತನ್ನ ಬೊಕ್ಕಸವನ್ನು ಪೂರ್ಣಗೊಳಿಸುವುದಕ್ಕೂ ಮೂಲಕಾರಣನಾದ ತನ್ನ ಮಂತ್ರಿಯನ್ನು ವಿಶೇಷವಾಗಿ ಹೊಗಳಿ, ಬೇರೆಯವರಿಂದ ಮಾಡಲು ಅಸಾಧ್ಯವಾದ ಮಹಾಕಾರ್ಯವು ಈತನ ಪರಾಕ್ರಮದಿಂದ ಮಾಡಲ್ಪಟ್ಟಿತೆಂದು ಬಹಳವಾಗಿ ಅಭಿನಂದಿಸಿದನು. ॥೧೦-೧೧॥

ಅದನ್ನು ನೋಡಿ ಇತರ ಪರಿವಾರದವರು "ಅಯ್ಯ ರಾಜನೇ, ನಿನ್ನ ಈ ಮಂತ್ರಿಯು ತನ್ನ ಸೈನ್ಯಬಾಹುಳ್ಯದಿಂದ ಶತ್ರುಗಳನ್ನು ಜಯಿಸಲಿಲ್ಲ. ಆತನು ಮಹೇಶ್ವರನಲ್ಲಿ ವಿಶೇಷವಾಗಿಟ್ಟಿರುವ ಭಕ್ತಿಮಹಿಮೆಯಿಂದ ಅಸಾಧ್ಯನಾದ ಶತ್ರುವನ್ನು ಗೆದ್ದನು" ಎಂದು ಹೇಳುತ್ತಾ ರಾಜನಿಗೆ ಶಿವಭಕ್ತಿಮಹಿಮೆಯನ್ನು ಸೂಚಿಸಿದರು. ಚೋಲಭೂಪಾಲನಾದರೋ ತನ್ನ ಮಂತ್ರಿಯ ಶಿವಭಕ್ತಿಸಂಬಂಧವಾದ ಮಹಿಮೆಯನ್ನು ಕೇಳಿ, ಸದ್ಭಾವನೆಯಿಂದ ಅವನನ್ನು ಕುರಿತು ಈರೀತಿ ನುಡಿದನು. ॥೧೨-೧೩॥

ಶ್ರುತ್ವಾ ಚೋಲಮಹೀಪಾಲೋ ಭೂತಿಭಾವೇನ ತಂ ಬ್ರುವನ್ ।
ಅಜಾನನ್ನರ ಮಾಹಾತ್ಮ್ಯಂ ದಾರುಣೇ ರಣಕರ್ಮಣಿ ॥೧೪॥

ನ್ಯಯೋಜಯಮಹಂ ತೇನ ಚಾಪರಾಧಂ ಕ್ಷಮಸ್ವಮೇ ।
ಇತಿ ಪ್ರಣಮ್ಯ ಭೂಪಾಲೋ ದತ್ವಾ ಗ್ರಾಮಾನ್ಧನಾನಿ ಚ ॥೧೫॥

ಸುಖೇನ ಭುಕ್ತ್ವಾ ಸ್ವಗ್ರಾಮಮುವಾಸಾಸಾಯಮರ್ಚಯನ್ ।
ದೇವದೇವಮುಮಾಕಾಂತಂ ಕೃತಾಂತಭಯವರ್ಜಿತಃ ॥೧೬॥

ಸ್ವಸಂಪದ್ರಕ್ಷಣಾರ್ಥಾಯ ತ್ರ್ಯಕ್ಷಮೀಕ್ಷಸ್ವ ಭಕ್ತಿತಃ ।
ಅದ್ಧೇತ್ಯುದೀರ್ಯ ತಂ ರಾಜಾ ಗ್ರಾಮಂ ಪ್ರಸ್ಥಾಪಯನ್ನಿಜಂ ॥೧೭॥

ಪ್ರಸಾದ್ಯ ಪಾರ್ಥಿವಂ ರಮ್ಯೈರ್ವಚೋಭಿರನುಗೈಃ ಸಹ ।
ಸ್ವವಾಸಮರುಣಾರಣ್ಯಂ ಸಂಪ್ರಾಪ್ಯ ನ್ಯವಸತ್ಸುಖೀ ॥೧೮॥

ಛಾಯೇವ ತಸ್ಯ ಭಾರ್ಯಾಸೀನ್ಮೂರ್ತೇವಾರ್ಚನೇ ರತಾ ।
ಶಿವಭಕ್ತಾನ್ಭೋಜಯಿತ್ವಾ ಪಶ್ಚಾದ್ಭುಂಕ್ತೇ ಹ್ಯತಂದ್ರಿತಾ ॥೧೯॥

---

ಅಯ್ಯ ಮಂತ್ರಿಯೇ, ನಿನ್ನ ಮಹಿಮೆಯನ್ನರಿಯದೇ ಭಯಂಕರವಾದ ಯುದ್ಧಕಾರ್ಯದಲ್ಲಿ ನಾನು ನಿನ್ನನ್ನು ಪ್ರೇರಿಸಿದೆನು. ಈ ಅಪರಾಧವನ್ನು ಕ್ಷಮಿಸೆಂದು ಹೇಳಿ, ಆ ಚೋಲರಾಜನು ಅವನಿಗೆ ಪ್ರಣಾಮಮಾಡಿ, ಅನೇಕ ಗ್ರಾಮಗಳನ್ನೂ ಬೇಕಾದಷ್ಟು ಹಣವನ್ನೂ ಕೊಟ್ಟು, ಈ ಗ್ರಾಮಗಳನ್ನು ನೀನು ಸುಖವಾಗಿ ಅನುಭವಿಸಿಕೊಂಡು ಪ್ರತಿದಿನ ಸಾಯಂಕಾಲದವರೆಗೂ ದೇವಾದಿದೇವನಾದ ಉಮಾರಮಣನನ್ನು ಪೂಜಿಸುತ್ತಾ ಯಮನ ಭೀತಿಯಿಲ್ಲದವನಾಗಿ ಬಾಳು ; ॥೧೪-೧೫-೧೬॥

ನಿನ್ನ ಈ ಸಂಪತ್ತನ್ನು ಕಾಪಾಡುವುದಕ್ಕೋಸ್ಕರ ಭಕ್ತಿಯಿಂದ ಮಹಾದೇವನನ್ನು ದರ್ಶನಮಾಡಿಕೊಂಡು ಶಾಶ್ವತವಾಗಿ ಬಾಳೆಂದು ಹೇಳಿ, ಆ ರಾಜನು ಅವನನ್ನು ಅವನ ಸ್ವಂತಗ್ರಾಮಕ್ಕೆ ಕಳುಹಿಸಿದನು. ಆಗ ಆ ಮಂತ್ರಿಯೂ ಮನೋಹರವಾದ ವಾಕ್ಯಗಳಿಂದ ಮಹಾರಾಜನನ್ನು ಸಮಾಧಾನಮಾಡಿ, ತನ್ನ ಅನುಚರರೊಡನೆ ತನ್ನ ವಾಸಸ್ಥಾನವಾದ ಅರುಣಾರಣ್ಯಕ್ಕೆ ಬಂದು, ಅಲ್ಲಿ ಸುಖವಾಗಿ ವಾಸಮಾಡಿಕೊಂಡಿದ್ದನು. ॥೧೭-೧೮॥

ಮೂರ್ತಿವಂತಳಾದ ನೆರಳೋ ಎನ್ನುವಂತೆ ಇವನ ಹೆಂಡತಿಯು ಯಾವಾಗಲೂ

ಸ ಕೃತ್ವಾ ಸಂವಿದಂ ನಿತ್ಯಮವಿವಾದಮನಾಸ್ತದಾ ।
ಅನ್ನೈರ್ವ್ಯಂಜನಸಂಪನ್ನೈಃ ಷಡ್ರಸಾಢ್ಯೈಶ್ಚತುರ್ವಿಧೈಃ ॥೨೦॥

ಮಧುರೈಃ ಪ್ರಶ್ರಿತೈರ್ವಾಕ್ಯೈಃ ಶಿವಭಕ್ತಾನಪೂಜಯತ್ ।
ಅದಭ್ರವಿನಯೋದಗ್ರೋ ದಭ್ರನಾಥಾರ್ಚನೇ ರತಃ ॥೨೦॥

ಇತ್ಯಸೌ ತೇನ ನಾಮಾಸೀದ್ದಭ್ರಭಕ್ತ ಇತಿ ಶ್ರುತಃ ।
ಶಿವಭಕ್ತ್ಯಾಂ ಬೋಧ ಇವ ತಸ್ಯ ಪತ್ನ್ಯಾಂ ಮಹಾತ್ಮನಃ ॥೨೨॥

ಶ್ರೀಲಾಲ ಇತಿ ನಾಮಾಸೀತ್ತನಯೋ ವಿನಯಾನ್ವಿತಃ ।
ಸುತೇ ಮೂರ್ತ ಇವಾನಂದೇ ಜಾತೇ ತಂ ಬಾಂಧವಾ ಮುದಾ ॥೨೩॥

ತೈಲೈರ್ಮೂರ್ತಿಮಿವ ಸ್ನೇಹೈರ್ವಿಧುಂ ಮಾಭಿರ್ವ್ಯಧೂನಯತ್ ।
ವಿಪ್ರೇಭ್ಯೋ ದತ್ತವಿತ್ತೇನ ದಭ್ರಭಕ್ತೇನ ಧೀಮತಾ ॥೨೪॥

---

ಪೂಜ್ಯರ ಅರ್ಚನೆಮಾಡುತ್ತಾ ಪತಿವ್ರತೆಯಾಗಿದ್ದಳು. ಇವಳು ಶೈವರಿಗೆ ಭೋಜನ ಮಾಡಿಸಿ ಅನಂತರ ಆಲಸ್ಯವಿಲ್ಲದೇ ತಾನು ಭೋಜನಮಾಡುತ್ತಿದ್ದಳು. ಆ ಭಕ್ತನು ಸಭೆಯನ್ನು ಸೇರಿಸಿ ನಿತ್ಯವೂ ವಿಚಾರಗಳನ್ನು ಚರ್ಚೆಮಾಡುತ್ತಾ ಪರಿಕರ ಷಡ್ರಸ ಭರಿತವಾದ ನಾಲ್ಕುಬಗೆಯ ಅನ್ನಗಳಿಂದ ಶಿವಭಕ್ತರಿಗೆ ಊಟಮಾಡಿಸಿ, ಮಧುರವೂ ವಿನಯಯುಕ್ತವೂ ಆದ ವಾಕ್ಯಗಳಿಂದ ಶೈವರನ್ನು ಪೂಜಿಸುತ್ತಿದ್ದನು. ॥೧೯-೨೦॥

ವಿಶೇಷ ವಿನಯಸಂಪನ್ನನಾಗಿ ಇವನು ದಭ್ರನಾಥನ ಪೂಜೆಯಲ್ಲಿ ಆಸಕ್ತನಾದನು. ಆದ್ದರಿಂದಲೇ ಅವನು ದಭ್ರಭಕ್ತನೆಂದು ಪ್ರಸಿದ್ಧನಾದನು. ಆ ಮಹಾತ್ಮನ ಪತ್ನಿಯಲ್ಲಿ ಶಿವಭಕ್ತಿಯಲ್ಲಿ ಉದಯಿಸುವ ಜ್ಞಾನದಂತೆ ವಿನಯಸಂಪನ್ನನಾದ ಶ್ರೀಲಾಲನೆಂಬ ಮಗನು ಜನಿಸಿದನು. ॥೨೧-೨೨॥

ಆನಂದದ ಮೂರ್ತಿಯೋ ಎಂಬಂತಿರುವ ಮಗನು ಹುಟ್ಟಲು ಆ ದಭ್ರಭಕ್ತನ ಬಂಧುಗಳು ಸಂತೋಷದಿಂದ ಬಂದು, ಮೂರ್ತಿಮತ್ತಾದ ಚಂದ್ರನಂತಿರುವ ಆ ಮಗುವನ್ನು ಕಂಡು, ಸ್ನೇಹಪೂರ್ವಕವಾಗಿ ಎಣ್ಣೆಯನ್ನು ತಂದು ಮಗುವಿಗೆ ದೃಷ್ಟಿತೆಗೆದರು. ಅಗ ಮೇಧಾವಿಯಾದ ಆ ದಭ್ರಭಕ್ತನು ಪುತ್ರೋತ್ಸವವಾದ ನಂತರ ಬ್ರಾಹ್ಮಣರಿಗೆ ಬೇಕಾದಷ್ಟು ದ್ರವ್ಯದಾನಮಾಡಿ, ಚಂದ್ರನಂತೆ ಹೊಳೆಯುತ್ತಿರುವ ಕುಮಾರನಿಗೆ ಜಾತಕರ್ಮಾದಿ ಸಂಸ್ಕಾರಗಳನ್ನು ನಡೆಸಿದನು. ॥೨೩-೨೪॥

ಜಾತಸ್ಯಾಸ್ಯ ಕುಮಾರಸ್ಯ ಜಾತಕರ್ಮಾದಿಕಂ ಕೃತಂ ।
ನಿರವದ್ಯೈರವಯವೈಃ ಕಾಂತ್ಯಾಕ್ರಾಂತದಿಗಂತರೈಃ ॥೨೫॥

ಆನಂದೇನ ಸಮಂ ಪಿತ್ರೋರ್ವವೃಧೇ ಸಕುಮಾರಕಃ ।
ಆಪಾದಮೌಳಿಪರ್ಯಂತಂ ಸ್ವಸ್ವವರ್ಣಾಲ್ಪಭೂಷಿತಃ ॥೨೬॥

ಚಚಾರ ಚರಣನ್ಯಸ್ತಸ್ವಸ್ತಿಕಾಬ್ಜಪದಕ್ರಮೈಃ ।
ಬಾಲಂ ಕಾಲೇ ವೃತ್ತಚೌಲಂ ಸವಯೋಭಿರ್ದ್ವಿಜಾರ್ಭಕೈಃ ॥೨೭॥

ವೇದ್ಯಾಮಕ್ಷರಶಿಕ್ಷಾಯೈ ತತ್ಕೃತಾಯಾನ್ಯಧಾಪ್ಪಿತಾ ।
ಸ ಜನ್ಮಾಂತರಸಂಸ್ಕಾರಾದ್ಯಸ್ಯ ಕಸ್ಯೋಪದೇಶತಃ ॥೨೮॥

ಜಗ್ರಾಹ ವಾಙ್ಮಯಂ ಸರ್ವಂ ಸಂಸ್ಮರನ್ನಿವ ವಿಸ್ಮೃತಂ ।
ಶಸ್ತ್ರಶಾಸ್ತ್ರೇಷು ನಿಷ್ಣಾತೋ ವಿಶಿಷ್ಟಃ ಸೋಽಭವತ್ಕ್ಷಿತೌ ॥೨೯॥

---

ನಿರ್ದುಷ್ಟವಾದ ಆ ಶಿಶುವಿನ ಅವಯುವಗಳ ಕಾಂತಿಯು ದಿಗಂತವನ್ನೆಲ್ಲಾ ವ್ಯಾಪಿಸಿರಲು, ತಂದೆತಾಯಿಗಳ ಆನಂದದೊಡನೆ ಆ ಸುಕುಮಾರನಾದ ಶ್ರೀಲಾಲನೂ ದಿನದಿನಕ್ಕೆ ಬೆಳೆಯುತ್ತಿದ್ದನು. ಕಾಲಿನಿಂದ ಹಿಡಿದು ತಲೆಯವರೆಗೂ ಆಯಾ ಅವಯುವಗಳಿಗನುಗುಣವಾದ ಅಮಿತಸುವರ್ಣಾಭರಣಗಳಿಂದ ಅಲಂಕರಿಸಲ್ಪಟ್ಟಿದ್ದನು. ಈ ಕುಮಾರನು ಕ್ರಮವಾಗಿ ತನ್ನ ಪುಟ್ಟಕಾಲಿನಿಂದ ಸ್ವಸ್ತಿಕರೂಪವಾಗಿ ಮತ್ತು ತಾವರೆಯ ಕ್ರಮವಿನ್ಯಾಸದಂತೆ ಹೆಜ್ಜೆಯಿಟ್ಟು ನಡೆಯಲಾರಂಭಿಸಿದನು. ॥೨೫-೨೬॥

ಸಕಾಲದಲ್ಲಿ ಮಗನಿಗೆ ಚೌಲಸಂಸ್ಕಾರಮಾಡಿ, ಸಮಾನಸ್ಕಂಧರಾದ ದ್ವಿಜಬಾಲಕರೊಡನೆ ತಂದೆಯು ತನ್ನ ಮಗನನ್ನು ಅಕ್ಷರಾಭ್ಯಾಸಕ್ಕೋಸ್ಕರ ಸದ್ಗುರುವಿನ ಬಳಿ ನಿಯಮಿಸಿದನು. ಆ ಮಗನು ಜನ್ಮಾಂತರದ ಸಂಸ್ಕಾರವಿಶೇಷದಿಂದಲೇ ಯಾರೋ ಒಬ್ಬ ಗುರುವಿನ ಉಪದೇಶದಿಂದ ಮರೆತುಹೋಗಿರುವುದನ್ನು ಜ್ಞಾಪಿಸಿಕೊಳ್ಳುತ್ತಿರುವನೋ ಎಂಬಂತೆ ಸಕಲ ವಿದ್ಯೆಗಳನ್ನೂ ಸುಲಭವಾಗಿ ಕಲಿತುಬಿಟ್ಟನು. ॥೨೭-೨೮॥

ಅವನು ಸಕಲ ಶಸ್ತ್ರ ಮತ್ತು ಶಾಸ್ತ್ರವಿದ್ಯೆಗಳಲ್ಲೂ ನಿಪುಣನಾಗಿ ಭೂಮಂಡಲದಲ್ಲಿ ವಿಶೇಷ ಹೆಸರುವಾಸಿಯನ್ನು ಪಡೆದನು. ಆಗ ಈ ರೀತಿ ಸಕಲ ವಿದ್ಯಾಪಾರಂಗತನಾದ ಮಗನನ್ನು ಕಂಡು ತಂದೆಯು ವಿಶೇಷ ಸಂತೋಷದಿಂದ ಕೂಡಿ

ತಂ ದೃಷ್ಟ್ವಾ ಹರ್ಷತರ್ಷೇಣ ಜಹೃಷೇ ಕೇವಲಂ ಪಿತಾ ।
ತದಾ ತದ್ಭಕ್ತಿಜಿಜ್ಞಾಸುರೀಶ್ವರಸ್ತದ್ಗೃಹಂ ಗತಃ ॥೩೦॥

ಬಭಾರ ಭೈರವಂ ವೇಷಂ ಭೀರೂಣಾಂ ಭಯವರ್ಧನಂ ।
ತದಾ ತಸ್ಯ ಜಟಾಜೂಟೋ ಬಭ್ರುಭಿಶ್ಚಾಲಕಾಚಯೈಃ ॥೩೧॥

ರೇಜುಸ್ತನ್ಯಸ್ತಪುಷ್ಪಾಣಿ ತಿಮಿರೇ ತಾರಕಾ ಇವ ।
ತೃತೀಯಂ ನಯನಂ ತಸ್ಯ ಫಾಲಂ ಪುಂಡ್ರಾಂತರೇ ಸ್ಥಿತಂ ॥೩೨॥

ಸಂಧ್ಯಾರುಣೇ ತದಂಗೇ ತದ್ವ್ಯೋಮ್ನೀವ ತಿಮಿರಂ ಘನಂ ।
ಕಾಲಕಂಠಂ ವ್ಯಾಲಮಾಲಂ ದೀಪ್ತಶೂಲವರಾಯುಧಂ ॥೩೩॥

ಸಂಧ್ಯಾರಕ್ತಾರುಣೇ ನೇತ್ರೇ ವಿವೃತ್ತಾಪಾಂಗಕೇ ತದಾ ।
ವಿವೃತ್ತದಂಷ್ಟ್ರಾಘೋಣಂ ಚ ಜ್ವಲಜ್ಜ್ವಾಲಾಯುತಾನನಂ ॥೩೪॥

ಸಿತಭಸ್ಮಾಂಗರಾಗಂ ಚ ಸರ್ವಾಂಗಧೃತಪುಂಡ್ರಕಂ ।
ಚತುರ್ಭುಜಂ ಭುಜಂಗೋರುಕಂಕಣಂ ಕಿಂಕಿಣೀಕಟಿಂ ॥೩೫॥

---

ಆನಂದಪಟ್ಟನು. ಒಮ್ಮೆ ದಭ್ರುಭಕ್ತನ ಭಕ್ತಿಯನ್ನು ತಿಳಿಯಬೇಕೆಂದು ಈಶ್ವರನು ಯೋಚಿಸಿ ಭಯಶೀಲರಿಗೆ ಹೆದರಿಕೆಯನ್ನುಂಟುಮಾಡುವ ಭೈರವವೇಷವನ್ನು ಧರಿಸಿ ಅವನ ಮನೆಗೆ ಬಂದನು. ॥೨೯-೩೦॥

ಆಗ ಆ ಮಹಾದೇವನ ಜಟಾಭಾರವು ಹೊಂಬಣ್ಣದ ಮುಂಗೂದಲಿನ ರಾಶಿಗಳಿಂದ ಶೋಭಿಸುತ್ತಿದ್ದಿತು. ಅದರಲ್ಲಿ ಮುಡಿದಿರುವ ಹೂಗಳು ಕತ್ತಲೆಯಲ್ಲಿನ ನಕ್ಷತ್ರಗಳಂತೆ ಹೊಳೆಯುತ್ತಿದ್ದವು. ಅವನ ಮೂರನೆಯ ಹಣೆಗಣ್ಣು ಪುಂಡ್ರದ ಮಧ್ಯದಲ್ಲಿ ರಾಜಿಸುತ್ತಿದ್ದಿತು. ಸಂಜೆಗೆಂಪಿನಂತಿರುವ ಅವನ ಅವಯವಗಳಲ್ಲಿ, ಅಂತರಿಕ್ಷದಲ್ಲಿರುವ ಕಾರ್ಮುಗಿಲಿನಂತೆ, ಕೊರಳಲ್ಲಿ ಹಾಲಾಹಲವಿಷಭಕ್ಷಣದಿಂದುಂಟಾದ ಕಪ್ಪುಬಣ್ಣವೂ, ತಾನೇತಾನಾಗಿ ಪ್ರಕಾಶಿಸುತ್ತಿದ್ದ ಸರ್ಪಹಾರವೂ ಕಂಠದಲ್ಲಿ ಶೋಭಿಸುತ್ತಿದ್ದಿತು. ಹೊಳೆಯುತ್ತಿರುವ ಉತ್ತಮವಾದ ಶೂಲಾಯುಧವನ್ನು ಕೈಯ್ಯಲ್ಲಿ ಧರಿಸಿದ್ದನು. ॥೩೧-೩೨-೩೩॥

ಸಂಜೆಗೆಂಪಿಗೆ ಸಮಾನವಾದ ಅವನ ಕಣ್ಣುಗಳು ವಿಶಾಲವಾದ ತುದಿಗಣ್ಣಿನ ದೃಷ್ಟಿಯಿಂದ ತೋರುತ್ತಿದ್ದವು. ದೊಡ್ಡ ದವಡೆಹಲ್ಲೂ, ಮೂಗೂ, ಪ್ರಜ್ವಲಿಸುತ್ತಿರುವ ಜ್ವಾಲೆಯಂತಿದ್ದ ಮುಖವೂ, ಶುಭ್ರವಾದ ಭಸ್ಮಾಂಗರಾಗವೂ, ಸಕಲಾವಯವ

ವರಾಟಿಕಾಲಸನ್ಮಾಲಾ ಮೇದುರೋದುದರಾವಲಿಂ ।
ಪಾದುಕಾವಿಲಸತ್ಪಾದಂ ಮತ್ತಮಾತಂಗಗಾಮಿನಂ ॥೩೬॥

ಯಾಮಿನೀರಮಣೋತ್ತುಂಗಶೇಖರಾಸ್ಫುರಿತಾಂಗಕಂ ।
ಸ್ಫಾಟಿಕೇ ಕುಂಡಲೇ ಬಿಭ್ರದಸ್ಥಿಹಾರಲಸದ್ಗಲಂ ॥೩೭॥

ಕಂಚುಕೀ ಕಂಚುಕಂ ಬಿಭ್ರತ್ಕಪಾಲಕಲಿತಾಶಯಂ ।
ದಕ್ಷಶಿಕ್ಷಿತಹಸ್ತಸ್ಥಡಮರೂದ್ದಾಮಘೋಷವಾನ್ ॥೩೮॥

ಮಂಜುಶಿಂಜಿತಮಂಜೀರಪರಿಶೋಭಿಪದಾಂಬುಜಃ ।
ದಿವ್ಯೋಪನಿಷದಸ್ತಸ್ಯ ಪಾದನೂಪುರತಾಂ ಯಯುಃ ॥೩೯॥

ತದ್ಧ್ವನಿಃ ಪಾಥಲಗ್ನಾನಾಂ ತಾಸಾಂ ಸ್ತುತಿರಿವಾಬಭೌ ।
ಏವಂ ತದಭ್ರುಭಕ್ತಸ್ಯ ದ್ವಾರಮಾಗಾತ್ಸ ಭೈರವಃ ॥೪೦॥

---

ಗಳಿಗೂ ಧರಿಸಿಕೊಂಡಿರುವ ತ್ರಿಪುಂಡ್ರಗಳೂ ವಿರಾಜಿಸುತ್ತಿದ್ದವು. ನಾಲ್ಕು ತೋಳುಗಳುಳ್ಳವನಾಗಿ ದೊಡ್ಡ ಸರ್ಪವನ್ನೇ ಕಂಕಣವನ್ನಾಗಿ ಮಾಡಿಕೊಂಡು ಗೆಜ್ಜೆಗಳನ್ನು ಸೊಂಟದಲ್ಲಿ ಧರಿಸಿದ್ದನು. ||೩೪-೩೫||

ಕವಡೆಗಳಿಂದ ಶೋಭಿಸುತ್ತಿರುವ ಮಾಲೆಯು ಪರಶಿವನ ವಿಶಾಲವಾದ ವಕ್ಷಸ್ಥಳದಲ್ಲಿ ವಿರಾಜಿಸುತ್ತಿದ್ದಿತು. ಅವನು ಕಾಲುಗಳಿಗೆ ಪಾದುಕೆಗಳನ್ನು ಹಾಕಿಕೊಂಡು ಮದಗಜದಂತೆ ನಡೆಯುತ್ತಿದ್ದನು. ಚಂದ್ರಕಲೆಯೆಂಬ ಎತ್ತರವಾದ ಶಿರಸ್ಸಿನ ಆಭರಣದಿಂದ ಇವನ ದೇಹವು ಸ್ಫುರಿಸುತ್ತಿದ್ದಿತು. ಸ್ಫಟಿಕಮಯವಾದ ಕುಂಡಲಗಳನ್ನು ಧರಿಸಿ ಮೂಳೆಯ ಹಾರದಿಂದ ಕೊರಳು ವಿರಾಜಿಸುತ್ತಿದ್ದಿತು. ||೩೬-೩೭||

ಕವಚವನ್ನು ಧರಿಸಿ, ಕೈಯ್ಯಲ್ಲಿ ಕಪಾಲವನ್ನು ಹಿಡಿದು, ದಕ್ಷಬ್ರಹ್ಮನನ್ನು ನಿಗ್ರಹಿಸಿದ ಸಮಯದಲ್ಲಿ ಹಿಡಿದಿದ್ದ ಡಮರುಗಪಾಣಿಯಾಗಿ, ಗಂಭೀರವಾಗಿ ಘೋಷ ಮಾಡುತ್ತಾ, ಮನೋಹರವಾದ ಕಾಲ್ಗಡಗಗಳ ಧ್ವನಿಗಳಿಂದ ಶೋಭಿಸುತ್ತಿರುವಅಡಿದಾವರೆಯುಳ್ಳವನಾಗಿರಲು, ದಿವ್ಯವಾದ ಉಪನಿಷತ್ತುಗಳೇ ಆಗ ಆ ಪರಶಿವನ ಕಾಲ್ಗಡಗಗಳಾಗಿದ್ದವು. ಕಾಲಿಗೆ ಹಾಕಿಕೊಂಡಿರುವ ಅವುಗಳ ಧ್ವನಿಯು ಉಪನಿಷತ್ತುಗಳ ಸ್ತೋತ್ರದಂತೆ ಕಂಗೊಳಿಸುತ್ತಿತ್ತು; ಈ ರೀತಿ ವೇಷಧರಿಸಿಕೊಂಡು ಈಶ್ವರನು ಭೈರವರೂಪದಿಂದ ಆ ದಭ್ರುಭಕ್ತನ ಮನೆಯ ಬಾಗಿಲಿಗೆ ಬಂದನು. ||೩೮-೩೯-೪೦||

ಕುರ್ವನ್ನಭೈರವಂ ನಾದಂ ದಭ್ರಭಕ್ತಃ ಕ್ವ ತಿಷ್ಠತಿ ।
ಇತ್ಯಪೃಚ್ಛತ್ತದಾ ಘೋರಾರಾವಸಾದಿತ ದಿಙ್ಮುಖಃ ॥೪೧॥

॥ ಭೈರವ ಉವಾಚ ॥

ಅವಿಮುಕ್ತಾದಹಂ ಪ್ರಾಪ್ತೋ ದಭ್ರಭಕ್ತಸ್ಯ ವೈಗೃಹಂ ।
ಇತಿ ಗೀತಸ್ಯ ಶುಶ್ರಾವ ತದಾ ತದ್ಗೃಹಿಣೀ ಹಿತಾ ॥೪೨॥

ಸಮಾಹಿತಾ ದ್ವಾರದೇಶಮುಗಾತ್ಪ್ರಾಂಜಲಿರಬ್ರವೀತ್ ॥೪೩॥

॥ ಸತ್ಯುವಾಚ ॥

ಧನ್ಯಾಂ ತ್ವದಾಗಮನತೋ ಮಾನ್ಯಾಂ ಮನ್ಯೇ ಜಗತ್ತ್ರಯೇ ।
ಭಕ್ತಾನ್ವಿಶಿಷ್ಟಾನನ್ವೇಷ್ಟುಂ ಗತವಾನ್ಗೃಹವಾನಿಹ ॥೪೪॥

ಘಟಿಕಾಮಾತ್ರಮಾಸ್ವೇದಂ ವಿಷ್ಟರಂ ತ್ವಂ ಪ್ರತೀಕ್ಷ್ಯ ವೈ ।
ಅದೃಷ್ಟಪೂರ್ವಂ ತ್ವಾಂ ದೃಷ್ಟ್ವಾ ಪ್ರಹೃಷ್ಟಶ್ಚ ಭವಿಷ್ಯತಿ ॥೪೫॥

ಅದಭ್ರಹರ್ಷವರ್ಷೇಣ ಮದ್ಭರ್ತಾ ದಭ್ರಭಕ್ತಕಃ ।
ಇತ್ಯುಕ್ತಸ್ತಾಂ ಹರಃ ಪ್ರಾಹ ಗಿರಾ ಸಂಹರ್ಷಯನ್ನಿವ ॥೪೬॥

---

ಭಯಂಕರವಾಗಿ ಶಬ್ದಮಾಡುತ್ತಾ, ಆ ದಭ್ರಭಕ್ತನೆಲ್ಲಿರುವನು; ಎಂದು ಕೇಳಿಕೊಂಡು ತನ್ನ ಭಯಂಕರನಾದದಿಂದ ದಿಗಂತವನ್ನೆಲ್ಲಾ ನಡುಗಿಸುತ್ತಾ ಆ ಭೈರವನು, ನಾನು ಅವಿಮುಕ್ತಕ್ಷೇತ್ರದಿಂದ ದಭ್ರಭಕ್ತನ ಮನೆಗೆ ಬಂದಿರುವೆನು ಎಂದು ಕೂಗಿದನು. ಆಗ ಆ ದಭ್ರಭಕ್ತನ ಹಿತಚಿಂತಕಳಾದ ಪತ್ನಿಯು ಈ ನಾದವನ್ನು ಸಾವಧಾನವಾಗಿ ಕೇಳಿ, ಬಾಗಿಲಿಗೆ ಬಂದು ಕೈಮುಗಿದುಕೊಂಡು ಇಂತೆಂದಳು. ॥೪೧-೪೨-೪೩॥

ಸ್ವಾಮಿ! ತಮ್ಮ ಆಗಮನದಿಂದ ಮೂರುಲೋಕಗಳಲ್ಲಿಯೂ ನಾವೇ ಧನ್ಯರು, ನಾವೇ ಮಾನ್ಯರು ಎಂದು ಭಾವಿಸುವೆವು. ಮನೆಯ ಯಜಮಾನರು ಶ್ರೇಷ್ಠರಾದ ಈಶ್ವರಭಕ್ತರನ್ನು ಹುಡುಕಿ ಕರೆತರಲು ಇಲ್ಲಿಂದ ಹೊರ ಹೋಗಿರುವರು. ಒಂದು ಗಳಿಗೆಮಾತ್ರ ಈ ಆಸನದಲ್ಲಿ ವಿಶ್ರಮಿಸಿ ನಿರೀಕ್ಷಿಸಿರಿ; ನನ್ನ ಸ್ವಾಮಿಯಾದ ದಭ್ರಭಕ್ತನು ಹಿಂದೆ ಯಾವಾಗಲೂ ಕಾಣದಿರುವ ನಿಮ್ಮನ್ನು ಕಂಡು ಸಂತುಷ್ಟ

॥ ಭೈರವ ಉವಾಚ ॥

ಪ್ರವೇಷ್ಟುಂ ನ ಭವೇದ್ಯುಕ್ತಂ ಗೃಹಿಣಾ ರಹಿತಂ ಗೃಹಂ ।
ಇತ್ಯುಕ್ತ್ವಾ ಸಾ ತದಾ ಧಾತ್ರೀವೃಕ್ಷಮೂಲಮುಪಾಗತಃ ॥೪೭॥

ದಭ್ರಭಕ್ತೋಽಪಿ ಭವನಂ ಪ್ರಾಪ್ಯ ಪ್ರಾಹ ಚ ಗೇಹಿನೀಂ ।
ಶ್ರಮೇಣ ಮಹತಾನ್ವಿಷ್ಟೋ ಭೋಕ್ತುಂ ಭಕ್ತಾನ್ಮಹೇಶಿತುಃ ॥೪೮॥

ಕಿಂ ಕರೋಮಿ ನ ಭೋಕ್ಷ್ಯೇಽಹಂ ದುರದೃಷ್ಟಂ ಮಮೇದೃಶಂ ।
ಭರ್ತಾರಂ ವ್ಯಥಯಾ ದೀನಂ ಏವಂ ಪ್ರಾಹಾಥ ಗೇಹಿನೀ ॥೪೯॥

॥ ಗೃಹಿಣೀ ಉವಾಚ ॥

ಅದೃಷ್ಟಪೂರ್ವೋ ಭಕ್ತೋಽತ್ರ ಧಾತ್ರೀಮೂಲಮುಪಾಗತಃ ।
ಅದ್ಯ ಯಾತಿ ಗೃಹೀ ಚೇತಿ ಯಾಚಿತೋಽಭ್ಯರ್ಣಮಾಗತಃ ॥೫೦॥

ಇತೀರಿತೋ ದಭ್ರಭಕ್ತಃ ಕೃತಾರ್ಥೋಽಸ್ಮೀತಿ ಹರ್ಷಿತಃ ॥೫೧॥

---

ನಾಗಿ, ಅಪರಿಮಿತವಾದ ಸಂತೋಷವೃಷ್ಟಿಯನ್ನೇ ಕರೆಯುವನೆಂದು, ಮಾತಿನಿಂದಲೇ ಸಂತೋಷವನ್ನುಂಟುಮಾಡುವಂತಿರುವ ಮಾತುಗಳನ್ನು ಆ ದಭ್ರಭಕ್ತನ ಹೆಂಡತಿಯು ಹೇಳಲು ಅದನ್ನು ಕೇಳಿ ಆ ಭೈರವನು ಇಂತೆಂದನು. ॥೪೪-೪೫-೪೬॥

ಆಗ ಭೈರವನು, ಎಲೌ, ಯಜಮಾನನಿಲ್ಲದ ಮನೆಯನ್ನು ಪ್ರವೇಶಮಾಡುವುದು ಯುಕ್ತವಲ್ಲವೆಂದು ಹೇಳಿ, ಆಗ ಅಲ್ಲಿಯೇ ಪಕ್ಕದಲ್ಲಿದ್ದ ನೆಲ್ಲೀಮರದ ಬುಡಕ್ಕೆ ಹೋದನು. ಇತ್ತ ಆ ದಭ್ರಭಕ್ತನಾದರೋ ಮನೆಗೆ ಹಿಂತಿರುಗಿ ಬಂದು ಹೆಂಡತಿಗೆ ಇಂತೆಂದನು. ಪ್ರಿಯೇ, ಮಹೇಶಭಕ್ತರನ್ನು ಭೋಜನಕ್ಕೆ ಕರೆತರಬೇಕೆಂದು ಎಷ್ಟೋ ಶ್ರಮಪಟ್ಟೆನು. ಆದರೆ ಯಾರೂ ದೊರೆಯಲಿಲ್ಲ, ಏನುಮಾಡಲಿ. ಇಂದು ನಾನು ಊಟವನ್ನೇ ಮಾಡುವುದಿಲ್ಲ. ಇದು ನನ್ನ ದುರದೃಷ್ಟವೆಂದು ವ್ಯಥೆಯಿಂದ ಬಳಲುತ್ತಿರುವ ಪತಿಯನ್ನು ಕುರಿತು, ಅವನ ಹೆಂಡತಿಯು ಇಂತೆಂದಳು. ॥೪೭-೪೮-೪೯॥

ಸ್ವಾಮಿ, ಹಿಂದೆ ನಾವು ನೋಡದಿರುವಂತಹ ಶೈವಶ್ರೇಷ್ಠನು ಈ ನೆಲ್ಲಿಮರದ ಬುಡದಲ್ಲಿ ಬಂದಿದ್ದಾನೆ. ಮೊದಲು ಇಲ್ಲಿಗೇ ಬಂದು, ಕೊಂಚ ನಿರೀಕ್ಷಿಸಿ ಈ ಕೂಡಲೇ ಯಜಮಾನರು ಬರುತ್ತಾರೆಂದು ನಾನು ಹೇಳಲು, ಈ ಸಮೀಪದಲ್ಲಿಯೇ ನಿಂತಿರು

॥ ಭಕ್ತ ಉವಾಚ ॥

ತ್ವಯಾಽಹಂ ಗೃಹವಾನಸ್ಮಿ ಸ ಕುತ್ರಾಸ್ತೇ ವದಸ್ವ ಮೇ ।
ಸಾ ತದಾ ಪ್ರಾಹ ಭರ್ತಾರಂ ಹೃಷ್ಟಂ ಹೃಷ್ಟತರಾ ಸತೀ ॥೫೨॥

॥ ಗೃಹಿಣ್ಯುವಾಚ ॥

ಅಥಾಸ್ತೇ ಧಾತಕೀಮೂಲಮೂಲೇ ಶಿವಭಕ್ತೋ ಮಹಾಮುನಿಃ ।
ಇತ್ಯುಕ್ತಸ್ತ್ವರಯಾ ಯುಕ್ತೋ ಪ್ರಾಪ್ಯ ತಂ ಪ್ರಣತಃ ಸ್ಥಿತಃ ॥೫೩॥
ಭಕ್ತ್ಯಾ ನಮ್ರಂ ತಮಾಲೋಕ್ಯ ಸಸ್ಮಿತೇನ ಮುಖೇನ ಸಃ ।
ಹರ್ಷನಿರ್ಭರಯಾ ವಾಚಾ ತಮುವಾಚಾಭ್ರಭಕ್ತಕಂ ॥೫೪॥

॥ ಭೈರವ ಉವಾಚ ॥

ಮಹಾಂಸ್ತ್ವಂ ದಭ್ರಭಕ್ತಸ್ತು ವಿಶ್ರುತೋ ಮಚ್ಛ್ರುತೌ ಪುರಾ ।
ದರ್ಶಿತಾ ಕೃತ್ರಿಮಾ ಭಕ್ತಿರ್ವಾಚಾ ತೇಽದ್ಯಾತಿಹರ್ಷತಃ ॥೫೫॥

---

ತ್ತಾನೆ ಎಂದು ನುಡಿಯಲು ಆಗ ಆ ದಭ್ರಭಕ್ತನು ತಾನು ಕೃತಕೃತ್ಯನಾದನೆಂದು ಸಂತುಷ್ಟನಾದನು. ॥೫೦-೫೧॥

ಎಲೌ ಪ್ರಿಯೇ, ನಿಜವಾಗಿಯೂ ನಿನ್ನಿಂದ ನಾನು ಈಗ ಗೃಹಸ್ಥನೆನಿಸಿದೆನು. ಆ ಭಕ್ತನೆಲ್ಲಿರುವನು ನನಗೆ ಹೇಳೆಂದು ಕೇಳಲು, ಆಗ ಪತಿವ್ರತೆಯಾದ ಅವಳು ಸಂತುಷ್ಟನಾದ ತನ್ನ ಗಂಡನಿಗೆ ಸಂತೋಷದಿಂದ ಇಂತೆಂದಳು—ಸ್ವಾಮಿ, ಆ ಮಹಾಮುನಿಯು ಈ ನೆಲ್ಲಿಮರದ ಬುಡದಲ್ಲಿರುವನು ಎಂದು ಹೇಳಿದಳು. ಆ ಮಾತನ್ನು ಕೇಳಿ, ಜಾಗ್ರತೆಯಾಗಿ ಅಲ್ಲಿಗೆ ಹೋಗಿ ವಿನೀತನಾಗಿ ಅಲ್ಲಿ ನಿಂತುಕೊಂಡನು. ॥೫೨-೫೩॥

ಭಕ್ತಿಯಿಂದ ವಿನೀತನಾಗಿ, ಮಂದಹಾಸವನ್ನು ಸೂಸುತ್ತಿರುವ ಮುಖವನ್ನು ಬಾಗಿಸಿ, ನಿಂತುಕೊಂಡಿರುವ ಆ ದಭ್ರಭಕ್ತನನ್ನು ನೋಡಿ ಭೈರವನು ಹರ್ಷಭರಿತವಾದ ಮಾತುಗಳಿಂದ ಇಂತೆಂದನು—ಎಲೈ ದಭ್ರಭಕ್ತನೇ, ನೀನು ದೊಡ್ಡವನೆಂದು ಹಿಂದೆ ಪ್ರಸಿದ್ಧಿಗೆ ಬಂದಿದ್ದುದನ್ನು ನಾನು ಕೇಳಿದ್ದೆನು. ಆದರೆ ಈಗ ವಿಶೇಷ ಸಂತೋಷಯುಕ್ತವಾದ ಮಾತುಗಳಿಂದ ನಿನ್ನ ಕಪಟಭಕ್ತಿಯು ಗೊತ್ತಾಯಿತು. ಇದು ನೈಜವಾದ ಭಕ್ತಿಶ್ರದ್ಧೆಗಳಲ್ಲ. ॥೫೪-೫೫॥

ಗಮಿಷ್ಯಾಮಿ ಯಥಾಜೋಷಂ ದೃಷ್ಟ್ವೋಽಸ್ಯತ್ರ ವಿಶೇಷತಃ ।
ಇತ್ಯುಕ್ತವಂತಂ ತಂ ಪ್ರಾಪ್ಯ ಪ್ರಣಮ್ಯ ಪದಮೀಶಿತುಃ ॥೫೬॥
ದೇವದೇವ ದಯಾಶ್ಲಿಷ್ಟೋ ದಭ್ರಭಕ್ತೋಽಸ್ಯಭಾಷತ ॥೫೭॥

॥ ದಭ್ರಭಕ್ತ ಉವಾಚ ॥

ನ ಕಶ್ಚಿದದ್ಯ ದೃಷ್ಟೋಽತ್ರ ಭಕ್ತೋ ಭೋಕ್ತುಂ ಮಮಾಲಯೇ ।
ಮದ್ಭಾಗಧೇಯಾದ್ಭಗವಾನಾಗತೋ ಭೋಕ್ತುಮರ್ಹಸಿ ॥೫೮॥
ತೇನ ಧನ್ಯೋಽಸ್ಮಿ ಲೋಕೇಷು ಮಾನ್ಯೋಽಸ್ಮಿ ನಿತರಾಂ ವಿಭೋ॥೫೯॥

॥ ಭೈರವ ಉವಾಚ ॥

ಅಸ್ಮದ್ಯಥೇಪ್ಸಿತಾಹಾರೋ ತ್ವಯಾ ದಾತುಂ ನ ಶಕ್ಯತೇ ।
ತ್ವಯಾಲೋಕನತೋ ಹೃಷ್ಟೋ ಗಚ್ಛ ಭಕ್ತ ಯಥಾಸುಖಂ ॥೬೦॥
ಇತ್ಯುಕ್ತೋಽಥ ಪ್ರಣಮ್ಯಾಸೌ ಪ್ರಾಹ ಪ್ರೀತೇನ ಚೇತಸಾ ॥೬೧॥

---

ಇಲ್ಲಿ ನಿನ್ನನ್ನು ದರ್ಶನಮಾಡಿದ್ದು ಮಾತ್ರ ಸಾಕು ಎಂದು ನನಗೆ ತೋರುತ್ತಿದೆ. ಆದ್ದರಿಂದ ಇನ್ನು ನನ್ನ ಮನಸ್ಸುಬಂದಂತೆ ಹೋಗುತ್ತೇನೆಂದು ಹೇಳಲು, ಆ ರೀತಿ ನುಡಿದ ಭೈರವರೂಪಿಯು ಬಳಿಗೆ ಹೋಗಿ ಈಶ್ವರನ ಪಾದಗಳಿಗೆ ನಮಿಸಿ, ದೇವಾದಿ ದೇವನ ಕರುಣಾಶ್ರಿತನಾದ ಆ ದಭ್ರಭಕ್ತನು ಹೀಗೆ ಮಾತನಾಡಿದನು. ||೫೬-೫೭||

ಸ್ವಾಮಿ, ಇಂದು ನನ್ನ ಮನೆಯಲ್ಲಿ ಭೋಜನಮಾಡಲು ಯಾವ ಶೈವ ವರ್ಯನೂ ಕಾಣಲಿಲ್ಲ. ಈಗ ನನ್ನ ಅದೃಷ್ಟವಿಶೇಷದಿಂದಲೇ ತಾವು ಆಗಮಿಸಿರುವಿರಿ. ಆದ್ದರಿಂದ ತಾವು ದಯಮಾಡಿಸಿ ಭೋಜನಮಾಡಬೇಕು. ವಿಭೋ, ಅದರಿಂದ ಲೋಕಗಳಲ್ಲಿ ನಾನೇ ಪೂರ್ಣ ಧನ್ಯನಾಗುವೆನೆಂದು ಅತಿ ವಿನಯದಿಂದ ದಭ್ರಭಕ್ತನು ನುಡಿದನು. ||೫೮-೫೯||

ಅಯ್ಯ ದಭ್ರಭಕ್ತನೇ, ನಮಗೆ ಇಷ್ಟವಾದ ಆಹಾರವನ್ನು ನಿನ್ನಿಂದ ಕೊಡಲು ಸಾಧ್ಯವಿಲ್ಲವಾದ್ದರಿಂದ ನಿನ್ನ ದರ್ಶನಮಾತ್ರದಿಂದಲೇ ನಾನು ಸಂತುಷ್ಟ ನಾದೆನು. ಎಲೈ ಭಕ್ತನೇ, ನೀನು ಸುಖವಾಗಿ ಹಿಂತಿರುಗೆಂದು ಹೇಳಲು, ಆ ಮಾತುಗಳನ್ನು ಕೇಳಿ ದಭ್ರಭಕ್ತನು ಭೈರವನಿಗೆ ನಮಸ್ಕಾರಮಾಡಿ, ಪ್ರೀತಿಯುಕ್ತ ಮನದಿಂದ ಹೀಗೆಂದನು. ||೬೦-೬೧||

॥ ಭಕ್ತ ಉವಾಚ ॥

ಆಹಾರಸ್ಯ ಕ್ರಮಂ ಬ್ರೂಹಿ ಸೋಽಹಂ ತೇ ಕರ್ತುಮುತ್ಸಹೇ ।
ಭವಾನೀಪತಿಭಕ್ತೇಷು ಸಂಪ್ರಾಪ್ತೇಷು ಮಹಾತ್ಮಸು ॥೬೨॥

ಅಪ್ರಾಪ್ಯಂ ಚ ಭವೇತ್ಪ್ರಾಪ್ಯಂ ನ ಕಿಮಪ್ಯತ್ರ ದುಷ್ಕರಂ ।
ಇತಿ ತಾಂ ಗಿರಮಾಕರ್ಣ್ಯ ಭಕ್ತಂ ಪ್ರತ್ಯಾಹ ಭೈರವಃ ॥೬೩॥

॥ ಶ್ರೀ ಭೈರವ ಉವಾಚ ॥

ಓದನಂ ಭುಜ್ಯತೇಽಸ್ಮಾಭಿರ್ನರಮಾಂಸೋದನಂ ಸದಾ ।
ಅತಸ್ತ್ವಯಾ ನ ಶಕ್ಯೇತ ನರಮಾಂಸೋಪಪಾದನಂ ॥೬೪॥

ಇತಿ ತಂ ಭೈರವವಚೋಭೀಷಣಂ ಶುಶ್ರುವೇ ತದಾ ॥೬೫॥

॥ ಭಕ್ತ ಉವಾಚ ॥

ಸಂಪಾದಯಿಷ್ಯೇಽತಿತರಾಮಾಹಾರಂ ತಾದೃಶಂ ವಿಭೋ ।
ತೇನೇರಿತೋಽಥ ವೈ ಪ್ರಾಹ ಭೋಜ್ಯೋ ನರಪಶುರ್ಯದಿ ॥೬೬॥

---

ಶೈವಪುಂಗವನೇ, ನಿಮ್ಮ ಆಹಾರಕ್ರಮವನ್ನು ತಿಳಿಸೋಣವಾಗಲಿ, ಅದರಂತೆ ಸಿದ್ಧಮಾಡಲು ಉತ್ಸುಕನಾಗಿರುವೆನು. ಮಹಾತ್ಮರಾದ ಶೈವರು ಬಂದಿರುವಾಗ ಸಾಮಾನ್ಯವಾಗಿ ದೊರೆಯದಿದ್ದ ಮಹಾವಸ್ತುವೂ ಅತಿ ಸುಲಭವಾಗಿಯೇ ದೊರೆಯುವುದು. ಯಾವುದೂ ಕಷ್ಟವಾಗುವುದಿಲ್ಲವೆಂದು ನುಡಿದ ದಭ್ರಭಕ್ತನ ಮಾತನ್ನು ಕೇಳಿ ಭೈರವನು ನಸುನಗುತ್ತಾ, ॥೬೨-೬೩॥

ಅಯ್ಯ ದಭ್ರಭಕ್ತನೇ, ನಾವು ಯಾವಾಗಲೂ ನರಮಾಂಸವನ್ನು ಊಟ ಮಾಡತಕ್ಕವರು. ಆದ್ದರಿಂದ ನಿನಗೆ ಅಂತಹ ಮನುಜಮಾಂಸ ಸಂಪಾದನೆಯು ಅಶಕ್ಯವಾಗುವುದೆಂದು ಭೈರವನು ನುಡಿಯಲು, ಭಯಂಕರವಾದ ಆ ಭೈರವನ ಮಾತನ್ನು ದಭ್ರಭಕ್ತನು ಕೇಳಿ ಆಗ ಇಂತೆಂದನು. ॥೬೪-೬೫॥

ಪ್ರಭುವೇ, ಶ್ರೇಷ್ಠತರವಾದ ಅಂತಹ ಆಹಾರವನ್ನೇ ನಿನಗೋಸ್ಕರ ಸಂಪಾದಿಸಿ ಕೊಡುವೆನು, ಎಂದು ಹೇಳಿ ಸ್ವಲ್ಪ ಹೊತ್ತು ಯೋಚಿಸಿ ಭೈರವಭಕ್ತನು, ಭೋಜನ ವಸ್ತುವು ನರಪಶುವೇ ಆಗಿರಬಹುದೆ? ಎನಲು, ಅದು ಐದು ವರ್ಷ ವಯಸ್ಸಿನದಾಗಿ

ಸ ಪಂಚವರ್ಷದೇಶೀಯಃ ಸರ್ವೇಷ್ವಂಗೇಷ್ವನಿಂದಿತಃ ।
ತ್ವತ್ಪುತ್ರಲಕ್ಷಣೋಪೇತೋ ಯದಿ ಭೋಜ್ಯೋ ಭವೇನ್ಮಮ ॥೬೭॥

ಬಾಲಸ್ತೇ ಪಂಚವರ್ಷೀಯಃ ಏಕಪುತ್ರಃ ಸುಲಕ್ಷಣಃ ।
ಭೋಜನೇ ಯದಿ ಮೇ ಲಭ್ಯೋ ತದಾ ಭೋಕ್ತಾಸ್ಮಿ ತೇ ಗೃಹೇ ॥೬೮॥

ಮಾತಾಪಿತೃಭ್ಯಾಂ ಹರ್ಷೇಣ ವಿಶಾಸ್ಯೋ ನಿತರಾಂಸುತಃ ।
ಇತ್ಥಂ ತೇನೇರಿತೋ ಭಕ್ತಃ ಪುಲಕಾಂಕುರಭೂಷಣಃ ॥೬೯॥

ತಥಾ ಕರಿಷ್ಯೇ ಇತ್ಯುಕ್ತ್ವಾ ನಿರ್ಜಗಾಮಾಥ ಗೇಹಿನೀಂ ।
ಅಭ್ರಭಕ್ತಃ ಸ ತಾಂ ಪ್ರಾಹ ಭದ್ರೇ ದೇಹಿ ಮಹಾಧನಂ ॥೭೦॥

ತಂ ತಾದೃಶಂ ನರಪಶುಂ ಕ್ರೇತುಂ ಯಾಮಿ ಪುರೀಮಿತಿ ।
ವಿಚಿಂತ್ಯ ಸಾ ವಿಹಸ್ಯಾಹ ಸ್ವಾರಾಮೇ ವ್ಯಂಜನೇ ಸ್ಥಿತೇ ॥೭೧॥

ಕಿಮಾಪಣೇಷು ಗಚ್ಛಂತಿ ಕಥಂ ನಾಮೋಪಪದ್ಯತೇ ।
ವಿಕ್ರೀಯಾಪಿ ಸುತಂ ಕಿಂ ನಾ ಪಿತರೌ ಖಂಡಯಿಷ್ಯತಃ ॥೭೨॥

---

ಎಲ್ಲಾ ಅವಯುವಗಳೂ ದೋಷರಹಿತಗಳಾಗಿರಬೇಕು. ನಿನ್ನ ಮಗನ ಲಕ್ಷಣವುಳ್ಳ ಐದು ವರ್ಷ ವಯಸ್ಸಿನ ಸುಲಕ್ಷಣವಾದ ಒಬ್ಬನೇ ಮಗನು ನನಗೆ ಆಹಾರವಾಗುವುದಾದರೆ ಆಗನಾನು ನಿನ್ನ ಮನೆಯಲ್ಲಿ ಊಟಮಾಡುತ್ತೇನೆಂದು ಭೈರವನು ಪುನಃ ಹೇಳಿದನು. ॥೬೬-೬೭-೬೮॥

ಆ ತಾಯಿತಂದೆಗಳಿಂದ ವಿಶೇಷವಾಗಿ ತಮ್ಮ ಮಗನೇ ಕೊಲ್ಲಲ್ಪಡಲೆಂಬ ಭಾವನೆಯಿಂದ ಭೈರವನಿಂದ ಹೇಳಲ್ಪಟ್ಟ ಆ ದಭ್ರಭಕ್ತನು, ರೋಮಾಂಚಿತಗಾತ್ರನಾಗಿ ಹಾಗೆಯೇ ಮಾಡುತ್ತೇನೆಂದು ಭೈರವನಿಗೆ ಪ್ರೀತಿವಚನವಿತ್ತು ಮನೆಗೆ ಬಂದು, ಹೆಂಡತಿಯೊಡನೆ ಮಂಗಳಾಂಗಿ, ಅಪಾರವಾದ ಹಣವನ್ನು ಕೊಡು, ಆ ಭೈರವನು ಹೇಳಿದಂತಹ ನರಪ್ರಾಣಿಯನ್ನು ಕೊಂಡು ತರಲು ಪಟ್ಟಣಕ್ಕೆ ಹೋಗುವೆನೆಂದು ಧೈರ್ಯವಾಗಿ ಹೇಳಿದನು. ॥೬೯-೭೦॥

ಸ್ವಲ್ಪ ಯೋಚಿಸಿ ಪತ್ನಿಯು ನಕ್ಕು, ನಮ್ಮ ಉದ್ಯಾನ ವನದಲ್ಲೇ ಬೇಕಾದ ಪರಿಕರಗಳಿರುವಾಗ, ಅಂಗಡಿಗೆ ಹೋಗುವ ಅಗತ್ಯವೇನಿದೆ? ಅಥವಾ ನೀವು

ಅಥವಾ ಧನಲೋಭೇನ ಸುತಂ ಚೇತ್ಖಂಡಯಿಷ್ಯತಃ ।
ಕಥಂ ಪ್ರಮುದಿತಾತ್ಮಾನೌ ಸ್ಯಾತಾಂ ತತ್ಪಿತರೌ ಭುವಿ ॥೭೩॥

ಇದಂ ಚಾಘಟನಂ ಮನ್ಯೇ ಯತ್ಕುಲಾಂಕುರವಿಕ್ರಯಃ ।
ತಸ್ಮಾಚ್ಛೀಲಾಲನಾಮಾನಂ ಪ್ರಿಯಂ ಪುತ್ರಂ ಸಮಾನಯ ॥೭೪॥

ತನೋರಾವಾಂ ವಿಶಸ್ಯಾಥ ಹರ್ಷಾದ್ಭೈರವಪಾರಣಾಂ ।
ಸಾಕಲ್ಯಂ ಪುತ್ರವತ್ತ್ವಾ ಯಾ ಸಹಸಾ ಪ್ರಾಪ್ಸ್ಯತಾಮಿತಿ ॥೭೫॥

ಆದಾಯಾಕ್ಷರಶಾಲಾತೋ ಬಾಲಂ ಬಾಲಶಶಿಪ್ರಭಂ ।
ನೀಲಾಲಕಂ ಭೂಷಣಾಢ್ಯಂ ಸ ದದೌ ಹರಿಣೀದೃಶೇ ॥೭೬॥

ಅನಂಗಮಿವ ಲಬ್ಧಾಂಗಂ ಜಯಂತಮಿವ ಭೂಗತಂ ।
ಸಾಪಿ ಹರ್ಷಾತ್ಸ್ನುತಕುಚಾ ತಮಾದಾಯ ಮಹಾನಸೇ ॥೭೭॥

---

ಹೇಳುವುದು ಹೇಗೆ ತಾನೆ ಸರಿಹೋಗುತ್ತದೆ? ಮಗನನ್ನು ಮಾರಿದರೂ ಯಾವ ತಂದೆತಾಯಿಗಳು ತಾನೆ ಕೊಲ್ಲಲು ಅನುಮತಿಕೊಡುತ್ತಾರೆ? ಅಥವಾ ದುಡ್ಡಿನಾಸೆಯಿಂದ ಮಗನನ್ನು ಒಂದುವೇಳೆ ಕತ್ತರಿಸಿದರೂ, ಹೇಗೆತಾನೇ ಆ ತಂದೆತಾಯಿಗಳು ಭೂಮಿಯಲ್ಲಿ ಸಂತುಷ್ಟರಾಗಿ ಬದುಕುತ್ತಾರೆ? ॥೭೧-೭೨-೭೩॥

ವಂಶಕ್ಕೆ ಮೊಳಕೆಯಂತಿರುವ ಮಗನ ಮಾರುವಿಕೆಯೇ ಪ್ರಪಂಚದಲ್ಲಿ ಅಸಂಭವವೆಂದು ತಿಳಿಯುತ್ತೇನೆ; ಆದ್ದರಿಂದ ನಮ್ಮ ಪ್ರಿಯಪುತ್ರನಾದ ಶಿಲಾಲನನ್ನೇ ಕರೆದುತನ್ನಿ; ಅವನನ್ನೇ ಕತ್ತರಿಸಿ, ನಾವು ಸಂತೋಷದಿಂದ ಭೈರವನಿಗೆ ತೃಪ್ತಿಪಡಿಸೋಣ; ಪುತ್ರಪ್ರಾಪ್ತಿಗೆ ನಿಜವಾದ ಫಲವು ಸಂಪೂರ್ಣವಾಗಿ ಜಾಗ್ರತೆ ಲಭಿಸಲಿ; ಎಂದು ಹೆಂಡತಿಯು ಹೇಳಲು, ಆ ದಭ್ರಭಕ್ತನು ಅಂತೆಯೇ ಅಕ್ಷರಶಾಲೆಗೆ ಹೋಗಿ ಬಾಲಚಂದ್ರನಂತೆಹೊಳೆಯುತ್ತಾ, ಕಪ್ಪುಮುಂಗುರುಳು, ಮತ್ತು ಅಲಂಕಾರಗಳಿಂದ ಯುಕ್ತನಾಗಿದ್ದ ಆ ಶಿಲಾಲನನ್ನು ಜಿಂಕೆಗಣ್ಣಳಾದ ತನ್ನ ಹೆಂಡತಿಯಕೈಗೆ ಒಪ್ಪಿಸಿದನು. ॥೭೪-೭೫-೭೬॥

ಮನ್ಮಥನಂತೆ ಆಕಾರವನ್ನು ಪಡೆದು, ಭೂಮಿಗೆ ಬಂದಿರುವ ಇಂದ್ರಕುಮಾರನಾದ ಜಯಂತನಂತಿರುವ ಆ ಮಗನನ್ನು ಕಂಡು ಆ ಭಕ್ತನಹೆಂಡತಿಯು ಸಂತೋಷದಿಂದ

ತೈಲೇನಾಭ್ಯಜ್ಯ ಗಂಧಾದ್ಯೈಃ ಸ್ನಾಪಯಿತ್ವಾಂಬುಭಿಃ ಸುತಂ ।
ಭೋಜಯಿತ್ವಾ ತೂಲಿಕಾಯಾಂ ಶಯಾಲುಮುತನೋಚ್ಛನೈಃ ॥೭೮॥

ತಂ ನಿದ್ರಿತಂ ವಿಲೋಕ್ಯಾಥ ದಭ್ರಭಕ್ತೇನ ಸಾ ತದಾ ।
ಉದ್ವೃತ್ತಕ್ರಕಚಂ ದಧ್ರೇ ಭರ್ತ್ರಾ ಸಾ ಹರ್ಷಿತಾಂತರಾ ॥೭೯॥

ಅಂಕೇ ನಿಕ್ಷಿಪ್ಯ ಜನನೀ ಪಾಣಿಪಾದೇ ವ್ಯದಾರಯತ್ ।
ಚಕರ್ತ ಕಂಠಮೇತಸ್ಯ ಚಕರ್ತ ಚರಣೌ ತದಾ ॥೮೦॥

ತ್ವಂ ಭೇತ್ಸೀ(?)ತ್ಕರಮುಚ್ಛೇತ್ಸರ್ವಾಣ್ಯಂಗಾನ್ಯನುಕ್ರಮಾತ್ ।
ವಿಶಸ್ಯಾಂಗಾನಿ ತನ್ಮುಂಡಂ ನಿರಸ್ಯ ಬಹಿರಾದೃತಃ ॥೮೧॥

ಗೃಹೀತ್ವಾ ಶೋಣಿತಂ ಪಾತ್ರೇ ಪಕ್ತುಂ ಪತ್ನೀಕರೇ ದದೌ ।
ಅಪಾಕ್ಷೀತ್ಸಾಪಿ ಜೀರೈಲಾ ಮರೀಚ್ಯಾದಿ ಸುಸಂಸ್ಕೃತಂ ॥೮೨॥

ತಸ್ಯಾಂಗಮಾಜ್ಯಧಾರಾಭಿರ್ನಿಷ್ಪಂದಿಕಮಥಾತನೋತ್ ।
ಅಪಾಕ್ಷೀಚ್ಚತುರಾ ತಸ್ಯ ಶಿಲಾಲಸ್ಯ ಶಿರೋ ಬಹಿಃ ॥೮೩॥

---

ವಾತ್ಸಲ್ಯದಸ್ತನ್ಯವುಳ್ಳವಳಾಗಿ, ಅವನನ್ನು ಅಡಿಗೆಮನೆಗೆ ಕರೆದೊಯ್ದು, ಎಣ್ಣೆ ನೀರೆರೆದು, ಊಟಮಾಡಿಸಿ ಹಾಸಿಗೆಯ ಮೇಲೆ ಪ್ರೀತಿಯಿದ ಮಲಗಿಸಿದಳು. ॥೭೭-೭೮॥

ಹಾಗೆಯೇ ಮಗನು ನಿದ್ದೆಮಾಡುತ್ತಿರುವುದನ್ನು ನೋಡಿ ತಾಯಿಯು ತನ್ನ ಗಂಡನ ಭಯಂಕರವಾದ ಗರಗಸವನ್ನು ತೆಗೆದುಕೊಂಡು ಸಂತೋಷಚಿತ್ತಳಾಗಿ ತೊಡೆಯಮೇಲಿಟ್ಟು ಆ ಮಗುವಿನ ಕೈಕಾಲುಗಳನ್ನು ತಾನೇ ಕೊಯ್ದಳು. ಅನಂತರ ಈ ಮಗುವಿನ ತಲೆಯನ್ನು ಕತ್ತರಿಸಿ, ಕಾಲುಗಳಿಂದ ಬೇರ್ಪಡಿಸಿದಳು. ॥೭೯-೮೦॥

ಆಗ ದಭ್ರಭಕ್ತನು, ಹೆಂಡತಿಗೆ, ನೀನು ಭಯಪಡುವೆಯೆಂದು ಅವಳ ಕೈಯಿಂದ ಆಯುಧವನ್ನು ತೆಗೆದುಕೊಂಡು, ಕ್ರಮವಾಗಿ ಎಲ್ಲಾ ಅವಯವಗಳನ್ನೂ ಕತ್ತರಿಸಿ, ಅವನ ತಲೆಯನ್ನು ಅದರದಿಂದ ಹೊರಗೆ ಇಟ್ಟು, ಅದರ ರಕ್ತವನ್ನೆಲ್ಲಾ ಪಾತ್ರೆಗೆ ತುಂಬಿ, ಪಾಕಮಾಡಲು ಹೆಂಡತಿಯ ಕೈಗೆ ಕೊಟ್ಟನು. ಆಗ ಅವಳು ಅದನ್ನು ತೆಗೆದುಕೊಂಡುಹೋಗಿ, ಜೀರಿಗೆ, ಏಲಕ್ಕಿ, ಮೆಣಸು ಮುಂತಾದ ಸಂಬಾರಗಳಿಂದ ಆ ಮಾಂಸವನ್ನು ಪರಿಷ್ಕಾರವಾಗಿ ಪಾಕಮಾಡಿದಳು. ॥॥೮೧-೮೨॥

ಅವನ ಅವಯವದ ಮಾಂಸಗಳನ್ನೆಲ್ಲಾ ಚೆನ್ನಾಗಿ ತುಪ್ಪದಲ್ಲಿ ಕರಿದಳು. ಅಲ್ಲದೇ ಚತುರಳಾದ ಆ ದಭ್ರಭಕ್ತನ ಹೆಂಡತಿಯು ತನ್ನ ಮಗನ ತಲೆಯಮಾಂಸ

ಗೃಹಿಣೀ ಸ್ಪ್ರಾಹ ಭರ್ತಾರಂ ಶೀಘ್ರಮಾಹೂಯತಾಂ ಹವಿಃ ।
ಭೈರವಾಭಿಮತಂ ಪಕ್ವಂ ಮಾಂಸಂ ತವ ಸುತಸ್ಯ ಹಿ ॥೮೪॥

ತಚ್ಛ್ರುತ್ವಾ ದಭ್ರಭಕ್ತೋಽಪಿ ಪ್ರಣಮ್ಯಾಹೂಯ ಭೈರವಂ ॥೮೫॥

॥ ದಭ್ರಭಕ್ತ ಉವಾಚ ॥

ಸಂಪನ್ನಮನ್ನಂ ಸ್ವಮತಂ ಸ್ಥಿತೋಽಸಿ ಕ್ಷುಧಿತಶ್ಚಿರಂ ।
ವೇಲಾಸೇಯಮತಿಕ್ರಾಂತಾ ಭುಂಕ್ಷ್ವ ಶೀಘ್ರಂ ದಯಾನಿಧೇ ॥೮೬॥

ತ್ವಂ ಸಂಪ್ರಾಪ್ತೋಽಸಿ ಮದ್ಭಾಗ್ಯಾತ್ಸ್ವಾಮಿನ್ನಾಗಚ್ಛತಾಮಿತಿ ॥೮೭॥

ಪ್ರಕ್ಷಾಳ್ಯ ಪಾಣೀಪದಪಂಕಜೇ ತದಾ
ಸ ಭೈರವಸ್ಯಾಥ ಮುದಾಭ್ರಭಕ್ತಃ ।
ಪ್ರಣಮ್ಯ ಭಕ್ತಿಪ್ರವಣಃ ಸ್ವಗೇಹಂ
ಪ್ರವೇಶಯಾಮಾಸ ಚ ಭೈರವಂ ತಂ ॥೮೮॥

---

ವನ್ನು ಹೊರಗಡೆಯಲ್ಲಿ ಬೇಯಿಸಿದಳು. ಇಷ್ಟೆಲ್ಲಾ ಸಿದ್ಧವಾದ ಮೇಲೆ ಹೆಂಡತಿಯು, ಸ್ವಾಮಿ! ಜಾಗ್ರತೆ ಅತಿಥಿಯನ್ನು ಬರಮಾಡಿರಿ, ಆ ಭೈರವಸ್ವಾಮಿಗೆ ಇಷ್ಟವಾದ ನಿನ್ನ ಮಗನಮಾಂಸವು ಪಕ್ವವಾಯಿತೆಂದು ನುಡಿಯಲು, ಆ ದಭ್ರಭಕ್ತನು ಅದನ್ನು ಕೇಳಿ, ಭೈರವದೇವನ ಬಳಿಗೆ ಹೋಗಿ ನಮಸ್ಕಾರಮಾಡಿ ಇಂತೆಂದನು. ॥೮೩-೮೪-೮೫॥

ಸ್ವಾಮಿ! ತಮ್ಮ ಇಷ್ಟದಂತೆ ಅನ್ನವು ಸಿದ್ಧವಾಗಿದೆ; ತಾವು ಬಹಳ ಹೊತ್ತಿನಿಂದ ಹಸಿದಿರುವಿರಿ; ಕಾಲವು ಮೀರುತ್ತಿರುವುದು; ಆದುದರಿಂದ ಎಲೈ ದಯಾಸಾಗರನೇ! ಶೀಘ್ರವಾಗಿ ಭೋಜನಕ್ಕೇಳಿರಿ, ನನ್ನ ಭಾಗ್ಯವಶದಿಂದ ನೀವು ದಯಮಾಡಿಸಿರುವಿರಿ; ಸ್ವಾಮಿ! ಭೋಜನಕ್ಕೆ ದಯಮಾಡಿಸಬೇಕೆಂದು ದಭ್ರ ಭಕ್ತನು ಭೈರವನನ್ನು ಪ್ರಾರ್ಥಿಸಿದನು. ॥೮೬-೮೭॥

ಆಗ ಆ ದಭ್ರಭಕ್ತನು ಸಂತೋಷದಿಂದ ಆ ಭೈರವನ ಕಮಲಸದೃಶವಾದ ಕೈಕಾಲುಗಳನ್ನು ತೊಳೆದು ಭಕ್ತಿಯಿಂದ ನಮಸ್ಕರಿಸಿ, ಆ ಭೈರವನನ್ನು ತನ್ನ ಮನೆಯೊಳಕ್ಕೆ ಕರೆದೊಯ್ದನು ಎಂದು ಜೈಗೀಷವ್ಯಾದಿಗಳಿಗೆ ಕುಮಾರಸ್ವಾಮಿಯು ಹೇಳಿದನು. ॥೮೮॥

ಇತಿ ಶ್ರೀಶಿವರಹಸ್ಯೇ ನವಮಾಂಶೇ ಸದಾಶಿವಾಖ್ಯೇ
ದಭ್ರುಭಕ್ತಚರಿತ್ರವರ್ಣನಂ ನಾಮ ಪಂಚಪಂಚಾಶೋಽಧ್ಯಾಯಃ

---

ಇಲ್ಲಿಗೆ ಶ್ರೀಶಿವರಹಸ್ಯದಲ್ಲಿ ಸದಾಶಿವಸಂಜ್ಞಕವಾದ ಒಂಬತ್ತನೆಯ ಅಂಶದಲ್ಲಿ
ದಭ್ರುಭಕ್ತನ ಕಥಾವರ್ಣನೆಯೆಂಬ ಐವತ್ತೈದನೆಯ ಅಧ್ಯಾಯವು
ಮುಗಿದುದು.



॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀ ಶಿವರಹಸ್ಯೇ

## ಸದಾಶಿವಾಖ್ಯೇ

## ನವಮಾಂಶೇ

## ಷಟ್ಪಂಚಾಶೋಽಧ್ಯಾಯಃ

॥ ಶ್ರೀಸ್ಕಂದ ಉವಾಚ ॥

ಗೃಹಂ ಗೋಮಯಲೇಪಾದಿಸ್ರಗ್ವಿಧಾನಾದಿಶೋಭಿತಂ ।
ರಂಗವಲ್ಲೀವಿತಾನಾದ್ಯೈಃ ಪೂರ್ಣಕುಂಭಾಭ್ರಪಲ್ಲವೈಃ ॥೧॥

ಕದಲೀಸ್ತಂಬಸಂಬದ್ಧಗೃಹಸ್ತಂಭೈರಲಂಕೃತೈಃ ।
ಪ್ರವಿಷ್ಟೇಭೈರವೇ ಹೃಷ್ಟಾ ಗೃಹಿಣೀ ಸಾ ತಮಾನಯತ್ ॥೨॥

ನಿಧಾಯ ಖಟ್ವಾಮಾಸ್ತೀರ್ಣಾಂ ವಿಸ್ತೀರ್ಣಾಂ ಸೋತ್ತರಚ್ಛದಾಂ ।
ಪುಷ್ಪಾಸನಂ ಪೂರ್ಣಮನಾ ದೇವೇಶಾಯ ದಿದೇಶ ಸಾ ॥೩॥

---

## ಐವತ್ತಾರನೆಯ ಅಧ್ಯಾಯ

ದಭ್ರಭಕ್ತನ ಮನೆಯು ಸಗಣಿಯಿಂದ ಸಾರಿಸಲ್ಪಟ್ಟು, ಹಾರಾದಿಗಳಿಂದ ಶೋಭಿಸುತ್ತಿದ್ದಿತು. ರಂಗವಲ್ಲಿಯಿಂದಲಂಕೃತವಾಗಿ ಚಪ್ಪರ, ಮಂಟಪವೇ ಮೊದಲಾದವುಗಳಿಂದಲೂ, ಮಾವಿನೆಲೆಗಳನ್ನು ಇರಿಸಿದ ಪೂರ್ಣಕಲಶಗಳಿಂದಲೂ, ಬಾಳೆಯ ಕಂಬಗಳನ್ನು ಕಟ್ಟಿದ ಮನೆಯ ಕಂಬಗಳಿಂದಲೂ ಮನೆಯು ಅಲಂಕೃತವಾಗಿತ್ತು. ಇಂತಹ ದಭ್ರಭಕ್ತನ ಮನೆಯನ್ನು ಪ್ರವೇಶಿಸಿದ ಕೂಡಲೇ ಆತನ ಹೆಂಡತಿಯು ಸಂತುಷ್ಟಳಾಗಿ ಆ ಭೈರವನನ್ನು ಗೌರವದಿಂದ ಭೋಜನಕ್ಕಾಗಿ ಕರೆದುಕೊಂಡು ಹೋದಳು. ॥೧-೨॥

ಆನಂತರ ಒಳಗೆ ದೊಡ್ಡವಿಶಾಲವಾದ ಮಂಚವನ್ನು ಹಾಕಿ, ಅದರ ಮೇಲೆ ವಸ್ತ್ರವನ್ನು ಹಾಸಿ, ಹೂವುಗಳನ್ನು ಹರಡಿ ಭಕ್ತಿಪೂರ್ಣಮನಸ್ಸಿನಿಂದ ಆ ದೇವೇ

ತಸ್ಮಿನ್ನಾಸನ ಆಸೀನೇ ತತ್ಪಾದಕ್ಷಾಳನಾಯ ಸಾ ।
ದಧೌ ಕರಕಮೀಶಸ್ಯ ಪಾದೌ ಪ್ರಕ್ಷಾಳಯತ್ಪತಿಃ ॥೪॥

ತತ್ಪಾದಕ್ಷಾಳನಜಲಂ ಪ್ರೋಕ್ಷಿತಾತ್ಮಶಿರಸ್ತದಾ ।
ಸುಗಂಧಧೂಪದೀಪಾದ್ಯೈಃ ಸ್ರಗ್ಭಿರಾನರ್ಚ ಭೈರವಂ ॥೫॥

ಪ್ರಕ್ಷಾಳ್ಯ ಕಾಂಚನಂ ಪಾತ್ರಂ ವನಿತಾ ವಿಮಲೈರ್ಜಲೈಃ ।
ಸಂನ್ಯಸ್ಯ ಕಾಂಚನೇ ಪಾತ್ರೇ ತತ್ರ ಶಾಲ್ಯೋದನಂ ನ್ಯಧಾತ್ ॥೬॥

ತಾನಿ ತಾನಿ ವ್ಯಂಜನಾನಿ ತತ್ಪ್ರಾಂತೇಷು ನಿಧಾಯ ಸಾ ।
ನತಾಂ ಸ್ಮಿತಮುಖೀಂ ವೀಕ್ಷ್ಯಾಜಹಾರ ಸಭೈರವಃ ॥೭॥

॥ ಶ್ರೀಭೈರವ ಉವಾಚ ॥

ಮದುಕ್ತಂ ಪಶುಮಾಲಭ್ಯ ತೈಸ್ತೈರಂಗೈಃ ಸಮಾಹಿತಾ ।
ಕೃತವತ್ಯಸಿ ಕಿಂ ಸಮ್ಯಗುಪದಂಶಂ ಶುಭಂ ಮಮ ॥೮॥

---

ಶ್ವರನಿಗೆ ಹೂವಿನ ಆಸನವನ್ನು ಕೊಟ್ಟಳು. ಆ ಭೈರವನು ಆಸನವನ್ನು ಮಂಡಿಸಿದ ಮೇಲೆ, ಆತನ ಕಾಲುಗಳನ್ನು ತೊಳೆಯುವುದಕ್ಕೋಸ್ಕರ ಪತ್ನಿಯು ನೀರಿನಿಂದ ತುಂಬಿದ ಕಮಂಡಲುವನ್ನು ಹಿಡಿದು ನಿಂತಳು. ಪತಿಯಾದ ದಭ್ರಭಕ್ತನು ಆ ಭೈರವನ ಪಾದಗಳನ್ನು ತೊಳೆದನು. ॥೩-೪॥

ಭೈರವನ ಕಾಲು ತೊಳೆದ ನೀರನ್ನು ತನ್ನ ತಲೆಯಮೇಲೆ ಪ್ರೋಕ್ಷಿಸಿಕೊಂಡು, ಸುಗಂಧಭರಿತವಾದ ಧೂಪದೀಪನೈವೇದ್ಯಾದಿಗಳಿಂದಲೂ, ಹೂಮಾಲೆಗಳಿಂದಲೂ ಪೂಜಿಸಿ, ಚಿನ್ನದ ಪಾತ್ರೆಯನ್ನು ನಿರ್ಮಲೋದಕದಿಂದ ತೊಳೆದು ಹಾಕಿ, ಆ ಸುವರ್ಣತಟ್ಟೆಯಲ್ಲಿ ಶಾಲ್ಯನ್ನವನ್ನು ಮೊದಲು ಬಡಿಸಿದಳು. ಅನಂತರ ಆಯಾ ಪರಿಕರಗಳನ್ನು ಆಯಾ ಜಾಗದಲ್ಲಿ ಅನ್ನದ ಹತ್ತಿರ ಬಡಿಸಿದಳು. ಆಗ ಬಡಿಸಿ ತಲೆಬಾಗಿ ಮಂದಹಾಸಮುಖಳಾಗಿರುವ ಆ ದಭ್ರಭಕ್ತನ ಹೆಂಡತಿಯನ್ನು ನೋಡಿ ಭೈರವನು ಹೀಗೆ ನುಡಿದನು. ॥೫-೬-೭॥

ಎಲೌ ನಾರಿಯೇ, ನಾನು ಹೇಳಿದಂತೆ ನರಪಶುವನ್ನು ಕೊಂದು ಆಯಾ ಅವಯವಗಳನ್ನು ಸಮಾಧಾನಚಿತ್ತದಿಂದ ಕೊಯ್ದು, ನೆಂಚಿಕೊಳ್ಳುವ ವ್ಯಂಜನಗಳನ್ನು ಚೆನ್ನಾಗಿ ಮಾಡಿದ್ದೀಯಷ್ಟೆ; ಎಲ್ಲಾ ಅವಯವಗಳಲ್ಲಿಯೂ ತಲೆಯು

ಅಂಗೇಷೂತ್ತಮಮಿತ್ಯುಕ್ತಮುತ್ತಮಾಂಗಮಿತಿ ಶ್ರುತಂ ।
ತದಾನಯೇತಿ ತೇನೋಕ್ತಾ ಗೃಹಿಣೀ ವ್ಯಾಕುಲಾಽಭವತ್ ॥೯॥

॥ ಗೃಹಿಣ್ಯುವಾಚ ॥

ನಿಷಿದ್ಧಂ ತಚ್ಛಿರೋಮಾಂಸಂ ನಿಕ್ಷಿಪ್ತಂ ಬಹಿರಂಕಣೇ ।
ಸರ್ವಂ ಸಂಪನ್ನಮೇವೇಹ ಮಾಂಸಂ ಬಾಲಸ್ಯ ಮೇಽಧುನಾ ॥೧೦॥

ತದ್ಬಾಲಸ್ಯ ಶಿರೋ ಗೃಹ್ಯ ಮುಸಲೋಲೂಖಲೇನ ಹಿ ।
ಖಂಡಯಿತ್ವಾಥ ಮಸ್ತಿಷ್ಕಂ ಪಕ್ತ್ವಾ ಪಾತ್ರೇ ದದೌ ವಿಭೋಃ ॥೧೧॥

ಆನಂದಾದರ್ಪಯಾಮಾಸ ಮಾಂಸಂ ಭೈರವಭೋಜನೇ ।
ಭುಂಕ್ಷ್ವೇತ್ಯಭಿಹಿತೋ ದೇವೋ ದಭ್ರಭಕ್ತಮುವಾಚ ಸಃ ॥೧೨॥

॥ ಭೈರವ ಉವಾಚ ॥

ಗೃಹಿಣಾ ರಹಿತಂ ಭೋಜ್ಯಂ ಮನ್ಯೇಽಸ್ಮಾಕಂ ವಿಗರ್ಹಿತಂ ।
ತ್ಯಕ್ತ್ವಾತಿಥಿಂ ಗೃಹೀ ಭುಕ್ತ್ವಾ ನರಕಂ ಯಾತಿ ಸಾನ್ವಯಃ ॥೧೩॥

---

ಉತ್ತಮವಾದುದೆಂದು ಹೇಳಲ್ಪಟ್ಟಿದೆ, ಎಲ್ಲಿ ಅದರ ವ್ಯಂಜನವನ್ನು ತೆಗೆದುಕೊಂಡು ಬಾ, ಎಂದು ಭೈರವನು ನುಡಿಯಲು, ಆಗ ಗೃಹಿಣಿಯು ಕಾತರಳಾದಳು. ॥೮-೯॥

ಸ್ವಾಮಿ, ಅವನ ತಲೆಯ ಮಾಂಸವು ನಿಷಿದ್ಧವೆಂದು ತಿಳಿದು ಅದನ್ನು ಹೊರ ಅಂಗಳದಲ್ಲಿ ಇಟ್ಟಿರುವೆನು. ಉಳಿದ ನನ್ನ ಬಾಲಕನ ಎಲ್ಲಾ ಅವಯವಗಳ ಮಾಂಸವೂ ಪಕ್ವವಾಗಿ ಸಿದ್ಧವಾಗಿದೆ, ಎಂದು ಹೇಳಿ ಆ ಬಾಲಕನ ತಲೆಯನ್ನು ಹಿಡಿದು ತಂದು, ಒಳಲಲ್ಲಿ ಒನಕೆಯಿಂದ ಚೂರುಮಾಡಿ, ಅಲ್ಲಿದ್ದ ಕೊಬ್ಬನ್ನು ಪಾತ್ರೆಯಲ್ಲಿ ಬೇಯಿಸಿ ಪ್ರಭುವಿಗೆ ತಂದು ಬಡಿಸಿದಳು. ಹೀಗೆ ಆಕೆಯು ಆನಂದದಿಂದ ತನ್ನ ಮಗನ ಮಾಂಸವನ್ನು ಭೈರವನಿಗೆ ಭೋಜನಮಾಡಲು ಬಡಿಸಿ, ಪ್ರಭೋ ! ಊಟಮಾಡಬೇಕೆಂದು ನುಡಿಯಲು, ಮಹಾದೇವನು (ಭೈರವನು) ದಭ್ರಭಕ್ತನಿಗೆ ಇಂತೆಂದನು. ॥೧೦-೧೧-೧೨॥

ಅಯ್ಯ ದಭ್ರಭಕ್ತನೇ, ಮನೆಯ ಯಜಮಾನನಿಲ್ಲದೇ, ಊಟಮಾಡುವುದು ನಿಂದ್ಯವೆಂದು ಹೇಳಲ್ಪಟ್ಟಿದೆ. ಅತಿಥಿಯನ್ನು ಬಿಟ್ಟು ಊಟಮಾಡುವ ಗೃಹಸ್ಥನು ವಂಶಸಹಿತನಾಗಿ ನರಕವನ್ನೈದುವನು. ಗೃಹಸ್ಥನಾದರೂ ಅತಿಥಿಯ ಜೊತೆಯಲ್ಲಿ

ಗೃಹ್ಯಪಿ ಸ್ವಾತಿಥೇಃ ಭುಕ್ತ್ವಾ ವಿಘಸಾಶೀ ಭವೇದ್ಯದಿ ।
ಬ್ರಹ್ಮಣೋ ಲೋಕಮಾಪ್ನೋತಿ ಇತ್ಥಂ ಶ್ರುತ್ಯನುಶಾಸನಂ ॥೧೪॥

ಏಕೋ ನ ಭೋಕ್ಷ್ಯೇ ತ್ವಾಂ ತ್ಯಕ್ತ್ವಾ ತಸ್ಮಾತ್ತ್ವಂ ಚಾತ್ರ ಉಪಾವಿಶ ।
ಭೈರವೇ ವಾದಿನಿ ತಥಾ ದಭ್ರಭಕ್ತಸ್ತದಾ ಸ್ಥಿತಃ ॥೧೫॥

ಪಾತ್ರೇಽನ್ಯೇ ತೇನ ಸ ತದಾ ಪುತ್ರಮಾಂಸಂ ಪರಿಷ್ಕೃತಂ ।
ಸ್ಥಿತಂ ದೃಷ್ಟ್ವಾ ಪುನಃ ಪ್ರಾಹ ಭೈರವೋ ಭೀಷಣಾಕೃತಿಃ ॥೧೬॥

॥ ಭೈರವ ಉವಾಚ ॥

ನಿಂದ್ಯಂ ಚ ಕಥ್ಯತೇ ಲೋಕೇ ಅಪುತ್ರಾನ್ನಮಸಂಸ್ಕೃತಂ ।
ತಸ್ಮಾದನ್ನಂ ನ ಭೋಕ್ಷ್ಯೇಽಹಂ ಪುತ್ರಹೀನಸ್ಯ ತೇ ಗೃಹೇ ॥೧೭॥

ಇತಿ ತದ್ಗಿರಮಾಕರ್ಣ್ಯ ಭೀತಿಸಾಧ್ವಸಲೋಚನಃ ।
ಕಥಮಾಹಾರವಿಘ್ನೋಽಸ್ಯ ಸಂಜಾತೋ ದೈವಕಾರಿತಃ ॥೧೮॥

---

ಮಾಂಸವನ್ನೇ ಭುಜಿಸಿದರೂ ಬ್ರಹ್ಮಲೋಕವನ್ನು ಪಡೆಯುವನೆಂದು, ಶ್ರುತಿಯು ನಿಯಮಿಸಿರುತ್ತದೆ. ॥೧೩-೧೪॥

ನಿನ್ನನ್ನು ಬಿಟ್ಟು ನಾನೊಬ್ಬನೇ ಊಟಮಾಡುವುದಿಲ್ಲವಾದ್ದರಿಂದ ನೀನೂ ಬಂದು ನನ್ನ ಪಂಕ್ತಿಯಲ್ಲಿ ಊಟಕ್ಕೆ ಕುಳಿತುಕೋ! ಎಂದು ಭೈರವನು ನುಡಿಯುತ್ತಿರಲು, ದಭ್ರಭಕ್ತನು ಹಾಗೆಯೇ ಆಗಲೆಂದು ಪಂಕ್ತಿಯಲ್ಲಿ ಕುಳಿತುಕೊಂಡನು. ಅವನ ಮುಂದೆಯೂ ಪಾತ್ರೆಯಲ್ಲಿ ಮಗನ ಮಾಂಸವು ಬಡಿಸಲ್ಪಟ್ಟಿತು. ಆಗಲೂ ಹೀಗೆ ಧೈರ್ಯದಿಂದಿರುವ ದಭ್ರಭಕ್ತನನ್ನು ಕುರಿತು, ಭೈರವನು ಭಯಂಕರಸ್ವರೂಪದಿಂದ ಪುನಃ ಇಂತೆಂದನು. ॥೧೫-೧೬॥

ಅಯ್ಯ ದಭ್ರಭಕ್ತನೇ, ಲೋಕದಲ್ಲಿ ಪುತ್ರಹೀನನು ಕೊಡುವ ಅನ್ನವು ಸಂಸ್ಕಾರಹೀನವೂ ನಿಂದ್ಯವೂ ಎಂದು ಹೇಳಲ್ಪಡುವುದರಿಂದ, ಪುತ್ರಹೀನನಾದ ನಿನ್ನ ಮನೆಯಲ್ಲಿ ಊಟಮಾಡುವುದಿಲ್ಲವೆಂದು ಭೈರವನು ಹೇಳಿದ, ಆ ಮಾತನ್ನು ಕೇಳಿ, ದಭ್ರಭಕ್ತನು ಭಯದಿಂದ ಗಾಬರಿಗೊಂಡ ನೇತ್ರವುಳ್ಳವನಾಗಿ, ಅಯ್ಯೋ! ಈ ಶೈವನಿಗೆ ಆಹಾರವಿಘ್ನವು ಈ ರೀತಿ ದೈವಲೀಲೆಯಿಂದ ಒದಗಿತಲ್ಲಾ, ಎಂದು ಕಳವಳಪಡುತ್ತಾ; ॥೧೭-೧೮॥

ಇತಸ್ತತೋಽಭಿವೀಕ್ಷ್ಯೈವ ಸಂಕ್ಲಿಷ್ಟೋ ಭಿಕ್ಷುಭಾಷಿತೈಃ ।
ತದಾ ತೌ ದಂಪತೀ ಭಿಕ್ಷೋರಾಜ್ಞಯಾ ದುರ್ವಿಲಂಘಯಾ ॥೧೯॥

ದೀರ್ಘಮುಷ್ಣಂ ಚ ನಿಶ್ವಸ್ಯ ತೌ ವಿಲೋಕ್ಯ ಪರಸ್ಪರಂ ।
ಊಚತುಸ್ತಾವಸಂಭ್ರಾಂತೌ ದಂಪತೀ ಹರ್ಷಿತಾಂತರೌ ॥೨೦॥

॥ ದಂಪತೀ ಊಚತುಃ ॥

ಪಾರಣಾ ಭೈರವಸ್ಯಾಸ್ತು ನಿರ್ವಿಘ್ನೇನೇತಿ ತೌ ತದಾ ।
ಯಥಾ ತಥಾಯಮೇವೈಷ ಭೈರವೋ ಭಕ್ತಿದುರ್ಘಟಃ ॥೨೧॥

ಕಿಂ ವಚ್ಮಿ ಭೈರವಸ್ಯಾಜ್ಞಾಂ ಕರವೈ ಕಿಂ ಭಣಾಮಿ ಚ ।
ಸ ಭೈರವಃ ಪುನಃ ಪ್ರಾಹ ದಭ್ರಭಕ್ತಂ ತದಾ ಮುದಾ ॥೨೨॥

॥ ಭೈರವ ಉವಾಚ ॥

ನ ಕದಾಚಿದಪುತ್ರಸ್ಯ ಪುಂಸೋಽಭೋಜಿ ಗೃಹೇ ಮಯಾ ।
ಆಹೂಯತಾಂ ಬಹಿರ್ಗತ್ವಾ ಭೋಕ್ತುಂ ಸಹ ಮಯಾರ್ಭಕಃ ॥೨೩॥

---

ಅತ್ತಿತ್ತ ನೋಡಿ, ಭಿಕ್ಷುವಿನ ಮಾತಿಗೆ ಸಿಕ್ಕಿದವನಾಗಿ, ಆಗ ಆ ದಂಪತಿಗಳು ಮೀರಲಸದಳವಾದ ಆ ಭೈರವನ ಅಪ್ಪಣೆಯಿಂದ, ಏನುಮಾಡಲೂ ತೋರದೇ ದೀರ್ಘವಾಗಿ ನಿಟ್ಟುಸುರುಬಿಟ್ಟು, ಪರಸ್ಪರ ಒಬ್ಬರನ್ನೊಬ್ಬರು ನೋಡಿಕೊಂಡು ಕೊಂಚವೂ ಭ್ರಾಂತರಾಗದೆ ಸಂತೋಷಭರಿತರಾಗಿ ಹೀಗೆ ಮಾತನಾಡಿಕೊಂಡರು. ॥೧೯-೨೦॥

ಯಾವರೀತಿಯಿಂದಲಾದರೂ ಈ ಭೈರವನಿಗೆ ನಿರ್ವಿಘ್ನವಾಗಿ ಪಾರಣೆಯು ನಡೆಯಲಿ; ಯಾವರೀತಿ ಮಾಡಿದರೂ ಈ ಭೈರವನು ಭಕ್ತಿಯಿಂದ ತೃಪ್ತನಾಗುವಂತೆ ತೋರುವುದಿಲ್ಲವಲ್ಲಾ, ಈಗೇನು ಹೇಳಲಿ, ಭೈರವನ ಅಪ್ಪಣೆಯನ್ನು ಹೇಗೆ ನಡೆಸಲಿ, ಈಗ ನಾನೇನು ಉತ್ತರಕೊಡಲಿ, ಎಂದು ಆ ದಭ್ರಭಕ್ತನು ಚಿಂತಿಸುತ್ತಿರುವಾಗ, ಭೈರವನು ಪುನಃ ಇವನನ್ನು ನೋಡಿ ಸಂತೋಷದಿಂದ ಇಂತೆಂದನು. ॥೨೧-೨೨॥

ಎಲೈ ದಭ್ರಭಕ್ತನೇ, ಯಾವಾಗಲೂ ನಾನು ಇಲ್ಲಿಯವರೆಗೆ ಪುತ್ರಹೀನನ ಮನೆಯಲ್ಲಿ ಭೋಜನಮಾಡಲಿಲ್ಲ; ಹೊರಗೆ ಹೋಗಿ ನನ್ನ ಜತೆಯಲ್ಲಿ ಊಟ

ಇತ್ಯುಕ್ತೋ ಭೈರವಸ್ಯೋಕ್ತಿಂ ವಿಲೋಕ್ಯ ಗೃಹಿಣೀಮುಖಂ ।
ಚಿಂತಯನ್ನಂತರೀಶಾನಂ ಚಿತ್ರಾರ್ಪಿತ ಇವಾಭವತ್ ॥೨೪॥

ಪುನಃ ಪುನಃ ಕ್ರುಧಾ ಪ್ರಾಹ ಭೈರವೋ ಭೀಷಣಾಕೃತಿಃ ॥೨೫॥

॥ ಭೈರವ ಉವಾಚ ॥

ಕಿಂ ವಿಲಂಬೇನ ಭಕ್ತಾದ್ಯ ಕ್ಷುಧಾ ಕುಕ್ಷೌ ಪ್ರವರ್ಧತೇ ।
ಆಹೂಯತಾಂ ದ್ರುತಂ ಬಾಲೋ ನಯನಾನಂದಚಂದ್ರಮಾಃ ॥೨೬॥

ಹತಂ ಬಾಲಂ ವಿಸೃಜ್ಯೈವ ಭೋಕ್ತುಂ ತೇ ಯತತೇ ಮನಃ ।
ಏಷಾಪಿ ನಿರ್ಘೃಣಾ ಪುತ್ರೇ ತವ ಭಕ್ತ ಕುಟುಂಬಿನೀ ॥೨೭॥

ನ ಚಿಂತಯತಿ ಸಾ ಬಾಲಂ ಭೋಜನೇ ಸಾರತಾಽಭವತ್ ।
ಯುವಯೋರಿವ ಮೇ ಚೇತೋ ನೈವ ವಾತ್ಸಲ್ಯವರ್ಜಿತಂ ॥೨೮॥

---

ಮಾಡಲು ನಿನ್ನ ಮಗನನ್ನು ಕರೆ? ಎಂದು ನುಡಿದ ಭೈರವನ ಮಾತನ್ನು ಕೇಳಿ ದಭ್ರಭಕ್ತನು, ತನ್ನ ಹೆಂಡತಿಯ ಮುಖವನ್ನು ನೋಡುತ್ತಾ, ಮನಸ್ಸಿನಲ್ಲಿ ಈಶ್ವರನನ್ನು ಚಿಂತಿಸುತ್ತಾ, ಚಿತ್ರದ ಬೊಂಬೆಯಂತೆ ಸುಮ್ಮನೆ ನಿಂತುಬಿಟ್ಟನು. ಆಗ ಭಯಂಕರವಾದ ಆಕೃತಿಯುಳ್ಳ ಆ ಭೈರವನು ಪದೇ ಪದೇ ಕೋಪಮಾಡಿಕೊಂಡು ಪುತ್ರನನ್ನು ಕೂಗುವಂತೆ ಹೇಳಿದನು. ॥೨೩-೨೪-೨೫॥

ಓ ಭಕ್ತನೇ, ಇದೇಕೆ ತಡಮಾಡುತ್ತಿರುವೆ? ನನಗೆ ಹಸಿವು ಹೊಟ್ಟೆಯಲ್ಲಿ ಪ್ರಬಲವಾಗುತ್ತಿರುವುದು. ನೇತ್ರಾನಂದವನ್ನುಂಟುಮಾಡುವುದರಲ್ಲಿ ಚಂದ್ರಸಮಾನನಾದ ನಿನ್ನ ಮಗನನ್ನು ಜಾಗ್ರತೆಯಾಗಿ ಕರೆದುತಾ. ಮೃತನಾದ ಮಗನನ್ನು ಬಿಟ್ಟು ಊಟಮಾಡಲು ನಿನಗೆ ಹೇಗೆ ಮನಸ್ಸುಂಟಾಗುತ್ತದೆ? ನಿನ್ನ ಪತ್ನಿಯಾದ ಈಕೆಗೂ ಮಗನಲ್ಲಿ ದಯೆಯಿಲ್ಲವೆಂದೇ ತೋರುವುದು. ॥೨೬-೨೭॥

ಇವಳು ಮಗನ ವಿಷಯವನ್ನೇ ಯೋಚಿಸದೇ ಕೇವಲ ಅಡಿಗೆಯ ಕೆಲಸದಲ್ಲೇ ನಿರತಳಾಗಿರುವಳು. ನಿಮ್ಮಿಬ್ಬರಂತೆ ನನ್ನ ಮನಸ್ಸು ವಾತ್ಸಲ್ಯರಹಿತವೆಂದು ತಿಳಿಯಬೇಡಿ, ಜಾಗ್ರತೆ ಆ ಹಾಲುಕುಡಿಯುವ ಮಗುವನ್ನು ಜೊತೆಯಲ್ಲಿ ಊಟಮಾಡಲು ಹೊರಗೆ ಹೋಗಿ ಕರೆದುಕೊಂಡು ಬಾ, ಎಂದು ಸಾಭಿಪ್ರಾಯಗರ್ಭಿತವಾಗಿ ಹೇಳಲು ಯುಕ್ತಿಯುಕ್ತವಾದ ಭೈರವನ ಮಾತನ್ನು ಕೇಳಿ, ಆ ದಭ್ರಭಕ್ತನು ಸೊಂಟವನ್ನು

ಶೀಘ್ರಮಾಹೂಯತಾಂ ಗತ್ವಾ ಸಹ ಭೋಕ್ತುಂ ಸ್ತನಂಧಯಂ ।
ಇತಿ ಸೂಕ್ತಿಮತೀಂ ವಾಚೋ ಯುಕ್ತಿಮಾಕರ್ಣ್ಯ ಭೈರವೀಂ ॥೨೯॥

ದಭ್ರಭಕ್ತಃ ಸಮಂ ಬಧ್ವಾ ನಿರ್ಗತ್ಯ ಬಹಿರಂಕಣೇ ।
ಆಹೂಯೇತಾಂ ಬಹಿರ್ಗತ್ವಾ ಸಾಶ್ರುಧಾರಾಲಲೋಚನೌ ॥೩೦॥

॥ ದಂಪತೀ ಊಚತುಃ ॥

ಆಗಚ್ಛಾಗಚ್ಛ ಶೀಲಾಲ ಭೋಕ್ತುಮಾಹೂಯತೇಽತಿಥಿಃ ।
ಆಗಚ್ಛಂತಂ ದದರ್ಶಾಂತೇ ಬಾಲಮಕ್ಷರವೇದಿನಃ ॥೩೧॥

ಕಾಕಪಕ್ಷಧರಂ ತತ್ರ ವಿಶಾಲಾಕ್ಷಂ ಚ ಧೂಳಿತಂ ।
ರತ್ನಗ್ರೈವೇಯಕಟಕಕುಂಡಲಾದಿವಿಭೂಷಿತಂ ॥೩೨॥

ಕಟಿಮೇಖಲಿಕಾರಾಜತ್ಕಿಂಕಿಣೀಪಾದನೂಪುರಂ ।
ತಾತಾಂಬೇತಿ ಚ ಭಾಷಂತಂ ದದರ್ಶಾತೇ ಉಭಾವಪಿ ॥೩೩॥

ವಿಸ್ಮಯೋತ್ಫುಲ್ಲನೇತ್ರಾಬ್ಜೌ ವಿಲೋಕ್ಯೇತಾಮುಭಾವಪಿ ।
ಆನಂದಾಬ್ಧೌ ನಿಮಜ್ಜಂತೌ ಪರಾಮೃಶ್ಯ ನಿಜೈಃ ಕರೈಃ ॥೩೪॥

---

ಕಟ್ಟಿಕೊಂಡು, ಹೊರಹೋಗಿ, ಹೊರಗಣ ಅಂಗಳದಲ್ಲಿ ನಿಂತು, ದಂಪತಿಗಳಿಬ್ಬರೂ ಧಾರಾಕಾರವಾಗಿ ಸುರಿಯುತ್ತಿರುವ ಕಣ್ಣೀರುಳ್ಳವರಾಗಿ ಮಗನನ್ನು ಹೀಗೆ ಕರೆದರು. ॥೨೮-೨೯-೩೦॥

ಓ ಶೀಲಾಲನೇ! ಜಾಗ್ರತೆಯಾಗಿ ಬಾ, ಊಟಮಾಡಲು ಅತಿಥಿಯು ಕರೆಯುತ್ತಿರುವನು; ನಿನ್ನ ಜತೆಗಾರರಾದ ಅಕ್ಷರಾಭ್ಯಾಸಿಗಳು ನಿನ್ನನ್ನು ನೋಡಬಂದಿರುವರು. ಬಾ ಮಗನೇ! ಎಂದು ದಂಪತಿಗಳು ಮಗನನ್ನು ಕರೆಯಲು, ಕಾಕಪಕ್ಷವನ್ನು ಧರಿಸಿ, ವಿಶಾಲವಾದ ಕಣ್ಣುಗಳಿಂದ ಶೋಭಿಸುತ್ತಾ, ಧೂಳಿನಿಂದ ಧೂಸರವಾದ ಮೈಬಣ್ಣವುಳ್ಳವನಾಗಿ, ಚಿನ್ನದ ಕೊರಳುಸರ, ಕಟಕ ಮತ್ತು ಕುಂಡಲವೇ ಮೊದಲಾದವುಗಳನ್ನು ಅಲಂಕರಿಸಿಕೊಂಡು ಸೊಂಟದಲ್ಲಿ ಉಡಿದಾರವನ್ನೂ ಗೆಜ್ಜೆಯ ಕಾಲ್ಗಡಗಗಳನ್ನೂ ಧರಿಸಿ, ತಾತ! ಅಮ್ಮ! ಎಂದು ಕೂಗುತ್ತಾ ಬರುತ್ತಿರುವ ಮಗನನ್ನು ಇಬ್ಬರೂ ಕಂಡರು. ॥೩೧-೩೨-೩೩॥

ಅವರಿಬ್ಬರೂ ಆಶ್ಚರ್ಯದಿಂದ ಅರಳಿದ ಕಣ್ಣುಮಲವುಳ್ಳವರಾಗಿ ತಮ್ಮ ಮಗನನ್ನು ನೋಡಿದರು. ಆಗ ತಮ್ಮ ಸ್ವಂತ ಕೈಗಳಿಂದ ಮಗನನ್ನು ತಡವುತ್ತಾ ಆನಂದ

ಆದಾಯ ತನಯಂ ಭಿಕ್ಷೋಃಪಾರಣಾ ಸಂಭವತ್ವಿತಿ ।
ಪುತ್ರಂ ಲಬ್ಧ್ವಾಪಿ ತೌ ನೋದಂ ಪ್ರಾಪತುರ್ಭಿಕ್ಷುಪಾರಣೇ ॥೩೫॥

ಭೈರವಾಹಾರಗೇಹಂ ತಂ ದ್ರುತಮಾಜಗ್ಮತುರ್ಮುದಾ ।
ಗೃಹಂ ತೌ ತು ಪ್ರವಿಶ್ಯಾಂತರಪಶ್ಯಂತೌ ಸಬಾಲಕೌ ॥೩೬॥

ಭೈರವಂ ಖೇದಸಂವೀತೌ ಚಿಂತಯಾಮಾಸತುಶ್ಚಿರಂ ।
ಕಿಮಾವಾಭ್ಯಾಂ ಪುರಾಕಾರಿ ಶಿವಪೂಜಾವ್ಯತಿಕ್ರಮಃ ॥೩೭॥

ಕಿಂ ಶಾಂಭವದ್ರೋಹಪರೌ ಭಸ್ಮರುದ್ರಾಕ್ಷವರ್ಜಿತೌ ।
ಕಿಂ ಶಿವಾಲಯವಿಚ್ಛೇದಂ ಶಿವಾರಾಮೋಜ್ಝಿತಂ ಪುರಾ ॥೩೮॥

ಅಭಂಜಿ ಶಿವಭಕ್ತಾಜ್ಞಾಕ್ರಮಾನಿತ್ಯಾಕುಲೋಚಿತೌ ।
ಇತಸ್ತತೋ ವಿಚಿನ್ವಂತೌ ಪಶ್ಯಂತೌ ತೌ ದಿಶೋ ದಶ ॥೩೯॥

---

ಸಾಗರದಲ್ಲಿ ಮುಳುಗಿದವರಾಗಿ, ಕೂಡಲೇ ಮಗನನ್ನು ಕರೆದುಕೊಂಡು ಆ ಭೈರವ ಭಿಕ್ಷುವಿನ ಪಾರಣೆಯು ನಡೆಯಲೆಂದು ಮಗನನ್ನು ಪಡೆದು, ಆ ದಂಪತಿಗಳು ಇನ್ನು ಮುಂದೆ ಭಿಕ್ಷುವಿನ ಪಾರಣೆಯು ಸಂತೋಷವಾಗಿ ನಡೆಯುವುದೆಂದು ಆನಂದ ಪಟ್ಟರು. ॥೩೪-೩೫॥

ಅನಂತರ ಅವರು ಮಗನನ್ನು ಕರೆದುಕೊಂಡು ಭೈರವನಿಗೆ ಭೋಜನಕ್ಕೆ ಬಡಿಸಿದ್ದ ಊಟದ ಮನೆಗೆ ಜಾಗ್ರತೆ ಬಂದು, ಸಂತೋಷದಿಂದ ಒಳಗೆ ನೋಡಲು, ಪುತ್ರಸಮೇತರಾದ ಅವರಿಗೆ ಆ ಭೈರವನು ಕಾಣಲಿಲ್ಲ. ಆಗ ಅವರು ವಿಶೇಷ ದುಃಖಾಕ್ರಾಂತರಾಗಿ ಬಹಳವಾಗಿ ಯೋಚಿಸತೊಡಗಿದರು. ಹಿಂದೆ ನಾವೇನಾವರೂ ಶಿವಪೂಜೆಯಲ್ಲಿ ವಿರುದ್ಧವಾಗಿ ನಡೆದುಕೊಂಡಿದ್ದೆವೇ! ಅಥವಾ ಶೈವದ್ರೋಹನಿರತ ರಾಗಿದ್ದೆವೇ; ಅಲ್ಲದೇ ಭಸ್ಮರುದ್ರಾಕ್ಷಗಳನ್ನು ಧಾರಣೆಮಾಡದೇ ಇದ್ದೆವೆ? ಒಂದು ವೇಳೆ ಶಿವಾಲಯವನ್ನು ಕೆಡವಿಸುವುದು ಅಥವಾ ಶಿವನ ಉದ್ಯಾನವನಗಳನ್ನು ನಾಶ ಮಾಡುವುದು ಈ ಕಾರ್ಯಗಳಲ್ಲಿ ತೊಡಗಿದ್ದೇವೆ. ॥೩೬-೩೭-೩೮॥

ಶಿವಭಕ್ತರ ಆಜ್ಞೆಯ ಕ್ರಮವನ್ನೇನಾದರೂ ಮೀರಿ ನಡೆದಿರುವೆವೊ ಏನೋ ಎಂದು ಚಿಂತಾಕುಲರಾಗಿ ಎಲ್ಲಕಡೆಗಳಲ್ಲೂ, ಒಟ್ಟಿನಲ್ಲಿ ಹತ್ತುದಿಕ್ಕುಗಳನ್ನೂ ಹುಡುಕುತ್ತಾ, ಕೊನೆಗೆ ಆಕಾಶವನ್ನು ನೋಡುತ್ತಿರಲು, ಅಲ್ಲಿ ದಿವ್ಯ ವೃಷಭವೊಂದನ್ನು

ಆಲೋಕಮಾನವಾಕಾಶಂ ವೃಷಭಂ ತಾವಪಶ್ಯತಾಂ ।
ತದಾರೂಢೌ ಗುಹೋಪೇತೌ ವಿಲೋಕ್ಯಾದಿಮದಂಪತೀ ॥೪೦॥

ಸೋಮಂ ಸೋಮಲಲಾಮಗಾಂಗಸುಜಟಾಜೂಡಂ ಮೃಡಂ ಶಂಕರಂ
ಸೋಮಾರ್ಕಾನಲಲೋಚನಂ ಗರಗಲಂ ವೈಯಾಘ್ರಚರ್ಮಾಂಬರಂ ।
ಮಂದಸ್ಮೇರಮುಖಾಂಬುಜಂ ಸುಮಹಾಬಾಹುಪ್ರಭಾಭಾಸುರಂ
ಶೂಲೋದ್ಯನ್ಮೃಗಟಂಕಯುಕ್ಪದನತಂ ಮಂದಾರವೃಂದೈರ್ಯುತಂ ॥೪೧॥

ನತ್ವಾ ಸ್ತುತ್ವೈವಮೀಶಾನಂ ಸ ಪುತ್ರೇಣ ಮುದಾನ್ವಿತೌ ।
ಆನಂದಭರಿತಾಪಾರಮಾನಸೌ ತೌ ಬಭೂವತುಃ ॥೪೨॥

॥ ದಭ್ರಭಕ್ತ ಉವಾಚ ॥

ಶಂಭೋ ಪಾಹಿ ಮಹೇಶ ಸೋಮಶಕಲಾಲಂಕಾರಮೌಳೇ ಹರ
ಸ್ವಾಮಿನ್ದೇವ ದಯಾನಿಧೇ ಕರುಣಯಾ ಮಾಂಪಾಹಿ ಸರ್ವೇಶ್ವರ ।

---

ಕಂಡರು. ಅದರ ಮೇಲೆ ಪುರಾಣದಂಪತಿಗಳಾದ ಪಾರ್ವತೀಪರಮೇಶ್ವರರು ಕುಮಾರ ಸ್ವಾಮಿಯೊಡನೆ ಕುಳಿತಿದ್ದರು. ಆಗ ಉಮಾಮಹೇಶ್ವರರನ್ನು ನೋಡಿ ; ॥೩೯-೪೦॥

ಹಣೆಯಲ್ಲಿ ಚಂದ್ರನೂ, ಜಡೆಯಲ್ಲಿ ದಿವ್ಯಗಂಗಾನದಿಯನ್ನು ಧರಿಸಿ, ಜಗತ್ಪಾಪನಾಶಕನೂ, ಲೋಕಮಂಗಳಕರನೂ, ಚಂದ್ರ, ಸೂರ್ಯಾಗ್ನಿಲೋಚನನೂ, ವಿಷಕಂಠನೂ, ಹುಲಿಯ ಚರ್ಮವನ್ನು ಹೊಂದಿರುವವನೂ, ಮಂದಹಾಸವನ್ನು ಬೀರುತ್ತಿರುವ ಮುಖಕಮಲವುಳ್ಳವನೂ, ದಿವ್ಯವಾದ ದೊಡ್ಡ ತೋಳುಗಳಿಂದ ಶೋಭಿಸುತ್ತಿರುವವನೂ, ಶೂಲ, ಜಿಂಕೆ, ಮುಂತಾದವುಗಳನ್ನು ಕೈಯ್ಯಲ್ಲಿ ಹಿಡಿದು ದೇವಸಮೂಹಗಳಿಂದ ನಮಸ್ಕಾರಮಾಡಲ್ಪಡುತ್ತಿರುವವನೂ ಆದ ಉಮಾರಮಣ ನನ್ನು ಆ ದಂಪತಿಗಳು ದರ್ಶನಮಾಡಿದರು. ॥೪೧॥

ಆಗ ಆ ದಂಪತಿಗಳು ಪುತ್ರನೊಡನೆ ಈಶ್ವರನಿಗೆ ನಮಸ್ಕಾರಮಾಡಿ, ಅನಂತರ ಸಂತೋಷದಿಂದ ಸ್ತೋತ್ರಮಾಡಿ, ಇಬ್ಬರೂ ಅಪಾರವಾದ ಆನಂದಯುಕ್ತವಾದ ಮನಸ್ಸುಳ್ಳವರಾದರು. ॥೪೨॥

ಚಂದ್ರಶಕಲಾಲಂಕಾರಮೌಳಿಯಾದ ಮಹೇಶನೇ! ಜಗನ್ಮಂಗಳಪ್ರದನಾದ ನೀನು ಕಾಪಾಡು ; ಭಕ್ತಪಾಪನಾಶಕನಾದ ಸ್ವಾಮಿಯೇ! ಕರುಣಾನಿಧಿಯಾದ ನೀನು ನನ್ನನ್ನು ಸಲಹು ; ಸಕಲಜಗದೀಶ್ವರನೇ, ನೀನೇ, ಜಗಚ್ಛ್ರೇಷ್ಠನೆಂದು

ತ್ವಂ ವಿಶ್ವಾಧಿಕ ವೇದವೇದ್ಯ ಭಗವನ್ಕಾರುಣ್ಯವಾರಾಂನಿಧೇ
ಧನ್ಯೋಽಸ್ಮೀಶ ಭವತ್ಪದಾಂಬುಜರಸಾಸ್ವಾದೈಕಸನ್ಮಾನಸಃ ॥೪೩॥

ತದಾ ಮಹೇಶೋಽಪ್ಯಥ ದಭ್ರಭಕ್ತೇಃ-
ಸ್ತುತ್ವಾ ವಿಲೋಕ್ಯಾಥ ಮುದಾ ದಯಾಳುಃ ।
ಪ್ರೋವಾಚ ಧನ್ಯೋಽಸಿ ಮಮೈಕಮಾನ್ಯೋ
ಭವೇಽಧುನಾ ತ್ವಂ ಸಸುತಃ ಸದಾರಃ ॥೪೪॥

॥ ಸೂತ ಉವಾಚ ॥

ನಗೇಶ್ವರಶ್ಚಾರುಶಶಾಂಕಮೌಳೀ
ಸಮೇಹಿ ಮಾಂ ರಾಜತಪರ್ವತಾಗ್ರಂ ।
ಕೈಲಾಸಶೈಲಂ ಸ ನಿನಾಯ ದಭ್ರ-
ಭಕ್ತಂ ಸದಾರಂ ಸಸುತಂ ಮಹೇಶಃ ॥೪೫॥

ಶ್ರೀದಭ್ರಭಕ್ತಸ್ಯ ಚರಿತ್ರಮೇತಚ್ಛೃಣೋತಿ
ಯಃ ಸಾಹಸಿಕೋತ್ತಮಸ್ಯ ।

---

ತಿಳಿಯಲ್ಪಡುವೆ; ಭಗವಂತನೇ! ದಯಾಸಾಗರನೇ, ಕಾಪಾಡು ; ಈಶ್ವರ, ನಿನ್ನ ಪಾದಕಮಲಭಕ್ತಿರಸವನ್ನು ಸೇವಿಸುವುದರಲ್ಲಿಯೇ ನೆಟ್ಟ ಮನಸ್ಸುಳ್ಳ ನಾನೇ ಧನ್ಯನು, ಎಂದು ದಭ್ರಭಕ್ತನು ಮಹೇಶ್ವರನನ್ನು ಸ್ತುತಿಸಿದನು. ॥೪೩॥

ಆಗ ದಯಾಳುವಾದ ಮಹೇಶ್ವರನು ಆ ದಭ್ರಭಕ್ತನ ಸ್ತುತಿಯಿಂದ ಸಂತುಷ್ಟನಾಗಿ, ಅವನ ಕಡೆ ಸಂತೋಷದಿಂದ ನೋಡುತ್ತಾ, ಓ ದಭ್ರಭಕ್ತನೇ! ನೀನೊಬ್ಬನೇ ಈ ಸಂಸಾರದಲ್ಲಿ ಪತ್ನೀಪುತ್ರರೊಡನೆ ನನ್ನಿಂದ ಮಾನ್ಯನಾಗಿ ಧನ್ಯನೆನಿಸಿರುವೆ; ಎಂದು ಹೇಳಿದನು. ॥೪೪॥

ಅಯ್ಯ ಶೌನಕಾದಿಗಳೆ! ಆ ದಭ್ರಭಕ್ತನು ಮಹೇಶನನ್ನು ಕುರಿತು, ಸ್ವಾಮಿ! ಪರ್ವತರಾಜನಿವಾಸಿಯೂ, ಚಂದ್ರಮೌಳಿಯೂ ಆದ ನೀನು ನನ್ನನ್ನು ರಜತಾಚಲದ ಶಿಖರಕ್ಕೆ ಕರೆದುಕೋ, ಎಂದು ಪ್ರಾರ್ಥಿಸಲು ಆಗ ಮಹಾದೇವನು ಅವನ ಇಷ್ಟದಂತೆ ಪತ್ನೀಪುತ್ರರೊಡನೆ ಆ ದಭ್ರಭಕ್ತನನ್ನು ಕೈಲಾಸಪರ್ವತಕ್ಕೆ ಕರೆದುಕೊಂಡನು. ॥೪೫॥

ಸಾಹಸಿಗರಲ್ಲಿ ಶ್ರೇಷ್ಠನಾದ ಈ ಶ್ರೀದಭ್ರಭಕ್ತನ ಚರಿತ್ರೆಯನ್ನು ಕೇಳುವವರಿಗೆ ಕೇವಲ ಐಹಿಕ ಭೋಗಗಳಲ್ಲದೇ ಅಪಾರವಾದ ಆನಂದಸ್ವರೂಪವೇ ಎನಿಸಿರುವ

ನ ಕೇವಲಂ ಭುಕ್ತಿರಮುಷ್ಯ ಹಸ್ತ-
ಸ್ಥಿತಾಪರಾನಂದಮಯೀ ಚ ಮುಕ್ತಿಃ ॥೪೬॥

ಇತಿ ಶ್ರೀಶಿವರಹಸ್ಯೇ ನವಮಾಂಶೇ ಸದಾಶಿವಾಖ್ಯೇ ದಭ್ರಭಕ್ತಚರಿತ್ರ
ವರ್ಣನೇ ಷಟ್ಪಂಚಾಶೋಽಧ್ಯಾಯಃ

---

ಮುಕ್ತಿಯೂ ಸಹ ಹಸ್ತಗತವೇ ಆಗುವುದು, ಎಂದು ಜೈಗೀಷವ್ಯನೇ ಮೊದಲಾದ ಮುನಿಗಳಿಗೆ ಶ್ರೀಕುಮಾರಸ್ವಾಮಿಯು ಹೇಳಿದನು. ॥೪೬॥

ಇಲ್ಲಿಗೆ ಶ್ರೀಶಿವರಹಸ್ಯದಲ್ಲಿ ಸದಾಶಿವಸಂಜ್ಞಕವಾದ ಒಂಬತ್ತನೆಯ ಅಧ್ಯಾಯದಲ್ಲಿ
ದಭ್ರಭಕ್ತನ ಚರಿತ್ರವರ್ಣನೆಯೆಂಬ ಐವತ್ತಾರನೆಯ ಅಧ್ಯಾಯವು
ಮುಗಿದುದು.



॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಸದಾಶಿವಾಖ್ಯೇ

## ನವಮಾಂಶೇ

## ಅಥ ಸಪ್ತಪಂಚಾಶೋऽಧ್ಯಾಯಃ

॥ ಶ್ರೀಸ್ಕಂದ ಉವಾಚ ॥

ಭಣಾಮಿ ಭಕ್ತಿಭರಿತಂ ಚರಿತಂ ಚೋಲಭೂಪತೇಃ ।
ಪ್ರವಿಶ್ಯ ಪ್ರಾಣಿನಾಮಂತರ್ದುಷ್ಟಾನಾಂ ಶಾಸಿತಾ ಸ್ವಯಂ ॥೧॥

ಕೇರಳೋ ನಾಮವಿಷಯಶ್ಚೋಲಭೂಪಾಲಪಾಲಿತಃ ।
ಅಪದಂ ವಿಪದಾಮಸ್ತಿ ಸರ್ವಾಸಾಂ ಸಂಪದಾಂಪದಂ ॥೨॥

ಅಸ್ತಿ ಪ್ರಕಾಶದೇಶೇऽಸ್ಮಿನ್ನವಕಾಶಾಂತರಂ ಶ್ರಿಯಃ ।
ಮಹೋದಯಂ ಪುರಂ ನಾಮ ಧಾಮ ಚೋಲಮಹೀಪತೇಃ ॥೩॥

---

## ಐವತ್ತೇಳನೆಯ ಅಧ್ಯಾಯ

ಓ ಜೈಗೀಷವ್ಯನೇ, ಪ್ರಜಾಸಮೂಹದ ಒಳಹೊಕ್ಕು ಅವರುಗಳ ಕಷ್ಟಸುಖಗಳನ್ನು ವಿಚಾರಿಸುತ್ತಾ ಸ್ವತಃ ತಾನೇ ದುಷ್ಟರನ್ನು ದಂಡಿಸುವ ಭಕ್ತನಾದ ಚೋಲರಾಜನ ಚರಿತ್ರೆಯನ್ನರುಹುವೆನು, ಕೇಳು; ವಿಪತ್ತುಗಳಿಗೆ ಎಡೆಯಾಗದೆ ಸಕಲ ಸಂಪತ್ತುಗಳಿಗೂ ಆಶ್ರಯವಾಗಿರುವ ಕೇರಳವೆಂಬ ದೇಶವು ಚೋಲರಾಜನಿಂದ ಕಾಪಾಡಲ್ಪಟ್ಟಿತ್ತು. ॥೧-೨॥

ಪ್ರಸಿದ್ಧವಾದ ಆ ದೇಶದಲ್ಲಿ ಲಕ್ಷ್ಮಿಗೆ ಆವಾಸಸ್ಥಾನವಾಗಿರುವ ಚೋಲರಾಜನ ಮಹೋದಯವೆಂಬ ಪಟ್ಟಣವಿದ್ದಿತು. ಅದರಲ್ಲಿ ಶಿವಸ್ಥಾನವಾದ ಶ್ರೀವಾಂಛ

ಶ್ರೀವಾಂಛಮಿತಿ ನಾಮ್ನಾಸ್ತಿ ಯತ್ರಾಂತರ್ಧಾಮ ಶಾಂಭವಂ ।
ಪ್ರಿಯಂ ಮಹೋಕ್ಷವಾಹಸ್ಯ ಪ್ರಪನ್ನಜನಭದ್ರದಂ ॥೪॥

ವೇದಘೋಷೈರ್ವಾದ್ಯಘೋಷೈರಾರಾಮಭ್ರಮರಾರವೈಃ ।
ಗಜವಾಜಿರವೈರ್ಯತ್ರ ಪಯೋಧಿರಭಿಭೂಯತೇ ॥೫॥

ವರ್ಣಾನುಷ್ಠಾನಧರ್ಮೋಽಯಂ ಶ್ರುತ್ಯಾಶ್ರಮಪಥಾ ಜನೈಃ ।
ನಿಷ್ಠತ್ಯನುಷ್ಠಾನಪರೈರ್ನಿಷ್ಠಾವದ್ಭಿಃ ಕೃಪಾಲುಭಿಃ ॥೬॥

ಶಿವಯೋಗಿಯತೀಂದ್ರಾಣಾಂ ಮಠೈರ್ವೇದಾಂತಘೋಷಿತೈಃ ।
ಭಸ್ಮರುದ್ರಾಕ್ಷಸಂಪನ್ನೈಃ ಶಿವಲಿಂಗಾರ್ಚನಪ್ರಿಯೈಃ ॥೭॥

ಪುಷ್ಪಾರಾಮಾಭಿರಾಮಾಂತೇ ಪುರೇ ತಸ್ಮಿನ್ಮಹೋದಯೇ ।
ಮಹಾಗೋದ ಇತಿ ಖ್ಯಾತಃ ಕೋಽಪ್ಯಾಸೀಚ್ಚೋಲಭೂಪತಿಃ ॥೮॥

ಸ ಶುದ್ಧಭಾವಃ ಸಂತ್ಯಕ್ತಲೋಕರೀತಿರಿವ ಪ್ರಿಯಃ ।
ಶಿವಪಾದಾಬ್ಜಭಾವೇನ ವಿಭಾಸಿತಜಗತ್ತ್ರಯಃ ॥೯॥

---

ವೆಂಬ ಕ್ಷೇತ್ರವು ಪ್ರಸಿದ್ಧವಾಗಿತ್ತು. ಆ ಶ್ರೀವಾಂಛವು ಮಹಾವೃಷಭವಾಹನನಾದ ಶಿವನಿಗೆ ಪ್ರಿಯವೂ ಶಿವಶರಣಾಗತ ಜನರಿಗೆ ಮಂಗಳಪ್ರದವೂ ಆಗಿದ್ದಿತು. ॥೩-೪॥

ಅಲ್ಲಿ ವೇದಘೋಷ, ವಾದ್ಯಧ್ವನಿಗಳು, ಉದ್ಯಾನದಲ್ಲಿ ಹಾರಾಡುವ ದುಂದುಭಿಗಳ ಝೇಂಕಾರ, ಆನೆ, ಕುದುರೆ ಮುಂತಾದವುಗಳ ಧ್ವನಿಯಿಂದ ಸಮುದ್ರವೇ ತಿರಸ್ಕರಿಸಲ್ಪಡುತ್ತಿದ್ದಿತು. ಬ್ರಹ್ಮ, ಕ್ಷತ್ರಿಯ, ವೈಶ್ಯ, ಶೂದ್ರರೆಂಬ ನಾಲ್ಕುವರ್ಣದವರು ತಮ್ಮ ತಮ್ಮ ಧರ್ಮಗಳಲ್ಲಿ ಅನುಷ್ಠಿತರಾಗಿದ್ದರು. ಎಲ್ಲರೂ ವೇದೋಕ್ತ ಮಾರ್ಗಾವಲಂಬಿಗಳಾಗಿ, ಅನುಷ್ಠಾನಶೀಲರೂ ದಯಾಳುಗಳೂ ಆಗಿ ನಡೆದುಕೊಳ್ಳುತ್ತಿದ್ದರು. ಆ ಊರಿನಲ್ಲಿ ಶಿವಯೋಗಿಗಳಾದ ಯತಿಪುಂಗವರ ಮಠಗಳು ವೇದಾಂತ ಘೋಷಗಳಿಂದ ರಾಜಿಸುತ್ತಿದ್ದವು. ಎಲ್ಲರೂ ಭಸ್ಮರುದ್ರಾಕ್ಷಸಂಪನ್ನರಾಗಿ, ಶಿವಲಿಂಗ ಪೂಜೆಯಲ್ಲಿ ಆಸಕ್ತರಾಗಿದ್ದರು. ॥೫-೬-೭॥

ಹೂದೋಟಗಳಿಂದ ಮನೋಹರವಾಗಿದ್ದ ಆ ಮಹೋದಯವೆಂಬ ಪಟ್ಟಣದಲ್ಲಿ 'ಮಹಾಗೋದ' ನೆಂಬ ಹೆಸರಿನಿಂದ ಪ್ರಖ್ಯಾತನಾದ ಒಬ್ಬ ಚೋಲರಾಜನಿದ್ದನು. ಅವನು ಪರಿಶುದ್ಧಭಾವನೆಯುಳ್ಳವನೂ, ಈ ಲೋಕವ್ಯಾಪಾರವನ್ನೇ

ಶ್ರೀವಾಂಛೀಪುರನಾಥಸ್ಯ ಕೈಂಕರ್ಯನಿರತೋಽಭವತ್ ।
ಪ್ರಾಕಾರಗೋಪುರೋತ್ತುಂಗಮಂಟಪಾದಿ ವಿಧಾಯ ಸಃ ॥೧೦॥

ಬಿಲ್ವಪ್ರಿಯಾಲಸರಲಕರವೀರವನಾನಿ ಚ ।
ಮಂದಾರಕರ್ಣಿಕಾರಾದ್ಯ ಸಹಕಾರಾಣ್ಯಕಾರಯತ್ ॥೧೧॥

ಪುಷ್ಪಾರಾಮಾಣ್ಯಥೋ ಕರ್ತುಂ ಚಕಾರ ಮತಿಮಾನ್ನೃಪಃ ।
ರಥಂ ಚ ವಾಹನಾದೀನಿ ಕುರ್ವನ್ ತತ್ರೋತ್ಸವಂ ವಿಭೋಃ ॥೧೨॥

ಶಂಭೋರ್ಭಕ್ತಾರ್ಚನೈರೇವ ನಿನಾಯ ದಿವಸಾನ್ಬಹೂನ್ ।
ಪ್ರಾತಃ ಪ್ರಾತಃ ಸಮುತ್ಥಾಯ ಶಿವಂ ಸಂಚಿಂತ್ಯ ವೈ ಹೃದಿ ॥೧೩॥

ಸ್ನಾತ್ವಾ ತೀರ್ಥೇ ಮಹೇಶಸ್ಯ ಪಾವನೇನ ಚ ಭಸ್ಮನಾ ।
ಕುಸುಮೈಃ ಕೋಮಲೈರ್ಮಾಲಾಂ ಚಂದ್ರಮೌಲೇರಕಲ್ಪಯತ್ ॥೧೪॥

---

ಬಿಟ್ಟವನಂತೆ ಎಲ್ಲರಲ್ಲಿಯೂ ಪ್ರೀತಿಯುಳ್ಳವನೂ, ಶಿವನ ಪಾದಕಮಲಭಕ್ತಿಭಾವನೆಯಿಂದಲೇ ಮೂರು ಲೋಕಗಳನ್ನೂ ಪ್ರಕಾಶಗೊಳಿಸಿದವನೂ ಆಗಿ, ಶ್ರೀವಾಂಛಾಪುರೇಶ್ವರನ ಸೇವಾನಿರತನಾದನು. ॥೯-೯॥

ಶ್ರೀ ವಾಂಛೀಪುರೇಶನಿಗೆ ಪ್ರಾಕಾರ, ಗೋಪುರ, ಎತ್ತರವಾದ ಮಂಟಪ, ಮುಂತಾದುವುಗಳನ್ನು ಮಾಡಿಸಿ, ಆ ಮಹಾಗೋದನು, ಬಿಲ್ವ, ಪ್ರಿಯಾಲ, ಸರಲ, ಕಣಿಗಿಲೆ, ಪಾರಿಜಾತ, ಸಿಹಿಮಾವು ಮುಂತಾದ ಹೂವು ಮತ್ತು ಹಣ್ಣಿನ ಮರಗಳ ತೋಟಗಳನ್ನು ಮಾಡಿಸಿದನು. ಮೇಲ್ಮೇಲೆ ಇನ್ನೂ ಹೂವಿನ ಉದ್ಯಾನಗಳನ್ನು ಮಾಡಿಸಬೇಕೆಂದು ಆ ರಾಜನು ಯೋಚನೆಮಾಡಿದನು. ಅಲ್ಲಿ ಆ ಪ್ರಭುವಿಗೆ ರಥ, ವಾಹನ ಮುಂತಾದವುಗಳನ್ನು ಮಾಡಿಸಿ ಉತ್ಸವವನ್ನು ನಡೆಸುತ್ತಾ, ಶೈವರ ಪೂಜೆಗಳನ್ನು ನೆರವೇರಿಸಿಕೊಂಡು ಅಲ್ಲಿಯೇ ಅನೇಕ ದಿವಸಗಳನ್ನು ಕಳೆದನು. ॥೧೦-೧೧-೧೨॥

ಆ ದಿನ ಬೆಳಗ್ಗೆ ಎದ್ದು, ಮನಸ್ಸಿನಲ್ಲಿ ಶಿವನನ್ನು ಧ್ಯಾನಿಸಿ, ಮಹೇಶ್ವರ ತೀರ್ಥದಲ್ಲಿ ಸ್ನಾನಮಾಡಿ, ಪವಿತ್ರವಾದ ಭಸ್ಮಧಾರಣೆಮಾಡಿ, ಕೋಮಲವಾದ ಹೂಗಳಿಂದ ಆ ಚಂದ್ರಚೂಡನಿಗೆ ಹಾರಮಾಡಿ ಧರಿಸುತ್ತಿದ್ದನು. ಶ್ರೀಮಂಜತೀರ್ಥದಿಂದ ನೀರುತಂದು ದೇವಸ್ಥಾನವನ್ನು ಶುದ್ಧಿಮಾಡುತ್ತಿದ್ದನು. ॥೧೩-೧೪॥

ಶ್ರೀಮಂಜನಾಂಬು ಆನೀಯ ಚಕ್ರೇ ಸಂಮಾರ್ಜನಕ್ರಿಯಾಃ ।
ಗೋಮಯೈರ್ಭಕ್ತಿಭರಿತ ಉಪಲಿಪ್ಯ ಶಿವಾಲಯಂ ॥೧೫॥

ದೀಪಾನಾರೋಪಯನ್ಭಕ್ತ್ಯಾ ವಿದ್ಯೋತಯತಿ ಶಾಂಕರಃ ।
ಅರ್ಚಯನ್ ಶಿವಮೇಕಾಂತೇ ಸದಾ ತೌರ್ಯತ್ರಿಕಾರ್ಪಣೈಃ ॥೧೬॥

ಸದಾ ಶಂಕರನಾಮಾನಿ ಗಾಯನ್ನಾಸ್ತೇ ಶಿವಾಲಯೇ ।
ಮಹಾಗೋದಮಹೀಪಾಲೋ ಮಂತ್ರಿಭಿರ್ಯಂತ್ರಿತಃ ಸದಾ ॥೧೭॥

ಅಥಾರ್ಣವೋನ್ಮತ್ತಪರಿಘೇ ಶೈಲಾವಹಪರೀವೃತೇ ।
ಲಕ್ಷ್ಮೀವಿಲಾಸಕಲಿತೇ ಮಹೋದಯಪುರೇ ವಸನ್ ॥೧೮॥

ಆಜ್ಞಾಚಕ್ರಸಮೃದ್ಧಶ್ರೀಕ್ಷಮಾವಾನಿತಿ ವಿಶ್ರುತಃ ।
ಪಾಲಯಿತ್ವಾ ಚಿರಂ ಪೃಥ್ವೀಂ ತಪಃ ಕರ್ತುಂ ವನಂ ಯಯೌ ॥೧೯॥

ಕ್ಷಮಾಂ ತ್ಯಕ್ತ್ವಾ ಕ್ಷಮಾಯುಕ್ತೋ ಕ್ಷಮಾವತಿವನಂ ಗತೇ ।
ತಸ್ಮಾದ್ರಾಜ್ಯಾರ್ಹ ಇತ್ಯೇತನ್ಮಂತ್ರಿಣೋಽಪಿ ವ್ಯಚಿಂತಯನ್ ॥೨೦॥

---

ಭಕ್ತಿಪೂರ್ಣನಾಗಿ ಸಗಣಿಯಿಂದ ಶಿವದೇವಾಲಯವನ್ನು ಸಾರಿಸುತ್ತಿದ್ದನು. ಅಲ್ಲದೇ ಆ ಶೈವನು ಭಕ್ತಿಪೂರ್ವಕವಾದ ದೀಪಗಳನ್ನು ಹೊತ್ತಿಸಿ ಪ್ರಕಾಶಗೊಳಿಸುತ್ತಾ ಏಕಾಂತದಲ್ಲಿ ಶಿವನನ್ನು ಪೂಜಿಸುತ್ತಾ, ಯಾವಾಗಲೂ ನೃತ್ಯ, ಗಾನ, ಮತ್ತು ವಾದ್ಯ ಗಳಿಂದ ಮಹಾದೇವನಿಗೆ ಪೂಜೆಯನ್ನು ಸಮರ್ಪಿಸುತ್ತಿದ್ದನು. ಈ ಮಹಾಗೋದ ರಾಜನು ಯಾವಾಗಲೂ ಮಂತ್ರಗಳಿಂದ ಪುರಸ್ಕೃತನಾಗಿ ಶಿವಕ್ಷೇತ್ರದಲ್ಲಿ ಯಾವಾ ಗಲೂ ಶಿವನಾಮಗಳನ್ನೇ ಹಾಡುತ್ತಾ ವಾಸವಾಗಿದ್ದನು. ॥೧೫-೧೬-೧೭॥

ಸಮುದ್ರದಂತೆ ಆಳವಾದ ಅಗಳಿನಿಂದಲೂ, ಬೆಟ್ಟಗಳ ಗುಂಪಿನಂತಿರುವ ಕೋಟೆ ಗಳಿಂದಲೂ ಸುತ್ತುವರಿಸಲ್ಪಟ್ಟು ಲಕ್ಷ್ಮೀಯ ವಿಲಾಸಕ್ಕೆ ಆಶ್ರಯವಾದ ಆ ಮಹೋ ದಯಪಟ್ಟಣದಲ್ಲಿ ಮಹಾಗೋದನು ವಾಸಮಾಡುತ್ತಾ, ತನ್ನ ಅಪ್ಪಣೆಗೆ ಒಳಪಟ್ಟ ಮಂಡಲಭಾಗದಲ್ಲಿ ಸಂಪೂರ್ಣವಾದ ಸಂಪತ್ತು ಮತ್ತು ದಯೆಯುಳ್ಳವನೆಂದು ಪ್ರಖ್ಯಾತನಾದನು. ಈ ಮಹಾರಾಜನು ಬಹಳಕಾಲ ಸುಖವಾಗಿ ರಾಜ್ಯಭಾರ ಮಾಡಿ ಅನಂತರ ತಪಸ್ಸುಮಾಡಲು ಅರಣ್ಯಕ್ಕೆ ಹೋದನು. ॥೧೮-೧೯॥

ಹೀಗೆ ಮಹಾಗೋದನೆಂಬ ಚೋಲರಾಜನು ರಾಜ್ಯಭಾರಮಾಡುವುದನ್ನು

ಇತಿ ನಿಶ್ಚಿತ್ಯ ತೇ ಜಗ್ಮುಸ್ತತ್ರಾಸೌ ಯತ್ರ ತಿಷ್ಠತಿ ।
ಭಕ್ತ್ಯೈವ ನಿರತಂ ಶಂಭೋರ್ಧ್ಯಾಯನ್ನೇವ ಶಿವಂ ಸ್ಥಿತಂ ॥೨೧॥

ಮಹಾಗೋದಂ ಪ್ರಣಮ್ಯೈವಂ ಸ್ವಕಾರ್ಯಂ ಸಮುದೀರಯನ್ ।
ತ್ವಯಿ ಶಾಸತಿ ರಾಜೇಂದ್ರ ಸರ್ವೇ ಶಾಂಭವಸತ್ತಮಾಃ ॥೨೨॥

ಕ್ಷಮಾಪತಿಃ ಕ್ಷಮಾಯುಕ್ತಃ ಕ್ಷಪಾನಾಥದೃಗರ್ಚಕಃ ।
ನೃಪಾನ್ವಯೋದ್ಭವಃ ಪ್ರಾಜ್ಯಂ ರಾಜ್ಯಂ ಶಾಸಿತುಮರ್ಹತಿ ॥೨೩॥

ಮಂತ್ರಿಣಾಂ ತನ್ಮಹಾಗೋದೋ ವಚಃ ಶ್ರುತ್ವಾ ವ್ಯಚಿಂತಯತ್ ।
ವಿಘ್ನಃ ಸ್ಯಾಚ್ಛಿವದಾಸಸ್ಯ ಪ್ರಾಜ್ಯರಾಜ್ಯಸ್ಯ ಪಾಲನಂ ॥೨೪॥

ಶಿವಸ್ಯಾಭಿಮತಂ ರಾಜಂ ಸ್ತ್ವವರಾಜ್ಯಸ್ಯ ಪಾಲನಂ ।
ಏವಂ ನಿಶ್ಚಿತ್ಯ ದೇವಸ್ಯ ಪುರತೋಽಹಂ ಭವನ್ಮತಂ ॥೨೫॥

---

ಬಿಟ್ಟು ದಯಾಮಯನಾಗಿ ಭಯಂಕರವಾದ ಕಾಡಿಗೆ ತಪಸ್ಸುಮಾಡಲು ಹೋಗಲು, ಇತ್ತ ಮಂತ್ರಿಗಳು ಇನ್ನುಮುಂದೆ ಈ ರಾಜ್ಯಭಾರಮಾಡಲು ಅರ್ಹನಾರೆಂದು ಪರ್ಯಾಲೋಚಿಸಿದರು. ಅವರೆಲ್ಲರೂ ಈ ವಿಷಯವನ್ನು ಮಹಾರಾಜನಿಂದಲೇ ತಿಳಿದು ನಡೆಯಬೇಕೆಂದು ನಿಶ್ಚಯಿಸಿ, ರಾಜನಿದ್ದ ಅರಣ್ಯಕ್ಕೆ ಬಂದರು. ಅಲ್ಲಿ ಭಕ್ತಿಭಾವದಿಂದಲೇ ಜಗನ್ಮಂಗಳದಾತನಾದ ಶಂಭುವನ್ನು ಧ್ಯಾನಿಸುತ್ತಿರುವ ಮಹಾಗೋದಮಹಾರಾಜನಿಗೆ ನಮಸ್ಕರಿಸಿ ತಾವು ಬಂದ ಕಾರ್ಯವನ್ನರಿಕೆಮಾಡಿದರು. ॥೨೦-೨೧॥

ಎಲೈ ರಾಜವಲ್ಲಭನೇ, ನೀವು ರಾಜ್ಯವಾಳುತ್ತಿದ್ದಾಗ ಎಲ್ಲರೂ ಶೈವವರ್ಯರೇ ಆಗಿದ್ದರು. ರಾಜರಾದ ತಾವು ದಯಾಯುಕ್ತರಾಗಿ ಚಂದ್ರನೇತ್ರನಾದ ಶಿವನ ಪೂಜಕರಾಗಿಬಿಟ್ಟಿರುವಿರಿ; ರಾಜವಂಶೋತ್ಪನ್ನನೇ ದೊಡ್ಡ ಈ ರಾಜ್ಯವನ್ನು ಆಳಲು ಸಮರ್ಥನು. ಅಲ್ಲವೆ ? ಎಂದು ಮಂತ್ರಿಗಳು ಹೇಳಲು ಆ ಮಾತನ್ನು ಕೇಳಿ ಮಹಾಗೋದನು ಶಿವಸೇವೆಗೆ ವಿಘ್ನವುಂಟಾಯಿತೆಂದು ಯೋಚಿಸಿ, ಈ ನೀವು ಹೇಳುವ ದೊಡ್ಡ ರಾಜ್ಯಪರಿಪಾಲನೆಯನ್ನು ನಾನು ಮಾಡುವುದು ಶಿವನಿಗೆ ಅಭಿಮತವೋ, ಅಲ್ಲವೋ ಎಂಬುದನ್ನು ತಿಳಿದು ನೋಡುತ್ತೇನೆಂದು ಉತ್ತರಕೊಡಲು, ಆಗ ಮಂತ್ರಿಗಳು, ಓ ರಾಜನೇ, ನೀನು ರಾಜ್ಯಪರಿಪಾಲನೆ ಮಾಡುವುದು ಪರಶಿವನಿಗೆ ಅಭಿಮತವೇ ಆಗಿರುವುದೆಂದು ಹೇಳಿದರು. ಆದರೂ ರಾಜನು ಮಂತ್ರಿಗಳೇ, ನೀವು

ಕರೋಮಿ ಕಿಂ ನವೇತ್ಯೇವಂ ಪಶ್ಚಾನ್ನಿಶ್ಚಿತ್ಯ ಕಥ್ಯತೇ ।
ಇತ್ಯುಕ್ತ್ವಾ ಮಂತ್ರಿಣಸ್ತೇನ ತಥಾಸ್ತ್ವಿತ್ಯೇವ ತೇಽಬ್ರುವನ್ ॥೨೬॥

ಸೋಽಪಿ ತದ್ವಚನಂ ಶ್ರುತ್ವಾ ಗತ್ವಾ ನತ್ವಾ ಮಹೇಶ್ವರಂ ।
ಪುರಸ್ತಾಚ್ಚಂದ್ರಚೂಡಸ್ಯ ವಿಜ್ಞಪ್ತಿಮಕರೋದಿಮಾಂ ॥೨೭॥

ಸ್ವಾಮಿನ್ಮಯಾ ಪಾಲನೀಯಂ ಕಿಂ ರಾಜ್ಯಪರಿಪಾಲನಂ ।
ಸ್ವಾರಾಜ್ಯರಾಜ್ಯೇ ಮನೋ ಯಸ್ಯ ತ್ವತ್ಪದಂ ದೂರಗಂ ಭವೇತ್ ॥೨೮॥

ತವೇದಮಪಿ ಮೇ ವತ್ಸ ಕೈಂಕರ್ಯಮವಬುಧ್ಯಥಾಃ ।
ನ ಹಿ ದ್ರೋಹೋ ಮಹೇಶಸ್ಯ ಮಹಾಪೂಜಾಕರೋ ಭವೇತ್ ॥೨೯॥

ಯದಿ ರಾಜ್ಯಸಮೃದ್ಧಿಃ ಸ್ಯಾದ್ಧನಧಾನ್ಯಯುತೋ ಮುನೇ ।
ಮಮ ಧಾಮಸು ಸರ್ವಾಣಿ ವಪ್ರಪ್ರಾಕಾರಗೋಪುರಂ ॥೩೦॥

---

ಹೇಳುವುದುಉಚಿತವಾದರೂ ನಿಮ್ಮ ಈ ಅಭಿಪ್ರಾಯವನ್ನು ನಾನು ಮಹಾದೇವನ ಸನ್ನಿಧಿಯಲ್ಲಿ ನಿವೇದಿಸಿ, ಅನಂತರ ಅದನ್ನು ಮಾಡಲೇ ಬಿಡಲೇ ಎಂಬುದನ್ನು ನಿಶ್ಚಯಮಾಡಿ ಹೇಳುವೆನೆಂದು ನುಡಿದನು. ॥೨೨-೨೩-೨೪-೨೫॥

ರಾಜನು ಹೀಗೆ ನುಡಿಯಲು ಮಂತ್ರಿಗಳು ಹಾಗೆಯೇ ಆಗಲೆಂದು ಹೇಳಿದರು. ಮಹಾಗೋದರಾಜನೂ ಸಹ ಮಂತ್ರಿಗಳ ಮಾತನ್ನು ಕೇಳಿ ಅದರಂತೆ ಶಿವನ ಸನ್ನಿಧಿಗೆ ಹೋಗಿ ಅಲ್ಲಿ ಮಹೇಶನಿಗೆ ನಮಿಸಿ । ಚಂದ್ರಶೇಖರನ ಮುಂದೆ ನಿಂತು ‘ ಸ್ವಾಮಿ, ನಾನು ಈ ರಾಜ್ಯಪರಿಪಾಲನೆ ಮಾಡುವ ಕೆಲಸದಲ್ಲಿ ತೊಡಗಲೆ ? ದೇವ, ಒಂದುವೇಳೆ ನಾನು ಈ ದೊಡ್ಡ ರಾಜ್ಯಪರಿಪಾಲನೆಯಲ್ಲಿ ಮನಸ್ಸಿಟ್ಟರೆ ನಿನ್ನ ಪಾದಭಕ್ತಿಯು ದೂರವಾಗಿಬಿಡುವುದೋ ಎಂಬ ಭಯವಿದೆ. ಏನು ಮಾಡಲಿ, ಅಪ್ಪಣೆಕೊಡು ’ ಎಂದು ಅರಿಕೆಮಾಡಿಕೊಂಡನು. ॥೨೬-೨೭-೨೮॥

ಆಗ ಮಹೇಶ್ವರನು “ ಎಲೈ ವತ್ಸನೇ, ಈ ನೀನು ಮಾಡುವ ರಾಜ್ಯಪರಿಪಾಲನೆಯೂ ನನ್ನ ಸೇವೆಯೆಂದೇ ತಿಳಿ ; ಇದರಿಂದ ಮಹೇಶನಲ್ಲಿ ದ್ರೋಹಮಾಡಿದಂತಾಯಿತೆಂದು ಎಣಿಸಬೇಡ ; ಈ ರಾಜ್ಯಭಾರವು ನನ್ನ ದೊಡ್ಡ ಪೂಜೆಗೆ ಕಾರಣವಾಗುವುದು ; ಎಲೈ ಮನನಶೀಲನಾದ ಮಹಾಗೋದನೇ, ನಿನಗೆ ಸಮಸ್ತ ಧನಧಾನ್ಯಸಮೃದ್ಧವಾದ ರಾಜ್ಯವಿದ್ದಾಗ ನನ್ನ ಕ್ಷೇತ್ರಗಳಲ್ಲೆಲ್ಲಾ ಕೋಟೆ,

ಮಂಟಪಂ ತೀರಬಂಧಾಶ್ಚ ಶಿವತೀರ್ಥೇಷು ಕಾರಯ ।
ಮಹೋತ್ಸವವಿಧಿಂ ಚಾಪಿ ಮಹಾಪೂಜಾಪ್ರವರ್ತನಂ ॥೩೧॥

ಇತ್ಯಾಕರ್ಣ್ಯ ಗಿರಂ ಗೋದಃ ಪ್ರಾಹೇಶ ಯದಿ ತೇ ಮತಂ ।
ತರ್ಹಿ ಮೇ ದೀಯತಾಂ ಸ್ವಾಮಿನ್ ಪ್ರಾಹೇಶಯದಿ ತೇ ಮತಂ॥೩೨॥

ಸರ್ವಜೀವಋತಜ್ಞತ್ವಂ ಇಂಗಿತಜ್ಞಂ ಚ ಮೇ ವಿಭೋ ।
ಸಮಸ್ತಭಾಷಾಜ್ಞಾತೃತ್ವಂ ಸಮ್ಯಗ್ಧಿತರಣಾಯ ಸಃ ॥೩೩॥

ತಾದೃಶೀ ಶ್ರೀರಿತಿಪ್ರೋಚೇ ತಥಾಸ್ತ್ವಿತಿ ನಭೋ ಗಿರಾ ।
ತದಾಕರ್ಣ್ಯ ವಿಭೋರಾಜ್ಞಾಂ ಶಿರಸಾ ಸ ಸಮುದ್ವಹನ್ ॥೩೪॥

ಅಮಾತ್ಯೈಃ ಸಹ ಮತ್ತೇಭವಾಹಃ ಪ್ರಾಪ ಮಹೋದಯಂ ।
ವೀಥ್ಯಾಂ ಮಹೋದಯಸ್ಯಾಥ ಪೂಷಾಕಲಿತ ವಿಗ್ರಹಂ ॥೩೫॥

---

ಕೊತ್ತಲ, ಪ್ರಾಕಾರ, ಗೋಪುರ, ಮಂಡಪ, ಕೆರೆಕಟ್ಟೆಗಳ ತೀರಗಳನ್ನು ಕಟ್ಟಿಸುವುದು, ಮಹಾ ಉತ್ಸವಗಳನ್ನು ನಡೆಸುವುದು, ನನ್ನ ಮಹಾಪೂಜಾದಿಗಳನ್ನು ಮಾಡಿಸುವುದು ಇವೇ ಮುಂತಾದ ಕಾರ್ಯಗಳನ್ನು ನಡೆಸಿ ಅವೆಲ್ಲವೂ ನನ್ನ ಪೂಜೆಯೆಂದೇ ಭಾವಿಸು. ಇದಕ್ಕಾಗಿ ನೀನು ಯೋಚಿಸಬೇಡ ಹೋಗು' ಎಂದನು.॥೨೯-೩೦-೩೧॥

ಈರೀತಿಯಾದ ಮಹೇಶನ ನುಡಿಗಳನ್ನು ಕೇಳಿ, ಗೋದನು ಸ್ವಾಮಿ, ಇದೇ ನಿನ್ನ ಮನೋಭಿಪ್ರಾಯವಾದರೆ ನನ್ನ ಅಭೀಷ್ಟವನ್ನು ನೆರವೇರಿಸು ;. ಸಕಲ ಪ್ರಾಣಿಗಳ ಸತ್ಯಾಸತ್ಯತೆಯನ್ನರಿಯುವಿಕೆ, ಜೀವಿಗಳ ಇಂಗಿತವನ್ನು ತಿಳಿಯುವ ಶಕ್ತಿ, ಅಲ್ಲದೇ ಸಕಲ ಭಾಷಾಜ್ಞಾನ, ಪ್ರಜೆಗಳನ್ನು ಸರಿಯಾದ ರೀತಿಯಿಂದ ಪಾಲಿಸಲನುಕೂಲವಾಗುವಂತಹ ಸಾಮರ್ಥ್ಯ, ಇವುಗಳನ್ನು ತನಗೆ ದಯಪಾಲಿಸಬೇಕೆಂದು ಬೇಡಿಕೊಂಡನು. ॥೩೨-೩೩॥

ಹಾಗೆಯೇ ಆಗಲೆಂದು ಆಕಾಶವಾಣಿಯಿಂದ ಮಹೇಶನಪ್ಪಣೆಯಾಗಲು ಮಹಾಪ್ರಭುವಿನ ಅಪ್ಪಣೆಯನ್ನು ಕೇಳಿ ಶಿರಸಾವಹಿಸಿ, ಮಹಾಗೋದರಾಜನು ತನ್ನ ಮಂತ್ರಿಗಳೊಡನೆ ಮದಿಸಿದ ಆನೆಯನ್ನೇರಿ ಮಹೋದಯ ಪಟ್ಟಣಕ್ಕೆ ಪ್ರಯಾಣ ಹೊರಟನು. ॥೩೪-೩೫॥

ರಜಕಂ ವೀಕ್ಷ್ಯ ತಂ ನತ್ವಾ ಭಸ್ಮೋದ್ಧೂಳಿತವಿಗ್ರಹಂ ।
ಪ್ರಣನುತ್ಸ ತದಾ ರಾಜಾ ರಜಕಂ ಸೋಽಪಿ ಭೀತಿತಃ ॥೩೬॥

ಪ್ರಾಹ ರಾಜಾನಮೇತ್ಯಗ್ರೇ ರಜಕೋಽಹಂ ನ ತಾಪಸಃ ।
ತಂ ಪ್ರಾಹ ರಾಜಾ ರಜಕಂ ತ್ವಂ ಭಸ್ಮೋದ್ಧೂಳಿತೋಽಸ್ಯಸಿ ॥೩೭॥

ಇತ್ಯುಕ್ತೇಸ್ತೇನ ರಾಜ್ಞಾ ವೈ ಮಂತ್ರಿಣೋ ಮುಮುಹುರ್ಭೃಶಂ ।
ಸೋಽಪಿ ಭದ್ರಾಸನಾರೂಢೋ ರಾಜ್ಯಂ ತತ್ಪರ್ಯಪಾಲಯತ್ ॥೩೮॥

ತಸ್ಮಿನ್ಮಹಾಗೋದ ಇತಿ ಪ್ರತೀತೇ
ಸಿಂಹಾಸನಸ್ಥೇ ವರಕೇರಳೇಷು ।
ಸರ್ವಪ್ರಜಾನಾಮಭವತ್ಪ್ರಮೋದಃ
ಸಸ್ಯೈರವಂಧ್ಯಾ ಧರಣೀ ತದಾಸೀತ್ ॥೩೯॥

---

ಸೂರ್ಯಸಮಾನತೇಜಸ್ವಿಯಾದ ಈ ಮಹಾಗೋದನು ಮಹೋದಯಪಟ್ಟಣವನ್ನು ಸೇರಿ ಅಲ್ಲಿನ ಒಂದು ಬೀದಿಯಲ್ಲಿ ಬರುತ್ತಾ ಭಸ್ಮಲೇಪಿತಗಾತ್ರನಾದ ಒಬ್ಬ ಅಗಸನನ್ನು ನೋಡಿದನು. ಕೂಡಲೆ ಆನೆಯಿಂದ ಕೆಳಗಿಳಿದು ಅವನು ಮಹಾಶೈವನೆಂದು ತಿಳಿದು ಅವನಿಗೆ ನಮಸ್ಕಾರಮಾಡಿದನು. ಆಗ ಆ ಅಗಸನಾದರೋ ಭಯಗೊಂಡು ರಾಜನ ಮುಂದೆ ಬಂದು, "ಪ್ರಭೋ, ನಾನು ಅಗಸನು, ತಾಪಸನಲ್ಲ" ಎಂದು ಭಯಭ್ರಾಂತನಾಗಿ ನುಡಿಯುತ್ತಿರಲು, ಆಗ ರಾಜನು "ನೀನಾದರೂ ಭಸ್ಮವನ್ನು ದೇಹಕ್ಕೆ ಲೇಪಿಸಿಕೊಂಡಿರುವೆಯಲ್ಲವೇ! ಆದರಿಂದ ನೀನು ಶೈವನೇ ಸರಿ ಆದರಿಂದಲೇ ನೀನು ನನಗೆ ವಂದ್ಯನು" ಎಂದು ನುಡಿದನು. ॥೩೫-೩೬-೩೭॥

ಹೀಗೆ ಒಬ್ಬ ಅಗಸನಿಗೆ ರಾಜನು ನುಡಿದ ಮಾತುಗಳನ್ನು ಕೇಳಿ ಮಂತ್ರಿಗಳೆಲ್ಲರೂ ಪರಸ್ಪರವಾಗಿ ಅತ್ಯಾಶ್ಚರ್ಯಪಟ್ಟರು. ಆ ಮಹಾಗೋದರಾಜನು ಅನಂತರ ಭದ್ರಾಸನವನ್ನೇರಿ ಆ ಕೇರಳದೇಶವನ್ನು ವಶಪಡಿಸಿಕೊಂಡು ಧರ್ಮದಿಂದ ಅದನ್ನು ಪರಿಪಾಲಿಸಿದನು. ॥೩೮॥

ಶ್ರೇಷ್ಠವಾದ ಕೇರಳದೇಶದಲ್ಲಿ ಹೀಗೆ ಮಹಾಗೋದನೆಂದು ಪ್ರಖ್ಯಾತನಾಗಿ ಆ ರಾಜನು ರತ್ನಸಿಂಹಾಸನವನ್ನೇರಿ ರಾಜ್ಯಭಾರ ಮಾಡುತ್ತಿರಲು, ಆದರಿಂದ ಸಕಲ ಪ್ರಜೆಗಳಿಗೆ ಆನಂದವೂ, ಭೂಮಿಯಲ್ಲಿ ಯಾವಾಗಲೂ ಪೈರುಪಚ್ಚೆಗಳಿಂದ ತುಂಬಿದ

ಇತಿ ಶ್ರೀಶಿವರಹಸ್ಯೇ ನವಮಾಂಶೇ ಸದಾಶಿವಾಖ್ಯೇ ಮಹಾಗೋದಾಖ್ಯಾನೇ ಸಪ್ತಪಂಚಾಶೋಽಧ್ಯಾಯಃ

---

ಸುಭಿಕ್ಷವೂ ತೋರಿಬಂದು, ಆ ದೇಶವು ಸದಾ ಕಂಗೊಳಿಸುತ್ತಿದ್ದಿತೆಂದು ಜೈಗೀಷವ್ಯನಿಗೆ ಕುಮಾರಸ್ವಾಮಿಯು ನುಡಿದನು. ||೩೯||

ಇಲ್ಲಿಗೆ ಶ್ರೀಶಿವರಹಸ್ಯದಲ್ಲಿ ಸದಾಶಿವಸಂಜ್ಞಕವಾದ ಒಂಬತ್ತನೆಯ ಅಂಶದಲ್ಲಿ ಮಹಾಗೋದನ ಚರಿತ್ರೆಯಲ್ಲಿ ಐವತ್ತೇಳನೆಯ ಅಧ್ಯಾಯವು ಮುಗಿಯಿತು.



॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀ ಶಿವರಹಸ್ಯೇ

## ಸದಾಶಿವಾಖ್ಯೇ

## ನವಮಾಂಶೇ

## ಅಷ್ಟಪಂಚಾಶೋಽಧ್ಯಾಯಃ

॥ ಶ್ರೀಸ್ಕಂದ ಉವಾಚ ॥

ವಜ್ರಸಿಂಹಾಸನೇ ರೂಢೇ ಮಹಾಗೋದೇ ಮಹಾಭುಜ ।
ತತ್ಕೀರ್ತಿಲಲನಾಪಾಣೌ ಬ್ರಹ್ಮಾಂಡೈಃ ಕಂತುಕಾಯಿತಂ ॥೧॥

ತಸ್ಮಿನ್ಕಾಲೇ ದರಿದ್ರಃ ಸನ್ಭದ್ರಾಖ್ಯಃ ಕೋಽಪಿ ಗಾಯಕಃ ।
ಮಧುರಾಯಾಂ ಮಹಾದೇವಮಗಾಸೀದರ್ಥವಾಂಛಯಾ ॥೨॥

ಸ್ವಪ್ನೇ ತಂ ಹಾಲವಕ್ತ್ರೇಶಃ ಸಮುದ್ಬೋಧ್ಯ ದಯಾನಿಧಿಃ ।
ದತ್ವಾ ಪತ್ರಮಿದಂ ಚೋಲಹಸ್ತೇ ದೇಹೀತ್ಯಚೂಚುದತ್ ॥೩॥

---

## ಐವತ್ತೆಂಟನೆಯ ಅಧ್ಯಾಯ

ಕುಮಾರಸ್ವಾಮಿಯು ಜೈಗೀಷವ್ಯಾದಿಗಳಿಗೆ ಮಹಾಗೋದನ ಮುಂದಿನ ಕಥೆಯನ್ನು ಮುಂದುವರಿಸುತ್ತಾ ಹೀಗೆಂದನು. ಮಹಾಬಾಹುವಾದ ಮಹಾಗೋದ ರಾಜನು ವಜ್ರಮಯವಾದ ಸಿಂಹಾಸನವನ್ನೇರಿ ರಾಜ್ಯಭಾರಮಾಡುತ್ತಿರಲು, ಆ ರಾಜನ ಕೀರ್ತಿಯೆಂಬ ನಾರಿಯ ಕೈಯಲ್ಲಿ ಸಮಸ್ತ ಬ್ರಹ್ಮಾಂಡಗಳೆಲ್ಲಾ ಚೆಂಡಿನಂತಿದ್ದವು. (ಅಂದರೆ ಎಲ್ಲಾ ಕಡೆಗಳಲ್ಲೂ ಇವನ ಕೀರ್ತಿಯು ಹರಡಿತ್ತೆಂದು ಭಾವವು.) ಅದೇ ಸಮಯದಲ್ಲಿ ಭದ್ರನೆಂಬ ಒಬ್ಬ ಬಡಸಂಗೀತಗಾರನು ದ್ರವ್ಯಾಪೇಕ್ಷೆಯಿಂದ ಮಧುರಾಪಟ್ಟಣಕ್ಕೆ ಬಂದು ಅಲ್ಲಿನ ದೇವಾಲಯದಲ್ಲಿ ಮಹಾದೇವನನ್ನು ಕುರಿತು ಕೆಲವು ಕೀರ್ತನೆಗಳನ್ನು ಹಾಡಿದನು. ॥೧-೨॥

ಆ ದಿನ ರಾತ್ರಿ ಸ್ವಪ್ನದಲ್ಲಿ ಹಾಲಾಸ್ಯೇಶ್ವರಸ್ವಾಮಿಯು ಅವನನ್ನು ಎಚ್ಚರ

ಸೋಽಪಿ ಕೇರಳಮಭ್ಯೇತ್ಯ ಕೋಟಿಕೋಲಾಪುರಾಭಿಧಂ ।
ಮಹೋದಯಪುರಂ ಗತ್ವಾ ರಾಜ್ಞೇ ಪತ್ರಂ ಸಮರ್ಪಯತ್ ॥೪॥

ರಾಜಾ ತತ್ಪತ್ರಮಾದಾಯ ಶಿರಸ್ಯಾಧಾಯ ಶಾಂಭವಂ ।
ನೃತ್ಯನ್ಗಾಯಂಛಿವಂ ಯಸ್ಮಾದ್ಭಕ್ತ್ಯಾ ಕ್ಷಿತಿತಲೇಽಪತತ್ ॥೫॥

ರೋಮಾಂಚಕಂಚುಕೋತ್ಕೀರ್ಣಪ್ರಮೋದಾಶ್ರುದೃಗಂಚಲಃ ।
ಇತಿ ಕರ್ತವ್ಯತಾಮೂಢೋ ಜಹರ್ಷ ಚ ನನರ್ತ ಚ ॥೬॥

ತಸ್ಮೈ ಗಾಯದಪತ್ರಾಯ ದದೌ ಸರ್ವಸ್ವಸಂಪದಂ ।
ಅಮಾತ್ಯೈರ್ವಾರಿತೋ ಭೂಮಿಮಂಡಲಂ ಚ ಸಮರ್ಪಯತ್ ॥೭॥

ಸ ಗಾಯಕೋ ವಿಲೋಕ್ಯೈವಂ ಮಂತ್ರಿಣಾಹ ಕಿಮೇತಯಾ ।
ಶಂಭೋರ್ನಾಮಾಖ್ಯಸುಧಯಾ ನಾಹಂ ವಸುಧಯಾಸುಖೀ ॥೮॥

---

ಗೊಳಿಸಿ ಒಂದು ಕಾಗದವನ್ನು ಕೊಟ್ಟು, ಇದನ್ನು ಚೋಲರಾಜನಿಗೆ ಕೊಡೆಂದು ಪ್ರೇರಿಸಿದಂತಾಯಿತು. ಅವನು ಅಂತೆಯೇ ಕೇರಳದೇಶಕ್ಕೆ ಬಂದು, ಅಲ್ಲಿ ಕೋಟಿ ಕೋಲಾಪುರವೆಂಬ ಬೇರೆ ಹೆಸರುಳ್ಳ ಮಹೋದಯಪುರಕ್ಕೆ ಆಗಮಿಸಿ ಆ ಪತ್ರವನ್ನು ರಾಜನಿಗೆ ಸಮರ್ಪಿಸಿದನು. ॥೩-೪॥

ಆ ಶಂಭುಭಕ್ತನಾದ ಗಾಯಕನು ಕೊಟ್ಟ ಕಾಗದವನ್ನು ರಾಜನು ತೆಗೆದು ಕೊಂಡು, ಅದನ್ನು ತಲೆಯಮೇಲಿಟ್ಟು ಶ್ಲಾಘಿಸುತ್ತಾ, ನಾಟ್ಯವಾಡುತ್ತಾ, ಪಾಡುತ್ತಾ ಶಿವನ ಭಕ್ತಿಯಿಂದ ಪರವಶನಾಗಿ ನೆಲದ ಮೇಲೆ ಬಿದ್ದನು. ಭಕ್ತಿಯ ಅತಿಶಯ ದಿಂದ ರೋಮಾಂಚವೆಂಬ ಕವಚವೊದಗಿ, ಸಂತೋಷಭರದಿಂದ ಆನಂದಬಾಷ್ಪ ವನ್ನು ಸುರಿಸುತ್ತಾ, ಅರಳಿದ ಕಣ್ಣುಗಳುಳ್ಳವನಾಗಿ ಏನು ಮಾಡಲೂ ತಿಳಿಯದೇ ಸಂತೋಷದಿಂದ ನಾಟ್ಯವಾಡಲಾರಂಭಿಸಿದನು. ॥೫-೬॥

ಅನಂತರ ಆ ಸಂಗೀತಗಾರನ ಕಡೆಗೆ ತಿರುಗಿ, ತನ್ನ ಸಮಸ್ತೈಶ್ವರ್ಯಗಳನ್ನೂ ಅವನಿಗೆ ದಾನವಾಗಿ ಕೊಟ್ಟುಬಿಟ್ಟನು. ಮಂತ್ರಿಗಳು ಬೇಡವೆಂದು ತಡೆದರೂ ತನ್ನ ಭೂಮಂಡಲವನ್ನೂ ಸಹ ಆತನಿಗೆ ಕಾಣಿಕೆಯಾಗಿ ಸಮರ್ಪಿಸಿದನು. ಇದನ್ನು ನೋಡಿ ಆ ಗಾಯಕನು ಮಂತ್ರಿಗಳನ್ನು ಕುರಿತು ನನಗೆ ಈ ರಾಜ್ಯದಿಂದೇನಾಗ ಬೇಕು? ನಾನು ಆ ಶಂಭುವಿನ ಹೆಸರೆಂಬ ಅಮೃತಪಾನದಿಂದ ಸುಖವಾಗಿರುವೆನೇ ಹೊರತು ಈ ಭೂಮಿಯಿಂದ ನನಗೇನೂ ಪ್ರಯೋಜನವಾಗುವುದಿಲ್ಲ. ॥೭-೮॥

ಸಂಪದಾಂ ಸಮುದಾಯೇನ ಭೂತ್ವಾ ಪತ್ರಂ ಪ್ರಸಾಧ್ಯತಾಂ ।
ಮನೋಪಯುಕ್ತಮೇತಾವದಧಿಕೇನ ಧನೇನ ಕಿಂ ॥೯॥

ಇತ್ಯುಕ್ತ್ವಾ ಸ್ವೋಚಿತಂ ದ್ರವ್ಯಂ ಮನೀಷೀ ಮಧುರಾಂ ಪ್ರತಿ ।
ಸ ಕದಾಚಿನ್ನೃಪಃ ಶಂಭುಂ ಪೂಜಾಂತೇ ನೂಪುರಧ್ವನಿಂ ॥೧೦॥

ಅಶೃಣ್ವನ್ತಾಂಡವೇಶಸ್ಯ ಯಥಾಪೂರ್ವಮಚಿಂತಯತ್ ।
ಅದ್ಯ ಕಿಂಕೃತಮೀಶಸ್ಯ ಮಯಾತ್ಯಂತನಿಷಣ್ಣಧೀಃ ॥೧೧॥

ಉರಃಸ್ಥಲಂ ತದಾ ಭೇತ್ತುಂ ಕೃಪಾಣಮುಗ್ರಹೀತ್ಕರೇ ।
ಮಧ್ಯೇ ವಕ್ಷಸಿ ತಂ ಖಡ್ಗಂ ನಿದಧಾನಂ ಮಹೀಪತಿಂ ॥೧೨॥

ರಾಜನ್ಮಾ ಸಾಹಸಂ ಕಾರ್ಷೀರ್ದೃಷ್ಟಿತುಲ್ಯೋಽಸಿ ಹೇ ನೃಪ ।
ವ್ಯಾಲಂಬಿ ಸುಂದರೇಶಸ್ಯ ಶ್ರೀಗಾನಂ ಶೃಣ್ವತಾಂ ಚಿರಂ ॥೧೩॥

---

ನಿಮ್ಮಲ್ಲಿರುವ ಐಶ್ವರ್ಯರಾಶಿಯಿಂದ ನನ್ನ ಕಾಗದಕ್ಕೆ ಮರ್ಯಾದೆಮಾಡಿರಿ ನನಗೆ ಬೇಕಾಗಿರುವುದು ಇಷ್ಟೇ. ಹೆಚ್ಚಿನ ದೇಶಕೋಶಗಳು ನನಗೆ ಲಾಭಪ್ರದಗಳಲ್ಲ ಎಂದು ಹೇಳಿ ಆ ವಿದ್ವಾಂಸನು ತನಗೆ ಬೇಕಾದಷ್ಟು ಹಣವನ್ನು ತೆಗೆದುಕೊಂಡು ಮಧುರಾಪಟ್ಟಣಕ್ಕೆ ಹೋದನು. ॥೯॥

ಆ ಮಹಾಗೋದರಾಜನು ಒಂದು ದಿನ ಶಂಕರನ ಪೂಜೆಯಾದನಂತರ ಪ್ರತಿದಿನವೂ ಕೇಳುತ್ತಿದ್ದ ತಾಂಡವೇಶ್ವರನ ಕಾಲುಗೆಜ್ಜೆಯ ಧ್ವನಿಯನ್ನು ಆ ದಿನ ಕೇಳದೇ, ಇಂದು ಈಶ್ವರನಿಗೆ ನಾನೇನು ಅಪರಾಧಮಾಡಿದೆನೋ ಎಂದು ತುಂಬಾ ಚಿಂತಾಕ್ರಾಂತಮನಸ್ಕನಾಗಿ, ತನ್ನ ಜನ್ಮವು ಇನ್ನು ವ್ಯರ್ಥವೆಂದು ಭಾವಿಸಿ ತನ್ನ ಎದೆಯನ್ನು ಸೀಳಿಕೊಳ್ಳುವೆನೆಂದು ಒಂದು ಕತ್ತಿಯನ್ನು ಹಿರಿದು ನಿಂತುಕೊಂಡನು. ॥೧೦-೧೧॥

ರಾಜನು ಶಿವಧ್ಯಾನಮಾಡಿ ಆ ಕತ್ತಿಯನ್ನು ಎದೆಯ ಮಧ್ಯಕ್ಕೆ ಸರಿಯಾಗಿ ತಿವಿದುಕೊಳ್ಳುತ್ತಿರುವಷ್ಟರಲ್ಲಿ, ಮಹೇಶ್ವರನು “ ಓ ರಾಜನೇ, ಸಾಹಸಕಾರ್ಯವನ್ನೆಸಗ ಬೇಡ. ರಾಜೇಂದ್ರ, ನೀನು ನನ್ನ ಕಣ್ಣಿಗೆ ಸಮನಾಗಿರುವೆ; ಸುಂದರೇಶ್ವರನ ಶ್ರೀಗಾನವನ್ನು ಬಹಳ ಕಾಲದಿಂದ ಕೇಳುತ್ತಾ ಇದ್ದ ನನ್ನಿಂದ ನಾಟ್ಯವಾಡುವುದಕ್ಕೆ ಕೊಂಚ ವಿಲಂಬವಾಯಿತು ! ” ಎಂದು ಆಕಾಶದಲ್ಲಿ ರಾಜನನ್ನು ಕುರಿತು ಅಶರೀರ ವಾಣಿಯಿಂದ ನುಡಿದನು. ॥೧೨-೧೩॥

ಇತಿ ವಾಕ್ಯಾಂಭವೀ ವ್ಯೋಮ್ನಿ ಸಮುದಸ್ಥಾ ನೃಪಂ ಪ್ರತಿ ।
ಇತ್ಥಂ ಸಭಾಪತೇರ್ವಾಣೀಂ ನಿಶಮ್ಯ ನೃಪತಿಸ್ತದಾ ॥೧೪॥

ಅಹೋ ದೇವದಯಾಭಕ್ತೇಷ್ವಿತಿ ವಿಸ್ಮಯಮಾಯಯೌ ।
ಅಹಂ ಹೇಮಸಭಾಂ ಗತ್ವಾ ನತ್ವಾತತ್ರ ನಟೇಶ್ವರಂ ॥೧೫॥

ದ್ರಕ್ಷ್ಯಾಮಿ ಬಲವದ್ಭಕ್ತವೃಕ್ಷೇಶ್ವರಪದಾಂಬುಜಂ ।
ಶ್ರಾವಯಾಮಾಸ ಮಂಜೀರನಾದಂ ಸ್ವತ್ಯಾಗಸಂಮತಂ ॥೧೬॥

ನೃಪೋ ನೂಪುರನಿಕ್ವಾಣಂ ಶೃಣ್ವನ್ತತ್ರ ಮಹೇಶಿತುಃ ।
ಅಪರ್ಯಂತಮಹಾನಂದಘನಾಂಭೋಧೌ ಮಮಜ್ಜ ಸಃ ॥೧೭॥

ಅಹರ್ನಿಶಂ ಮಹೇಶಸ್ಯ ಮಹಾಗೋದೋ ಮಹೀಪತಿಃ ।
ಅಸೇವತ ಪದದ್ವಂದ್ವಂ ಸೇವಿತಂ ಸರ್ವದೇವತೈಃ ॥೧೮॥

---

ಹೀಗೆ ಆ ಸಭಾಪತಿಯಾದ ಶಿವನ ಅಶರೀರವಾಣಿಯನ್ನು ಕೇಳಿ ರಾಜನು ಆಗ, ಓಹೋ! ಭಕ್ತರಲ್ಲಿ ಮಹಾದೇವನ ದಯೆಯು ಎಷ್ಟು ಅದ್ಭುತವಾಗಿದೆ? ಎಂದು ಆಶ್ಚರ್ಯಗೊಂಡನು. ಮತ್ತು ನಾನೂ ಹೇಮಸಭೆಗೆ ಹೋಗಿ ಅಲ್ಲಿ ನಟೇಶ್ವರನಿಗೆ ನಮಿಸಿ, ಭಕ್ತರೆಂಬ ವೃಕ್ಷಗಳಿಗೊಡೆಯನಾದ ಮಹೇಶನ ಪಾದಕಮಲವನ್ನು ಭಕ್ತಿಪೂರ್ವಕವಾಗಿ ಬಲಾತ್ಕಾರವಾಗಿ ನೋಡುವೆನು, ಎಂದು ನಿಶ್ಚಯಿಸಿ, ಮಧುರಾ ಪಟ್ಟಣಕ್ಕೆ ಹೋಗಿ ಸೇರಿದನು. ಅಷ್ಟು ಹೊತ್ತಿಗೆ ಅಲ್ಲಿ ಮಹಾದೇವನು ಭಕ್ತರಿಗೆ ಹಿತವನ್ನು ಕರುಣಿಸುವಂತಹ ತನ್ನ ಕಾಲ್ಗಡಗಗಳ ಧ್ವನಿಯು ಇವನಿಗೆ ಕೇಳುವಂತೆ ಮಾಡಿದನು. ॥೧೪-೧೫-೧೬॥

ಆ ಮಹಾಗೋದರಾಜನು ಮಹೇಶ್ವರನ ಕಾಲ್ಗಡಗದ ಆ ಧ್ವನಿಯನ್ನು ಕೇಳುತ್ತಾ ಮಹಾದೇವನನ್ನು ಸ್ತುತಿಸುತ್ತಾ, ಅಪರಿಮಿತವಾದ ಆನಂದಸಮುದ್ರದಲ್ಲಿ ಮುಳುಗಿದನು. ಹೀಗೆ ಆ ರಾಜನು ಹಗಲಿರುಳೂ ಸಕಲ ದೇವತೆಗಳಿಂದ ಸೇವಿಸಲ್ಪಟ್ಟ ಆ ಹಾಲಾಸ್ಯೇಶ್ವರನ ಪಾದಯುಗ್ಮಗಳನ್ನೇ ಸೇವಿಸುತ್ತಾ ಸಂತೋಷದಿಂದ ವಾಸಮಾಡುತ್ತಿದ್ದನು. ॥೧೭-೧೮॥

ನಟೇಶಸೇವಾಂ ಕುರ್ವಾಣೋ ಭಕ್ತಿರಕ್ತಃ ಸ ಪಾರ್ಥಿವಃ ।
ತತ್ರಾನ್ಯೈಷೀನ್ನಿಮಿಷವದವಸನ್ನಿಮಿಶಾನ್ಬಹೂನ್ ॥೧೯॥

ತದಾ ನೃಪಂ ಸಮಾಹೂಯ ಪ್ರೋವಾಚೇತ್ಥಂ ಸಭಾಪತಿಃ ॥೨೦॥

॥ ಶ್ರೀಶಿವ ಉವಾಚ ॥

ಸೌಮ್ಯೇಶಗಾನಮಾಕರ್ಣ್ಯ ಮಯಾ ನೃಪ ವಿಲಂಬಿತಂ ।
ಇತಿ ಹೇಮಸಭಾನಾಥವಾಕ್ಯಂ ಶ್ರುತ್ವಾ ಸ ಭೂಪತಿಃ ॥೨೧॥

ಅಥ ಜಂಬೂಪುರಾಧೀಶದರ್ಶನೋತ್ಸುಕಮಾನಸಃ ।
ಶ್ರೀತಿಲ್ಲನಗರಾತ್ತಸ್ಮಾತ್ಸೇನಯಾ ಸಹ ನಿರ್ಯಯೌ ॥೨೨॥

ತತ್ರ ಶ್ರೀಕಂಠಮುಖ್ಯಾನಿ ಸ್ಥಾನಾನೀಶಸ್ಯ ಸೇವಿತುಂ ।
ಭಕ್ತಿಯುಕ್ತಃ ಪ್ರಣಮ್ಯಾಸಾವಾಯಯೌ ಕಮಲಾಲಯಂ ॥೨೩॥

ನತ್ವಾ ಸ್ತುತ್ವಾ ಮಹಾದೇವಂ ವಲ್ಮೀಕೇಶಂ ಪ್ರಹೃಷ್ಟಧೀಃ ।
ಸುಂದರೇಶಂ ಸಮಾಲಿಂಗ್ಯ ತತ್ರೋಷಿತ್ವಾ ಚಿರಂ ನೃಪಃ ॥೨೪॥

---

ಅಲ್ಲಿ ನಟೇಶ್ವರನ ಸೇವೆಯನ್ನು ಮಾಡುತ್ತಾ ಭಕ್ತಿಪರವಶನಾದ ಆ ರಾಜನು ಅನೇಕ ದಿವಸಗಳನ್ನು ನಿಮಿಷಗಳಂತೆ ಕಳೆದನು. ಆಗ ಒಂದುಸಾರಿ ರಾಜನನ್ನು ಅನುಗ್ರಹಿಸಲು ಸಭಾಪತಿಯೆನಿಸಿದ ಮಹಾದೇವನು ಪ್ರೀತಿಯಿಂದ ರಾಜನ ಸ್ವಪ್ನದಲ್ಲಿ ಬಂದು, ॥೧೯-೨೦॥

“ಅಯ್ಯ ಮಹಾಗೋದರಾಜನೇ, ಸೌಮ್ಯೇಶ್ವರನ ಸಂಗೀತವನ್ನು ಕೇಳಿ ನಾನು ನಿನಗೆ ಕಾಲವಿಲಂಬಮಾಡಿದೆನು’ ಎಂದು ಹೇಳಲು ಆ ಹೇಮಸಭಾಪತಿಯ ವಾಕ್ಯವನ್ನು ಕೇಳಿ ಆ ರಾಜನು ಅಲ್ಲಿಂದ ಜಂಬೂಪುರಾಧೀಶ್ವರನನ್ನು ನೋಡಲು ಉತ್ಸಾಹವುಳ್ಳವನಾಗಿ ಆ ಶ್ರೀತಿಲ್ಲನಗರದಿಂದ ತನ್ನ ಸೇನೆಯೊಡನೆ ಹೊರಟನು. ॥೨೧-೨೨॥

ಅನಂತರ ಅಲ್ಲಿ ಶ್ರೀಕಂಠಕ್ಷೇತ್ರವೇ ಮೊದಲಾದ ಮುಖ್ಯ ಕ್ಷೇತ್ರಗಳನ್ನು ಸೇವಿಸಿ, ಭಕ್ತಿಭರಿತನಾಗಿ ಈ ಮಹಾಗೋದರಾಜನು ಶಿವಕ್ಷೇತ್ರಗಳಿಗೆ ನಮಸ್ಕರಿಸಿ, ಅಲ್ಲಿಂದ ಕಮಲಾಲಯ ಕ್ಷೇತ್ರಕ್ಕೆ ಹೋದನು. ಅಲ್ಲಿಯೂ ವಲ್ಮೀಕೇಶ್ವರನೆನಿಸಿದ ಮಹಾದೇವನಿಗೆ ಆರಾಧನೆಯನ್ನು ನಡೆಸಿ ಸಂತೋಷಚಿತ್ತನಾಗಿ ಸ್ತುತಿಸಿ ಸುಂದರೇ

ಸೌಮ್ಯೇನ ಗಚ್ಛತಾ ನಂತುಂ ಪಾಂಡ್ಯದೇಶಶಿವಾಲಯಾನ್ ।
ಚೋಲೋ ಯಯೌ ಹಾಲವಕ್ತ್ರಂ ಶಿವಶಾಸನಲಗ್ನಧೀಃ ॥೨೫॥

ಹಾಲಾಸ್ಯಲಾಸ್ಯಂ ನೃತ್ಯೇಶಂ ದೃಷ್ಟ್ವಾ ಹೃಷ್ಟೋ ನೃಪೋಽಭವತ್ ।
ಪ್ರಯಾತೌ ಪಥಿ ಭೂತೇಶಂ ಶ್ರೀಧಾಮಾನಿ ಪ್ರಣೇಮತುಃ ॥೨೬॥

ವಹಂತೀಂ ಸಹ್ಯಜಾಂ ತೀರ್ತ್ವಾ ತತ್ತೀರಸ್ಥಶಿವಾಲಯಂ ।
ದೃಷ್ಟ್ವಾ ನತ್ವಾಭಿತುಷ್ಟಾವ ಸುಂದರೇಶಾನಮಾದರಾತ್ ॥೨೭॥

ಪಂಚಾಪಗಾತಟಾಧೀಶಂ ನೇಮತುಶ್ಚೋಲಸುಂದರೌ ।
ತತೋ ಮಹೋದಯಪುರಂ ಸಂಪ್ರಾಪ್ಯ ಪ್ರೀತಮಾನಸೌ ॥೨೮॥

---

ಶ್ವರನನ್ನು ಆಲಿಂಗನಮಾಡಿಕೊಂಡು, ಅಲ್ಲಿಯೇ ಸಂತೋಷದಿಂದ ಬಹುಕಾಲ ವಾಸ ಮಾಡಿದನು. ॥೨೩-೨೪॥

ಅಲ್ಲಿಂದ ಮುಂದೆ ಪಾಂಡ್ಯದೇಶದಲ್ಲಿರುವ ಶಿವದೇವಾಲಯಗಳನ್ನೆಲ್ಲಾ ನೋಡಿಕೊಂಡು, ಅಲ್ಲಿದ್ದ ಶಿವಲಿಂಗಗಳಿಗೆ ನಮಸ್ಕರಿಸುತ್ತಾ, ಚೋಲರಾಜನು ಸುಂದರೇಶನ ಜೊತೆಹೊರಟು ಶಿವನ ಅಪ್ಪಣೆಯಲ್ಲಿಯೇ ಮನವಿಟ್ಟವನಾಗಿ ಮತ್ತೆ ಹಾಲಾಸ್ಯ ಕ್ಷೇತ್ರಕ್ಕೆ ಹೋದನು. ಅಲ್ಲಿ ಹಾಲಾಸ್ಯಕ್ಷೇತ್ರವಾಸಿಯಾದ ತಾಂಡವೇಶ್ವರನನ್ನು ದರ್ಶನಮಾಡಿ ರಾಜನು ತಾನು ಕೃತಕೃತ್ಯನೆನಿಸಿದನು. ಅಲ್ಲಿಂದ ಮುಂದೆ ಸುಂದರೇಶ ಮತ್ತು ಮಹಾಗೋದರಿಬ್ಬರೂ ಹೊರಟು, ದಾರಿಯಲ್ಲಿ ಸಿಕ್ಕಿದ ಶಿವಸ್ಥಾನಗಳಿಗೆಲ್ಲಾ ಹೋಗಿ ಅಲ್ಲಿರುವ ಶಿವಮೂರ್ತಿಗೆ ಪ್ರಣಾಮಮಾಡುತ್ತಾ ಮುಂದುವರಿದರು. ॥೨೫-೨೬॥

ಮುಂದೆ ಹರಿಯುತ್ತಿರುವ ಕಾವೇರೀನದಿಯನ್ನು ದಾಟಿ, ಅದರ ದಡದಲ್ಲಿದ್ದ ಶಿವದೇವಾಲಯಗಳನ್ನೆಲ್ಲಾ ಕಂಡು, ಆದರದಿಂದ ಅಲ್ಲಿರುವ ಶಿವಲಿಂಗಗಳನ್ನೆಲ್ಲಾ ಸುಂದರೇಶನೆಂದೇ ಭಾವಿಸಿ, ಸ್ತೋತ್ರಮಾಡುತ್ತಿದ್ದರು. ಅಲ್ಲಿಂದ ಮುಂದೆ ಪಂಚನದೀದಡದಲ್ಲಿರುವ ಶಿವನನ್ನು ಚೋಲರಾಜ ಮತ್ತು ಸುಂದರರಿಬ್ಬರೂ ದರ್ಶನಮಾಡಿ ನಮಸ್ಕರಿಸಿದರು. ಅಲ್ಲಿಂದ ಮುಂದೆ ಸಂತೋಷಯುಕ್ತವಾದ ಮನಸ್ಸಿನಿಂದ ಮಹೋದಯಪುರಕ್ಕೆ ಬಂದು, ಅಲ್ಲಿ ಬಗೆಬಗೆಯ ಆಟಗಳನ್ನಾಡುತ್ತಾ ಬಹುಕಾಲ ವಾಸಮಾಡಿದರು. ॥೨೭-೨೮॥

ಕುರ್ವಂತೌ ವಿವಿಧಾಂಕ್ರೀಡಾಂ ತಸ್ಮಿನ್ನ್ಯವಸತಾಂ ಚಿರಂ ।
ತತಃ ಸಚೋಲಃ ಸೌಮ್ಯಾಯ ಗಚ್ಛತೇ ಕಮಲಾಲಯೇ ॥೨೯॥

ದದೌ ಧನಾನಿ ಚಿತ್ರಾಣಿ ವಸ್ತ್ರಾಣ್ಯಾಭರಣಾನಿ ಚ ।
ಗಚ್ಛಂತಂ ಸುಂದರಂ ದೂರಾದನ್ವಗಾಚ್ಚೋಲಭೂಪತಿಃ ॥೩೦॥

ಚೋಲಃ ಶಿವರತಸ್ತತ್ರ ಉವಾಸ ಶಿವಧಾಮಸು ।
ಏಕಾತಪತ್ರೇಣ ಚಿರಂ ಸರ್ವಾಮುರ್ವೀಂ ಶಶಾಸ ಹಿ ॥೩೧॥

ಇತಿಹಾಸಂ ಶಾಂಭವಸ್ಯ ಕಥ್ಯತೇಽಸ್ಯ ಸುಖೋದಯಂ ।
ದ್ರೋಣೀಪುರೀಶ ಶ್ರೀಕರ್ಮಕರಣೈಕಪರಾಯಣಃ ॥೩೨॥

ಶಿವೋದ್ಯಾನಾರೋಪಣೇ ಚ ರಕ್ಷಣೇಽನುಕ್ಷಣೇ ರತಃ ।
ಪುಷ್ಪಾಪಚಯನೇ ಮಾಲಾಗ್ರಥನೇ ಸ ನ್ಯಯೋಜಯತ್ ॥೩೩॥

---

ಅಲ್ಲಿಂದ ಕೊಂಚಕಾಲದಲ್ಲಿಯೇ ಕಮಲಾಲಯಕ್ಷೇತ್ರಕ್ಕೆ ಮತ್ತೆ ಹೊರಟು ಅಲ್ಲಿ ಸುಂದರೇಶನಿಗೆ ಬೇಕಾದಷ್ಟು ಹಣವನ್ನೂ, ಚಿತ್ರವಿಚಿತ್ರಗಳಾದ ಬಟ್ಟೆಗಳನ್ನೂ ಅಮೂಲ್ಯವಾದ ಆಭರಣಗಳನ್ನೂ ಕೊಟ್ಟು, ಸುಂದರೇಶನ ಜೊತೆಯಲ್ಲಿಯೇ ಬಹುದೂರ ತಾನೂ ಹೋಗಿ ಕಳುಹಿಸಿಕೊಟ್ಟನು. ಹೀಗೆ ಆ ಚೋಲರಾಜನಾದ ಮಹಾಗೋದನು ಶಿವಭಕ್ತವರ್ಯನಾಗಿ ಶಿವಕ್ಷೇತ್ರಗಳಲ್ಲಿ ಬಹುದಿವಸ ವಾಸಮಾಡಿ, ಅದರ ಬಲದಿಂದ, ಏಕಚ್ಛತ್ರಾಧಿಪತಿಯೆನಿಸಿ ಸಕಲ ಭೂಮಂಡಲವನ್ನೂ ಕಾಪಾಡಿ ಕೀರ್ತಿಶೇಷನಾದನು. ॥೨೯-೩೦-೩೧॥

ಅಯ್ಯ ಜೈಗೀಷವ್ಯನೇ, ಮತ್ತೊಬ್ಬರ ಸುಖಕ್ಕಾಗಿ ಆವಿರ್ಭವಿಸಿದ ಒಬ್ಬ ಶಾಂಭವನ ಮತ್ತೊಂದು ಇತಿಹಾಸವನ್ನು ಹೇಳುವೆನು ಕೇಳು. ದ್ರೋಣೀಪುರಾಧಿಪತಿಯಾದ ಪರಮೇಶ್ವರನ ಮಂಗಳಕಾರ್ಯಗಳಲ್ಲೇ ನಿರತನಾದ ಒಬ್ಬ ಭಕ್ತನಿದ್ದನು. ಅವನು ಶಿವನಿಗಾಗಿ ಅನೇಕ ಉದ್ಯಾನಗಳನ್ನು ನೆಡಿಸುವುದು, ಅವುಗಳನ್ನು ಕಾಪಾಡಿಕೊಂಡು ಬರುವುದು, ಶಿವನಿಗೆ ಹೂಗಳನ್ನು ಕೊಯ್ದು ಹಾರಮಾಡುವುದು ಮುಂತಾದ ಸತ್ಕರ್ಮಗಳನ್ನು ಮಾಡುತ್ತಾ ಜೀವಿಸುತ್ತಿದ್ದನು. ॥೩೨-೩೩॥

ಶ್ರೀಮಜ್ಜನಾಂಬುನಯನಂ ಮಾರ್ಜನಾಲೇಪನಾದಿಷು ।
ಪ್ರದೀಪಾರೋಪಣೇ ಕಾಂಶ್ಚಿಚ್ಛೀಘ್ರಂ ಪುಸ್ತಕಲೇಖನೇ ॥೩೪॥

ತದ್ವಾಚನೇ ಚ ಕತಿಚಿನ್ನಿಯೋಜ್ಯ ಪ್ರಾಜ್ಯಜೀವನಂ ।
ಶಿವಭಕ್ತಿಕೃತಃ ಸರ್ವಾಂಸ್ತಾನುಚ್ಚೈರ್ಭಾಷಯನ್ಸದಾ ॥೩೫॥

ಇತ್ಯೇವಮಾದ್ಯತೋ ನಿತ್ಯಂ ಶಿವಕೈಂಕರ್ಯಕೃತ್ಸದಾ ।
ಪ್ರೀಣಯನ್ಜ್ಞಾನಸಂಬಂಧಪದದ್ವಂದ್ವಪ್ರಸನ್ನಧೀಃ ॥೩೬॥

ವರ್ಣಾಶ್ರಮಕುಲಾಚಾರನಿರತೋ ಭಸ್ಮಭೂಷಣಃ ।
ಪ್ರಹರ್ಷಭಕ್ತಿಶ್ರದ್ಧಾಭ್ಯಾಂ ಶಿವಭಕ್ತಾರ್ಚನೇ ರತಃ ॥೩೭॥

ತಸ್ಯ ಭಕ್ತಿಪರೀಕ್ಷಾರ್ಥಂ ತ್ರ್ಯಕ್ಷೋ ವಿಪ್ರಾಕೃತಿರ್ಬಭೌ ।
ಭಸ್ಮತ್ರಿಪುಂಡ್ರರುದ್ರಾಕ್ಷಭೂಷಿತೋ ಭಾಸುರಸ್ತಥಾ ॥೩೮॥

---

ಅವನು ಶಿವಲಿಂಗದ ಅಭಿಷೇಕಕ್ಕಾಗಿ ಅಗ್ರೋದಕವನ್ನು ತರುವುದಕ್ಕೂ, ತೈಲಮಾರ್ಜನ ಘೃತಲೇಪನ ಮುಂತಾದ ಕಾರ್ಯಗಳಿಗೂ, ದೀಪಮಾಲೆಗಳನ್ನು ಹೊತ್ತಿಸಿ ಮೇಲಿಡುವುದಕ್ಕೂ, ಕೆಲವರನ್ನು ನಿಯಮಿಸಿ, ಅವು ಸರ್ವದಾ ನಡೆಯು ವಂತೆ ಮಾಡಿದ್ದನು. ಹಾಗೆಯೇ ಶೈವಗ್ರಂಥಗಳನ್ನು ರಚಿಸುವುದಕ್ಕೂ, ರಚಿತವಾದ ಗ್ರಂಥಗಳನ್ನು, ಶಿವಲಿಂಗದ ಮುಂದೆ ಪಾರಾಯಣಮಾಡುವುದಕ್ಕೂ ಯೋಗ್ಯರಾದ ವರನ್ನು ನಿಯಮಿಸಿದ್ದನು. ॥೩೪-೩೫॥

ಹೀಗೆ ಶ್ರೇಷ್ಠವಾದ ತನ್ನ ಜೀವನವನ್ನು ಸಾಗಿಸುತ್ತಾ ಶಿವನಲ್ಲಿ ಭಕ್ತಿಯುಳ್ಳ ವರೊಡನೆ ಬೆರೆಯುತ್ತಾ, ಅವರನ್ನು ಗೌರವದಿಂದ ಮಾತನಾಡಿಸುತ್ತಾ ಕಾಲಕಳೆಯು ತ್ತಿದ್ದನು. ॥೩೪-೩೫॥

ಹೀಗೆ ನಿತ್ಯವೂ ಆದರದಿಂದ ನಾನಾರೀತಿ ಶಿವಸೇವೆಯನ್ನು ನೆರವೇರಿಸುತ್ತಾ ಯಾವಾಗಲೂ ಶೈವರನ್ನು ಸಂತೋಷಪಡಿಸುತ್ತಾ, ಜ್ಞಾನಸಂಬಂಧನ ಪಾದಯುಗ್ಮ ಗಳಲ್ಲಿ ಸ್ಥಿರಬುದ್ಧಿಯುಳ್ಳವನಾಗಿ ವರ್ಣಾಶ್ರಮ ಮತ್ತು ಕುಲಸಂಬಂಧವಾದ ಆಚಾರ ಗಳಲ್ಲಿ ಆಸಕ್ತಿಹೊಂದಿ ಭಸ್ಮವನ್ನು ಅಲಂಕರಿಸಿಕೊಂಡು ಸಂತೋಷಯುಕ್ತವಾದ ಭಕ್ತಿಶ್ರದ್ಧೆಗಳಿಂದ ಶೈವರಪೂಜೆಯಲ್ಲಿ ನಿರತನಾಗಿದ್ದನು. ॥೩೬-೩೭॥

ಅವನ ಭಕ್ತಿಯನ್ನು ಪರೀಕ್ಷೆಮಾಡಲು ಒಂದುಸಾರಿ ಪರಮೇಶ್ವರನು ಬ್ರಾಹ್ಮಣನ ವೇಷವನ್ನು ಧರಿಸಿ, ಭಸ್ಮತ್ರಿಪುಂಡ್ರ, ರುದ್ರಾಕ್ಷಗಳನ್ನಲಂಕರಿಸಿಕೊಂಡು

ಹೃದರ್ಥಂ ಕಿಂಚಿದಾಲಂಬ್ಯ ತದ್ಗೇಹಮುಗಮತ್ಸ್ವಯಂ ।
ತಂ ನತ್ವಾಹ ಗಣಶ್ರೇಷ್ಠಃ ಕಿಂಕರೋಮಿ ಪ್ರಶಾಧಿ ಮಾಂ ॥೩೯॥

ಇತ್ಯುಕ್ತೋ ಭೂಸುರಃ ಪ್ರಾಹ ಭಾಸುರಾಚಾರಚೇಷ್ಟಿತಂ ।
ವಿಚಾರೋ ಮೇ ಹೃದಿ ಚಿರಂ ಪ್ರರೂಢೋ ಗೂಢಮಪ್ಯಹಂ ॥೪೦॥

ವದಾಮಿ ತೇ ಶೃಣುಷ್ವೇತದೇಕಲಿಂಗಾರ್ಚಕಸ್ತ್ವಹಂ ।
ಭೋಕ್ಷ್ಯೇ ಗೃಹೇ ತೇ ಸಿದ್ಧಾನ್ನಂ ಸಂಪೂಜ್ಯ ಪ್ರಮಥಾಧಿಪಂ ॥೪೧॥

ಲಿಂಗಂ ಸಂಸ್ಥಾಪಯಾಮ್ಯದ್ಯ ಸ್ನಾತುಂ ಗಚ್ಛೇ ಸರಿದ್ವರಾಂ ।
ಇತ್ಯುಕ್ತ್ವಾ ನಿರ್ಗತೋ ವಿಪ್ರೋ ತಥೇತಿ ಪ್ರತಿಗೃಹ್ಯ ಸಃ ॥೪೨॥

ಲಿಂಗಂ ಸಂಸ್ಥಾಪಯಾಮಾಸ ಸ್ವಗೃಹೇ ಗೃಹಿಣೀಕರೇ ।
ಏತಸ್ಮಿನ್ನಂತರೇ ವಿಪ್ರೇ ಸ್ನಾತ್ವಾ ತತ್ರ ಸಮಾಗತೇ ॥೪೩॥

---

ದಿವ್ಯತೇಜಸ್ಸಿನಿಂದ ಶೋಭಿಸುತ್ತಾ, ಮನಸ್ಸಿನಲ್ಲಿ ಏನೋ ಒಂದರ್ಥವನ್ನಿಟ್ಟುಕೊಂಡು ಅವನ ಮನೆಗೆ ನಡೆದು ಬಂದನು. ಈ ರೀತಿ ಅಕಸ್ಮಾತ್ತಾಗಿ ಬಂದ ಅಭ್ಯಾಗತನಿಗೆ ನಮಸ್ಕರಿಸಿ ಭಕ್ತಶ್ರೇಷ್ಠನಾದ ಅವನು “ ಸ್ವಾಮಿ! ನಾನು ಧನ್ಯನಾದೆನು, ನಾನು ಈಗ ಮಾಡಬೇಕಾದುದೇನು? ಕೂಡಲೆ ನನಗೆ ಅಪ್ಪಣೆಯಾಗಬೇಕು ” ಎಂದು ಪ್ರಾರ್ಥಿಸಿದನು. ॥೩೮-೩೯॥

ಭಕ್ತನ ಮಾತುಗಳನ್ನು ಕೇಳಿ ಆ ಬ್ರಾಹ್ಮಣವೇಷಧಾರಿಯಾದ ಶಿವನು ವಿಶೇಷವಾಗಿ ತನ್ನ ಆಚಾರದ ಚೇಷ್ಟೆಯನ್ನು ಪ್ರಕಟಿಸುತ್ತಾ, ಅಯ್ಯ! ನನ್ನ ಮನಸ್ಸಿನಲ್ಲಿ ಅತಿ ರಹಸ್ಯವಾದ ಒಂದು ವಿಚಾರವಿದೆ. ಅದು ಅತ್ಯಂತ ಗೂಢವಾದರೂ ಈಗ ಅದನ್ನು ನಿನಗೆ ಹೇಳಿಬಿಡುತ್ತೇನೆ ಕೇಳು, ನಾನು ಏಕಲಿಂಗಪೂಜಕನು. ಆದ್ದರಿಂದ ಪ್ರಮಥಗಣಾಧಿಪನಾದ ಮಹೇಶನನ್ನು ಪೂಜಿಸಿ ಅನಂತರ ನಿನ್ನ ಮನೆಯಲ್ಲಿ ಸಿದ್ಧವಾದ ಅನ್ನವನ್ನು ಊಟಮಾಡುತ್ತೇನೆ. ॥೪೦-೪೧॥

ಇಗೋ, ಇಲ್ಲಿಯೇ ಪೂಜ್ಯವಾದ ಶಿವಲಿಂಗವನ್ನಿಟ್ಟಿರುವೆನು. ಇಲ್ಲಿಯೇ ಹರಿಯುವ ಕಾವೇರೀನದಿಗೆ ಹೋಗಿ ಸ್ನಾನಮಾಡಿ ಬರುವೆನೆಂದು ಹೇಳಿದನು. ಆ ಬ್ರಾಹ್ಮಣನು ಹಾಗೆಯೇ ಆಗಲೆಂದು ಒಪ್ಪಿಕೊಂಡು, ತನ್ನ ಮನೆಯಲ್ಲಿಟ್ಟ ಆ ಶಿವ ಲಿಂಗವನ್ನು ತನ್ನ ಹೆಂಡತಿಯ ಕೈಯಲ್ಲಿ ಕೊಟ್ಟು ಜೋಪಾನವಾಗಿ ನೋಡಿಕೊಳ್ಳು

ಅದರ್ಶನಂ ಗತೇ ಲಿಂಗೇ ಸ ವಿಪ್ರಃ ಸ ಚ ಭಾಸುರಃ ।
ಅನ್ವಿಷ್ಯ ಸುಚಿರಂ ತತ್ರ ಪ್ರಾಣಾಂಸ್ತ್ಯಕ್ತುಂ ಸ ವೈ ದ್ವಿಜಃ ॥೪೪॥

ಪ್ರಯತ್ನಮಕರೋತ್ತೇನ ಸದಾರೋಽಪಿ ಚ ಭೂಸುರಃ ।
ಪ್ರಾಣಾಂಸ್ತ್ಯಕ್ತುಮಥೋಚ್ಛ್ವಾಸಾಸ್ತ್ರಯೋಽಪಿ ವಿಧಿಚೋದಿತಾಃ ॥೪೫॥

ತದಾ ಮಹೇಶವಾಕ್ಯೇನ ಹರ್ಷಿತಾ ಭಕ್ತಿಶೋಧನೇ ॥೪೬॥

ಚೋಲಸ್ಯ ಚಾಪಿ ಗಣನಾಮಕಭೂಸುರಸ್ಯ
ಭಕ್ತಿಂ ದೃಢಾಂ ಪ್ರಮಥಪೋಽಥ ದೃಶಾ ವಿಲೋಕ್ಯ ।
ಕೈಲಾಸಶೈಲಮನಯತ್ಪ್ರಶಮಂ ಭವಾಬ್ಧೇ
ರುತ್ತಾರಣಂ ಶರಣಮೀಶಜನೇಷು ಶರ್ವಃ ॥೪೭॥

---

ವಂತೆ ಹೇಳಿದನು. ಸ್ವಲ್ಪ ಕಾಲಾನಂತರ ಶಿವಬ್ರಾಹ್ಮಣನು ಸ್ನಾನಮಾಡಿ ಅವನ ಮನೆಗೆ ಬಂದು ಶಿವಲಿಂಗವನ್ನು ಬೇಡಲು ಆ ಶಿವಲಿಂಗವು ಕಣ್ಣಿಗೆ ಕಾಣದೇ ಮಾಯವಾಗಿದ್ದಿತು. ಒಡನೆಯೇ ಆ ಬ್ರಾಹ್ಮಣನೂ, ಶೈವನೂ ಒಟ್ಟುಗೂಡಿ ಬಹಳ ಹೊತ್ತು ಹುಡುಕಿ ಕೊನೆಗೆ ದೊರೆಯದಿರಲು, ಬ್ರಾಹ್ಮಣನು ತನ್ನಿಂದ ಶೈವದ್ರೋಹ ವಾಯಿತೆಂದು ತಿಳಿದು ಪ್ರಾಣತ್ಯಾಗಮಾಡಲು ಸಿದ್ಧನಾಗಿ ನಿಂತನು. ॥೪೨-೪೪॥

ಹಾಗೆ ಪತ್ನೀಸಮೇತನಾಗಿ ಬ್ರಾಹ್ಮಣನು ಪ್ರಾಣತ್ಯಾಗಮಾಡಲು ಪ್ರಯತ್ನಿಸಿದಾಗ ಅವನ ಉಚ್ಛ್ವಾಸವೆಲ್ಲವೂ ವಿಧಿಪ್ರಕಾರ ಹೊರಹೊರಡಲು ಸಿದ್ಧವಾಗಿ ಬ್ರಹ್ಮರಂಧ್ರದಿಂದ ಹಾರಿಹೋದವು. ಬ್ರಾಹ್ಮಣನೂ ಮಾಯವಾದನು. ಭಕ್ತನ ಮುಕ್ತಿಸಾಧನೆಗಾಗಿ ಈ ಪ್ರಯತ್ನ ಪರಮೇಶ್ವರನಿಂದಲೇ ನಡೆಯಲ್ಪಟ್ಟಿತೆಂದು ತಿಳಿದು ಎಲ್ಲರೂ ಅದರಿಂದ ಸಂತುಷ್ಟರಾದರು. ॥೪೫-೪೬॥

ಚೋಲರಾಜನಾದ ಮಹಾಗೋದ ಮತ್ತು ಗಣಸಂಜ್ಞಕನಾದ ಬ್ರಾಹ್ಮಣ ಇವರೀರ್ವರ ದೃಢವಾದ ಭಕ್ತಿಯನ್ನು ಮಹಾದೇವನು ತನ್ನ ಕೃಪಾದೃಷ್ಟಿಯಿಂದ ನೋಡಿ, ಅವರನ್ನು ಸಂಸಾರಸಾಗರದಿಂದ ದಾಟಿಸುವವನಾಗಿ ಅವರಿಬ್ಬರನ್ನೂ ತನ್ನ ಕೈಲಾಸಪರ್ವತಕ್ಕೆ ಕರೆದುಕೊಂಡನು. ಕರುಣಾಳುವಾದ ಮಹೇಶ್ವರನು ಯಾವಾಗಲೂ ತನ್ನ ಭಕ್ತಜನರನ್ನು ಉದ್ಧಾರಮಾಡುವುದರಲ್ಲಿ ಶರಣನಲ್ಲವೆ, ಎಂದು ಜೈಗೀಷವ್ಯಾದಿ ಮುನಿಗಳಿಗೆ ಕುಮಾರಸ್ವಾಮಿಯು ಹೇಳಿದನು. ॥೪೭॥

ಇತಿ ಶ್ರೀಶಿವರಹಸ್ಯೇ ನವಮಾಂಶೇ ಸದಾಶಿವಾಖ್ಯೇ
ಚೋಲಭೂಪತೇರಾಖ್ಯಾನವರ್ಣನಂ ನಾಮಾಷ್ಟಪಂಚಾಶೋಽಧ್ಯಾಯಃ

---

ಇಲ್ಲಿಗೆ ಶ್ರೀಶಿವರಹಸ್ಯದಲ್ಲಿ ಸದಾಶಿವಸಂಜ್ಞಕವಾದ ಒಂಬತ್ತನೆಯ ಅಧ್ಯಾಯದಲ್ಲಿ
ಚೋಲ ರಾಜನ ಕಥಾವರ್ಣನೆಯೆಂಬ ಐವತ್ತೆಂಟನೆಯ ಅಧ್ಯಾಯವು
ಮುಗಿದುದು.



॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀ ಶಿವರಹಸ್ಯೇ

## ಸದಾಶಿವಾಖ್ಯೇ

## ನವಮಾಂಶೇ

## ಏಕೋನಷಷ್ಟಿತಮೋಽಧ್ಯಾಯಃ

॥ ಶ್ರೀಸ್ಕಂದ ಉವಾಚ ॥

ತತಃ ಕೃತಾಭಿತಾಂತಸ್ಯ ಕೃತಕೀರ್ತೇಃ ಕೃತಾತ್ಮನಃ ।
ಕೃತಾಂತಕಸ್ಯ ಚರಿತಂ ದುರಿತಾಪಹಮುಚ್ಯತೇ ॥೧॥

ಯಃ ಶೂರವೀರಧೀರಾಣಾಂ ವಿಜೇತಾ ವಿಜಿತೇಂದ್ರಿಯಃ ।
ಸ ಭಕ್ತೋಽಭವದೀಶಾನೇ ಕಲಿಂದಾಪುರನಾಯಕಃ ॥೨॥

ಮಹೇಶ್ವರಾಯ ಜಿಹ್ವಾಯಾಂ ಪ್ರಹ್ವಾಯಾಂ ಪರಿವರ್ತಯನ್ ।
ನಿತ್ಯಂ ಭಕ್ತಪದಾರ್ಚಾತೋ ನಾನ್ಯಚ್ಚಕ್ರೇ ಪರಾಯಣಂ ॥೩॥

---

## ಐವತ್ತೊಂಬತ್ತನೆಯ ಅಧ್ಯಾಯ

ಅಯ್ಯ ಜೈಗೀಷವ್ಯನೇ, ಇನ್ನು ಮುಂದೆ ಸಕಲ ದಿಕ್ಕುಗಳನ್ನೂ ಗೆದ್ದು ಕೃತಕೃತ್ಯನಾಗಿ ಕೀರ್ತಿಪಡೆದಿರುವ ಕೃತಾಂತಕನೆಂಬ ಶೈವಶ್ರೇಷ್ಠನ ಪಾಪನಾಶಕವಾದ ಕಥೆಯನ್ನರುಹುವೆನು ಕೇಳು. ಯಾವ ಈ ಭಕ್ತನು ಶೂರರೂ, ವೀರರೂ ಮತ್ತು ಧೀರರೂ ಎನಿಸಿರುವರನ್ನೆಲ್ಲಾ ಜಯಿಸಿ, ಜಿತೇಂದ್ರಿಯನಾಗಿ ಈಶ್ವರನ ಪರಮ ಭಕ್ತನೆನಿಸಿ ಕಲಿಂದಾಪಟ್ಟಣಕ್ಕೆ ರಾಜನಾಗಿದ್ದನು. ॥೧-೨॥

ಆ ಊರಿನಲ್ಲಿರುವ ಶಿವಾಲಯವನ್ನು ನಿತ್ಯವೂ ಅವನು ಪ್ರವೇಶಿಸುತ್ತಾ ಅಲ್ಲಿ ಶಿವಧ್ಯಾನಮಾಡುತ್ತಿರುವಾಗ ತನ್ನ ನಾಲಿಗೆಯ ವ್ಯತ್ಯಾಸದಿಂದಲೂ, ಮತ್ತಾವ ದೇವರ ಹೆಸರನ್ನೂ ಹೇಳದೆ ಪ್ರತಿದಿನವೂ ಶೈವರ ಪಾದಪೂಜೆಯನ್ನು ನಿಯಮದಿಂದ ನೆರವೇರಿ

ವೀರಃ ಸ ಗೌರೀರಮಣ ಕರುಣಾಕವಚೋ ರಣೇ ।
ವ್ಯದ್ರಾವಯನ್ನೃಪಾನ್ವೇಷಾನ್ನಾಗಾನಿವ ಖಗಾಧಿಪಃ ॥೪॥

ವಿಧ್ವಸ್ತೇಷು ಸಮಸ್ತೇಷು ವಿದ್ರುತೇಷು ನೃಪೇಷು ಸಃ ।
ಪ್ರಾಜ್ಯ ಪೂಜ್ಯಗುಣೈರಾಜ್ಯಂ ವಿಭಜ್ಯ ಪ್ರಶಶಾಸ ಸಃ ॥೫॥

ಸ ಚಕಾರ ದ್ವಿಜಾರ್ಚಾಂ ಸ ಶಿವದ್ರೋಹಕೃತಾಂ ಚ ತತ್ ।
ಕೃತಾಂತಕ ಇತಿ ಖ್ಯಾತಃ ಸ ನಾಮ್ನಾ ಭವದುಗ್ರರಾಟ್ ॥೬॥

ನೃಪೈರರಿಭಿರಾಧೂತೋ ಗರ್ವಿತೈದ್ರೋಣದಾಮವಾನ್ ।
ನಿರ್ಜಿತ್ಯ ದುರ್ಜಯಾನೇತಾನ್ಸಶೀರ್ಷಸ್ರಜಂ ದಧೌ ॥೭॥

ಮುಕುಟೇನ ವಿನಾ ರಾಜಾ ವಿರಾಜಿತಪರಾಕ್ರಮಃ ।
ಅಪಾಲಯತ್ಕೃಪಾಮೂಲಂ ಸರಸಾಂ ಸಾಗರಾಂಬರಾಂ ॥೮॥

---

ಸುತ್ತಾ ಬೇರೆ ಯಾವುದಕ್ಕೂ ಅಷ್ಟು ಗಮನಕೊಡದೆ ಶೈವಶ್ರೇಷ್ಠನೆನಿಸಿಕೊಂಡಿದ್ದನು. ವೀರನಾದ ಅವನು ಗೌರೀರಮಣನಾದ ಪರಶಿವನ ದಯಾಮಯವಾದ ಕವಚವನ್ನು ಧರಿಸಿ, ಯುದ್ಧರಂಗದಲ್ಲಿ ನೃಪವೇಷಧಾರಿಗಳಾದ ರಾಜರನ್ನೆಲ್ಲಾ ಪಕ್ಷಿರಾಜನಾದ ಗರುಡನು ಸರ್ಪಗಳನ್ನು ಕೊಲ್ಲುವಂತೆ ನಾಶಗೊಳಿಸುತ್ತಿದ್ದನು. ॥೩-೪॥

ಹೀಗೆ ತನ್ನಿಂದ ಸಮಸ್ತ ರಾಜರೂ ಸೋತು ಓಡಿಹೋಗಲು ಅವನು ಉತ್ತಮವಾದ ತನ್ನ ದೊಡ್ಡ ರಾಜ್ಯವನ್ನು ಪೂಜ್ಯವಾದ ತನ್ನ ಗುಣಗಳಿಂದ ವಶಮಾಡಿಕೊಂಡು, ಧರ್ಮದಿಂದ ರಾಜ್ಯಭಾರಮಾಡತೊಡಗಿದನು. ಅವನು ಸರ್ವದಾ ಶೈವದ್ವಿಜರ ಪೂಜೆಮಾಡುತ್ತಾ ಶಿವದ್ರೋಹಿಗಳಾದವರಿಗೆ ಯಮನಂತೆ ಅತ್ಯುಗ್ರಶಾಸಕನಾಗಿ ಕೊನೆಗೆ ಅದರಿಂದಲೇ ಕೃತಾಂತಕ ಎಂಬ ಹೆಸರನ್ನು ಪಡೆದು ಉಗ್ರರಾಜನೆನಿಸಿಕೊಂಡನು. ॥೫-೬॥

ಅಹಂಕಾರಿಗಳಾದ ಶತ್ರುರಾಜರನ್ನು ಎದುರಿಸಲು ಹೋಗುವಾಗ ಈ ರಾಜನು ತುಂಬೆಹೂವಿನ ಮಾಲೆಯನ್ನು ಹಾಕಿಕೊಂಡು ಯುದ್ಧಮಾಡುತ್ತಾ ಅಜೇಯರಾದಅವರನ್ನೆಲ್ಲಾ ಕ್ಷಣಕಾಲದಲ್ಲಿ ಗೆದ್ದು ಕೊನೆಗೆ ಅವರ ಶಿರೋಹಾರಗಳನ್ನು ಎಳೆದು ತರುತ್ತಿದ್ದ ರಾಜನು ಸ್ವಯಂಕಿರೀಟವನ್ನೇ ಧರಿಸಿಕೊಳ್ಳದೆ, ಸ್ವಪರಾಕ್ರಮದಿಂದಲೇ ರಾಜನೆನಿಸಿ ವಿರಾಜಿಸುತ್ತಾ ದಯಾಪೂರ್ವಕವಾಗಿ ಸಾಗರವನ್ನೇ ವಸ್ತ್ರದಂತೆ ಪಡೆದಿರುವ ಅಖಂಡಭೂಮಂಡಲವನ್ನೆಲ್ಲಾ ಕಾಪಾಡಿದನು. ॥೭-೮॥

ಸ ರಾಜಾ ಮಣಿಕೋಟೀರಧಾರಣಾಯ ಕೃತೋದ್ಯಮಃ ।
ಪ್ರಖ್ಯಾತಾನ್ಪ್ರಾರ್ಥಯಾಮಾಸ ಶ್ರೀತಿಲ್ಲಪುರಭೂಸುರಾನ್ ॥೯॥

ವಯಂ ಚೋಲಮಹೀಪಾಲಾ ಮಣಿಕೋಟೀರದಾಯಿನಃ ।
ನೇತರೇಣೇತಿ ಸಂಪ್ರೋಚ್ಯ ತೇ ಯಯುಃ ಕೇರಳಕ್ಷಿತಿಂ ॥೧೦॥

ಶಿವಾರ್ಚನಾಯ ತತ್ರೈಕಸ್ತಸ್ಥೌ ತಿಲ್ಲಪುರೇ ದ್ವಿಜಃ ।
ಚಿರಂ ತಿಲ್ಲಪುರೇ ವಾಸಾನ್ನ್ಯವಸತ್ ಕೇರಳೇ ಸುಖಂ ॥೧೧॥

ಶ್ರೀತಿಲ್ಲಪುರವಿಪ್ರೇಷು ತಥಾ ಭೂತೇಷು ತೇಷು ಸಃ ।
ರಾಜಾ ಸ ಸಂಶಯೋ ಭೇಜೇ ಸಭಾನಾಥಂ ಕೃತಾಂತಕಃ ॥೧೨॥

ಮಹೇಶ ಮುಕುಟಂ ದೇಹಿ ಭಗವತ್ಪಾದಯುಗಂ ಮಮ ।
ಇತಿ ಪ್ರಾರ್ಥನಯಾ ಸಾರ್ಧಂ ನಿದ್ರಾಂ ನಿಶಿ ವಿವೇಶ ಸಃ ॥೧೩॥

---

ಆ ರಾಜನು ಒಂದುಸಾರಿ ರತ್ನಕಿರೀಟವನ್ನು ಧರಿಸಬೇಕೆಂದು ಅಪೇಕ್ಷಿಸಿ, ಆ ತಿಲ್ಲಪುರದಲ್ಲಿ ಪ್ರಸಿದ್ಧರಾದ ಬ್ರಾಹ್ಮಣರಲ್ಲಿಗೆ ಹೋಗಿ ಉತ್ತಮ ರತ್ನಗಳನ್ನು ಬೇಡಿದನು. ಆಗ ಅವರು "ಎಲೈ ರಾಜನೇ, ನಮಗೆ ಚೋಲಮಹಾರಾಜರು ಅನೇಕ ಮಣಿಕುಟೀರವನ್ನು ದಾನವಾಗಿ ದಯಪಾಲಿಸಿದ್ದರು. ಬೇರೆ ಯಾರೂ ನಮಗೆ ಅಷ್ಟನ್ನು ಕೊಡಲಿಲ್ಲ. ಆದರೆ ಈ ರೀತಿ ನಮ್ಮನ್ನು ಯಾರೂ ಕೇಳಿರಲಿಲ್ಲ" ಎಂದು ಹೇಳಿ, ಅಲ್ಲಿ ಯಾರೂ ನಿಲ್ಲದೆ ಕೇರಳ ದೇಶಕ್ಕೆ ಓಡಿಹೋದರು. ॥೯-೧೦॥

ಆ ತಿಲ್ಲಪುರದ ಬ್ರಾಹ್ಮಣರಲ್ಲಿ ಪರಶಿವನ ಪೂಜೆಗಾಗಿ ಒಬ್ಬನು ಮಾತ್ರ ನಿಂತನು. ಉಳಿದವರೆಲ್ಲರೂ ಇದೇ ಕಾರಣದಿಂದ ಆ ತಿಲ್ಲಪುರವನ್ನು ಬಿಟ್ಟು ಕೇರಳ ದೇಶದಲ್ಲೇ ಸುಖವಾಗಿ ನೆಲಸತೊಡಗಿದರು. ಹೀಗೆ ಶ್ರೀತಿಲ್ಲಪುರದ ಬ್ರಾಹ್ಮಣರು ತಿರಸ್ಕರಿಸಿಹೋದಮೇಲೆ ಆ ರಾಜನಾದ ಕೃತಾಂತಕನು ಅವರ ವಿಷಯದಲ್ಲಿ ಬಹಳವಾಗಿ ಜುಗುಪ್ಸೆಪಟ್ಟು ಸಭಾನಾಥನಾದ ಪರಮೇಶ್ವರನನ್ನು ಈ ರೀತಿ ಪ್ರಾರ್ಥಿಸಿದನು. ॥೧೧-೧೨॥

"ಸಕಲೈಶ್ವರ್ಯಭರಿತನಾದ ಓ ಮಹೇಶ್ವರನೇ, ನನಗೆ ಕಿರೀಟರೂಪವಾಗಿ ನಿನ್ನ ಪಾದಗಳೆರಡನ್ನೂ ಅನುಗ್ರಹಿಸಿ ಕೊಡು" ಎಂದು ಪ್ರಾರ್ಥಿಸಲು ಆ ದಿನ ಆ ಪ್ರಾರ್ಥನೆಯೊಡನೆ ಅವನಿಗೆ ರಾತ್ರಿಯಲ್ಲಿ ನಿದ್ರೆ ಹತ್ತಿತು. ಅವನ ಕನಸಿನಲ್ಲಿ ಪರಶಿವನು

ದರ್ಶಯಿತ್ವಾ ನಿಜಂ ರೂಪಂ ತಸ್ಮೈ ಸ್ವಪ್ನೇ ಸಭಾನಟಃ ।
ಅಥಾನ್ನಿಜಪದದ್ವಂದ್ವಂ ತನ್ಮೂರ್ಧ್ನಿ ಮುಕುಟೋಪಮಂ ॥೧೪॥

ಪ್ರಬುದ್ಧ ಉತ್ಥಿತಃ ಪ್ರಾತಃ ನಟೇನಾಥ ಪದಾಂಬುಜಂ ।
ದಧಾನೋ ಮೂರ್ಧ್ನಿ ಕೋಟೀರಂ ಮಹಾರಾಜಧುರಂ ದಧೌ ॥೧೫॥

ಸಾಕ್ಷಾತ್ತ್ರ್ಯಕ್ಷಪ್ರಸಾದೇನ ವೀಕ್ಷಿತೋ ವಿಶ್ವರಕ್ಷಿತಾ ।
ಚಕ್ರೇ ರತ್ನಮಯಂ ಸರ್ವಂ ಶ್ರೀಮಹೇಶ್ವರಮಂದಿರಂ ॥೧೬॥

ಶಿವಧಾಮಾನಿ ಚಾನ್ಯಾನಿ ಮಹೋತ್ಸವಯುತಾನಿ ಚ ।
ಪೂಜಯಾಮಾಸ ಸ ತದಾ ಧನದೋಪಮಸಂಪದಾ ॥೧೭॥

ಧೀರಃ ಕೇರಳದೇಶಸ್ಥಾನಾಹ್ವಯನ್ಭೂಸುರಾನ್ನೃಪಃ ।
ಯಥಾಪೂರ್ವಂ ತಿಲ್ಲವನೇ ಸ್ಥಾಪಯಾಮಾಸ ತಾನ್ದ್ವಿಜಾನ್ ॥೧೮॥

ಅಸತ್ಯದಾಸ್ಯ ಇತಿ ವೈ ತತ್ರಾಭೂತ್ಕವಿಶೇಖರಃ ।
ನವಂ ಸಾರಸ್ವತರಸಂ ಯೋ ಮೇನೇ ಜನ್ಮನಃ ಫಲಂ ॥೧೯॥

---

ತನ್ನ ನಿಜರೂಪವನ್ನು ಅವನಿಗೆ ತೋರಿಸಿ, ಸಭಾಪತಿಯೆನಿಸಿದ ಪರಶಿವನು ಕಿರೀಟ ಸದೃಶವಾದ ತನ್ನ ಪಾದಗಳೆರಡನ್ನೂ ಅವನ ತಲೆಯಮೇಲಿಟ್ಟನು. ॥೧೩-೧೪॥

ಅನಂತರ ಬೆಳಗ್ಗೆ ಎದ್ದು ನಟೇಶ್ವರನ ಪಾದಕಮಲರೂಪವಾದ ಕಿರೀಟವನ್ನು ತಲೆಯಲ್ಲಿ ಧರಿಸಿ ಮಹಾರಾಜನೆಂಬ ಪಧವಿಯನ್ನು ಹೊಂದಿದನು. ಆ ಸಾಕ್ಷಾನ್ಮಹಾದೇವನ ಅನುಗ್ರಹದಿಂದ ಧನ್ಯನಾದ ಈ ರಾಜನು ಶ್ರೀಮಹೇಶ್ವರನ ದೇವಾಲಯವನ್ನೆಲ್ಲಾ ರತ್ನಮಯವನ್ನಾಗಿ ಮಾಡಿಸಿದನು. ॥೧೫-೧೬॥

ಅಲ್ಲದೇ ಇತರ ಶಿವಸ್ಥಾನಗಳಲ್ಲಿಯೂ ವಿಶೇಷ ಉತ್ಸವಗಳೊಡನೆ ತನ್ನ ಕುಬೇರಸದೃಶವಾದ ಧನಸಂಪತ್ತಿನಿಂದ ಶಿವಾರ್ಚನೆಮಾಡಿಸಿ, ಧೀರನಾದ ಆತನು ಕೇರಳ ದೇಶಕ್ಕೆ ಹೋಗಿ ಅಲ್ಲಿ ನೆಲಸಿರುವ ಬ್ರಾಹ್ಮಣರನ್ನು ಪುನಃ ಕರೆಸಿ ಅವರಿಗೆ ಆ ವಿಷಯವನ್ನು ತಿಳಿಸಿ ಹಿಂದಿನಂತೆ ಅವರೆಲ್ಲಾ ಆ ತಿಲ್ಲವನದಲ್ಲಿಯೇ ವಾಸಮಾಡುವಂತೆ ಮಾಡಿದನು. ॥೧೭-೧೮॥

ಅದೇ ತಿಲ್ಲಪುರದಲ್ಲಿ ಅಸತ್ಯದಾಸ್ಯನೆಂಬ ಕವಿರಾಜನಿದ್ದನು. ಅವನು ಹೊಸದಾದ ಸರಸ್ವತೀದಯಾರೂಪವಾದ ಕವಿತೆಯೇ ತನ್ನ ಜನ್ಮದ ಫಲವೆಂದು ತಿಳಿದಿದ್ದನು.

ಸ ಭಕ್ತಿರಸಯಾ ಸೂಕ್ತ್ಯಾ ವಿನಾ ವಿಷಮಲೋಚನಂ ।
ಸ್ತೋಷ್ಯಾಮ್ಯಹಂ ಸುರಂ ನಾನ್ಯಂ ನರಂ ವೇತ್ಯಾತ್ತನಿಶ್ಚಯಃ ॥೨೦॥

ಏವಮೇವ ಶಿವಾನ್ನಾನ್ಯಮಸ್ತಾವೀತ್ಸ ಯತಸ್ತತಃ ।
ಅಸತ್ಯದಾಸ್ಯಸಹಿತಃ ಅತಿದಾಸ್ಯ ಇತಿ ಶ್ರುತಃ ॥೨೧॥

ಸುಧಾಧಾಮಖಂಡೋಜ್ವಲಚ್ಚಾರುಮೌಳೇ
ಲಲಚ್ಚಾರುಕಾಕೋದರಾಪಾರ ಹಾರ ।
ಸ್ಫುರತ್ಸಾರ ಕರ್ಪೂರಧಾರಾಶರೀರ
ಸ್ಮರಾಪಾರಗರ್ವಾಪಹಾರ ಪ್ರಸೀದ ॥೨೨॥

ಸುಗಂಗಾತರಂಗೌಘರಿಂಖಜ್ಜಟಾಜೂಟನೀಡಪ್ರಫುಲ್ಲಾಂಬು
ಜಾರಕ್ತನಿರ್ಯತ್ಪ್ರಭಾಕೋಟಿಕೋಟಾನಲಾಕಾರಫಾಲ ತ್ರಿಪುಂ
ಡ್ರಾಂಕಮಧ್ಯೋಜ್ವಲನ್ನೀಲಕಂಠಂ । ಅಗಾಧೀಶಕನ್ಯಾಸನಾಥ
ಪ್ರಸೀದ ಪ್ರಭೋ ಮಾರಮಾರಾಂತಕಭೋಗಿಭೋಗಾಂಧಕಾದ
ಗ್ಧಸಂದಿಗ್ಧರಕ್ತತ್ರಿಶೂಲಂ ॥೨೩॥

---

ಅವನು ಭಕ್ತಿರಸಪೂರ್ಣವಾದ ಒಳ್ಳೆಯ ಕವಿತೆಗಳಿಂದ ಮಹಾದೇವನನ್ನು ಬಿಟ್ಟು ಇತರ ಯಾವ ದೇವತೆಯನ್ನಾಗಲೀ ಮಾನವನನ್ನಾಗಲೀ ಸ್ತೋತ್ರಮಾಡುವುದಿಲ್ಲ ವೆಂದು ದೃಢನಿಶ್ಚಯಮಾಡಿಕೊಂಡಿದ್ದನು. ಹೀಗೆಯೇ ನಿಯಮದಿಂದ ಇರುತ್ತಾ ಶಿವನನ್ನು ಬಿಟ್ಟು, ಉಳಿದ ಯಾರನ್ನೂ ಅವನು ಸ್ತೋತ್ರಮಾಡದೆ ಜೀವಿಸಿದ್ದರಿಂದ ಅವನಿಗೆ ಅಸತ್ಯದಾಸ್ಯ ಎಂಬ ಹೆಸರಿನ ಜೊತೆಗೆ 'ಅತಿದಾಸ್ಯ' ಎಂಬ ಹೆಸರೂ ಪ್ರಖ್ಯಾತವಾಯಿತು. ॥೧೯-೨೦-೨೧॥

ಅರ್ಧಚಂದ್ರಲೇಖೆಯಿಂದ ಉಜ್ಜ್ವಲವಾಗಿರುವ ಮನೋಹರವಾದ ತಲೆಯುಳ್ಳ ಶಿವನೇ, ಚಂಚಲವಾದ ಸುಂದರ ಸರ್ಪವನ್ನೇ ಹಾರವನ್ನಾಗಿ ಧರಿಸಿ, ಕರ್ಪೂರದ ಧಾರೆಯಂತೆ ಸ್ಫುರಿಸುತ್ತಿರುವ ಶರೀರವುಳ್ಳವನಾಗಿ ಮನ್ಮಥನ ಅಪಾರವಾದ ಅಹಂಕಾರ ವನ್ನು ಹೋಗಲಾಡಿಸಿದ ಶಂಕರನೇ, ಪ್ರಸನ್ನನಾಗು. ॥೨೨॥

ದೇವಗಂಗಾನದಿಯ ಅಲೆಗಳಿಂದ ಕುಣಿಯುತ್ತಿರುವ ಜಡೆಗಳುಳ್ಳವನೇ, ಆ ಜಡೆಗಳ ಮಧ್ಯದಲ್ಲಿ ಅರಳಿದ ಕೆಂದಾವರೆಗಳಂತೆ ಹೊರಟಿರುವ ಪ್ರಭಾಸಮೂಹ ಗಳಿಂದ ಶೋಭಿಸುತ್ತಿರುವ ಅಗ್ನಿರೂಪವಾದ ಹಣೆಗಣ್ಣುಳ್ಳವನೇ, ಆ ಹಣೆಯ

ವಿಶಾಲಾಕ್ಷ ಉಕ್ಷಾಂಗ ಸಂಸ್ಥಾನ ಹರ್ಷಪ್ರಕರ್ಷಾನುತರ್ಷಾ
ನಟಿಲ್ಲೋಲ ದಿಕ್ಪಾಲ ಬೃಂದೋಜ್ವಲಚ್ಚಾರು ಮೌಳೀ ವಿಲೋ
ಲಾಬ್ಜ ಪಾದಾಧ್ವರಾಧ್ಯಕ್ಷಸಾಹಿ । ಶಿವಾನಂಗಭಂಗೋತ್ಥ
ಭಸ್ಮಾಂಗಸಂಗ ಕೃತಾರ್ಧಾಂಗರಾಮಾಂಗಲಿಂಗೋತ್ತಮಾಂಗ ॥೨೪॥

ಭುಜಂಗಾಂತಭೂಷಾನಲಾಕ್ಷೋರುಭಾಸಾವಿಶೇಷಾಂಗಪ್ರಸೀದ
ಪ್ರಭೋ ವಿಶ್ವವಿಶ್ವಾಧಿಕಾಶಾಸ್ಯಗೋಧ್ಯಕ್ಷಮುಕ್ಷಾಧ್ವರಾಧ್ಯಕ್ಷ
ದಕ್ಷಾಧ್ವರಧ್ವಾಂಕ್ಷ ಭೂತಾಸುರಾಧ್ಯಕ್ಷ ಶಿಕ್ಷಾ ವಿನೋದ ॥೨೫॥

---

ಮಧ್ಯದಲ್ಲಿ ಪ್ರಕಾಶಮಾನವಾದ ಭಸ್ಮತ್ರಿಪುಂಡ್ರವನ್ನು ಧರಿಸಿರುವವನೇ, ಉಜ್ವಲವಾಗಿರುವ ಕಪ್ಪುಕೊರಳುಳ್ಳವನೇ, ಪರ್ವತರಾಜಕುಮಾರಿಯ ಪತಿಯೇ, ಮನ್ಮಥ ಮತ್ತು ಯಮರನ್ನು ನಿಗ್ರಹಿಸಿದವನೇ, ಸರ್ಪವನ್ನು ದೇಹಕ್ಕೆ ಆಭರಣವನ್ನಾಗಿ ಮಾಡಿಕೊಂಡಿರುವವನೆ, ಅಂಧಕಾಸುರನ ಶರೀರವನ್ನು ತ್ರಿಶೂಲದಿಂದ ತಿವಿದು ಭಸ್ಮಮಾಡಿ ರಕ್ತವರ್ಣವಾಗಿರುವ ತ್ರಿಶೂಲವುಳ್ಳವನೇ, ಪ್ರಸನ್ನನಾಗು. ॥೨೩॥

ವಿಶಾಲವಾದ ಕಣ್ಣುಗಳುಳ್ಳವನೇ, ವೃಷಭದ ಮೇಲೆ ಕುಳಿತಿರುವವನೇ, ಅತ್ಯಂತ ಸಂತೋಷದಿಂದ ಆನಂದಮಯನಾಗಿ ನಾಟ್ಯವಾಡುತ್ತಾ ಚಂಚಲವಾದ ದಿಕ್ಪತಿಗಳ ಮತ್ತು ದೇವತೆಗಳ ಉಜ್ವಲವೂ, ಮನೋಹರವೂ ಆದ ಕಿರೀಟಗಳಿಂದ ನಮಸ್ಕರಿಸಲ್ಪಟ್ಟು, ಚಂಚಲವಾಗಿ ಹೊಳೆಯುತ್ತಿರುವ ಪಾದಕಮಲವುಳ್ಳವನೂ, ಯಾಗಕ್ಕೆ ಅಧ್ಯಕ್ಷನೂ, ಯೋಗಿಗಳ ಮನದಲ್ಲಿ ಅನವರತವೂ ನೆಲಸಿರುವನೂ, ಮನ್ಮಥನನ್ನು ಭಸ್ಮಮಾಡಿ ಆ ಮನ್ಮಥನ ಭಸ್ಮವನ್ನು ದೇಹಕ್ಕೆ ಬಳಿದುಕೊಂಡ, ಭಸ್ಮಭೂಷಿತವಾದ ಅವಯವಗಳುಳ್ಳವನೂ, ಸುಂದರಾಂಗಿಯಾದ ಪಾರ್ವತಿಯನ್ನು ಅರ್ಧಾಂಗಿಯನ್ನಾಗಿ ಮಾಡಿಕೊಂಡು ಲಿಂಗರೂಪವಾದ ತಲೆಯುಳ್ಳ ಸ್ವಾಮಿಯೇ, ನನ್ನನ್ನು ಕಾಪಾಡು. ॥೨೪॥

ಸರ್ಪಾಭರಣನೇ, ಅಗ್ನಿನೇತ್ರನೇ, ಹಣೆಯ ಕಣ್ಣಿನ ವಿಶೇಷವಾದ ಕಾಂತಿಯಿಂದ ವಿಶೇಷವಾಗಿ ಪ್ರಜ್ವಲಿಸುವ ದೇಹವುಳ್ಳವನೇ, ಪ್ರಭುವೇ, ಜಗಚ್ಛ್ರೇಷ್ಠನೇ॥ ಎಲ್ಲರಿಂದಲೂ ಸೇವ್ಯನೇ, ಅಕ್ಷರಾಧಿಪನೇ, ವೃಷಭವಾಹನನೇ, ಯಾಗಾಧ್ಯಕ್ಷನೇ, ದಕ್ಷಬ್ರಹ್ಮನ ಯಾಗನಾಶಕನೇ, ಭೂತ ಮತ್ತು ದೈತ್ಯಗಣಾಧಿಪತಿಯೇ, ಜಗತ್ತನ್ನೆಲ್ಲಾ ಶಿಕ್ಷಿಸುವುದರಲ್ಲಿ ವಿನೋದವುಳ್ಳವನೇ, ನನಗೆ ಪ್ರಸನ್ನನಾಗು. ॥೨೫॥

ವಿಭೋ ಪಾಹಿ ನಾಹೀಕೃತಾಮ್ನಾಯ ಸಾಹಿತ್ಯಮೇತ
ತ್ತವಾಬ್ಜಾದಿಪಾದೇ ಸಮರ್ಪ್ಯಾಹಿಹಾರ ।
ಭವಾಮಿ ಪ್ರಭೋ ಮುಕ್ತಿಕಾಂತಾಕರಾಕ್ರಾಂತ
ಮಾರ್ಗೇ ಸಮಾಯಾಹಿ ಮೋದಂ ॥೨೬॥

ತಸ್ಯ ಸಾರಸ್ವತಸ್ತೋತ್ರತರಂಗಿತ ಮನಾಃಶಿವಃ ।
ದಧೌ ತಸ್ಮೈ ದೃಢಾಂ ಭಕ್ತಿಮೈಶ್ವರ್ಯಮತಿಮಾನುಷಂ ॥೨೭॥

ಚಾರುವರ್ಣಪರಿಷ್ಕಾರಾ ದುಹಿತೇವ ಸಲಕ್ಷಣಾ ।
ಶ್ರೀಮತೀ ತಸ್ಯ ಕವಿತಾ ಜಜ್ಞೇ ಶಿವಪತಿವ್ರತಾ ॥೨೮॥

ಸಾರಸ್ವತೋರು ಶಬ್ದಾರ್ಥಮಾಧುರೀಚಾತುರೀಜುಷಾ ।
ಸಂಬೋಧ್ಯ ಸ ಕವಿರ್ದೇವಂ ಸತತಂ ತತ್ಪದಂ ಯಯೌ ॥೨೯॥

---

ವೇದಗಳನ್ನೇ ನಾಲ್ಕು ಕುದುರೆಗಳನ್ನಾಗಿ (ತ್ರಿಪುರದಹನಕಾಲದಲ್ಲಿ) ಮಾಡಿಕೊಂಡ ವಿಭುವೇ, ನನ್ನನ್ನು ಕಾಪಾಡು, ಓ ಸರ್ಪಹಾರನೇ, ಈ ಸಾಹಿತ್ಯವನ್ನು ನಿನ್ನ ಕಮಲಪಾದದಲ್ಲಿ ಸಮರ್ಪಿಸಿರುವೆ. ಪ್ರಭುವೇ, ನನ್ನನ್ನು ಮೋಕ್ಷಾಂಗನೆಯು ಕರಗ್ರಹಣಮಾಡುವ ಮಾರ್ಗದಲ್ಲಿ ನಾನು ಸಂತೋಷದಿಂದ ನಡೆಯುವಂತೆ ಕರುಣಿಸು" ಎಂದು ಆ ಅಸತ್ಯದಾಸ್ಯನು ಸ್ತೋತ್ರಮಾಡಿದನು. ॥೨೬॥

ಆ ಸಾರಸ್ವತಸ್ತೋತ್ರಗಳಿಂದ ಕಲ್ಲೋಲಿತಮನಸ್ಸುಳ್ಳ ಶಿವನು, ಅವನಿಗೆ ದೃಢವಾದ ಶಿವಭಕ್ತಿಯನ್ನೂ, ಮನುಷ್ಯರಿಂದ ಪಡೆಯಲಸಾಧ್ಯವಾದ ಐಶ್ವರ್ಯವನ್ನೂ ಕೊಟ್ಟನು. ಸುಂದರವಾದ ಅಕ್ಷರಗಳಿಂದ ಪರಿಷ್ಕೃತವಾಗಿ, ಲಕ್ಷಣವತಿಯಾದ ಮಗಳಂತಿರುವ ಗಾಂಭೀರ್ಯಯುತವಾದ ಇವನ ಕವಿತೆಯು ಪರಶಿವನನ್ನೇ ಪತಿಯೆಂದು ನಂಬಿ ವರಿಸಿತು. ಹೀಗೆ ಸರಸ್ವತಿಯ ಕರುಣಾಕಟಾಕ್ಷಜನ್ಯವಾದ ಉಚಿತ ಶಬ್ದಾರ್ಥಮಾಧುರ್ಯಗಳಿಂದ ಸಂಪನ್ನವಾದ ಚಾತುರ್ಯಗುಣಸಹಿತವಾದ ಈ ಕವಿತೆಯಿಂದ ಆ ಕವಿಯು ಮಹಾದೇವನನ್ನು ಸಂತೋಷಗೊಳಿಸಿ ಶಾಶ್ವತವಾಗಿ ಅವನ ಪಾದಸನ್ನಿಧಿಯನ್ನೈದಿದನು. ॥೨೭-೨೮-೨೯॥

ಏವಂ ಸ ದೇವೇಶಹೃದೈಕಭಕ್ತ್ಯಾ
ನಿರ್ಜಿತ್ಯ ಶತ್ರೂನ್ಪರಿಪಾಲ್ಯ ಪೃಥ್ವೀಂ ।
ಸಮರ್ಚ್ಯ ಸರ್ವಾನ್ಸುರಭೂಸುರಾಂಶ್ಚ
ಪರಾತ್ಪರಂ ಶೈವಪದಂ ಪ್ರಪೇದೇ ॥೩೦॥

ಕೃತಾತ್ಮನಸ್ತಸ್ಯ ಕೃತಾಂತಕಸ್ಯ
ಚರಿತ್ರಮೇತತ್ಪರಮಂ ಪವಿತ್ರಂ ।
ಯಃ ಶ್ರೋತ್ರಪಾತ್ರೇ ನಿದಧಾತಿಮಿತ್ರ
ನೇತ್ರಾಬ್ಜಪಾದೇ ಲಭತೇ ಸ ಭಕ್ತಿಂ ॥೩೧॥

ಕವಿತ್ವಸೂಕ್ತ್ಯಾ ಸುಕವೀಂದ್ರ ಭಕ್ತ್ಯಾ
ವಿಮುಕ್ತಿಯುಕ್ತಾಶ್ರಿತ ಶಂಭುಭಕ್ತ್ಯಾ ।
ಪವಿತ್ರಗಾತ್ರಃ ಶೃಣುಯಾತ್ತ್ರಿನೇತ್ರ
ಸುಪ್ರೇಮಚಾರಿತ್ರಮಹೋ ಸುಪುಣ್ಯಭಾಕ್ ॥೩೨॥

---

ಹೀಗೆ ಆ ಕೃತಾಂತಕನು ದೇವೇಶ್ವರನಾದ ಶಿವನಲ್ಲಿಟ್ಟ ಮನಃಪೂರ್ವಕವಾದ ಭಕ್ತಿಯಿಂದ ಸಕಲ ಶತ್ರುಗಳನ್ನೂ ಸೋಲಿಸಿ, ಭೂಮಂಡಲವನ್ನು ಪಾಲನೆಮಾಡಿ ಸಕಲ ದೇವಬ್ರಾಹ್ಮಣರನ್ನೂ ಪೂಜಿಸಿ, ಪರಮಶ್ರೇಷ್ಠವಾದ ಆ ಪರಶಿವನ ಪದವಿಯನ್ನು ಪಡೆದನು. ॥೩೦॥

ಧನ್ಯನಾದ ಆ ಕೃತಾಂತಕರಾಜನ ಪರಮಪಾವನವಾದ ಈ ಚರಿತ್ರೆಯನ್ನು (ತನ್ನ ಕಿವಿಗಳೆಂಬ ಪಾತ್ರೆಗಳಲ್ಲಿಟ್ಟು) ಆಸಕ್ತಿಯಿಂದ ಕೇಳುವವನು ಸೂರ್ಯನೇತ್ರನೂ ಕಮಲಪಾದನೂ ಆದ ಆ ಮಹಾದೇವನಲ್ಲಿ ಶಾಶ್ವತವಾದ ಭಕ್ತಿಯನ್ನು ಹೊಂದುತ್ತಾನೆ. ॥೩೧॥

ಕವಿತೆಯ ಉತ್ತಮವಾದ ಮಾತುಗಳಿಂದಲಾಗಲೀ, ಉತ್ತಮ ಕವಿಯಾದ ಈತನಲ್ಲಿರುವ ಭಕ್ತಿಯಿಂದಲಾಗಲೀ, ಅಥವಾ ಮೋಕ್ಷಕ್ಕೆ ಆಶ್ರಯವಾದ ಶಂಭುವಿನ ಜ್ಞಾನದಿಂದಲಾಗಲೀ ಈ ಮಹೇಶ್ವರನ ಪ್ರೇಮಭರಿತವಾದ ಕಥೆಯನ್ನು ಕೇಳುವವನು ಪವಿತ್ರದೇಹನಾಗಿ ಉತ್ತಮವಾದ ಮೋಕ್ಷಕ್ಕೆ ಭಾಗಿಯಾಗುವುದರಲ್ಲಿ ಸಂದೇಹವೇ ಇಲ್ಲವೆಂದು ಜೈಗೀಷವ್ಯಾದಿಗಳಿಗೆ ಕುಮಾರಸ್ವಾಮಿಯು ಹೇಳಿದನು. ॥೩೨॥

**ಇತಿ ಶ್ರೀ ಶಿವರಹಸ್ಯೇ ನವಮಾಂಶೇ ಸದಾಶಿವಾಖ್ಯೇ ಕೃತಾಂತಭಕ್ತಸ್ಯ ಚರಿತ್ರವರ್ಣನಂನಾಮೈಕೋನಷಷ್ಠಿತಮೋಽಧ್ಯಾಯಃ**

---

ಇಲ್ಲಿಗೆ ಶ್ರೀಶಿವರಹಸ್ಯದಲ್ಲಿ ಸದಾಶಿವಸಂಜ್ಞಕವಾದ ಒಂಬತ್ತನೆಯ ಅಂಶದಲ್ಲಿ ಕೃತಾಂತಕನೆಂಬ ಭಕ್ತನ ಚರಿತ್ರವರ್ಣನೆಯೆಂಬ ಐವತ್ತೊಂಬತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

ಸದಾಶಿವಾಖ್ಯೇ

ನವಮಾಂಶೇ

## ಷಷ್ಟಿತಮೋಽಧ್ಯಾಯಃ

॥ ಶ್ರೀಸ್ಕಂದ ಉವಾಚ ॥

ಅಥಾಹಂ ಕೀರ್ತಿಚೋಲಸ್ಯ ಕೀರ್ತಯಿಷ್ಯಾಮಿ ವೈಭವಂ ।
ಕುಲಾಚಲಶಿಖಾರೂಢೋ ವೀರಶಾರ್ದೂಲಲಕ್ಷಣಃ ॥೧॥

ಔದಾರ್ಯವೀರ್ಯಗಾಂಭೀರ್ಯ ಚಾತುರ್ಯಗುಣಭೂಷಣಃ ।
ಅಭವದ್ಭುವಿ ಭೂಪಾಲಃ ಶಿವಕೈಂಕರ್ಯತತ್ಪರಃ ॥೨॥

ಅಪಾಲಯಚ್ಚೋಲಮೂಲಂ ಕಾವೇರೀವಾರಿವರ್ಧನಂ ।
ಶ್ರೀನಿವಾಸಂ ತದಾ ದೇಶಂ ನಿದೇಶೇ ಕೃತ್ಯಪಾರ್ಥಿವಃ ॥೩॥

---

## ಅರುವತ್ತನೆಯ ಅಧ್ಯಾಯ

ಅಯ್ಯ ಜೈಗೀಷವ್ಯನೇ, ಇನ್ನು ಮುಂದೆ ನಾನು ನಿನಗೆ ಕೀರ್ತಿಚೋಲ ರಾಜನ ವೈಭವವನ್ನು ಹೇಳುವೆನು ಕೇಳು; ಅವನು ಕುಲಪರ್ವತದ ತುದಿಯಲ್ಲಿರುವ ವೀರಶಾರ್ದೂಲದಂತೆ ಲಕ್ಷಣವುಳ್ಳವನಾಗಿ ಔದಾರ್ಯ, ಪರಾಕ್ರಮ, ಗಾಂಭೀರ್ಯ ಮತ್ತು ಚಾತುರ್ಯ ಮುಂತಾದ ಗುಣಗಳಿಗೆ ಅಲಂಕಾರಪ್ರಾಯನಾಗಿ ಆ ರಾಜನು ಭೂಮಿಯಲ್ಲಿ ಯಾವಾಗಲೂ ಶಿವಸೇವಾನಿರತನಾಗಿ ವಾಸಮಾಡುತ್ತಿದ್ದನು. ॥೧-೨॥

ಕಾವೇರೀನದಿಯ ದಡದಲ್ಲಿ ಅಭಿವೃದ್ಧಿಹೊಂದುತ್ತಿರುವ ಚೋಲದೇಶದ ಬುಡಕಟ್ಟನ್ನು ಅವನು ಪಾಲಿಸುತ್ತಿದ್ದನು. ಐಶ್ವರ್ಯಕ್ಕೆ ಆವಾಸಭೂಮಿಯಾಗಿರುವ ಆ ದೇಶವನ್ನು ಕೀರ್ತಿಚೋಲರಾಜನು ತನ್ನ ಆಡಳಿತದಲ್ಲಿಟ್ಟುಕೊಂಡು ಸಂತುಷ್ಟರಾಗಿ,

ಹೃಷ್ಟಪುಷ್ಟಜನೈಃ ಕೀರ್ಣಂ ತ್ರಿವಿಷ್ಟಪಮಿವಾಪರಂ ।
ಗೋಪ್ತಾಸೀತ್ತತ್ರಗೋತ್ರಾಯಾಃ ಕೀರ್ತಿಮಿತ್ರೋಽಭವನ್ನೃಪಃ ॥೪॥

ನಿರ್ಮಲಶ್ಚೋಲಭೂಪಾಲಕುಲೋದಧಿಕಲಾನಿಧಿಃ ।
ಪೂರ್ಣಕರ್ಮವಿದಾ ಯೇನ ಜನತಾ ದೈನ್ಯಹಾರಿಣಾ ॥೫॥

ಅಕ್ರಿಯಂತೋತ್ಸವಾಸ್ತತ್ರ ಶ್ರೀ ಸದಾಶಿವಧಾಮಸು ।
ನಿತ್ಯೋದಯಾದಸ್ತಮಯಸಮಯಂ ಸ ವ್ಯಯಂ ಕರೋತ್ ॥೬॥

ಪ್ರತಾಪಕೀರ್ತಿನಿಕರೈರ್ನ್ಯಕ್ಕೃತಾರ್ಕನಿಶಾಕರೈಃ ।
ಸರ್ವಮುರ್ಧ್ನೀನಾಥಗರ್ವಂ ನಿರ್ವಾಪಯದಸೌ ರಿಪೋಃ ॥೭॥

ಪ್ರತಾಪೇನ ಪ್ರತೀಪೇನ ಚಕ್ರೇ ಭೂಚಕ್ರಮಾತ್ಮಸಾತ್ ।
ದೇವೈರ್ನಿರೂಪಿತಮಿದಂ ಶೈವಸಿದ್ಧಾಂತದರ್ಶನಂ ॥೮॥

ಕೃತ್ಯಮಿತ್ಯವಗತ್ಯಾಸೌ ನಿತ್ಯಂ ತದ್ದರ್ಶನೇ ಹೃದಾ ।
ಸೋಮಾವತಂಸಧಾಮಾನಿ ಕುರ್ವನ್ಸರ್ವಾಣಿ ಸರ್ವದಾ ॥೯॥

---

ದೃಢಕಾಯರಾದ ಜನಗಳಿಂದ ತುಂಬಿ ಎರಡನೆಯ ಸ್ವರ್ಗದಂತಿರುವ ಆ ದೇಶವನ್ನು ಆಳುತ್ತಾ ಕೀರ್ತಿಮಿತ್ರನೆಂಬ ರಾಜನು ಭೂಮಂಡಲಕ್ಕೇ ರಕ್ಷಕನಾಗಿದ್ದನು. ॥೩-೪॥

ನಿರ್ಮಲವಾದ ಚೋಲರಾಜರ ವಂಶವೆಂಬ ಸಮುದ್ರಕ್ಕೆ ಚಂದ್ರನಂತಿರುವ ಈ ರಾಜನು ಸಕಲ ರಾಜಕಾರ್ಯಗಳನ್ನೂ ತಿಳಿದು, ಜನಗಳ ದುಃಖಗಳನ್ನು ಪರಿಹರಿಸುತ್ತಾ, ಶ್ರೀಸದಾಶಿವನ ಕ್ಷೇತ್ರಗಳಲ್ಲಿ ಯಾವಾಗಲೂ ಉತ್ಸವಗಳನ್ನು ಮಾಡಿಸುತ್ತಿದ್ದನು. ನಿತ್ಯವೂ ಸೂರ್ಯೋದಯದಿಂದ ಅಸ್ತಮಯಕಾಲದವರೆಗೂ ಅವನು ತನ್ನ ಸಮಯವನ್ನೆಲ್ಲಾ ಈ ಉತ್ಸವಾದಿಗಳಲ್ಲೇ ಕಳೆಯುತ್ತಿದ್ದನು. ॥೫-೬॥

ಈ ರಾಜನು ತನ್ನ ಪ್ರತಾಪ ಮತ್ತು ಕೀರ್ತಿಗಳ ಸಮೂಹಗಳಿಂದ ಸೂರ್ಯಚಂದ್ರರನ್ನೂ ತಿರಸ್ಕರಿಸಿದ್ದನು. ಇವನು ಎಲ್ಲಾ ಶತ್ರುರಾಜರ ಅಹಂಕಾರವನ್ನೂ ತೊಡೆದುಹಾಕಿ, ಅಸದೃಶವಾದ ತನ್ನ ಪ್ರತಾಪದಿಂದ ಇಡೀ ಭೂಮಂಡಲವನ್ನೇ ತನ್ನ ಸ್ವಾಧೀನಮಾಡಿಕೊಂಡಿದ್ದನು. ಈ ಶೈವಸಿದ್ಧಾಂತದರ್ಶನವು ದೇವತೆಗಳಿಂದ ಹೇಳಲ್ಪಟ್ಟಿದೆಯೆಂದೂ ಇದನ್ನು ಅವಶ್ಯವಾಗಿ ಆಚರಿಸಬೇಕೆಂದೂ ತಿಳಿದು ಇವನು

ಮಹಾಪೂಜೋತ್ಸವಯುತಾನ್ಯಕಾದೀಶೇ ವಿಶಾಂಪತಿಃ ।
ಜಿತ್ವಾ ಸರ್ವಾದಿಶೋ ಜಿಷ್ಣುರ್ವರ್ಧಿಷ್ಣುರ್ವಿಷ್ಣುವಿಕ್ರಮಃ ॥೧೦॥

ತದ್ದತ್ತಬಹುವಿತ್ತಾನಿ ಜಗೃಹೇ ಹರಪೂಜನೇ ।
ಹರಧಾಮಾನ್ಯಸೌ ಗತ್ವಾ ನತ್ವಾ ಸ್ತುತ್ವಾ ಚ ಭಕ್ತಿತಃ ॥೧೧॥

ಜಿತ್ವಾ ಕೃತ್ವಾ ಧನೈರ್ಭಿತ್ವಾ ಗಾಂ ಚ ಹುತ್ವಾ ತದಾನಲೇ ।
ವಿವೇಶ ವಿಲಸತ್ಕೋಶನಿಜಂ ಪ್ರಾಜ್ಯಂ ಪುರಂ ಯಯೌ ॥೧೨॥

ಕಾಲೇಽಸ್ಮಿನ್ ಶಿವಕಾಮಾಖ್ಯಕರಪುಷ್ಪಾಪಹಾರಿಣಂ ।
ಗಜಂ ಹಸ್ತಿಪಕೈಃ ಸಾರ್ಧಂ ಹತ್ವಾ ವೀರೋದ್ಭಟಂ ಸ್ಥಿತಂ ॥೧೩॥

ಸಮಭ್ಯರ್ಚ್ಯ ಮುದಾ ಪ್ರಾದಾದ್ಧನಧಾನ್ಯಂ ತದಾ ಹೃದಾ ।
ಕದಾಚಿನ್ಮಂಟಪೇ ಸ್ಥಿತ್ವಾ ರಾಜಭಿಃ ಸ ಪರಾಜಿತೈಃ ॥೧೪॥

---

ನಿತ್ಯವೂ ಮನಃಪೂರ್ವಕವಾಗಿ ಅವುಗಳನ್ನು ಮನನ ಮಾಡುತ್ತಾ ಯಾವಾಗಲೂ ಶಿವಸ್ಥಾನಗಳನ್ನು ಮಾಡಿಸುತ್ತಾ ಕಾಲಕಳೆಯುತ್ತಿದ್ದನು. ॥೭-೮-೯॥

ಆ ರಾಜನು ಪೂಜಾರ್ಹವಾದ ದೊಡ್ಡ ದೊಡ್ಡ ಉತ್ಸವಗಳು ಈಶ್ವರನಿಗೆ ನಡೆಯುವಂತೆ ಮಾಡಿದನು. ಎಲ್ಲಾ ದಿಕ್ಕುಗಳನ್ನೂ ಗೆದ್ದು ಜಯಶೀಲನೂ ವಿಷ್ಣುವಿನಂತೆ ಸರ್ವವ್ಯಾಪಿಯೂ, ಏಳಿಗೆ ಪಡೆಯುವವನೂ ಆದ ಆ ರಾಜನು ಸೋತ ರಾಜರು ತನಗೆ ಕೊಟ್ಟ ಕಪ್ಪಕಾಣಿಕೆಗಳ ರೂಪವಾದ ಹಣವನ್ನು ಶಿವನ ಪೂಜೆಗೋಸ್ಕರ ಸ್ವೀಕರಿಸಿದನು. ಇವನು ಶಿವಕ್ಷೇತ್ರಗಳಿಗೆ ಹೋಗಿ ಶಿವಲಿಂಗಕ್ಕೆ ನಮಸ್ಕರಿಸಿ ಭಕ್ತಿಪೂರ್ವಕವಾಗಿ ಸ್ತೋತ್ರಮಾಡುತ್ತಿದ್ದನು. ಭೂಮಿಯನ್ನು ಜಯಿಸಿ ಬಂದ ಹಣದಿಂದ ಭೂಕೃಷಿಮಾಡಿ ಯಜ್ಞಯಾಗಾದಿಗಳನ್ನು ನಡೆಸಿ, ಅಲ್ಲಿಂದ ಹಿಂದಿರುಗಿ ನಾನಾರೀತಿಯ ಕೋಶಸಂಪತ್ತಿನಿಂದ ಕೂಡಿ ಶ್ರೇಷ್ಠವಾದ ತನ್ನ ರಾಜಧಾನಿಗೆ ಪ್ರವೇಶಮಾಡಿದನು. ॥೧೦-೧೧-೧೨॥

ಇದೇ ಕಾಲದಲ್ಲಿಯೇ ಶಿವಕಾಮನೆಂಬ ಶೈವನ ಕೈಲಿದ್ದ ಹೂವನ್ನು ಅಪಹರಿಸಿದ ಮದಗಜವನ್ನು, ಮಾವಟಿಗರೊಡನೆ ಕೂಡಿ ವೀರೋದ್ಭಟನೆಂಬ ಭಕ್ತನು ಕೊಂದು ಶೈವರಕ್ಷಣೆಮಾಡಿದ್ದನು. ಆ ವೀರೋದ್ಭಟನನ್ನು ಈ ಕೀರ್ತಿಚೋಲಮಹಾರಾಜನು ಕರೆತಂದು ಸಂತೋಷದಿಂದ ಪೂಜಿಸಿ ಮನಃಪೂರ್ವಕವಾಗಿ ಅವನಿಗೆ ಧನಧಾನ್ಯಾದಿ ಸಂಪತ್ತನ್ನು ಯಥೇಚ್ಛವಾಗಿ ಕೊಟ್ಟನು. ಒಂದು ದಿನ ಈ ಕೀರ್ತಿಚೋಲ

ಹಯಮಾತಂಗರತ್ನಾನಿ ವಸ್ತ್ರಾಣಿ ಚ ಸ ಪಶ್ಯತಿ ॥೧೫॥

॥ ರಾಜೋವಾಚ ॥

ಭೂಮೌ ಸಿಂಧುಪರೀತಾಯಾಂ ಯೋದದಾತಿ ಕರಂ ನ ಮೇ ।
ಸ ನೃಪೋಽಸ್ತಿ ಕಿಮಿತ್ಯಾಪ್ತಾನಮಾತ್ಯಾನನ್ವಯುಂಕ್ತ ಸಃ ॥೧೬॥

ಗಿರಿದುರ್ಗಾಶ್ರಯಃ ಕಶ್ಚಿದಧಿಕಾಖ್ಯೋಽಕರಪ್ರದಃ ।
ನೃಪೋ ಮಹಾನಿತ್ಯಮಾತ್ಯೈರೀರಿತಃ ಪ್ರಾಹ ತಾನ್ನೃಪಃ ॥೧೭॥

ದುಃಸಾಧ್ಯಮಸ್ತಿ ಕಿಂ ದುರ್ಗಂ ಪ್ರಬಲಂ ವಾ ಬಲಸ್ಯ ಮೇ ।
ಯುಷ್ಮಾಭಿರ್ಗಿರಿಮಾರುಹ್ಯ ತಸ್ಯಾಸುಂ ಕ್ರಿಯತಾಮಿತಿ ॥೧೮॥

ಕೃತೈಕಮತ್ಯಾಸ್ತೇಽಮಾತ್ಯಾ ಜ್ಞಾತಿಮತ್ಯಾಗಮನ್ಗಿರಾ ।
ರಾಜ್ಞಾ ಚಾಜ್ಞಾಪಿತಾಸ್ತೇ ವೈ ಸಂಜ್ಞಾಪ್ಯಾ ಜಗ್ಮುರೇವ ಹಿ ॥೧೯॥

ಚೂರ್ಣೀಕರ್ತುಂ ರಿಪೋರ್ದುರ್ಗಂ ಮಾರ್ಗಂ ಜಘ್ನುಃ ಸ್ವಸೈನಿಕೈಃ ।
ಆಸೇದುರಧಿಕಾಖ್ಯಸ್ಯ ಗಿರಿದುರ್ಗಂ ದುರಾಸದಂ ॥೨೦॥

---

ಮಹಾರಾಜನು ಸಭಾಮಂಟಪದಲ್ಲಿ ನಿಂತು ಸಾಮಂತರಾಜರು ತಂದಿರುವ ಕುದುರೆ, ಆನೆ, ರತ್ನ ಮತ್ತು ವಸ್ತ್ರಾದಿಗಳನ್ನು ಪರೀಕ್ಷಿಸುತ್ತಾ, ॥೧೩-೧೪-೧೫॥

ಸಮುದ್ರಪರಿವೃತವಾದ ಈ ಭೂಮಂಡಲದಲ್ಲಿ ನನಗೆ ಕಪ್ಪವನ್ನು ಕೊಡದಿರುವ ರಾಜನಾವನಾದರೂ ಇದ್ದಾನೆಯೇ? ಎಂದು ರಾಜನು ತನ್ನ ಆಪ್ತಮಂತ್ರಿಗಳನ್ನು ಪ್ರಶ್ನಿಸಿದನು. ಆಗ ಅವರು ಬೆಟ್ಟಗುಡ್ಡಗಳನ್ನಾಶ್ರಯಿಸಿರುವ ಒಬ್ಬ ಅಧಿಕನೆಂಬ ಹೆಸರಿನ ರಾಜನು ಸಮರ್ಥನಾಗಿ ನಮಗೆ ಕಪ್ಪವನ್ನು ಸಲ್ಲಿಸುತ್ತಿಲ್ಲವೆಂದು ಹೇಳಲು, ಆಗ ರಾಜನು ಅವರನ್ನು ಕುರಿತು ಇಂತೆಂದನು. ॥೧೬-೧೭॥

ಓ ಮಂತ್ರಿಗಳೇ, ಏನು! ಆ ಕೋಟೆಯು ಪ್ರಬಲವಾದ ಈ ನನ್ನ ಸೈನ್ಯಬಲದಿಂದ ಪ್ರವೇಶಿಸಲು ಅಸದಳವಾಗಿದೆಯೆ? ನೀವೆಲ್ಲರೂ ಹೋಗಿ ಆ ಬೆಟ್ಟವನ್ನು ಹತ್ತಿ ಪಿರಂಗಿಗಳನ್ನು ಹೊಡೆಯಿರಿ, ಎಂದು ಹೇಳಲು ಮಂತ್ರಿಗಳೆಲ್ಲಾ ಒಗ್ಗಟ್ಟಾಗಿ ಜ್ಞಾತಿಮಾತ್ಸರ್ಯದಿಂದ ಆ ಬೆಟ್ಟಕ್ಕೆ ಹೋದರು. ಕೀರ್ತಿಚೋಲರಾಜನಿಂದ ಆಜ್ಞೆ ಪಡೆದು ಅವರೆಲ್ಲರೂ ಉತ್ಸಾಹಭರಿತರಾಗಿ ಸಂಕೇತಮಾಡಿಕೊಂಡು ಹೊರಟರು. ॥೧೮-೧೯॥

ಅವರು ಶತ್ರುವಿನ ದುರ್ಗವನ್ನು ಪುಡಿಮಾಡಲು ತಮ್ಮ ಸೈನಿಕರಿಂದ

ಕೀರ್ತಿಚೋಲಸ್ಯ ಶೈಲಾಗ್ರಮಾರೋಹಂತೀಮಿಮಾಂ ಚಮೂಂ ।
ಪ್ರತ್ಯುದ್ಯಯುಃ ಪಾರ್ವತೀಯಾಃ ಗರ್ವಿತಾಃ ಸರ್ವಸೇನಯಾ ॥೨೧॥

ಕೀರ್ತಿಚೋಲಮಹೀಪಾಲಸೇನಾ ಪ್ರತ್ಯುಜ್ಜಗಾಮ ಸಾ ।
ಅಧಿಕಾಖ್ಯಸ್ಯ ನಗರೇ ಸಾ ಸೇನಾ ಸಾಗರೋಪಮಾ ॥೨೨॥

ಚತುರಂಗೇ ತರಂಗೇ ತೇ ಸೇನೇ ಸಿಂಧುನಿಭೇ ಉಭೇ ।
ಅಯೋಧಸಂ ವಿವಿಧತುರ್ವಿವಿಧೈರಾಯುಧೈರ್ಧಿಯಾ ॥೨೩॥

ಪತ್ತಿಃ ಪದಾತಿನಾ ಯುಕ್ತೋ ರಥಿನೋ ರಥಿನಾಂ ವರೈಃ ।
ತುರಂಗೇಣ ತುರಂಗಸ್ಥೋ ಗಜಸಂಸ್ಥೋ ಗಜೇನ ಹಿ ॥೨೪॥

ಉತ್ಪತನ್ನಿಪತನ್ ತೀಕ್ಷ್ಣಬಾಣಪಾಷಾಣ ಪೇಷಣಂ ।
ಯುದ್ಧಂ ಬದ್ಧಜನಸ್ಪರ್ಧಂ ಸೇನಯೋರುಭಯೋರಭೂತ್ ॥೨೫॥

---

ಮೊದಲು ದಾರಿಮಾಡಿಸಿದರು. ಸಕಲ ಸಾಧನದೊಂದಿಗೆ ಆ ದುಸ್ಸಾಧ್ಯವಾದ ಅಧಿಕ ರಾಜನ ದುರ್ಗವನ್ನೂ ಸೇರಿದರು. ಕೀರ್ತಿಚೋಲನ ಈ ಸೈನ್ಯವು ಪರ್ವತದ ತುದಿಗೇರಿ ಬರುತ್ತಿರುವುದನ್ನು ಕಂಡು ಪರ್ವತನಿವಾಸಿಗಳಾದ ರಾಜರು ಕೊಬ್ಬಿನಿಂದ ತಮ್ಮ ಸೇನೆಗಳೊಡನೆ ಎದುರು ಬಂದರು. ॥೨೦-೨೧॥

ಕೀರ್ತಿಚೋಲಮಹಾರಾಜನ ಆ ಸೇನೆಯು ಪರ್ವತವಾಸಿಗಳಾದ ಅಧಿಕ ರಾಜನ ಸೈನ್ಯವನ್ನು ಇದಿರಿಸಿತು. ಹೀಗೆ ಈ ಎರಡು ಸೈನ್ಯಗಳೂ ಅಧಿಕನ ಪಟ್ಟಣ ದಲ್ಲೇ ಸಾಗರದಂತೆ ಕಾಣುತ್ತಿದ್ದವು. ಸಮುದ್ರಸದೃಶವಾದ ಈ ಎರಡು ಸೈನ್ಯಗಳಲ್ಲೂ ತರಂಗತರಂಗವಾದ ಹಸ್ತ್ಯಶ್ವರಥಪಾದಾತಿಗಳೆಂಬ ಚತುರಂಗಬಲವಿದ್ದಿತು. ಪರಸ್ಪರ ವಾಗಿ ಎರಡು ಕಡೆಯವರೂ ಬಗೆಬಗೆಯ ಆಯುಧಗಳಿಂದ ಪರಸ್ಪರವಾಗಿ ಬುದ್ಧಿವಂತಿ ಕೆಯಿಂದ ಯುದ್ಧಮಾಡಿದರು. ॥೨೨-೨೩॥

ಪದಾತಿಯು ಕಾಲಾಳಿನೊಡನೆಯೂ, ರಥಸೈನ್ಯವು ರಥಿಕಶ್ರೇಷ್ಠರೊಡನೆಯೂ, ಕುದುರೆಯವರು ಕುದುರೆ ಸೈನ್ಯದವರೊಡನೆಯೂ, ಆನೆಗಳು ಆನೆಗಳೊಡನೆಯೂ ಪರಸ್ಪರವಾಗಿ ಯುದ್ಧಮಾಡುತ್ತಾ, ಹರಿತವಾದ ಬಾಣ, ಕಲ್ಲು ಇವುಗಳಿಂದ ಶತ್ರುಸೈನ್ಯವನ್ನೆಲ್ಲಾ ಪುಡಿಮಾಡುತ್ತಾ ಎರಡು ಸೈನ್ಯದವರೂ ಪರಸ್ಪರ ಜಿದ್ದಿನಿಂದ ಯುದ್ಧಮಾಡತೊಡಗಿದರು. ॥೨೪-೨೫॥

ಬಹುತ್ವಾತ್ಪ್ರಬಲತ್ವಾಚ್ಚ ಕೀರ್ತಿಚೋಲಮಹೀಭುಜಃ ।
ಸಾಽಥ ಪಾಷಾಣವಿಕ್ಷೇಪಾತ್ಸೇನಯಾ ವಿಜಯಂ ದದೌ ॥೨೬॥

ಅನಯಾ ಕೀರ್ತಿಚೋಲಸ್ಯ ಸೇನಯಾ ಯುಧ್ಯಮಾನಯಾ ।
ಅಭೂದಧಿಕಭೂಪಸ್ಯ ನಿಹತಂ ನಿಖಿಲಂ ಬಲಂ ॥೨೭॥

ಅಸಿಭಿಸ್ತ್ಯಕ್ತವಸುಭಿಃ ಸಹ ಭೀತ್ಯಾ ಸ ಸಾಧ್ವಸಃ ।
ಗಹನಂ ಗಹನಂ ಪ್ರಾಪ ಸೋಽಧಿಕಸ್ತು ಭಯಾಧಿಕಃ ॥೨೮॥

ನಿರ್ಭಿತ್ಯ ನಿಃಸಮಂ ದುರ್ಗಂ ನಿಹತ್ಯ ನಿಖಿಲಂ ಬಲಂ ।
ಧನಮಾದಾಯ ನಿಃಸೀಮಂ ಸಾಮಂತೈರ್ಯದುಪಾರ್ಜಿತಂ ॥೨೯॥

ಪರೇಷಾಂ ಚ ಪ್ರಮಥನಂ ಅಮಾತ್ಯಾ ಸುಸಮೇತ್ಯ ತೇ ।
ಪ್ರಣಮ್ಯ ಕೀರ್ತಿಚೋಲಾಯ ನೃಪಾಲಾಯ ನ್ಯವೇದಯನ್ ॥೩೦॥

ವೀರಾಶ್ಚ ರಿಪುವೀರಾಣಾಂ ನಿಕೃಂತಾನಿ ನಿಜಾಯುಧೈಃ ।
ಕೋಟೀರರತ್ನೋತ್ಕರ್ಷಾಣಿ ಶೀರ್ಷಾಣ್ಯಸ್ಮಾ ಅದರ್ಶಯನ್ ॥೩೧॥

---

ಸೈನ್ಯದಿಂದ ಪ್ರಬಲವಾದ ಈ ಕೀರ್ತಿಚೋಲಮಹಾರಾಜನ ಸೈನ್ಯವು ಕಲ್ಲುಬಂಡೆಗಳ ಎಸೆಯುವಿಕೆಯಿಂದಲೇ ಆ ಅಧಿಕನ ಸೇನೆಯನ್ನು ಸೋಲಿಸಿ ವಿಜಯ ಪಡೆಯಿತು. ಹೀಗೆ ಯುದ್ಧಮಾಡಿದ ಕೀರ್ತಿಚೋಲಮಹಾರಾಜನ ಸೈನ್ಯದಿಂದ ಆ ಅಧಿಕನೆಂಬ ರಾಜನ ಸಮಸ್ತ ಸೈನ್ಯಬಲವೂ ಕೊಲ್ಲಲ್ಪಟ್ಟಿತು. ||೨೬-೨೭||

ಶತ್ರುಸೈನ್ಯದ ಬಾಣಗಳಿಂದ ಪ್ರಾಣಬಿಟ್ಟ ಸೈನಿಕರನ್ನು ನೋಡಿ ಅಧಿಕ ರಾಜನು ಸಂಪೂರ್ಣವಾಗಿ ಹೆದರಿ, ದಿಗಿಲುಗೊಂಡು ಅತ್ಯಂತ ದಟ್ಟವಾದ ಕಾಡಿಗೆ ಓಡಿದನು. ಇತ್ತ ಕೀರ್ತಿಚೋಲನ ಮಂತ್ರಿಗಳು ಆ ದುರ್ಗವನ್ನೆಲ್ಲಾ ಪುಡಿಮಾಡಿ ಸಮಸ್ತ ಸೈನ್ಯವನ್ನೂ ಕೊಂದು, ಅಪರಿಮಿತವಾದ ಹಣವನ್ನು ತೆಗೆದುಕೊಂಡು ಸಾಮಂತರು ಕೊಟ್ಟ ಮತ್ತು ಶತ್ರುಗಳನ್ನು ಸೋಲಿಸಿ ಪಡೆದ ಸಂಪತ್ತಿನೊಡನೆ ಕೀರ್ತಿಚೋಲಮಹಾರಾಜನ ಬಳಿಗೆ ಬಂದು ನಮಸ್ಕರಿಸಿ ಆ ಎಲ್ಲವನ್ನೂ ಸಮರ್ಪಿಸಿದರು. ||೨೮-೨೯-೩೦||

ಆಗ ಸೈನ್ಯದ ಇತರ ವೀರರು ತಾವು ತಮ್ಮ ತಮ್ಮ ಸ್ವಂತ ಆಯುಧಗಳಿಂದ ಕತ್ತರಿಸಿದ ಶತ್ರುವೀರರ ಕಿರೀಟದ ರತ್ನಶ್ರೇಷ್ಠಗಳಿಂದ ಕೂಡಿದ ತಲೆಗಳನ್ನು ಆ

ತೇಷ್ವೇವಮಶರೀರಸ್ಕಂ ದೃಷ್ಟ್ವಾ ಬದ್ಧಜಟಾಧರಂ ।
ನಿಷಾದವೇಪಥುಭರೈಃ ಭೂಪಾಲೋ ವ್ಯಾಕುಲೋಽಭವತ್ ॥೩೨॥

ಶಿವಂ ಶೀರ್ಣಜಟಾಜೂಟಂ ಸ್ವಪ್ನೇ ದೃಷ್ಟ್ವಾ ವಿಲಪ್ಯ ಸಃ ।
ಪರಾಜಯಂ ಪರೇಷಾಂ ಚ ನಿಶಮ್ಯ ಪರಿದೇವನಂ ॥೩೩॥

ಹೃಷ್ಟೋ ಮಯಾನ್ಯಥಾ ದೃಷ್ಟೋ ವೈರಿಣಾ ವಿಧಿನಾಧುನಾ ।
ಮಯಾ ಶ್ರೀಭೂತಿಮಾಹಾತ್ಮ್ಯಂ ಪೃಥಿವ್ಯಾಂ ಪರಿಪಾಲಿತಂ ॥೩೪॥

ಅವಿಚಾರಾಪಚಾರೋಽಯಂ ಭಕ್ತಸ್ಯ ಹಿ ಕೃತೋ ಮಯಾ ।
ಮನ್ಯೇ ನಿನ್ಯೇ ಸ ದುಃಖೇನ ಕಾಲಂ ಶೂಲಭೃದರ್ಚಯಾ ॥೩೫॥

ತದ್ಧಿ ಸಂಚಿಂತ್ಯ ಸೋಽಮಾತ್ಯಾನಾಹ ದೇಹವಿರಕ್ತಧೀಃ ।
ಶಂಭೋಸ್ಸಾಪಯಿತುಂ ದಾಸ್ಯಮಾದಾಸ್ಯೇ ಭಕ್ತಿಮೀದೃಶೀಂ ॥೩೬॥

---

ರಾಜನಿಗೆ ತೋರಿಸಿದರು. ಅವುಗಳಲ್ಲಿ ಒಂದು ತಲೆಯು ಮುಂಡವಿಲ್ಲದೆ ಕೇವಲ ಜಡೆಗಳನ್ನು ಧರಿಸಿರುವುದನ್ನು ಕಂಡು ನಿಟ್ಟುಸಿರಿನಿಂದ ನಡುಗುತ್ತಾ ರಾಜನು ಚಿಂತಾಕ್ರಾಂತನಾದನು. ॥೩೧-೩೨॥

ಹಾಗೆಯೇ ಆ ರಾತ್ರಿ ತುಂಡಾದ ಜಡೆಯುಳ್ಳ ಶಿವನನ್ನು ಆ ಕೀರ್ತಿಚೋಲ ರಾಜನು ಕನಸಿನಲ್ಲಿ ಕಂಡು ಅತ್ತು, ಶತ್ರುಗಳ ಸೋಲನ್ನು ಕೇಳಿಯೂ ದುಃಖಿಸಿದನು. ಅಯ್ಯೋ, ನಾನು ಶತ್ರುಗಳ ಸೋಲನ್ನು ಕೇಳಿ ಸಂತುಷ್ಟನಾದೆನಲ್ಲಾ. ಶತ್ರುವಾದ ಈ ವಿಧಿಯು ನನಗೆ ವಿಪರೀತವಾಗಿ ದುಃಖವನ್ನುಂಟುಮಾಡುತ್ತಿರುವುದು. ನಾನಾದರೋ ಈ ಯುದ್ಧದಿಂದ ಕೇವಲ ಐಶ್ವರ್ಯಮಹಿಮೆಯನ್ನು ಭೂಮಿಯಲ್ಲಿ ಕಾಪಾಡಿದಂತಾಯಿತು. ॥೩೩-೩೪॥

ವಿಚಾರಮಾಡದೆ ನಾನು ಶೈವನಿಗೆ ಅಪಚಾರಮಾಡಿದಂತಾಯಿತಲ್ಲ! ಎಂದು ಭಾವಿಸಿ ವಿಶೇಷ ದುಃಖದಿಂದ ಮಹೇಶನ ಪೂಜೆಮಾಡಿಕೊಂಡು ಕಾಲಕಳೆಯುತ್ತಿದ್ದನು. ಹೀಗೆ ಕೆಲವು ಕಾಲವಿದ್ದು ಆ ಕೀರ್ತಿಚೋಲರಾಜನು ಜೀವನದಲ್ಲಿ ವೈರಾಗ್ಯತಾಳಿ, ಆ ಶಂಭುವಿನಲ್ಲಿ ನಾನು ಮಾಡಿದ ಅಪಚಾರಕ್ಕಾಗಿ ಸೇವೆಯನ್ನು ಸಲ್ಲಿಸಲು ಈ ರೀತಿಯಾದ ಭಕ್ತಿಯನ್ನು ತೋರ್ಪಡಿಸುವೆನೆಂದನು. ॥೩೫-೩೬॥

ಗೋಗಂಗಾಗೋತ್ರಿಭಿಸ್ತುಲ್ಯಗಾತ್ರಂ ಪುತ್ರಂ ಮಯಾದ್ಯ ವೈ ।
ಆತ್ಮಜಂ ವೈ ಗುಣೈಃ ಪೂಜ್ಯಂ ಸ್ರಾಜ್ಯೇ ರಾಜ್ಯೇಽಭಿಯೋಜ್ಯತೇ ॥೩೭॥

ಇತ್ಯಾದಿಶ್ಯ ನೃಪೋಽಮಾತ್ಯಾನಾಜ್ಯಾಕ್ತಂ ಪ್ರಾಜ್ಯಪಾವಕಂ ।
ಪ್ರವಿವೇಶ ಮಹಾದೇವಂ ಧ್ಯಾತ್ವಾ ಪಂಚಾಕ್ಷರಂ ಜಪನ್ ॥೩೮॥

ಪ್ರವಿಷ್ಟಮಾತ್ರೇ ಭೂಪಾಲೇ ಶಿಖೀ ಶಾಂತಶಿಖೋಽಭವತ್ ।
ವವರ್ಷುಃ ಕುಸುಮಾಸಾರಂ ವಿಬುಧಾ ವಸುಧಾಧಿಪಂ ॥೩೯॥

ಪುರಾರಿಃ ಪುಂಗವಾರೂಢಃ ಪ್ರಾದುರ್ಭೂತಃ ಸಹೋಮಯಾ ।
ನೃಪಂ ತಂ ಸ್ವಪದಂ ನಿನ್ಯೇ ಭಕ್ತೇನ ಜಟಿನಾ ಸಹ ॥೪೦॥

ಆರ್ತಿಪಾಪಭಯಹಾರಿ ಶೃಣ್ವತಾಂ
ಕೀರ್ತಿಚೋಲಚರಿತಂ ಶೃಣೋತಿ ಯಃ ।

---

ಹಸು, ಗಂಗೆ ಮತ್ತು ಪರ್ವತ ಈ ಮೂರು ವಸ್ತುಗಳಿಗೆ ಕ್ರಮವಾಗಿ ಸಾಧುತನ, ಪಾವಿತ್ರ್ಯ ಮತ್ತು ಸ್ಥೈರ್ಯಗಳಲ್ಲಿ ಸದೃಶನಾಗಿ, ಸುಗುಣಗಳಿಂದ ಪೂಜಾರ್ಹನಾಗಿರುವ ನನ್ನ ಸ್ವಂತ ಮಗನನ್ನು ಈಗ ನಾನು ಈ ದೊಡ್ಡ ರಾಜ್ಯದಲ್ಲಿ ಅಭಿಷೇಕ ಮಾಡಬೇಕೆಂದಿರುವೆನು. ನೀವು ಅದರಂತೆ ನಡೆಸಿರೆಂದು ಮಂತ್ರಿಗಳಿಗೆ ಅಪ್ಪಣೆ ಮಾಡಿ, ಆ ರಾಜನು ತುಪ್ಪದಿಂದ ಪ್ರಜ್ವಲಿಸುತ್ತಿರುವ ದೊಡ್ಡ ಅಗ್ನಿಕುಂಡದಲ್ಲಿ ಮಹಾದೇವನನ್ನು ಧ್ಯಾನಿಸುತ್ತಾ, ಶಿವಪಂಚಾಕ್ಷರಮಂತ್ರವನ್ನು ಜಪಿಸುತ್ತಾ ಪ್ರವೇಶ ಮಾಡಿದನು. ॥೩೭-೩೮॥

ಹೀಗೆ ಕೀರ್ತಿಚೋಲರಾಜನು ಅಗ್ನಿಪ್ರವೇಶಮಾಡಿದ ಕೂಡಲೇ ಬೆಂಕಿಯ ಜ್ವಾಲೆಯು ಶಾಂತವಾಯಿತು. ದೇವತೆಗಳು ರಾಜನ ಮೇಲೆ ಹೂಮಳೆಗರೆದರು. ತ್ರಿಪುರಾಂತಕನಾದ ಮಹಾದೇವನು ವೃಷಭಾರೂಢನಾಗಿ ಪಾರ್ವತಿಯೊಡನೆ ಪ್ರತ್ಯಕ್ಷನಾಗಿ ಆ ರಾಜನನ್ನೂ, ರಾಜನ ಕಡೆಯವರಿಂದ ಮೃತನಾಗಿದ್ದ ಶೈವಧರ್ಮಾವಲಂಬಿಯಾಗಿ ಜಟಾಧಾರಿಯಾದ ಶೈವನೊಡನೆ ತನ್ನ ಸ್ಥಾನಕ್ಕೆ ಕರೆದುಕೊಂಡನು. ॥೩೯-೪೦॥

ಶ್ರವಣಮಾಡುವವರ ಪೀಡೆಗಳನ್ನೂ, ಪಾಪ ಮತ್ತು ಭಯಗಳನ್ನೂ ಹೋಗಲಾಡಿಸುವ ಈ ಕೀರ್ತಿಚೋಲರಾಜನ ಕಥೆಯನ್ನು ಕೇಳುವವನು ಪರಶಿವನಲ್ಲಿ

ಭಕ್ತಿಮೇತ್ಯ ಸುಖಧಾಮಸಂಶ್ರಯೇ
ತ್ಕಾರ್ತಿಕೇಯಜನಕಸ್ಯ ತತ್ಪದಂ ॥೪೧॥

ಇತಿ ಶ್ರೀ ಶಿವರಹಸ್ಯೇ ನವಮಾಂಶೇ ಸದಾಶಿವಾಖ್ಯೇ
ಕೀರ್ತಿಚೋಲಭೂಪಾಲಚರಿತ್ರಕಥನಂ ನಾಮ
ಷಷ್ಟಿತಮೋಽಧ್ಯಾಯಃ

---

ಪೂರ್ಣಭಕ್ತಿ ಹೊಂದಿ ಆ ಕುಮಾರಸ್ವಾಮಿಯ ಜನಕನಾದ ಮಹೇಶನ ಸುಖಾಶ್ರಯ ವೆನಿಸಿದ ಕೈಲಾಸವನ್ನು ಹೊಂದುತ್ತಾನೆಂದು ಕುಮಾರಸ್ವಾಮಿಯು ಜೈಗೀಷವ್ಯಾದಿಗಳಿಗೆ ಹೇಳಿದನು. ॥೪೧॥

ಇಲ್ಲಿಗೆ ಶ್ರೀಶಿವರಹಸ್ಯದಲ್ಲಿ ಸದಾಶಿವಸಂಜ್ಞಕವಾದ ಒಂಬತ್ತನೆಯ ಅಂಶದಲ್ಲಿ
ಕೀರ್ತಿಚೋಲರಾಜನ ಚರಿತ್ರವರ್ಣನೆಯೆಂಬ ಅರವತ್ತನೆಯ
ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಸದಾಶಿವಾಖ್ಯೇ

## ನವಮಾಂಶೇ

## ಏಕಷಷ್ಟಿತಮೋಽಧ್ಯಾಯಃ

॥ ಶ್ರೀಸ್ಕಂದ ಉವಾಚ ॥

ಉಗ್ರಸ್ಥಾನಂ ಸದಾತ್ರಾಸ್ತಿ ಸಹ್ಯಜಾತೀರಗೋಚರಂ ।
ನರಸಿಂಹ ಇತಿ ಖ್ಯಾತಸ್ತತ್ರಾಭೂತ್ಕ್ಷತ್ರಿಯಾಧಿಪಃ ॥೧॥

ಭವಾನೀಪತಿಪಾದಾಬ್ಜಭಕ್ತಿಹೃತ್ಪದ್ಮಸಂಶ್ರಯಾತ್ ।
ಮೇನೇ ವಿಭೂತಿಂ ಶ್ರೀಭೂತಿಂ ಸಂಪತ್ಸ್ವಪಿ ಸತೀಷು ಸಃ ॥೨॥

ಜೇತಾ ರಿಪೂಣಾಂ ಯೋ ವೀರಃ ಪ್ರಜಾಶ್ಚ ಪರಿಪಾಲಯನ್ ।
ಶರಣಂ ಚರಣಂ ಶಂಭೋರ್ಮೇನೇ ಸೋಽನುಕ್ಷಣಂ ವಿಭೋಃ ॥೩॥

---

## ಅರವತ್ತೊಂದನೆಯ ಅಧ್ಯಾಯ

ಅಯ್ಯ ಜೈಗೀಷವ್ಯಮುನಿಯೇ, ಕಾವೇರೀನದಿಯ ದಡದಲ್ಲಿ ಯಾವಾಗಲೂ ಪ್ರಸಿದ್ಧವಾದ ಉಗ್ರಸ್ಥಾನವೆಂಬುದಿರುವುದು. ಆ ಊರಿನಲ್ಲಿ ನರಸಿಂಹನೆಂದು ಪ್ರಸಿದ್ಧನಾದ ಒಬ್ಬ ಕ್ಷತ್ರಿಯರಾಜನಿದ್ದನು. ಅವನು ಶಿವಪಾದಕಮಲಭಕ್ತಿಯನ್ನು ತನ್ನ ಹೃದಯಕಮಲದಲ್ಲಿರಿಸಿ ಬೇಕಾದಷ್ಟು ಧನಕನಕ ವಸ್ತುವಾಹನರೂಪವಾದ ಇತರ ಸಂಪತ್ತುಗಳಿದ್ದರೂ ಶ್ರೀ ಶಿವಭಕ್ತಿಯೇ ಮುಖ್ಯವಾದ ಐಶ್ವರ್ಯವೆಂದು ಭಾವಿಸಿದ್ದನು. ॥೧-೨॥

ಇಂತಹ ಆ ವೀರರಾಜನು ಶತ್ರುಗಳನ್ನು ಜಯಿಸಿ ಪ್ರಜೆಗಳನ್ನು ಪರಿಪಾಲನೆ ಮಾಡುತ್ತಾ ಪ್ರತಿಕ್ಷಣವೂ ಆ ಪ್ರಭುವಾದ ಮಹೇಶನ ಪಾದವೇ ಶರಣೆಂದು

ಸೋಮಾವತಂಸಧಾಮಾನಿ ಸರ್ವಾಣಿ ಸ ಮಹೀಪತಿಃ ।
ಮಹೋತ್ಸವಮಹಾಪೂಜಾ ಮಹಿಮಾನಿ ಚಕಾರ ಚ ॥೪॥

ಆದ್ರಾರ್ಯಾಂ ಚಂದ್ರಚೂಡಸ್ಯ ನೃತ್ಯಂ ತತ್ರ ವಿಲೋಕಯನ್ ।
ಮಾಲಾಪ್ರದೀಪನೈವೇದ್ಯಂ ಭೂರಿಭಾಗೇಸಮರ್ಚನಂ ॥೫॥

ಆದ್ರೋರ್ತ್ಸವೇಷು ಸರ್ವೇಷು ಶಿವಭಕ್ತಾನಭೋಜಯತ್ ।
ಸಂಪೂಜ್ಯ ಗಂಧಪುಷ್ಪಾದ್ಯೈರ್ನಿಷ್ಕಮೇಕಮದಾಪಯತ್ ॥೬॥

ಕಾಲೇಽಸ್ಮಿನ್ಕಾಮಭೂತಾಂಗಃ ಕಶ್ಚಿದ್ಭಸ್ಮಾಂಗಸುಂದರಃ ।
ಸ ನಖಕ್ಷತಿರಾಗಚ್ಛನ್ನಿಂದ್ಯಮಾನೋ ಜನೈರ್ವೃತಃ ॥೭॥

ದುಃಶೀಲೋಽಪಿ ಸರಿನ್ಮೌಳಿಪಾದಭಕ್ತಃ ಸ ಭಸ್ಮಧೃತ್ ।
ಅನಾಢ್ಯ ಇತ್ಯಸೌ ರಾಜಾ ದ್ವಿಗುಣಂ ತಮಪೂಜಯತ್ ॥೮॥

---

ನಂಬಿದ್ದನು. ಚಂದ್ರಚೂಡನಾದ ಪರಶಿವನ ಸ್ಥಾನಗಳಲ್ಲೆಲ್ಲಾ ಈ ಮಹಾರಾಜನು ದೊಡ್ಡ ದೊಡ್ಡ ಉತ್ಸವಗಳು, ಮಹಾಪೂಜಾದಿಗಳು ವಿಜೃಂಭಣೆಯಿಂದ ನಡೆಯುವಂತೆ ಮಾಡಿದನು. ॥೩-೪॥

ಆರಿದ್ರಾನಕ್ಷತ್ರದ ದಿನ ಚಂದ್ರಶೇಖರನ ನಾಟ್ಯವನ್ನು ನೋಡುತ್ತಾ, ಹಾರ, ದೀಪ, ನೈವೇದ್ಯಾದಿಗಳನ್ನು ಬಹುವಾಗಿ ಸಮರ್ಪಿಸಿ ಪೂಜೆಮಾಡುತ್ತಿದ್ದನು. ಎಲ್ಲಾ ಆರಿದ್ರೋತ್ಸವಗಳಲ್ಲಿಯೂ ಶೈವವರ್ಯರಿಗೆ ಭೋಜನಮಾಡಿಸಿ, ಅವರನ್ನು ಗಂಧ, ಹೂ ಮುಂತಾದವುಗಳಿಂದ ಪೂಜಿಸಿ, ಒಬ್ಬೊಬ್ಬರಿಗೆ ಒಂದೊಂದು ವರಹ ದಕ್ಷಿಣೆ ಕೊಡುತ್ತಿದ್ದನು. ॥೫-೬॥

ಆ ಸಮಯದಲ್ಲಿ ಮನ್ಮಥಸದೃಶವಾದ ದೇಹಕಾಂತಿಹೊಂದಿ ಭಸ್ಮಲೇಪನದಿಂದ ಸುಂದರನಾದ ಒಬ್ಬ (ನಖಕ್ಷತಿ) ಉಗುರುಕತ್ತರಿಸುವವನು ಅಲ್ಲಿಗೆ ಬಂದನು. ಸಾಮಾನ್ಯರೀತಿಯ ಜನಗಳಿಂದ ನಿಂದಿಸಲ್ಪಟ್ಟು ಕೆಟ್ಟಸ್ವಭಾವದವನಾದರೂ ಶಿವಪಾದ ಭಕ್ತನಾಗಿ ಅವನು ಭಸ್ಮಧಾರಣೆ ಮಾಡಿದ್ದನು. ಆದ್ದರಿಂದ ರಾಜನು ಇವನು ನಿಂದಾರ್ಹನಲ್ಲವೆಂದು ತಿಳಿದು ಅವನನ್ನು ವಿಶೇಷವಾಗಿ ಪೂಜಿಸಿದನು. ॥೭-೮॥

ಅತಿಭಕ್ತ ಇತಿ ಪ್ರಾಜ್ಞೋಽಹ್ಯಭವತ್ಸಹ್ಯಜಾತಟೇ ।
ಅತಿಮುಕ್ತೋ ಹೇಮರತ್ನಮಣಿಕುಟ್ಟಿಮಪಟ್ಟಣಂ ॥೯॥

ತತ್ರ ತ್ರಿಗುಣಷಡ್ದ್ವೀಪಸಂಪದ್ದರ್ಶನದರ್ಪಣೇ ।
ಅಸ್ತಿ ಕೈವರ್ತಪಾಕಾಂತಃ ಸ್ಥಾನಂ ದಾನನಿವೇಶನಂ ॥೧೦॥

ತತ್ರಾತಿಭಕ್ತ ಇತ್ಯಾಸೀಚ್ಛಿವಭಕ್ತಪದಾರ್ಚಕಃ ।
ಧೀವರೋ ಧೀವರವರೋ ಭವಪಾದಾಬ್ಜಸಕ್ತಧೀಃ ॥೧೧॥

ಜಲಾಹತೈಃ ಮೀನಜಾಲೈಃ ಸಂಪನ್ನದ್ರವ್ಯಸಂಚಯೈಃ ।
ಈಶೋಽಯಂ ಸರ್ವದೇಶಾನಾಂ ಶರ್ವಭಕ್ತಾನ್ಸಮರ್ಚಯತ್ ॥೧೨॥

ಜಲಾಹತೇ ಮೀನಜಾಲೇ ಯೋ ದೃಷ್ಟಃ ಪ್ರಥಮಂ ಝಷಃ ।
ಅಥ ಶಂಭೋರಿತಿ ಜಹೌ ಸೋಽಸ್ಯ ಭಕ್ತ ಇತಿ ಸ್ಮೃತಃ ॥೧೩॥

ಏಕಂ ಚ ಮೀನಮೇಕಸ್ಮಿನ್ವಾಸರೇ ಸ ವ್ಯಪೋಹತಿ ।
ಸಂಪಾದಿತಂ ಸ್ವಜಾಲೇನ ರಕ್ತಪದ್ಮಸಮಪ್ರಭಂ ॥೧೪॥

---

ಕಾವೇರೀನದಿಯ ದಡದಲ್ಲಿ ಅತಿಭಕ್ತನೆಂಬ ಹೆಸರಿನ ಒಬ್ಬ ಪ್ರಾಜ್ಞನಿದ್ದನು. ಅವನಿದ್ದ ಅತಿಮುಕ್ತಕ್ಷೇತ್ರವೆಂಬುದು ಚಿನ್ನ, ರನ್ನ ಮುತ್ತು ಮಣಿಗಳಿಂದ ಕೆತ್ತಿದ ಭೂಮಿಯುಳ್ಳ ಪಟ್ಟಣವಾಗಿದ್ದಿತು. ಅದು ಹದಿನೆಂಟು ದ್ವೀಪಗಳ ಸಂಪತ್ತುಗಳ ನೋಟಕ್ಕೆ ಕನ್ನಡಿಯಂತಿದ್ದಿತು. ಅದರಲ್ಲಿ ಕೈವರ್ತಪಾಕವೆಂಬುದರ ಮಧ್ಯಸ್ಥಾನ ವೆಂಬುದೊಂದು ದಾನನಿವೇಶನವಾಗಿದ್ದಿತು. ॥೯-೧೦॥

ಅದೇ ಊರಿನಲ್ಲಿ ಶೈವಪಾದಪೂಜಕನಾದ ಆ ಅತಿಭಕ್ತನೆಂಬ ಭಕ್ತನಿದ್ದನು. ಅವನು ಬೆಸ್ತರ ಜಾತಿಯಲ್ಲಿ ಶ್ರೇಷ್ಠನೆನಿಸಿ, ಯಾವಾಗಲೂ ಶಿವನ ಪಾದಕಮಲ ದಲ್ಲಿಯೇ ನೆಟ್ಟ ಮನವುಳ್ಳವನಾಗಿದ್ದನು. ಇವನು ನೀರಿನ ಮೇಲೆ ದೊಡ್ಡ ಬಲೆ ಗಳನ್ನು ಹರಡಿ ಅಲ್ಲಿ ಬಂದ ಮೀನುಗಳನ್ನು ಮಾರಿ ದೊರೆತ ಹಣರಾಶಿಯಿಂದ ಈಶ ಭಕ್ತನೆನಿಸಿ ಸಕಲ ದೇಶದ ಶೈವರನ್ನೂ ಸತ್ಕರಿಸುತ್ತಿದ್ದನು. ॥೧೧-೧೨॥

ನೀರಿನಿಂದ ಎಳೆಯಲ್ಪಟ್ಟು ಬಲೆಗೆ ಬಿದ್ದ ಮೀನುಗಳಲ್ಲಿ ಮೊದಲನೆಯ ಮೀನನ್ನು ' ಇದು ಆ ಶಂಭುವಿಗೆ ' ಎಂದು ಹೇಳಿ ಕೊಳ್ಳದೇ ಬಿಟ್ಟುಬಿಡುತ್ತಿದ್ದನು. ಆದ್ದರಿಂದ ಅವನಿಗೆ ಆದ್ಯಭಕ್ತನೆಂದು ಹೆಸರಾಯಿತು. ಒಂದು ದಿವಸಕ್ಕೆ ಒಂದರಂತೆ

ತಂ ಮೀನಂ ಮೇರುಕೂಟಾಭಂ ನಾಭೂದಾಕ್ರಷ್ಟುಮೀಶ್ವರಃ ।
ತತಃ ಸರ್ವೇಽಪಿ ಕೈವರ್ತಾಸ್ತಮಾಕೃಷ್ಯ ಕಥಂ ಚ ನ ॥೧೫॥

ಅಯಂ ನ ಮೀನ ಇತ್ಯೂಚುಸ್ತಂ ದೃಷ್ಟ್ವಾ ಮೀನಮುದ್ಭುತಂ ।
ವಿಸ್ಮಿತಾಲಾಪಯುಕ್ತೇಷು ದಾಶಾಧೀಶೇಷು ನಾದ್ಭುತಂ ॥೧೬॥

ಏಷ ಶಂಭೋ ಹಿ ತಂ ದೃಷ್ಟ್ವಾ ತತ್ಪಾದಾಭಮಿಮಂ ಜಹೌ ।
ಕಥ್ಯತೇ ಕಲಿಕಂಪಸ್ಯ ವರ್ತನಂ ಪುಣ್ಯಕೀರ್ತನಂ ॥೧೭॥

ಆರಾಮೈರಭಿರಾಮಾಂತಮಸ್ತಿ ಸ್ವಸ್ತಿದಮಾಸ್ಪದಂ ।
ಪೇಣಾಕಟಾಪುರಂ ನಾಮ್ನಾ ಪುಣ್ಯಂ ಪುಣ್ಯಜನಾಸ್ಪದಂ ॥೧೮॥

---

ತನ್ನ ಬಲೆಗಳಲ್ಲಿ ಬಂದ ಕೆಂದಾವರೆಗೆ ಸಮಾನಬಣ್ಣವುಳ್ಳ ಒಂದು ಮೀನನ್ನು ಅವನು ಶಿವನಿಗೋಸ್ಕರ ಬಿಟ್ಟುಬಿಡುತ್ತಿದ್ದನು. ॥೧೩-೧೪॥

ಒಂದುದಿನ ಮೇರುಪರ್ವತದ ಶಿಖರಸಮಾನವಾದ ಕಾಂತಿಯುಳ್ಳ ಒಂದು ದೊಡ್ಡ ಮೀನನ್ನು ಸೆಳೆದುಕೊಳ್ಳಲು ಈ ಬೇಡನಿಗೆ ಸಾಧ್ಯವಾಗಲಿಲ್ಲ. ಆಗ ಬೇಡರೆಲ್ಲರೂ ಒಟ್ಟಾಗಿ ಬಹಳ ಕಷ್ಟಪಟ್ಟು ಆ ಮೀನನ್ನು ಎಳೆದುಕೊಂಡರು. ಆಗ ಅವರೆಲ್ಲರೂ ಈ ದೊಡ್ಡ ಅದ್ಭುತವಾದ ಮೀನನ್ನು ನೋಡಿ ನಿಜವಾಗಿಯೂ ಇದು ಮೀನೇ ಅಲ್ಲವೆಂದು ಅತ್ಯಾಶ್ಚರ್ಯಚಕಿತರಾದರು. ಹೀಗೆ ವಿಸ್ಮಯಗೊಂಡು ಬೇಡರೊಡೆಯರು ಪರಸ್ಪರ ಮಾತನಾಡಿಕೊಳ್ಳುವುದರಲ್ಲಿ ಅತ್ಯಂತ ಆಶ್ಚರ್ಯವೇ ತೋರುತ್ತಿತ್ತು. ಏಕೆಂದರೆ ಆ ಮೀನು ಅಲ್ಲಿಯ ವರೆಗೆ ಅವರಿಗೆ ಅಷ್ಟು ಗಾತ್ರದಲ್ಲಿ ಕಾಂತಿಯಲ್ಲಿ ಸಿಕ್ಕಿರಲಿಲ್ಲ. ॥೧೫-೧೬॥

ಆಗ ಆ ಅತಿಭಕ್ತನು ಶಂಭುವಿನ ಪಾದಕಾಂತಿಯುಳ್ಳ ಆ ಮೀನನ್ನು ನೋಡಿ, ಇದು ಆ ಶಂಭುವಿಗೋಸ್ಕರವೇ ಎಂದು ಅದನ್ನು ಬಿಟ್ಟುಬಿಟ್ಟನು. ಅಯ್ಯ ಜೈಗೀಷವ್ಯನೇ, ಪುಣ್ಯಕೀರ್ತಿಯುಳ್ಳ ಕಲಿಕಂಪನೆಂಬ ಮತ್ತೊಬ್ಬ ಭಕ್ತನ ಕಥೆಯನ್ನು ಇನ್ನು ಮುಂದೆ ಹೇಳುವೆನು ಕೇಳು. ಉದ್ಯಾನಗಳಿಂದ ಮನೋಹರವಾಗಿ, ಮಂಗಳಪ್ರದವೂ ಐಶ್ವರ್ಯಾಶ್ರಯವೂ ಆದ ಪೇಣಾಕಟಾಪುರವೆಂಬ ಪಟ್ಟಣವು ಸಕಲ ಪುಣ್ಯಶಾಲಿಗಳಿಗೂ ಆಶ್ರಯಸ್ಥಾನವಾಗಿದ್ದಿತು. ॥೧೭-೧೮॥

ಕಲಿಕಂಪಾಹ್ವಯಃ ಕಶ್ಚಿದ್ವೈಶ್ಯೋಽಭೂತ್ತತ್ರ ವಶ್ಯಧೀಃ ।
ಭವಾನೀಪತಿಪಾದಾಬ್ಜಮಧುಪಾಯಿತಮಾನಸಃ ॥೧೯॥

ಪ್ರಲಂಬ ಹಸ್ತಪ್ರಾಸಾದನಾಥ ಪಾದಾಂಬುಜಾರ್ಚಕಾನ್ ।
ಅರ್ಚಯಂಛಿವಭಕ್ತಾಂಶ್ಚ ಸ್ವಚ್ಛಮಾನಸದರ್ಪಣಃ ॥೨೦॥

ಪ್ರಲಂಬಹಸ್ತ ಪ್ರಾಸಾದನಾಥಸ್ಯೋತ್ಸವದರ್ಶನೇ ।
ನಾನ್ಯತ್ಸ ಮೇನೇ ನಿಃಸಂಗಮಂಗಲೈಶ್ವರ್ಯನಿಶ್ಚಲಃ ॥೨೧॥

ಅನ್ನೈಃ ಷಡ್ರಸಸಂಪನ್ನೈರ್ವ್ಯಂಜನೈಶ್ಚಿತ್ತರಂಜನೈಃ ।
ಅತ್ಯಾಹತಮನಾ ಭಕ್ತಾನ್ಭೋಜಯದ್ಭಕ್ತರಾಶಿಭಿಃ ॥೨೨॥

ಕದಾಚಿದ್ಬಹವೋ ಭಕ್ತಾ ಭೋಕ್ತುಂ ತದ್ಗೇಹಮಾಗತಾಃ ।
ಸ ತಾನ್ಭೋಜಯಿತುಂ ತೇಷಾಂ ಪಾದಪ್ರಕ್ಷಾಳನಂ ವ್ಯಧಾತ್ ॥೨೩॥

ಪತಿವ್ರತಾ ತಸ್ಯ ಪತ್ನೀ ನಾಮ್ನಾ ನೀತಿಮತೀ ಜಲಂ ।
ಕರಕಾತ್ತಕರೇಣಾಂಬು ದಧ್ರೇ ಪ್ರಕ್ಷಾಳನಾಯ ಸಾ ॥೨೪॥

---

ಆ ಊರಿನಲ್ಲಿ ಜಿತೇಂದ್ರಿಯನಾದ ಕಲಿಕಂಪನೆಂಬ ಒಬ್ಬ ವೈಶ್ಯನು ಶಿವನ ಪಾದಕಮಲಮಕರಂದ ಪಾನಮಾಡುವುದರಲ್ಲಿ ಭ್ರಮರಸದೃಶವಾದ ಮನಸ್ಸುಳ್ಳವನಾಗಿದ್ದನು. ಪ್ರಲಂಬಹಸ್ತಪ್ರಾಸಾದನಾಥನೆನಿಸಿದ ಶಿವನ ಪಾದಕಮಲಪೂಜಕರನ್ನೂ ಶೈವರನ್ನೂ ಪೂಜಿಸುತ್ತಾ, ಅವನು ಸ್ವಚ್ಛವಾದ ಕನ್ನಡಿಯಂತೆ ಮನವುಳ್ಳವನಾಗಿದ್ದನು. ॥೧೯-೨೦॥

ಪ್ರಲಂಬಹಸ್ತಪ್ರಾಸಾದನಾಥನ ಉತ್ಸವವನ್ನು ನೋಡುವಾಗ ಅವನು ಇತರ ಯಾವ ಸಂಗವೂ ಇಲ್ಲದೇ ಅದೇ ಮಂಗಳಪ್ರದವಾದ ಐಶ್ವರ್ಯವೆಂದು ತಿಳಿದು ನಿಶ್ಚಲನಾಗಿ ಭಕ್ತಿಯಿಂದ ನಿಂತುಬಿಡುತ್ತಿದ್ದನು. ಅಲ್ಲದೆ ಷಡ್ರಸಭರಿತವಾದ ನಾನಾ ಪರಿಕರಗಳಿಂದ ಕೂಡಿ ಮನೋರಂಜಕವಾದ ಅನ್ನಗಳಿಂದ ದುಡುಕಿಲ್ಲದೇ ಶಾಂತ ಮನಸ್ಸಿನಿಂದ ಅವನು ಶೈವವರ್ಯರನ್ನು ಅನ್ನಸಮೂಹಗಳಿಂದ ಭೋಜನಮಾಡಿಸುತ್ತಿದ್ದನು. ॥೨೧-೨೨॥

ಒಂದುಸಲ ಅವನ ಮನೆಗೆ ಅನೇಕ ಭಕ್ತರು ಊಟಮಾಡಲು ಬಂದರು. ಆಗ ಅವನು ಅವರಿಗೆ ಭೋಜನಮಾಡಿಸಲು ಮುಂಚೆ ಅವರ ಪಾದಗಳನ್ನು

ಪ್ರಕ್ಷಾಳನಾಯ ತತ್ಪಾದಮಸ್ಪೃಶದ್ವೈಶ್ಯಸತ್ತಮಃ ।
ಭಕ್ತವೇಷಂ ಸಮಾಸ್ಥಾಯ ಶಿವೋಽಭ್ಯಾಗಾದ್ಯದೃಚ್ಛಯಾ ॥೨೫॥

ತತ್ಪಾದಪದ್ಮಮಾಲಂಬ್ಯ ಪಾದಪ್ರಕ್ಷಾಳನಾಯ ಸಃ ।
ಪಾದಮಾಕರ್ಷಯನ್ನಾಹ ಸ ತದಾ ಭಸ್ಮಭೂಷಿತಃ ॥೨೬॥

ಅಕೃತ್ವಾ ಶಿವಲಿಂಗಾರ್ಚಾಯಾಗತೋಽಸ್ಮಿ ತ್ವದಂತಿಕಂ ।
ತ್ಯಕ್ತ್ವಾ ಯಃ ಶಿವಲಿಂಗಾರ್ಚಾಂ ಭುಂಕ್ತೇಽಸೌ ನಾರಕೀಭವೇತ್ ॥೨೭॥

ಇತ್ಯುಕ್ತೋಽಥ ವಿಲಂಬಂತೀಂ ಪತ್ನೀಂ ವೀಕ್ಷ್ಯಾಥ ಕೋಪನಃ ।
ಪತ್ನ್ಯಾಃ ಪಾಣಿಂ ಕೃಪಾಣೇನ ಚಿಚ್ಛೇದಾಥಾವಿಚಿಂತಯನ್ ॥೨೮॥

ಸ್ವಯಮಾದಾಯ ಕರಕಂ ಪ್ರಕ್ಷಾಳ್ಯಾಸ್ಯ ಪದದ್ವಯಂ ।
ಪರಿವೇಷ್ಯ ಸ್ವಯಂ ಭಕ್ತಾನ್ಸ್ತುಷ್ಟೋಽಭೂದ್ವೈಶ್ಯಸತ್ತಮಃ ॥೨೯॥

---

ತೊಳೆದನು. ಆಗ ಪತಿವ್ರತೆಯಾದ ನೀತಿಮತಿಯೆಂಬ ಅವನ ಹೆಂಡತಿಯು ಅವರ ಕಾಲುತೊಳೆಯುವುದಕ್ಕಾಗಿ ಗಿಂಡಿಯಲ್ಲಿ ನೀರು ಹಿಡಿದು ನಿಂತಿದ್ದಳು. ॥೨೩-೨೪॥

ಆಗ ಅವರ ಕಾಲುಗಳನ್ನು ತೊಳೆಯಲು ಆ ವೈಶ್ಯವರ್ಯನು ಕಾಲುಗಳನ್ನು ಮುಟ್ಟಿದನು. ಅದೇ ಸಮಯದಲ್ಲಿಯೇ ಭಕ್ತನ ವೇಷ ಹಾಕಿಕೊಂಡು ಶಿವನೂ ಸ್ವೇಚ್ಛೆಯಿಂದ ಅಲ್ಲಿಗೆ ಬಂದನು. ಆಗ ಎಲ್ಲರಂತೆ ಇವನ ಪಾದವನ್ನೂ ತೊಳೆಯಲು ಯತ್ನಿಸಿ ಕಾಲನ್ನು ಹಿಡಿಯಲು, ಆಗ ಭಸ್ಮಭೂಷಿತನಾದ ಶಿವನು ತನ್ನ ಕಾಲನ್ನು ಹಿಂದಕ್ಕೆ ಸೆಳೆದುಕೊಂಡು ಇಂತೆಂದನು. ॥೨೫-೨೬॥

“ಅಯ್ಯ ಭಕ್ತನೇ, ನಾನು ಶಿವಲಿಂಗಪೂಜೆಮಾಡದೇ ನಿನ್ನ ಬಳಿಗೆ ಬಂದಿರುವೆನು. ಶಿವಲಿಂಗಪೂಜೆಮಾಡದೇ ಊಟಮಾಡುವವನು ನರಕವನ್ನೈದುವನು” ಎಂದು ನುಡಿದ ಶೈವನ ಮಾತನ್ನು ಕೇಳಿ ಹಾಗೆಯೇ ಆಗಲೆಂದು ನುಡಿದು ತಡಮಾಡುತ್ತಿರುವ ಹೆಂಡತಿಯನ್ನು ನೋಡಿ, ತುಂಬಾ ಕೋಪಸ್ವಭಾವವುಳ್ಳವನಾಗಿ ಈ ಕಲಿಕಂಪನು ಕೂಡಲೆ ಕತ್ತಿಯನ್ನು ತೆಗೆದುಕೊಂಡು, ತನ್ನ ಹೆಂಡತಿಯ ಕೈಗಳನ್ನು ಸ್ವಲ್ಪವೂ ಯೋಚಿಸದೇ ಕಡಿದುಹಾಕಿದನು. ॥೨೭-೨೮॥

ಅನಂತರ ತಾನೇ ಕಮಂಡಲುವನ್ನು ಹಿಡಿದ ಇವನ ಕಾಲುಗಳೆರಡನ್ನೂ ತೊಳೆದು ತಾನೇ ಆ ಭಕ್ತರಿಗೆ ಊಟಬಡಿಸಿ ಆ ವೈಶ್ಯಪುಂಗವನು ಸಂತುಷ್ಟನಾದನು.

ತದ್ಭಕ್ತಿಂ ಶಿವಭಕ್ತೇಷು ಮನಃಸಕ್ತಿಮತಿಸ್ಥಿರಾಂ ।
ದೃಷ್ಟ್ವಾ ದೇವಃ ಪ್ರಸನ್ನಾತ್ಮಾ ಪ್ರಾದುರಾಸ ಪ್ರಿಯಾಸಖಃ ॥೩೦॥

ತಂ ದೃಷ್ಟ್ವಾ ದೇವದೇವೇಶಂ ತುಷ್ಟಾವ ಸ ವಿಶಾಂ ಪತಿಃ ॥೩೧॥

ಭೋ ಶಂಭೋ ತ್ರಿಜಗಚ್ಛರಣ್ಯ ಕರುಣಾತಾರುಣ್ಯವಾರಾಂನಿಧೇ
ಪಾಹೀಶ ಪ್ರಮಥಾದಿನಾಥ ಗರಭೃಗ್ವಿಶ್ವೇಶ ವಿಶ್ವಾಧಿಕ ।
ವಿಶ್ವಾಶಾಸ್ಯ ವಿಭೋ ವಿಭೂಷಣಮಹಾಕಾಕೋದರಾಕಂಧರ
ಸೋಮಾನದ್ಧಕಿರೀಟಕೋಟಿ ವಿಲಸದ್ಭಸ್ಮಾಂಗರಾಗಾರುಣ ॥೩೨॥

ತತ್ಸ್ತುತ್ಯಾ ತೋಷಿತಃ ಶಂಭುಸ್ತಮಾತ್ಮವಿನಯಾನ್ವಿತಂ ।
ಶಿವಭಕ್ತೇಷು ತೇ ಪ್ರೀತ್ಯಾ ಸುಪ್ರೀತಾಸ್ತು ತವ ಪ್ರಿಯಾ ॥೩೩॥

ವಿಪ್ರಿಯಂ ನೈವ ತೇ ಕಿಂಚಿನ್ಮತ್ಪ್ರಿಯಸ್ತ್ವಂ ನ ಸಂಶಯಃ ॥೩೪॥

---

ಶಿವಭಕ್ತಿಯುಳ್ಳವರಲ್ಲಿ ಅವನಿಗಿರುವ ಭಕ್ತಿಯನ್ನೂ ಅವನ ದೃಢವಾದ ಮನಸ್ಸನ್ನೂ ನೋಡಿ ಮಹಾದೇವನು ಪ್ರಸನ್ನನಾಗಿ ಪಾರ್ವತಿಯೊಡನೆ ಪ್ರತ್ಯಕ್ಷನಾದನು.॥೨೯-೩೦॥

ದೇವದೇವೇಶ್ವರನಾದ ಆ ಮಹೇಶನನ್ನು ನೋಡಿ ವೈಶ್ಯನು ಇಂತು ಸ್ತುತಿಮಾಡಿದನು. "ಮೂರುಲೋಕಗಳಿಗೂ ಆಶ್ರಯನಾಗಿ, ನೂತನವಾದ ದಯೆಗೆ ಸಮುದ್ರದಂತಿರುವ ಶಂಭುವೇ, ಪ್ರಮಥಗಣವೇ ಮೊದಲಾದವುಗಳಿಗೊಡೆಯನೂ, ವಿಷಕಂಠನೂ, ಜಗದೊಡೆಯನೂ, ಜಗಚ್ಛ್ರೇಷ್ಠನೂ, ಸಕಲ ಜನರಿಂದ ಹೊಗಳಲ್ಪಡುವವನೂ, ಸರ್ವವ್ಯಾಪಕನೂ, ದೊಡ್ಡ ಸರ್ಪವನ್ನೇ ಕೊರಳಲ್ಲಿ ಹಾರಭೂಷಣವನ್ನಾಗಿ ಮಾಡಿಕೊಂಡಿರುವವನೂ, ಚಂದ್ರಯುಕ್ತವಾದ ಕಿರೀಟವುಳ್ಳವನೂ, ಭಸ್ಮಲಿಪ್ತವಾದ ದೇಹಕಾಂತಿಯಿಂದ ಕೆಂಪಾಗಿ ತೋರುವವನೂ ಆದ ಮಹೇಶ್ವರನೇ, ಕಾಪಾಡು." ॥೩೧-೩೨॥

ಈರೀತಿಯಾದ ಆ ಕಲಿಕಂಪನ ಸ್ತೋತ್ರದಿಂದ ಸಂತುಷ್ಟನಾದ ಶಂಭುವು ತನ್ನಲ್ಲಿ ವಿನಯಸಂಪನ್ನನಾಗಿರುವ ಅವನನ್ನು ಕಂಡು, ಓ ಭಕ್ತನೇ, ಶಿವಭಕ್ತರಲ್ಲಿ ನಿನಗಿರುವ ಪ್ರೀತಿಯಿಂದ ನಿನ್ನ ಹೆಂಡತಿಯು ಸುಸಂತುಷ್ಟಳಾಗಲಿ. ಅವಳಿಗೆ ಪುನಃ ಕೈ ಬಂದು ಮೊದಲಿನಂತೆ ನಿನ್ನೊಡನೆ ಶೈವೋಪಚಾರಯೋಗ್ಯಳಾಗಲಿ. ನಿನಗೆ ಯಾವ ತೊಂದರೆಯೂ ಉಂಟಾಗಲಾರದು. ಎಲೈ ಕಲಿಕಂಪನೇ, ನೀನು ನನಗೆ

॥ ಸೂತ ಉವಾಚ ॥

ಆಶಾಂ ವಿಹಾಯ ಪರಿತೇ ಸ ಮಿತೇನು ಪಾಶಾ ।
ದಾಶಾಂ ವಿಹಾಯ ಸ ಬುಧೋಽಪಿ ವಿಹಾಯ ಬದ್ಧಂ (?) ॥೩೫॥

ಸ್ಮರಾರಿ ಪಾದಸ್ಮರಣೈಕಭೂತೇ
ಸ್ತಸ್ಯಾತಿಭಕ್ತಸ್ಯ ಪುರಃ ಪುರಾರಿಃ ।
ಆವಿರ್ಬಭೂವಾದ್ರಿಸುತಾಸಹಾಯೋ
ವೃಷಾಧಿರೂಢಃ ಸುರವರ್ಗಸಂಘೈಃ ॥೩೬॥

ಹೃಷ್ಟಃ ಪ್ರಹೃಷ್ಟಃ ಸ ತಮಷ್ಟಮೂರ್ತಿಂ
ಪ್ರಣಮ್ಯ ಸ ಪ್ರಾಂಜಲಿರೇವ ತಸ್ಥೌ ।
ಏವಂ ಭವಾನೀಪತಿರಾತ್ಮಭಕ್ತಂ
ನಿನಾಯ ಲೋಕಂ ನಿರಪಾಯಸೌಖ್ಯಂ ॥೩೭॥

---

ಪ್ರಿಯನಾದವನೆಂಬುದರಲ್ಲಿ ಸ್ವಲ್ಪವೂ ಸಂದೇಹವೇ ಇಲ್ಲವೆಂದು ತಿಳಿ, ಎಂದು ಶಿವನು ನುಡಿದನು. ॥೩೩-೩೪॥

ವಾಜಶ್ರವಸಾದಿಮುನಿಗಳೇ, ಯಾವನು ತನ್ನ ಸಂಸಾರದಲ್ಲಿಯಾಗಲಿ, ದೇಹದಲ್ಲಾಗಲಿ, ಮಮತೆಯುಳ್ಳವನಾಗಿ ಜೀವಿಸುವನೋ, ಅವನಿಗೆ ಜೀವನದ ತೊಡಕುಗಳು ಎಂದೂ ಪರಿಹಾರವಾಗುವುದಿಲ್ಲ, ಎಂತಹ ವಿದ್ವಾಂಸನಾದರೂ ಆಸೆಯನ್ನು ಹೊಂದಿರುವವರೆಗೆ ಆತನಿಗೆ ಸುಖವಿಲ್ಲ. ॥೩೫॥

ಮನ್ಮಥಾಂತಕನಾದ ಶಿವನ ಸ್ಮೃತಿಯೇ ಮುಖ್ಯ ಐಶ್ವರ್ಯವಾಗುಳ್ಳ ಆ ಅತಿಭಕ್ತನ ಮುಂದೆ ಪರಶಿವನು ಪಾರ್ವತಿಯೊಡನೆ ವೃಷಾರೂಢನಾಗಿ ದೇವಗಣಗಳೊಡನೆ ಪ್ರತ್ಯಕ್ಷನಾದನು. ॥೩೬॥

ಆಗ ಆ ಅತಿಭಕ್ತನು ಸಂಪೂರ್ಣ ಸಂತುಷ್ಟನಾಗಿ ಅಷ್ಟಮೂರ್ತಿಯಾದ ಆ ಶಿವನಿಗೆ ನಮಸ್ಕಾರಮಾಡಿ ಕೈಮುಗಿದುಕೊಂಡು ನಿಂತನು. ಹೀಗೆಯೇ ಆ ಭವಾನೀರಮಣನಾದ ಶಿವನು ತನ್ನ ಭಕ್ತನಾದ ಈ ಅತಿಭಕ್ತನನ್ನು ನಿತ್ಯಸುಖಪೂರ್ಣವಾದ ಕೈಲಾಸಲೋಕಕ್ಕೆ ಕರೆದುಕೊಂಡನು. ॥೩೭॥

ಭಕ್ತಿಪ್ರಸನ್ನಃ ಪರಮೇಶ್ವರೋಽಸೌ
ಪ್ರದಾಯ ಪಾಣಿಂ ಪುನರಸ್ಯ ಪತ್ನ್ಯಾಃ ।
ವೈಶ್ಯೋತ್ತಮಂ ತಂ ಶಿವಭಕ್ತಿವಶ್ಯಂ
ಪತ್ನ್ಯಾ ಸಮೇತಂ ಸ್ವಪದಂ ನಿನಿನ್ಯೇ ॥೩೮॥

ಕಲಿಕಾಮುಚಿತಃ ಸ್ಥಿರಾತ್ಮನಃ
ಕಲಿಕಂಪಸ್ಯ ಚರಿತ್ರಮದ್ಭುತಂ ।
ಕಲಿಕಾಲಜಕಲ್ಮಲಾಪಹಂ
ಕಲಯನ್ಕಾಲಜಿದಂಘ್ರಿಭಾಗ್ಭವೇತ್ ॥೩೯॥

ಇತಿ ಶ್ರೀ ಶಿವರಹಸ್ಯೇ ನವಮಾಂಶೇ ಸದಾಶಿವಾಖ್ಯೇ ಕಲಿಕಂಪಾಹ್ವಯ
ಚರಿತ್ರೇ ಕಲಿಕಾಮುಚಿದಾಖ್ಯಾನವರ್ಣನಂನಾಮೈಕ
ಷಷ್ಟಿತಮೋಽಧ್ಯಾಯಃ

---

ಆ ಕಲಿಕಂಪನ ಭಕ್ತಿಯಿಂದ ಪ್ರಸನ್ನನಾದ ಶ್ರೀಪರಮೇಶ್ವರನು ಇವನ ಹೆಂಡತಿಗೆ ಮತ್ತೆ ಕೈಯನ್ನು ಅನುಗ್ರಹಿಸಿ, ಶಿವಭಕ್ತಪರಾಧೀನನಾದ ಈ ವೈಶ್ಯಪುಂಗವನನ್ನು ಅವನ ಹೆಂಡತಿಯೊಡನೆ ತನ್ನ ಪಾದಕ್ಕೆ ಸೇರಿಸಿಕೊಂಡನು. ॥೩೮॥

ಕಲಿಯುಗದ ಇಚ್ಛೆಯನ್ನೆಲ್ಲಾ ಜಯಿಸಿ, ದೃಢಚಿತ್ತನಾದ ಕಲಿಕಂಪನೆಂಬ ವೈಶ್ಯವರ್ಯನ ಕಲಿದೋಷನಿವಾರಣೆಮಾಡುವ ಈ ಅತ್ಯದ್ಭುತವಾದ ಚರಿತ್ರೆಯನ್ನು ಕೇಳುವವರೂ, ಓದುವವರೂ-ಸಹ ಯಮಾಂತಕನಾದ ಆ ಮಹಾದೇವನ ಪಾದ ಸನ್ನಿಧಿಯನ್ನೈದುವರು, ಎಂದು ಜೈಗೀಷವ್ಯಾದಿಗಳಿಗೆ ಕುಮಾರಸ್ವಾಮಿಯು ಹೇಳಿದನು, ಎಂದು ಸೂತರು ವಾಜಶ್ರವಸಾದಿಗಳಿಗೆ ತಿಳಿಸಿದರು. ॥೩೯॥

ಇಲ್ಲಿಗೆ ಶ್ರೀಶಿವರಹಸ್ಯದಲ್ಲಿ ಸದಾಶಿವಸಂಜ್ಞಕವಾದ ಒಂಬತ್ತನೆಯ ಅಂಶದಲ್ಲಿ
ಕಲಿಕಂಪನ ಚರಿತ್ರೆಯಲ್ಲಿ ಕಲಿಕಾಮುಚಿದಾಖ್ಯಾನವರ್ಣನೆಯೆಂಬ
ಅರವತ್ತೊಂದನೆಯ ಅಧ್ಯಾಯವು ಮುಗಿಯಿತು.



॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಸದಾಶಿವಾಖ್ಯೇ

## ನವಮಾಂಶೇ

## ದ್ವಿಷಷ್ಟಿತಮೋಽಧ್ಯಾಯಃ

॥ ಶ್ರೀಸ್ಕಂದ ಉವಾಚ ॥

ಕಲಿನೀತೇಃ ಕಥ್ಯತೇಽದ್ಯ ಜಗದ್ವ್ಯಾಪ್ತಿಪ್ರಥಾ ಕಥಾ ।
ಕೌಂಡೀರಮಂಡಲೇ ಭಾತಿ ಮಹೀಮಂಡಲಮಂಡನೇ ॥೧॥

ಅಧಿಕಾಪುರನಾಮಾಸ್ತಿ ಪುರಂ ಸ್ವಃ ಪುರಸನ್ನಿಭಂ ।
ವಿಬುಧಾಧಿಪಸೌಧಾಭಂ ಸುಧಾಧವಲಿತಂ ಸದಾ ॥೨॥

ಶಿವಪ್ರಾಕಾರಸಂಬದ್ಧಪುರವೀಥೀಸಮೇಧಿತಂ ।
ಪ್ರಾಕಾರಪ್ರಕರಾ ಯತ್ರ ಸೂರ್ಯಮಾರ್ಗನಿರೋಧಕಾಃ ॥೩॥

---

## ಅರವತ್ತೆರಡನೆಯ ಅಧ್ಯಾಯ

ಅಯ್ಯ ಜೈಗೀಷವ್ಯನೇ, ಪ್ರಪಂಚದಲ್ಲೆಲ್ಲಾ ಖ್ಯಾತಿಗೊಂಡಿರುವ ಪ್ರಸಿದ್ಧವಾದ ಕಲಿನೀತಿಯೆಂಬ ಭಕ್ತನ ಕಥೆಯನ್ನು ಇನ್ನು ಹೇಳುವೆನು ಕೇಳು. ಭೂಮಂಡಲಕ್ಕೆ ಅಲಂಕಾರಪ್ರಾಯವಾಗಿರುವ ಕೌಂಡೀರ ದೇಶದಲ್ಲಿ ಸ್ವರ್ಗಲೋಕಸಮಾನವಾದ ಅಧಿಕಾಪುರವೆಂಬ ಒಂದು ಪಟ್ಟಣವಿರುವುದು. ಅದು ದೇವೇಂದ್ರನ ಅರಮನೆಗಳಂತೆ ಕಂಗೊಳಿಸುತ್ತಿರುವ ಅನೇಕ ಸೌಧಗಳಿಂದ ವ್ಯಾಪ್ತವಾಗಿ ನೋಡುವವರಿಗೆ ಸುಧಾಧವಳವನ್ನು ಎರೆಚುತ್ತಾ ಹೊಳೆಯುತ್ತಿರುವುದು. ॥೧-೨॥

ಶಿವದೇವಾಲಯದ ಪ್ರಾಕಾರಗಳಿಗೆ ಸಂಬಂಧಪಟ್ಟ ಬೀದಿಗಳಂತೂ ಆ ನಗರದಲ್ಲಿ ವಿಶೇಷ ವೈಭವಯುಕ್ತಗಳಾಗಿರುವುವು. ಆ ದೇವಸ್ಥಾನದ ಪ್ರಾಕಾರದ

ಸಮುಚ್ಛ್ರಾಯಾಃ ಸಮೀಕ್ಷ್ಯಂತೇ ಶರಚ್ಚಂದ್ರತಲೋಪಮಾಃ ।
ಯತ್ಸಾಲಾಗ್ರಥಿತಾಂಭೋಧೇಃ ಘೋಷನಾದಾ ನದೀಪತೇಃ ॥೪॥

ಮುರವಾದಿರವಾಶ್ಚೈವ ನ ವ್ಯಜ್ಯಂತೇ ಪರಸ್ಪರಂ ।
ತತ್ರ ರತ್ನಮುಖದ್ರವ್ಯವಾಣಿಜ್ಯಪ್ರಾಪ್ತಸಂಪದಾ ॥೫॥

ಚಕ್ರಿಣಃ ಶ್ರೂಯತೇ ವೀಥೀನಾಮಿಕಾ ಚಕ್ರವಾಟಿಕಾ ।
ತತ್ರ ಚಾರುಚರಿತ್ರೋಽಭೂತ್ತೈಲಿಕಾನ್ವಯಸಂಭವಃ ॥೬॥

ಕಾಮಾರಿಕಿಂಕರಃ ಕಶ್ಚಿತ್ಕಲಿನೀತಿರಿತಿ ಶ್ರುತಃ ।
ಯಶೋಧನಾ ಧನೇನಾಪಿ ಶೋಧನಃ ಸರ್ವಪಾಪ್ಮನಾಂ ॥೭॥

ಸಾಧುರಾವೀಥಿರಾಶೀಶೋ ಭೂತೇಶೇ ಭಕ್ತಿಮಾನಸಃ ।
ಮಂದಿರಾಂತರ್ಬಹಿಃ ಶಂಭೋರ್ದೀಪಾನಾರೋಪಯನ್ಸದಾ ॥೮॥

---

ಗೋಡೆಗಳು ಎತ್ತರವಾಗಿದ್ದು ಸೂರ್ಯನ ದಾರಿಯನ್ನು ತಡೆಯುತ್ತಾ ಬಹಳ ಆಶ್ಚರ್ಯಕರಗಳಾಗಿ ಕಾಣುತ್ತಿರುವುವು. ಶರಚ್ಚಂದ್ರನ ಕಲೆಗಳಂತೆ ಬೆಳ್ಳಗಿರುವ ಆ ಪ್ರಾಕಾರದ ಗೋಡೆಗಳು ಸದಾ ಕಾಂತಿಮತ್ತಾಗಿ ಹೊಳೆಯುತ್ತಿರುವುವು. ಆ ಪ್ರಾಕಾರಗಳ ಸಾಲುಗಳಲ್ಲಿರುವ ಸಮುದ್ರದ ಗಂಭೀರವಾದ ನಾದವು ದೇವಾಲಯದ ಮುರಜವೇ ಮೊದಲಾದ ವಾದ್ಯಧ್ವನಿಯೊಂದಿಗೆ ಕೂಡಿ ಪರಸ್ಪರವಾಗಿ ವ್ಯತ್ಯಾಸಗಾಣದೇ ಗಂಭೀರವಾಗಿ ಮೊರೆಯುತ್ತಿರುವುದು. ॥೩-೪॥

ಅಲ್ಲಿ ರತ್ನಪಡಿ ವ್ಯಾಪಾರದಿಂದ ಐಶ್ವರ್ಯಕ್ಕೆ ನಿಧಿಯಂತೆ ತೋರುವ ಚಕ್ರಿಯ (ವಿಷ್ಣುವಿನ) ಹೆಸರಿನ ಬೀದಿಯು ಚಕ್ರಪಾಟಿಕಾ ಎಂಬ ಹೆಸರಿನಿಂದಲೇ ಪ್ರಸಿದ್ಧವಾಗಿರುವುದು. ಅಂತಹ ಬೀದಿಯಲ್ಲಿ ತೈಲಿಕರ (ಎಣ್ಣೆಮಾರುವವರ) ವಂಶದಲ್ಲಿ ಹುಟ್ಟಿ, ಪವಿತ್ರವಾದ ಚರಿತ್ರೆಯುಳ್ಳ ಕಲಿನೀತಿಯೆಂಬ ಪ್ರಖ್ಯಾತನಾದ ಶಿವಕಿಂಕರನೊಬ್ಬನು ವಾಸವಾಗಿದ್ದನು. ಅವನು ಕೀರ್ತಿಯನ್ನೇ ಧನವನ್ನಾಗಿ ಪಡೆದು ತನ್ನಲ್ಲಿರುವ ಹಣದಿಂದ ಸಕಲ ಪಾಪಗಳನ್ನೂ ನಾಶಗೊಳಿಸುವ ದಾನಧರ್ಮಾದಿಗಳನ್ನು ತಪ್ಪದೆ ನೆರವೇರಿಸುತ್ತಿದ್ದನು. ॥೫-೬-೭॥

ಹೀಗೆ ಚಕ್ರವಾಟಿಕಾ ಬೀದಿಯಲ್ಲಿ ವಾಸಿಸುತ್ತಾ ಶ್ರೀಮಂತನಾಗಿ ಸಾಧುವೆನಿಸಿಕೊಂಡಿದ್ದ ಆ ಕಲಿನೀತಿಯು ಶಿವನಲ್ಲಿ ಭಕ್ತಿಪೂರ್ಣವಾದ ಮನವುಳ್ಳವನಾಗಿ

ಶಿವಧರ್ಮಪರಸ್ತತ್ರ ಸೋಽವಾತ್ಸೀದ್ವಿನಯಾನ್ವಿತಃ ।
ಭಕ್ತಿಂ ಪರೀಕ್ಷಿತುಂ ತಸ್ಯ ತೈಲಿಕಾಧಿಪತೇಃ ಸ್ಥಿರಾಂ ॥೯॥

ಶನೈಃ ಶನೈರ್ಧನಂ ಸರ್ವಂ ಶಮಯಾಮಾಸ ಶಂಕರಃ ।
ಅಸಂಖ್ಯಾಯಾಂ ಕ್ರಮೇಣೈವ ಕ್ಷೀಣಾಯಾಮಪಿ ಸಂಪದಿ ॥೧೦॥

ಅತ್ಯಾದರೋ ನ ತತ್ಯಾಜ ಶಂಭೋರ್ದೀಪಾನುಪಾಲನಂ ।
ಕ್ರಯವಿಕ್ರಯತಲ್ಲಾಭತೈಲೇನೈವ ತ್ರಿಶೂಲಿನಃ ॥೧೧॥

ದೀಪಾನಾರೋಪಯಂಭ್ರಷ್ಟಃ ಸ ತೈಲಿಕಕುಲಾಧಿಪಃ ।
ನಿತ್ಯಮತ್ಯಂತದೌರ್ಗತ್ಯೋ ವಿಕ್ರಯದ್ಭ್ರಮಿಚಕ್ರಕಂ ॥೧೨॥

ಮನೋ ನಿಯಮ್ಯ ದಮ್ಯಾವಪ್ಯಥಕ್ರೀತ್ವಾ ಶಿವೋತ್ಸವಂ ।
ಉಪಪನ್ನೇನ ತೈಲೇನ ದೀಪಾನಾರೋಪಯತ್ಪ್ರಭೋಃ ॥೧೩॥

---

ಶಿವಪ್ರೀತ್ಯರ್ಥವಾಗಿ ತನ್ನ ಮನೆಯ ಒಳಗೆ ಹೊರಗೆ ಎಲ್ಲಾ ಕಡೆಗಳಲ್ಲೂ ದೀಪಗಳನ್ನು ಯಾವಾಗಲೂ ಉರಿಸುತ್ತಿದ್ದನು. ಹೀಗೆ ಅವನು ಸದಾ ಶಿವಧರ್ಮನಿರತನಾಗಿ ವಿನಯದಿಂದ ವಾಸಮಾಡುತ್ತಿರುವಾಗ, ಒಂದು ಸಾರಿ ಆ ತೈಲಿಕಾದೀಪನ ದೃಢವಾದ ಭಕ್ತಿಯನ್ನು ಪರೀಕ್ಷೆಮಾಡಲು ಪರಮೇಶ್ವರನು ಅವನ ನಿಧಿಯೆಲ್ಲಾ ನಾಶವಾಗಿ ಕಾಲಕ್ರಮದಲ್ಲಿ ದರಿದ್ರನಾಗುವಂತೆ ಏರ್ಪಡಿಸಿದನು. ॥೮-೯॥

ಅವನಲ್ಲಿ ಮೊದಲು ಎಣಿಸಲಾಗದಷ್ಟು ಹಣವಿದ್ದರೂ ಕ್ರಮವಾಗಿ ಆ ಐಶ್ವರ್ಯವೆಲ್ಲವೂ ಕ್ಷಯವಾಗಲು, ಆಗಲೂ ಅವನು ಶಿವಭಕ್ತಿನಿರತನಾಗಿ ಶಂಭುವಿಗೆ ದೀಪಹೊತ್ತಿಸಿಡುವುದನ್ನು ಮಾತ್ರ ಬಿಡಲಿಲ್ಲ. ಕೊಳ್ಳುವುದು, ಅದನ್ನೇ ಮಾರುವುದು ಇವುಗಳಿಂದ ಲಾಭಬರುವ ಎಣ್ಣೆಯಿಂದಲೇ ಪರಶಿವನಿಗೆ ದೀಪಗಳನ್ನು ಹೊತ್ತಿಸುತ್ತಾ ಆ ಗಾಣಿಗರ ವಂಶತಿಲಕನು ಶಿವಕೈಂಕರ್ಯವನ್ನು ಒಂದು ದಿನವೂ ಬಿಡುತ್ತಿರಲಿಲ್ಲ. ಹೀಗಿದ್ದರೂ ಅವನಿಗೆ ಬಡತನವು ಹೆಚ್ಚಿ ಕೊನೆಗೆ ಕೇವಲ ದರಿದ್ರಾವಸ್ಥೆಗಿಳಿದು ತನ್ನಲ್ಲಿದ್ದ ಗಾಣವನ್ನೂ ಸಹ ಮಾರಿಬಿಟ್ಟನು. ॥೧೦-೧೧-೧೨॥

ಹಾಗಾದರೂ ಎದೆಗುಂದದೆ ಕಲಿನೀತಿಯು ತನ್ನಲ್ಲಿದ್ದ ಎರಡೆತ್ತುಗಳನ್ನೂ ಮಾರಿ, ಶಿವೋತ್ಸವವನ್ನು ನಡೆಸಿದನು. ಅದರಿಂದ ಉಳಿದ ದುಡ್ಡಿನಲ್ಲಿಯೂ ಎಣ್ಣೆಯನ್ನು ಪಡೆದು ಅದರಿಂದ ಆ ಪ್ರಭುವಿಗೆ ದೀಪಗಳನ್ನು ಹೊತ್ತಿಸಿ ಶಿವಸೇವೆ

ಸರ್ವಂ ಗೃಹಾದಿವಿಕ್ರೀಯ ದೀಪದಾಪನಕೃತ್ಸದಾ ।
ಕಲಿನೀತಿಸ್ತತೋ ಜಾಯಾಮಾಸೀದ್ವಿಕ್ರೇತುಮುತ್ಸುಕಃ ॥೧೪॥

ವಿಕ್ರೀಯತೇ ಮೇ ಜಾಯೇಯಂ ಧನೇನ ಕ್ರಿಯತಾಮಿತಿ ।
ಜನೇಷು ಘೋಷಯಾಮಾಸ ವೀಥ್ಯಾಂ ವೀಥ್ಯಾಂ ತದಾ ಮುದಾ ॥೧೫॥

ಬುದ್ಧ್ವಾ ಬುದ್ಧ್ವಾ ಶಿವಾಜ್ಞಾಂ ತಾಂ ಬದ್ಧ್ವಾ ಹೃದಿ ಸ ಖಿನ್ನಧೀಃ ।
ನಕ್ರೀಣಾತಿ ಸತೀಂ ಕಶ್ಚಿದಾಪ್ರದೋಷಂ ಶಿವಾಜ್ಞಯಾ ॥೧೬॥

ಸ ಚ ದೇವಾಲಯಂ ಪ್ರಾಪ್ಯ ವಿಷಣ್ಣಾತ್ಮಾ ವ್ಯಚಿಂತಯತ್ ।
ಕಾಲೇ ಶಿವಾಲಯೇ ದೀಪಾನದ್ಯಾನರ್ಪಯತೋ ಮಮ ॥೧೭॥

ಕಿಂ ಪ್ರಾಣೈರ್ಗಲಮುತ್ಕೃತ್ಯ ತದುತ್ಥೈಸ್ತೈಲಪೂರಣಂ ।
ಕರಿಷ್ಯಾಮೀತಿ ಸಂಕಲ್ಪ್ಯ ಕಂಠೇ ಖಡ್ಗಂ ನಿವೇಶಯತ್ ॥೧೮॥

---

ಯನ್ನು ನೆರವೇರಿಸಿದನು. ಅದೂ ಆದನಂತರ ತನ್ನ ಮನೆಮಠಗಳನ್ನೆಲ್ಲಾ ಮಾರಿ ಶಿವನಿಗೆ ದೀಪಗಳನ್ನು ಹೊತ್ತಿಸಿಡಲು ಆರಂಭಿಸಿದನು. ಹೀಗೆ ಎಲ್ಲವೂ ಮುಗಿಯಲು ಮುಂದೆ ದೇವದೇವನಿಗೆ ದೀಪ ಹೊತ್ತಿಸಲು ದುಡ್ಡಿಲ್ಲದೆ ಅದಕ್ಕಾಗಿ ತನ್ನ ಹೆಂಡತಿ ಯನ್ನೇ ಮಾರಲು ಆ ಕಲಿನೀತಿಯು ಉತ್ಸುಕನಾದನು. ||೧೩-೧೪||

ಅದರಂತೆ ಅವನು 'ನನ್ನ ಹೆಂಡತಿಯನ್ನೇ ನಾನೀಗ ಮಾರಲು ಮನಸ್ಸು ಮಾಡಿದ್ದೇನೆ. ದುಡ್ಡುಕೊಟ್ಟು ಯಾರುಬೇಕಾದರೂ ಪಡೆಯಬಹುದು' ಎಂದು ಬೀದಿಬೀದಿಗಳಲ್ಲೂ ಎಲ್ಲಾ ಜನರಿಗೂ ತಿಳಿಯುವಂತೆ ಸಾರಿಸಿದನು. ಆದರೆ ಶಿವನ ಅಪ್ಪಣೆಯು ಹಾಗಿರಲಿಲ್ಲ. ಅದರಿಂದ ಆಕೆಯನ್ನು ಕೊಂಡುಕೊಳ್ಳಲು ಯಾರೂ ಮುಂದೆ ಬರಲಿಲ್ಲ. ಅದನ್ನು ಮನಸ್ಸಿನಲ್ಲಿ ಅರಿಯದೆ ಖಿನ್ನಚಿತ್ತನಾಗಿ ಆ ತೈಲಿಕನು "ಅಯ್ಯೋ, ಬೆಳಗಿನಿಂದ ಸಾಯಂಕಾಲದ ವರೆಗೂ ಸುತ್ತಿದರೂ ಯಾರೂ ಈ ನನ್ನ ಹೆಂಡತಿಯನ್ನು ಕೊಳ್ಳುವರೇ ಇಲ್ಲವಲ್ಲಾ" ಎಂದು ಚಿಂತಿಸತೊಡಗಿದನು. ||೧೫-೧೬||

ಹಾಗೆಯೇ ಅವನು ಶಿವದೇವಾಲಯಕ್ಕೆ ಹೋಗಿ ಖಿನ್ನಮನಸ್ಕನಾಗಿ ಹೀಗೆ ಯೋಚಿಸತೊಡಗಿದನು. "ಸಕಾಲದಲ್ಲಿ ಸರಿಯಾಗಿ ಶಿವದೇವಾಲಯದಲ್ಲಿ ದೀಪ ಗಳನ್ನು ಹೊತ್ತಿಸದಿರುವ ಈ ನನ್ನ ಪ್ರಾಣಗಳಿಂದೇನುಪ್ರಯೋಜನ? ಈ ನನ್ನ

ತಾವದ್ದೇವೋಽಸ್ಯ ಜಗ್ರಾಹ ಕರವಾಲಧರಂ ಕರಂ।
ಮಾ ಭಕ್ತ ಸಾಹಸಂ ಕಾರ್ಷೀರಿತ್ಯವೋಚದ್ದಯಾನಿಧಿಃ ॥೧೯॥

ಶ್ರೀಮತಃ ಶಕ್ತಿನಾಥಸ್ಯ ಚರಿತಂ ಕಥಯಾಮಿ ವಃ।
ಕಾವೇರೀವಾರಿಪೂರೌಘಹೃಷ್ಟಸಸ್ಯಸಮಾಕುಲೇ ॥೨೦॥

ದೇಶಪ್ರಕಾಶಮೇವಾಸ್ತಿ ವಿರಿಂಚಿಪುರನಾಮಕಂ।
ಕ್ಷೇತ್ರಂ ರಮಾಭಿರಾಮಾಂತೇ ತತ್ರ ಶೂದ್ರಕುಲೋದ್ಭವಃ ॥೨೧॥

ಶಕ್ತಿನಾಥ ಇತಿ ಖ್ಯಾತೋ ಭಕ್ತಿಮಾನಭವದ್ಭವೇ।
ಬ್ರಹ್ಮವಿಷ್ಣ್ವಾದಿದುಷ್ಪ್ರಾಪಮಂಜುಸಿಂಜಾನನೂಪುರಂ ॥೨೨॥

---

ಕೊರಳನ್ನು ಕೊಯ್ದು ಅದರಿಂದ ಬಂದ ರಕ್ತವನ್ನೇ ಎಣ್ಣೆಯನ್ನಾಗಿ ಮಾಡಿ ಈ ದೇವಾಲಯದಲ್ಲಿ ದೀಪಗಳನ್ನು ಹೊತ್ತಿಸುವೆನು'' ಎಂದು ಸಂಕಲ್ಪಮಾಡಿ, ಕೊರಳಲ್ಲಿ ಕತ್ತಿಯನ್ನಿರಿಸಿ ತನ್ನ ಕಂಠಛೇದಕ್ಕೆ ಪ್ರಯತ್ನಿಸಿದನು. ॥೧೭-೧೮॥

ಅಷ್ಟರಲ್ಲಿ ಮಹಾದೇವನು ಪ್ರತ್ಯಕ್ಷನಾಗಿ ಬಂದು ಈ ಕಲಿನೀತಿಯ ಕತ್ತಿಯನ್ನು ಕೈಯ್ಯಲ್ಲಿ ಹಿಡಿದು ಅವನನ್ನು ಸಂತೈಸುತ್ತಾ "ಓ ಭಕ್ತನೆ, ಸಾಹಸಮಾಡಬೇಡ" ಎಂದು ಹೇಳಿ ಆ ದಯಾಸಮುದ್ರನು ಅವನ ಪ್ರಾಣವನ್ನುಳಿಸಿದನು. ॥೧೯॥

ಓ ಜೈಗೀಷವ್ಯಾದಿಗಳಿರಾ, ನಿಮಗೆ ಇನ್ನೊಬ್ಬ ಶ್ರೀಮಂತನಾದ ಶಕ್ತಿನಾಥನೆಂಬ ಈಶ್ವರಭಕ್ತನ ಕಥೆಯನ್ನು ಹೇಳುವೆನು ಕೇಳಿರಿ. ಕಾವೇರೀ ನೀರಿನ ಪ್ರವಾಹದಿಂದ ಸರ್ವದಾ ಪೋಷಿತವಾಗಿ ವಿಶೇಷ ಸಸ್ಯಸಮೃದ್ಧಿಯುಳ್ಳ ಒಂದು ಭೂಭಾಗದಲ್ಲಿ ಅತ್ಯಂತ ಪ್ರಸಿದ್ಧವಾದ ವಿರಿಂಚಿಪುರವೆಂಬ ಒಂದು ಊರಿರುವುದು. ಅದು ಗದ್ದೆ, ಉದ್ಯಾನ ಮುಂತಾದವುಗಳಿಂದ ಮನೋಹರವಾಗಿ, ಶಾಂತವಾತಾವರಣದಿಂದ ಶೋಭಿಸುತ್ತಿದ್ದಿತು. ಇಂತಹ ಊರಿನಲ್ಲಿ ಶೂದ್ರವಂಶೋತ್ಪನ್ನನಾದ ಶಕ್ತಿನಾಥನೆಂಬುವನು ಪ್ರಖ್ಯಾತನಾಗಿ ಶಿವನಲ್ಲಿ ಶೂದ್ರವಂಶೋತ್ಪನ್ನನಾದ ಶಕ್ತಿನಾಥನೆಂಬುವನು ಪ್ರಖ್ಯಾತನಾಗಿ ಶಿವನಲ್ಲಿ ವಿಶೇಷ ಭಕ್ತಿಯುಳ್ಳವನೆನಿಸಿದ್ದನು. ॥೨೦ ೨೧॥

ಬ್ರಹ್ಮ ವಿಷ್ಣು ಮುಂತಾದ ದೇವತೆಗಳಿಂದಲೂ ಹೊಂದಲಸಾಧ್ಯವಾದ, ಮನೋಹರವಾದ ಕಾಲ್ಗಡಗದ ಧ್ವನಿಯುಳ್ಳ ಕೆಂಪಾದ ಆ ಮಹೇಶ್ವರನ ಪಾದಗಳನ್ನು ಸದಾ ಶರಣುಹೊಂದಿದ್ದನು. ಸರ್ವದಾ ಸದ್ವ್ಯಾಪಾರವುಳ್ಳವನಾಗಿ ಪ್ರಾಣಿಗಳಿಗೆ ಯಾವಾಗಲೂ ಸೌಖ್ಯವನ್ನೇ ತೋರುತ್ತಾ ದಯಾಶಾಲಿಯೆನಿಸಿದ್ದನು.

ಆರುಣಂ ಶ್ರೀಮಹೇಶಸ್ಯ ಚರಣಂ ಶರಣಂ ಯಯೌ ।
ಅನನ್ಯಸಿದ್ಧಸದ್ವೃತ್ತಿ ಜನ್ಮಭೃಚ್ಛಿವಕರ್ಮಕೃತ್ ॥೨೩॥

ನಿಂದಕಾನಾಂ ಮಹೇಶಸ್ಯ ಸ ಛಿನದ್ರಸನಾಂ ರುಷಾ ।
ನಿಶಾತಶಕ್ತಿಧೃಗ್ಹಸ್ತೇ ನಿಂದಕಾನ್ವೇಷಣೇ ರತಃ ॥೨೪॥

ಭಕ್ತಿಗರ್ವೇಣ ನ್ಯಕ್ಕುರ್ವನ್ತ್ರಾದೃಶಂ ಶಿವಕರ್ಮಕೃತ್ ।
ತೋಷಯಾಮಾಸ ಸ ಶಿವಂ ಸರಿಚ್ಚಂದ್ರಕಲಾಧರಂ ॥೨೫॥

ಕಾಲುವಃ ಪಲ್ಲಿನಾಥೋಽಭೂದನ್ಯಭಕ್ತೋಽಭವಚ್ಛಿವೇ ।
ಕ್ಷುದ್ರಾ ಯೇ ಭಿಲ್ಲಭೂಪಾಲಪಲ್ಲವಾದನಿಪಲ್ಲವಃ ॥೨೬॥

ಕಶ್ಚಿದೇಕೇವಾರ್ಯಗೃಹ್ಯಾ ಆರ್ಯಪಾದಾ ಇತಿ ಶ್ರುತಾಃ ।
ಕೀರ್ತಿಧರ್ಮಪ್ರತಾಪೇನ ಸತ್ಯವಾಕ್ಸಮಹೀಪತಿಃ ॥೨೭॥

---

ಆದರೆ ಮಹೇಶ್ವರನನ್ನಾಗಲಿ ಅಥವಾ ಅವನ ಭಕ್ತರನ್ನಾಗಲಿ ನಿಂದಿಸುವವರ ನಾಲಿಗೆಯನ್ನು ಈತನು ನಿರ್ದಯನಾಗಿ ಕೋಪದಿಂದ ಕೊಯ್ದುಬಿಡುತ್ತಿದ್ದನು. ಅದಕ್ಕಾಗಿಯೇ ಇವನು ಹರಿತವಾದ ಶಸ್ತ್ರವನ್ನು ಸದಾ ಕೈಯಲ್ಲಿ ಹಿಡಿದು ಶಿವನಿಂದಕರನ್ನೇ ಹುಡುಕುತ್ತಾ ಕಾಲಕಳೆಯುತ್ತಿದ್ದನು. ॥೨೨-೨೩-೨೪॥

ತಾನು ಪರಶಿವಭಕ್ತನೆಂಬ ಒಂದು ಗರ್ವದಿಂದ ಶಿವನಿಂದಕರನ್ನೆಲ್ಲಾ ತಿರಸ್ಕರಿಸುತ್ತಾ, ಯಾವಾಗಲೂ ಶಿವಸಂಬಂಧವಾದ ಸತ್ಕಾರ್ಯಗಳನ್ನೇ ನಡೆಸುತ್ತಾ ಜೀವಿಸುತ್ತಿದ್ದನು. ಹೀಗೆ ಇವನು ಗಂಗಾಚಂದ್ರಕಲಾಧರನಾದ ಶಿವನನ್ನು ತನ್ನ ನಡೆನುಡಿಗಳಿಂದ ಸಂತೋಷಪಡಿಸಿಕೊಂಡಿದ್ದನು. ಅದೇ ಊರಿನಲ್ಲಿ 'ಕಾಲುವ' ಎಂಬ ಹೆಸರಿನ ಪಟೇಲನು ಶಿವನ ಮತ್ತೊಬ್ಬ ಭಕ್ತನೆನಿಸಿದ್ದನು. ಅವನು ನೀಚರಾದ ಅಂದರೆ ಪ್ರಾಣಿಹಿಂಸೆ ಮಾಡುವ ಭಿಲ್ಲರಾಜರ ವಂಶಕ್ಕೆ ಮೊದಲು ಸೇರಿದವನಾಗಿದ್ದನು. ॥೨೫-೨೬॥

ಆದರೆ ಇವನು ಮತ್ತು ಇವನ ವಂಶೀಯರು ಕೆಲವು ದಿವಸಗಳಲ್ಲಿಯೇ ಶಿವಧರ್ಮಾಚರಣೆಯಿಂದ ಆರ್ಯರಿಂದ ಗ್ರಾಹ್ಯರೂ ಪೂಜ್ಯರೂ ಎಂದು ಹೇಳಿಸಿಕೊಂಡರು. ಆ 'ಕಾಲುವ' ಎಂಬುವನು, ಶಿವಭಕ್ತಿಪ್ರಭಾವದಿಂದ ಕೀರ್ತಿ, ಧರ್ಮ ಮತ್ತು ಶೌರ್ಯ ಇವುಗಳನ್ನು ಪಡೆದವನಾಗಿ ಯಾವಾಗಲೂ ಸತ್ಯಸಂಧನೆನಿಸಿಕೊಂ

ಕಲಿಂ ನಿರಾಕರೋದ್ಘೋರಂ ಶತ್ರುಂ ಯುದ್ಧೇ ಧನಾನಿ ಚ ।
ಅಶ್ರಾಂತಶಿವಸಿದ್ಧಾಂತರಾದ್ಧಾಂತಿತಮನಾಃ ಸದಾ ॥೨೮॥

ಉರ್ವೀಮಪಾಲಯತ್ಸರ್ವಾಂ ಪ್ರಾಜ್ಯ ಸಾಮ್ರಾಜ್ಯದೀಕ್ಷಿತಃ ।
ರಾಜ್ಞಿ ತಸ್ಮಿನ್ಮಹಾಪ್ರಾಜ್ಞೇ ರಕ್ಷತಿ ಕ್ಷಿತಿಮಂಡಲೇ ॥೨೯॥

ನಾತ್ಯಜನ್ಮನುಜಃ ಕಶ್ಚಿನ್ಮಾರ್ಗಮನುನಯೋಚಿತಂ ।
ಸ್ವಾತಂತ್ರ್ಯೇ ರಾಜ್ಯತಂತ್ರೇಽಪಿ ತಂತ್ರ್ಯಾ ಶಿವಮಗಾಯತ ॥೩೦॥

ಕುಮಾರಂ ಚ ಕುಲಾಂಕುರಂ ಪ್ರಾಜ್ಯೇ ರಾಜ್ಯೇಽಭಿಷಿಚ್ಯ ಸಃ ।
ಶಿವಕೈಂಕರ್ಯನಿಷ್ಣಾತೋ ಧುರ್ಯೋ ಧೈರ್ಯಭೃದಗ್ರಣೀಃ ॥೩೧॥

ಸಿಷೇವೇ ಶಿವಧಾಮಾನಿ ಯಾನಿ ಸಂತಿ ಮಹೀತಲೇ ।
ತೇಷು ಧಾಮಸು ಸರ್ವೇಷು ಕುರ್ವನ್ಕೈಂಕರ್ಯಮೀಶಿತುಃ ॥೩೨॥

ಪ್ರಾಕಾರಗೋಪುರಾದೀನಿ ಮಂಟಪಾದೀನ್ಯನೇಕಶಃ ।
ಪುಂಡರೀಕಪುರೀಶಸ್ಯ ಸೇವಾಂ ಕುರ್ವನ್ಯಯೌ ದಿವಂ ॥೩೩॥

---

ಡಿದ್ದನು. ಇವನು ಕಲಿಯೆಂಬ ಭಯಂಕರನಾದ ಶತ್ರುವನ್ನು ಯುದ್ಧದಲ್ಲಿ ಸೋಲಿಸಿ ಬೇಕಾದಷ್ಟು ಹಣವನ್ನು ಸನ್ಮಾರ್ಗದಿಂದ ಪಡೆದನು. ಇವನು ಯಾವಾಗಲೂ ಶೈವಸಿದ್ಧಾಂತತತ್ವದಲ್ಲಿ ನಿರತವಾದ ಮನಸ್ಸುಳ್ಳವನಾಗಿ, ಸಾಮ್ರಾಜ್ಯದೀಕ್ಷೆವಹಿಸಿ ದೊಡ್ಡ ಭೂಮಂಡಲವನ್ನೆಲ್ಲಾ ಕಾಪಾಡುವಂತಹ ರಾಜನೆನಿಸಿಕೊಂಡನು. ||೨೭-೨೮||

ಈ ರೀತಿ ಪ್ರಾಜ್ಯಶಿರೋಮಣಿಯೆನಿಸಿದ ಈ ರಾಜನು ರಾಜ್ಯಭಾರಮಾಡುತ್ತಿದ್ದಾಗ ಯಾವನೊಬ್ಬ ಮಾನವನೂ ನ್ಯಾಯಸಮ್ಮತವಾದ ಮಾರ್ಗವನ್ನು ಬಿಟ್ಟಿರಲಿಲ್ಲ ರಾಜ್ಯತಂತ್ರವೆಲ್ಲವೂ ತನ್ನ ಅಧೀನವಾಗಿದ್ದರೂ ಈ ರಾಜನು ಪ್ರತಿದಿನವೂ ತಂತ್ರೀವಾದ್ಯದಿಂದ ಶಿವನನ್ನುದ್ದೇಶಿಸಿ ಗಾನಮಾಡುತ್ತಾ ಶಿವಭಜನೆ ನಡೆಸುತ್ತಿದ್ದನು. ಕಾಲಕ್ರಮದಲ್ಲಿ ಆ ರಾಜನು ವಂಶಾಂಕುರನಾದ ತನ್ನ ಮಗನನ್ನು ಆ ದೊಡ್ಡ ರಾಜ್ಯಕ್ಕೆ ಅಭಿಷೇಕಮಾಡಿ, ಧೈರ್ಯಶಾಲಿಗಳಲ್ಲಿ ಅಗ್ರೇಸರನೆನಿಸಿ ತಾನು ಶಿವಸೇವಾನಿರತನೆನಿಸಿಕೊಂಡನು. ||೨೯-೩೦-೩೧||

ಆ ರಾಜನು ಭೂಮಂಡಲದಲ್ಲಿರುವ ಶಿವಕ್ಷೇತ್ರಗಳನ್ನೆಲ್ಲಾ ಸುತ್ತಿ ಆ ಕ್ಷೇತ್ರಗಳಲ್ಲೆಲ್ಲಾ ಇರುವ ಪರಮೇಶ್ವರನಿಗೆ ಪೂಜೆಮಾಡಿ, ಪ್ರಾಕಾರ, ಗೋಪುರ, ಮಂಟಪ

ಆವಿರ್ಭವನ್ನಾಧಿಪುರಾಧಿನಾಥಃ
ಆರುಹ್ಯ ಗೋಪುಂಗವಮದ್ರಿಜಾಸಖಃ ।
ಜಾಯಾಸಮೇತಂ ಕಲಿನೀತಿಮೇತಂ
ನಿಜಂ ಪದಂ ನಿಷ್ಕಲಮಾನಿನಾಯ ॥೩೪॥

ಕಲಿ ನೀತಿಕಥಾಮಿಮಾಂ ಶುಭಾಂ
ಶಿವದೀಪಾರ್ಪಣಜಾತವೈಭವಾಂ ।
ಹೃದಯೇ ನಿದಧಾತಿ ಯಃ ಸದಾ
ತದಯಂ ಯಾತಿ ಪರಾತ್ಪರಂ ಪದಂ ॥೩೫॥

ಶ್ರೀವೀರಭಕ್ತಃ ಶಿವಶಾಸನೇನ
ತ್ರಾಸೋಜ್ಝಿತಸ್ತಾದೃಶಕರ್ಮಕರ್ತಾ ।
ಸ ಶಕ್ತಿರತ್ಯಂತಮಹೇಶಭಕ್ತೋ
ಮುಕ್ತಿಂ ಪ್ರಪೇದೇ ವರಯೋಗಿದುರ್ಲಭಾಂ ॥೩೬॥

---

ಮುಂತಾದವುಗಳನ್ನು ಬಹಳವಾಗಿ ಕಟ್ಟಿಸಿ, ಕೊನೆಗೆ ಪುಂಡರೀಕಪುರೇಶ್ವರನ ಸೇವೆ ಮಾಡುತ್ತಾ ಅಲ್ಲಿಯೇ ಮೃತನಾದನು. ॥೩೨-೩೩॥

ಆಗ ಕೈಲಾಸನಗರಾಧಿಪತಿಯಾದ ಮಹೇಶ್ವರನು ವೃಷಭಾರೂಢನಾಗಿ ಪಾರ್ವತಿಯೊಡನೆ ಪ್ರತ್ಯಕ್ಷನಾಗಿ ಬಂದು ಪತ್ನೀಸಮೇತನಾದ ಈ ಶಕ್ತಿನಾಥ ರಾಜನನ್ನು ಕಲಂಕರಹಿತವಾದ ತನ್ನ ನಿಜಸ್ಥಾನಕ್ಕೆ ಕರೆದುಕೊಂಡುಹೋದನು. ॥೩೪॥

ಶಿವನಿಗೆ ದೀಪಹೊತ್ತಿಸುವ ಭಕ್ತಿಸಂಪನ್ನವಾದ ಕಾರ್ಯದಿಂದಲೇ ಮುಕ್ತಿಯನ್ನು ಗಳಿಸಿದ ಈ ಕಲಿನೀತಿಯ ಕಥೆಯನ್ನು ಯಾವಾಗಲೂ ಸ್ಥಿರಮನಸ್ಸಿನಿಂದ ಕೇಳುವವನು ಅಥವಾ ಅನುಸಂಧಾನಮಾಡುವವನು ಪರಮಶ್ರೇಷ್ಠವಾದ ಶಿವನ ಪರಮಪದವನ್ನೈದುವನು, ಎಂಬುದರಲ್ಲಿ ಸಂಶಯವಿಲ್ಲ. ॥೩೫॥

ಹಾಗೆಯೇ ಶಕ್ತಿನಾಥನೆಂಬ ಭಕ್ತವರ್ಯನು ಶಿವನ ಅಪ್ಪಣೆಯಂತೆ, ಸ್ವಲ್ಪವೂ ಭಯವಿಲ್ಲದೆ ಶಿವನಿಂದಕರ ನಾಲಿಗೆಯನ್ನು ಕತ್ತರಿಸುವುದೇ ಮುಂತಾದ ಶಿವದ್ರೋಹಿಗಳ ದಂಡನೆಯನ್ನು ನೆರವೇರಿಸುತ್ತಾ, ಶಕ್ತಿಸಹಿತನಾಗಿ ಮಹೇಶ್ವರನ ಅತ್ಯಂತ ಭಕ್ತನೆನಿಸಿ, ಶ್ರೇಷ್ಠರಾದ ಯೋಗಿಗಳಿಗೂ ದೊರೆಯಲಸಾಧ್ಯವಾದ ಮುಕ್ತಿಯನ್ನು ಪಡೆದನು. ॥೩೬॥

ರಾಜ್ಞಶ್ಚರಿತ್ರಂ ಪರಮಂ ಪವಿತ್ರಂ
ಭುಕ್ತೇರಿಹೋಪಾಯಮಮುತ್ರ ಮುಕ್ತೇಃ ।
ಭಕ್ತಿಂ ನಿಧತ್ತೇ ಹೃದಿ ಶಂಭುಪಾದೇ
ಸೂಕ್ತಿಂ ವಹೇತ ಶ್ರುತಿಮೌಲಿಮಾರ್ಗೇ ॥೩೭॥

ಇತಿ ಶ್ರೀಶಿವರಹಸ್ಯೇ ನವಮಾಂಶೇ ಸದಾಶಿವಾಖ್ಯೇ ಕಲಿನೀತಿ ಶಕ್ತಿನಾಥಚರಿತ್ರವರ್ಣನಂ ನಾಮ ದ್ವಿಷಷ್ಟಿತಮೋಽಧ್ಯಾಯಃ

---

ಇಂತಹ ಶಕ್ತಿನಾಥನೆಂಬ ರಾಜನ ಪರಮಪಾವನವಾದ ಚರಿತೆಯು ಇಹದಲ್ಲಿ ಸಮಸ್ತ ಭೋಗಗಳಿಗೂ, ಪರದಲ್ಲಿ ಮುಕ್ತಿಗೂ ಸಾಧನವಾಗುವುದರಲ್ಲಿ ಸಂಶಯವಿಲ್ಲ. ಇದನ್ನು ಕೇಳುವವನು ಮನಸ್ಸಿನಲ್ಲಿ ಶಿವಪಾದಕಮಲಭಕ್ತಿಯನ್ನು ಸ್ಥಿರವಾಗಿ ಪಡೆದು ವೇದಾಂತಮಾರ್ಗದಲ್ಲಿ ಉತ್ತಮವಾದ ವಾಕ್ಪಾಟವವನ್ನು ಸಂಪಾದಿಸಿ ತನ್ಮೂಲಕ ಮುಕ್ತಿಪಡೆಯುವನೆಂದು ಜೈಗೀಷವ್ಯಾದಿಗಳಿಗೆ ಸ್ಕಂದಸ್ವಾಮಿಯು ಹೇಳಿದನು. ॥೩೭॥

ಇಲ್ಲಿಗೆ ಶ್ರೀಶಿವರಹಸ್ಯದಲ್ಲಿ ಸದಾಶಿವಸಂಜ್ಞಕವಾದ ಒಂಬತ್ತನೆಯ ಅಂಶದಲ್ಲಿ
ಕಲಿನೀತಿ, ಶಕ್ತಿನಾಥ ಇವರ ಚರಿತ್ರವರ್ಣನೆಯೆಂಬ
ಅರವತ್ತೆರಡನೆಯ ಅಧ್ಯಾಯವು ಮುಗಿಯಿತು.

॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀ ಶಿವರಹಸ್ಯೇ

## ಸದಾಶಿವಾಖ್ಯೇ

## ನವಮಾಂಶೇ

## ತ್ರಿಷಷ್ಟಿತಮೋಽಧ್ಯಾಯಃ

॥ ಶ್ರೀಸ್ಕಂದ ಉವಾಚ ॥

ಅಸ್ತಿ ಶ್ವೇತನದೀತೀರೇ ದಕ್ಷಿಣೇ ವೀಕ್ಷಣಾಸ್ಪದಂ ।
ಮದನಾಂತಕರಸ್ಯೈವ ಸದನಂ ವದನಂ ಶ್ರಿಯಃ ॥೧॥

ಅಭಿರಾಮಾರಾಮಯುಕ್ತಂ ವಿರಾಮಂ ದುರ್ಧಿಯಾಂ ಸತಾಂ ।
ಶಿವಭಕ್ತೋ ದ್ವಿಜಃ ಕಶ್ಚಿಚ್ಛಿವಪಾದಾಬ್ಜಸಕ್ತಧೀಃ ॥೨॥

ನಕ್ತಂ ಭಕ್ತಾಶನೋ ನಿತ್ಯಂ ರುದ್ರಸೂಕ್ತ್ಯಾ ಶಿವಂಸ್ತುವನ್ ।
ಅವತಿಷ್ಠಚ್ಚಿರಂ ಕಾಲಂ ಶಿವಿವಿಷ್ಟೇಷ್ಟಮಾನಸಃ ॥೩॥

---

## ಅರವತ್ತಮೂರನೆಯ ಅಧ್ಯಾಯ

ಶ್ವೇತನದಿಯ ದಕ್ಷಿಣದ ದಡದಲ್ಲಿ ದರ್ಶನಯೋಗ್ಯವೂ ಐಶ್ವರ್ಯನಿಲಯವೂ ಆದ ಒಂದು ಶಿವದೇವಸ್ಥಾನವಿರುವುದು. ಅದು ಮನೋಹರವಾದ ಉದ್ಯಾನಗಳಿಂದ ಯುಕ್ತವಾಗಿ, ಬುದ್ಧಿಹೀನರಿಗೆ (ದುಷ್ಟರಿಗೆ) ಎಡೆಯಾಗದೇ ಕೇವಲ ಸಾಧುಜನ ಭರಿತವಾಗಿರುವುದು. ಅಲ್ಲಿ ಸದಾಶಿವಪಾದಕಮಲಧ್ಯಾನಾಸಕ್ತನಾದ ಒಬ್ಬ ಶೈವ ಬ್ರಾಹ್ಮಣನು ಪ್ರತಿದಿನವೂ ನಕ್ತವ್ರತಮಾಡಿ ರಾತ್ರಿ ಭೋಜನಮಾಡುತ್ತಾ ರುದ್ರ. ಸೂಕ್ತಮಂತ್ರದಿಂದ ಶಿವನನ್ನು ಸ್ತುತಿಸುತ್ತಾ ವಾಸಮಾಡಿಕೊಂಡಿದ್ದನು. ॥೧-೩॥

ಅವನು ಪ್ರತಿದಿನವೂ ಶಿವನನ್ನೇ ಧ್ಯಾನಿಸುತ್ತಾ ಅವನ ಪಾದಕಮಲದ ಲ್ಲಿಯೇ ನೆಟ್ಟಮನಸ್ಸುಳ್ಳವನಾಗಿದ್ದನು. ಇವನಿಗೆ ಸಂತೋಷವನ್ನುಂಟುಮಾಡುವ

ಸತ್ಸು ಸಂಪ್ರೀಣನಾರ್ಥೇಷು ವಿಶ್ರಾಣಿತಧನಃ ಸದಾ ।
ಆತ್ಮಾವನಂ ಧನಂ ಮೇನೇ ಶಿವಪಾದಾಂಬುಜಾರ್ಚನಂ ॥೪॥

ಸ್ವಸಂಪದಾಂ ಫಲಂ ಮೇನೇ ದೀಪಾರೋಪಣಮಿತ್ಯಸೌ ।
ಕೌಸುಂಭಕಮಧೂಕಾದಿ ವಿಪಿನೇ ಸೋಽಕರೋತ್ಸದಾ ॥೫॥

ತದ್ಬೀಜಕರ್ಷಿತೈಸ್ತೈಲೈರ್ದೇವದೀಪಾನಚೀಕರತ್ ।
ಏವಂ ತಸ್ಯ ಸ್ಥಿತವತೋ ವೃಷ್ಟ್ಯಾ ವನಮನೀನಶತ್ ॥೬॥

ಕೃತ್ವೋಪವೀತಂ ಕ್ರೀತ್ವಾಪಿ ದೇವದೀಪಾನ್ವ್ಯಧಾದ್ದ್ವಿಜಃ ।
ತದ್ಭಕ್ತಿಖ್ಯಾಪನಾರ್ಥಾಯ ಶಿವೋಽಸ್ಯಾರ್ಥಮುಪಾಹರತ್ ॥೭॥

ಶಿವದೀಪಾರೋಪಣಾರ್ಥಂ ಮಹಾಯತ್ನಪರೋಽಭವತ್ ।
ತತಃ ಸ ತು ದ್ವಿಜೋ ನಿತ್ಯಂ ವ್ಯಾಘ್ರೇಶ್ವರ ಶಿವಾಲಯೇ ॥೮॥

---

ಪದಾರ್ಥಗಳು ಯಥೇಚ್ಛವಾಗಿದ್ದರೂ ಯಾವುದನ್ನೂ ತಾನು ಸ್ವಂತಕ್ಕೆ ಉಪಯೋಗಿಸದೆ ಬೇಕಾದಷ್ಟು ದ್ರವ್ಯದಾನಮಾಡಿ, ಶಿವನ ಪಾದಕಮಲಪೂಜೆಯೇ ಆತ್ಮರಕ್ಷಣ ರೂಪವಾದ ದ್ರವ್ಯವೆಂದು ಭಾವಿಸಿದ್ದನು. ಅಲ್ಲದೆ ಅವನು ಮಹಾದೇವನ ತೃಪ್ತಿಗಾಗಿ ಶಿವಾಲಯದಲ್ಲಿ ದೀಪವನ್ನು ಹೊತ್ತಿಸುವುದೇ ತನ್ನ ಸಂಪತ್ತುಗಳಿಗೆ ಸರಿಯಾದ ಪ್ರಯೋಜನವೆಂದರಿತಿದ್ದನು. ॥೩-೪॥

ಅವನು ಕುಸುಮೆ, ಹಿಪ್ಪೆ ಮುಂತಾದ ಬೀಜಗಳನ್ನು ಕಾಡಿನಲ್ಲಿ ಯಾವಾಗಲೂ ಸಂಗ್ರಹಿಸಿ ತಂದು, ಅದನ್ನು ಗಾಣವಾಡಿಸಿ, ಅದರ ಎಣ್ಣೆಯಿಂದ ಮಹಾದೇವನಿಗೆ ದೀಪಗಳನ್ನು ಹೊತ್ತಿಸುತ್ತಿದ್ದನು. ಹೀಗೆ ಅವನು ಶಿವಕೈಂಕರ್ಯ ನಡೆಸುತ್ತಿರಲು, ಒಂದು ಸಾರಿ ಆಕಸ್ಮಿಕವಾಗಿ ಬಂದ ವಿಶೇಷ ಮಳೆಯಿಂದ ಆ ಬೀಜಗಳು ದೊರೆಯುತ್ತಿದ್ದ ಕಾಡು ಹಾಳಾಯಿತು. ಆಗ ಬ್ರಾಹ್ಮಣನು ಯಜ್ಞೋಪವೀತವನ್ನು ಮಾಡಿ ಅವುಗಳನ್ನು ವಿಕ್ರಯಿಸಿ, ಅದರಿಂದ ಬಂದ ಹಣದಿಂದ ದೇವನಿಗೆ ದೀಪವನ್ನೇರಿಸುತ್ತಿದ್ದನು. ॥೫-೬॥

ಅವನ ಭಕ್ತಿಯನ್ನು ಲೋಕದಲ್ಲಿ ಪ್ರಕಾಶಪಡಿಸಲು ಯೋಚಿಸಿ, ಪರಶಿವನು ಒಂದುಸಾರಿ ಅವನ ಹಣವನ್ನೆಲ್ಲಾ ಅಪಹರಿಸಿದನು. ಆದರೂ ಅವನು ಹೆದರದೆ ಶಿವನಿಗೆ ದೀಪವನ್ನು ಹೊತ್ತಿಸುವ ಕಾರ್ಯದಲ್ಲಿ ವಿಶೇಷ ಪ್ರಯತ್ನಮಾಡುತ್ತಿದ್ದನು.

ವಿಕ್ರೀಯ ವೇಶ್ಮಕ್ಷೇತ್ರಾದಿ ಶಿವೇ ದೀಪಮುದೀಪಯತ್ ।
ಬಾಂಧವಾನ್ಯಾಚಿತುಂ ಭೀತಃ ಕ್ಷೀಣಾಶೇಷಧನೋಽಪಿ ಸಃ ॥೯॥

ಗತ್ವಾ ವನಂ ಸ್ವಯಂ ಛಿತ್ವಾ ಕಾಷ್ಠಭಾರವಹೋ ದ್ವಿಜಃ ।
ವೀಥ್ಯಾಮಾನೀಯ ವಿಕ್ರೀಯ ತದ್ದ್ರವ್ಯಕ್ರೀತಸರ್ಪಿಷಾ ॥೧೦॥

ದೀಪಾನುದ್ದೀಪಯನ್ ಶಂಭೋರ್ವೇಶ್ಮಾಶ್ಮಾದಿವಿನಿರ್ಮಿತಂ ।
ಪ್ರಕಾಶಯತ್ಸ ವಿಶದಂ ನಿಶಿ ಪಾಪವಿಮುಕ್ತಯೇ ॥೧೧॥

ಕದಾಚಿತ್ಕೈಶ್ಚಿದಕ್ರೀತೇ ಕಾಷ್ಠಭಾರೇ ದ್ವಿಜಸ್ತದಾ ।
ದೀಪಾರಾಧನವಿಘ್ನೋಽಭೂದಿತಿ ನಿಘ್ನನ್ಸ್ವಕಂ ಶಿರಃ ॥೧೨॥

ರುರೋದ ದುಃಖಿತೋ ವಿಪ್ರೋ ಹಾ ಹಾ ಶಿವಶಿವೇತಿ ಸಃ ।
ಸಾಯಂ ದೇವಾಲಯಂ ಪ್ರಾಪ್ಯ ಶಿಖಾಮುದ್ದೀಪಯತ್ಸ್ವಕಾಂ ॥೧೩॥

---

ಆ ದ್ವಿಜನು ನಿತ್ಯವೂ ವ್ಯಾಘ್ರೇಶ್ವರನ ದೇವಾಲಯದಲ್ಲಿ ನೆಲಸಿ ತನ್ನ ಮನೆ, ಮಠ, ಗದ್ದೆಗಳನ್ನೆಲ್ಲಾ ಮಾರಿಬಿಟ್ಟು, ಪರಶಿವನಿಗೆ ವಿಶೇಷರೀತಿಯ ದೀಪಗಳನ್ನು ಹೊತ್ತಿಸಿದನು. ||೭-೮||

ತನ್ನಲ್ಲಿದ್ದ ಹಣವೆಲ್ಲಾ ವ್ಯಯವಾದಮೇಲೂ, ಆ ಭಕ್ತಾಗ್ರೇಸರನು ಬಂಧುಗಳನ್ನು ಬೇಡಲು ನಾಚಿಕೆಪಟ್ಟು, ತಾನೇ ಕಾಡಿಗೆ ಹೋಗಿ ಸೌದೆಗಳನ್ನು ಕಡಿದು ಕಟ್ಟಿಗೆ ಹೊರೆಯನ್ನು ಹೊತ್ತು ತಂದು ಬೀದಿಯಲ್ಲಿ ಮಾರುತ್ತಾ, ಬಂದ ಹಣದಿಂದ ತುಪ್ಪವನ್ನು ಕೊಂಡುಕೊಂಡು ಶಿವದೇವಾಲಯದಲ್ಲಿ ದೀಪಗಳನ್ನು ಹೊತ್ತಿಸಿ ಉರಿಸುತ್ತಿದ್ದನು. ಆ ಭಕ್ತನು ತನ್ನ ಪಾಪನಿವೃತ್ತಿಗೋಸ್ಕರ ಶಿಲಾನಿರ್ಮಿತವಾದ ಶಿವದೇವಾಲಯದಲ್ಲಿ ರಾತ್ರಿಹೊತ್ತು ತಪ್ಪದೆ ದೀಪವನ್ನು ಹೊತ್ತಿಸಿ ಪ್ರಕಾಶಪಡಿಸುತ್ತಿದ್ದನು. ||೯-೧೦-೧೧||

ಒಂದು ದಿನ ತನ್ನ ಕಟ್ಟಿಗೆ ಹೊರೆಯನ್ನು ಯಾರೂ ಕೊಂಡುಕೊಳ್ಳದಿರಲು ಆಗ ಆ ಬ್ರಾಹ್ಮಣನು, ಈ ದಿನ ದೀಪಾರಾಧನೆಗೆ ವಿಘ್ನಬಂದಿತಲ್ಲಾ ಎಂದು ತನ್ನ ತಲೆಯನ್ನು ಚೆಚ್ಚಿಕೊಂಡು ರೋದಿಸುತ್ತಾ, ಅಯ್ಯೋ! ಶಿವ ಶಿವ! ಎಂತಹ ಕಷ್ಟ ಒದಗಿತೆಂದು ಗೋಳಿಡುತ್ತಾ ಸಾಯಂಕಾಲದಲ್ಲಿ ಶಿವದೇವಾಲಯಕ್ಕೆ ಹೋಗಿ ತನ್ನ ತಲೆಗೂದಲಿಗೆ ಉರಿಯಿಟ್ಟು ಅದನ್ನೇ ದೀಪವನ್ನಾಗಿ ಮಾಡಿದನು. ||೧೨-೧೩||

ತೇನ ಪ್ರಕಾಶಯಂಸ್ತಂಭೋರ್ಧಾಮ ದಿವ್ಯಂ ಸ ಭೂಸುರಃ ।
ತತ್ಸಾಹಸಂ ಸಮುದ್ವೀಕ್ಷ್ಯ ತಂ ತ್ರ್ಯಕ್ಷಃ ಸ್ವಪದಂ ನಯತ್ ॥೧೪॥

ಆತ್ಮವಿದ್ವೇದವಿದ್ವಂಶೇ ಗ್ರಾಮೇ ಕಂದಪುರಾಹ್ವಯೇ ।
ಕಾರಿನಾಥ ಇತಿಖ್ಯಾತಃ ಕಶ್ಚಿದಾಸೀತ್ಕವೀಶ್ವರಃ ॥೧೫॥

ತ್ವಂಗದ್ಗಂಗಾತರಂಗೌಘಭಂಗ ನಿಃಸಂಗ ಪಾಟವೈಃ ।
ಸಾರಸ್ವತೈಃ ಸ ಭೂಪಾಲಾನ್ವಶೀಚಕ್ರೇ ಚತುರ್ವಿಧೈಃ ॥೧೬॥

ಸ ಚೇರಚೋಲಪಾಂಡ್ಯಾನಾಂ ಸಭಾಸು ಸದಸಸ್ಪತಿಂ ।
ಅಸ್ತುವನ್ಮೋದಮನಯತ್ತೈರ್ದತ್ತೈರ್ದ್ರವ್ಯಸಂಚಯೈಃ ॥೧೭॥

ಪ್ರಸರತ್ಕವಿತಾಸಾರಸಮಾರ್ಜಿತಧನೋಚ್ಚಯಃ ।
ಪ್ರಬಂಧಬಂಧೇನ ಸಮಮಾಬಬಂಧ ಶಿವಾಶ್ರಯಾನ್ ॥೧೮॥

---

ಆ ಬೆಳಕಿನಿಂದಲೇ ಶಿವದೇವಾಲಯವು ಪ್ರಕಾಶವಾಗುತ್ತಿರಲು ಬ್ರಾಹ್ಮಣನ ಆ ರೀತಿಯಾದ ಸಾಹಸಕ್ಕೆ ಮೆಚ್ಚಿ, ಮಹಾದೇವನು ಅವನಿಗೆ ಪ್ರತ್ಯಕ್ಷವಾಗಿ ಸ್ವಸ್ಥಾನಕ್ಕೆ ಕರೆದುಕೊಂಡನು. ಬ್ರಹ್ಮಜ್ಞಾನಿಗಳೂ ವೇದಜ್ಞರೂ ಆದ ಬ್ರಾಹ್ಮಣಕುಲದಲ್ಲಿ ಕಂದಪುರವೆಂಬ ಪಟ್ಟಣದಲ್ಲಿ 'ಕಾರಿನಾಥ' ನೆಂದು ಪ್ರಖ್ಯಾತನಾದ ಮತ್ತೊಬ್ಬ ಕವೀಶ್ವರನಿದ್ದನು. ॥೧೪-೧೫॥

ಚಂಚಲವಾದ ಗಂಗಾಪ್ರವಾಹದ ಧಾರಾಕಾರವಾದ ಅಲೆಗಳಂತೆ ಮೇಲೆ ಮೇಲೆ ಬರುವ ವರ್ಣನಾವೈಖರಿಗಳಿಂದ ಕೂಡಿದ ಕವಿತಾಸಾಮರ್ಥ್ಯದಿಂದ ಗ್ರಂಥಗಳನ್ನು ರಚಿಸುತ್ತಾ ಅವನು, ಎಲ್ಲಾ ರಾಜರನ್ನೂ ತನ್ನ ಸ್ವಾಧೀನಪಡಿಸಿಕೊಂಡನು. ಅವನು ಚೇರ, ಚೋಲ ಮತ್ತು ಪಾಂಡ್ಯ ರಾಜರ ಸಭೆಗಳಲ್ಲಿ ಸಭಾಪತಿಯಾದ ಪರಶಿವನನ್ನು ಸ್ತೋತ್ರಮಾಡಿ, ಅವರು ಕೊಟ್ಟ ಹಣದ ರಾಶಿಯಿಂದ ತೃಪ್ತಿಪಡೆಯುತ್ತಿದ್ದನು. ಹೊಸ ಹೊಸದಾಗಿ ಹೊರಡುತ್ತಿರುವ ಕವಿತಾಶಕ್ತಿಯಿಂದ ಅಪಾರ ಧನರಾಶಿಯನ್ನು ಸಂಪಾದಿಸಿ, ಪ್ರಬಂಧಗಳನ್ನು ರಚಿಸಿ, ಅದರಿಂದ ಶೈವವರ್ಯರನ್ನು ನಾನಾರೀತಿಯಲ್ಲಿ ಸೇವಿಸಿದನು. ॥೧೬-೧೭-೧೮॥

॥ ಕಾರಿನಾಥ ಉವಾಚ ॥

ಉಚ್ಚಂಡತಾಂಡವನಿಮಗ್ನ ಭವೋದ್ಧತೇಭ
ಶುಂಡೋರುಕಾಂಡವಿಧೃತಾಬ್ಜಜಸೃಷ್ಟಿಪಿಂಡಂ ।
ಬ್ರಹ್ಮಾಂಡಭಾಂಡಕಳಲಾಕಲಿತೋರುಮುಂಡ
ಪ್ರೋತ್ತುಂಗಷಂಡಮುಗಜಾಪತಿಮಾನತೋಽಸ್ಮಿ ॥೧೯॥

ವೇತಂಡಗಂಡಕಲಿತೇಕ್ಷಣಕುಂಡಲೀಶ
ಶ್ರೀಕುಂಡಲಾರುಣಮಣಿಚ್ಛವಿದೀಪ್ತಗಂಡಂ ।
ಕೋದಂಡಿತೋತ್ತಮನಗೋದ್ಧೃತಕಾಂಡಬಾಣ
ಚಂಡಾಂಶುಸೂನು ವಿನಿವಾರಕಮಾನತೋಽಸ್ಮಿ ॥೨೦॥

ತಾಪಸ್ಯ ದೀರ್ಘಮಾರಸ್ಯ ಚರಿತಂ ವಿರತಿಪ್ರದಂ ।
ಕ್ರೀಡಯಾ ಭೂಷಿತೋ ಯಸ್ಯ ಮಲಯಾಖ್ಯೋ ಮಹೀಭರಃ ॥೨೧॥

---

ಪ್ರಚಂಡವಾದ ತಾಂಡವನೃತ್ಯದಲ್ಲಿ ಮಗ್ನನಾಗಿ ಈ ಸಂಸಾರವೆಂಬ ಕೊಬ್ಬಿದ ದೊಡ್ಡ ಆನೆಯ ಸೊಂಡಲನ್ನು ಹಿಡಿದು, ಈ ಬ್ರಹ್ಮಾಂಡವನ್ನೆಲ್ಲಾ ರಕ್ಷಣೆ ಮಾಡುತ್ತಾ, ಬ್ರಹ್ಮಕಪಾಲಯುಕ್ತವಾದ ದೊಡ್ಡ ದೇಹವುಳ್ಳವನಾಗಿ ಅತ್ಯುನ್ನತವಾದ ಕೈಲಾಸಪರ್ವತನಿವಾಸಿಯಾದ ಪಾರ್ವತೀರಮಣನಿಗೆ ನಮಸ್ಕಾರಮಾಡುತ್ತೇನೆ. ॥೧೯॥

ತನ್ನ ಪಕ್ಕದಲ್ಲಿಯೇ ಕುಳಿತಿರುವ ಗಜಾನನನ ಮುಖವನ್ನು ಪ್ರೀತಿಯಿಂದ ನೋಡುತ್ತಿರುವವನೂ, ಬ್ರಹ್ಮಾಂಡವನ್ನೇ ಹೊತ್ತಿರುವ ಸರ್ಪರಾಜನನ್ನೇ ಕಾಂತಿಯುಕ್ತವಾದ ಕುಂಡಲವನ್ನಾಗಿ ಮಾಡಿಕೊಂಡು ಕೆಂಪು ರತ್ನಗಳ ಕಾಂತಿಯಿಂದ ಪ್ರಜ್ವಲಿಸುತ್ತಿರುವ ಗಂಡಸ್ಥಳವುಳ್ಳವನೂ, ಮೇರುಪರ್ವತವನ್ನು ಬಿಲ್ಲಾಗಿ ಮಾಡಿಕೊಂಡು ಬಾಣಪ್ರಯೋಗಮಾಡಿ ತ್ರಿಪುರದಹನಮಾಡಿದವನೂ, ಸೂರ್ಯಕುಮಾರನಾದ ಯಮನನ್ನು ನಿಗ್ರಹಿಸಿದವನೂ ಆದ ಮಹಾದೇವನಿಗೆ ಪ್ರಣಾಮಮಾಡುವೆನು ; ಎಂದು ಸ್ತೋತ್ರಮಾಡಿದನು. ॥೨೦॥

ಇನ್ನು ಮುಂದೆ ವೈರಾಗ್ಯಪ್ರದವಾದ ದೀರ್ಘಮಾರನೆಂಬ ಪ್ರತಾಪಶಾಲಿಯ ಕಥೆಯನ್ನು ಹೇಳುವೆನು ಕೇಳು ; ಈ ದೀರ್ಘಮಾರನ ವಿಹಾರಕ್ಕೆ ಮಲಯಾಚಲವೇ ಅಲಂಕಾರವಾಗಿರುತ್ತಿದ್ದಿತು. ಪರಾಕ್ರಮದ ಕಂಬಗಳೋ ಎಂಬಂತಿರುವ

ವೀರ್ಯಸ್ತಂಭಾಯಿತಭುಜೋ ಭುಜನಿರ್ಜಿತನಾಶಕಃ ।
ಕ್ರಾಂತಸಿಂಹಾಸನಾರ್ಥಾಯ ಕ್ವಣತ್ಕಂಕಣಘಾತಜಂ ॥೨೨॥

ಕಿಣಂ ಬಭಾರ ಕೋಟೀರಕಲಿತಂ ಕುಲಿಶಾಯುಧಃ ।
ಜ್ಞಾನಸಂಬಂಧಬೋಧೇನ ಸ ಬೋಧಾಯಾಭವದ್ಬುಧಃ ॥೨೩॥

ಪ್ರಬೋಧಯನ್ಮನಃ ಪದ್ಮಂ ಜೈನಸ್ವಾಂತಮಲೀಮಸಂ ।
ದಕ್ಷಿಣೋ್ಯ ದಕ್ಷಿಣಾವಲಾಂ ಚಂಪಾನಾಥಾನುಕಂಪಯಾ ॥೨೪॥

ಸ ರಾಜಾ ಯೋಜಯಾಮಾಸ ಶಿವಧರ್ಮಂ ಸಮಂತತಃ ।
ಕಾಲೇ ತಸ್ಮಿನ್ನೃಪಾಶ್ಚಾನ್ಯೇ ಔತ್ತರಾಶ್ಚ ಬಲೋತ್ತರಾಃ ॥೨೫॥

ರುರುಧುರ್ವೀರುಧವತೀಂ ಮಧುರಾಂ ಧೀರವತ್ತರಾಃ ।
ನಿಶಮ್ಯ ರೋದನಂ ನೃಪತಿರನ್ಯೋನ್ಯಂ ಜನಸಂಪ್ಲವೇ ॥೨೬॥

---

ತೋಳ್ಗಳುಳ್ಳವನಾಗಿ ತನ್ನ ಬಾಹುಬಲದಿಂದ ಶತ್ರುಗಳನ್ನೆಲ್ಲಾ ಜಯಿಸಿ, ಶತ್ರುಗಳಾಕ್ರಮಿಸಿದ್ದ ಸಿಂಹಾಸನವನ್ನು ಹಿಂದಿರುಗಿ ಪಡೆಯುವುದಕ್ಕಾಗಿ ಇವನು ಅನವರತ ಧನುಷ್ಟಂಕಾರಗೈಯ್ಯುತ್ತಾ ಜಿಡ್ಡುಗಟ್ಟಿದ ದೇಹವುಳ್ಳವನಾಗಿ ಎಲ್ಲೆಲ್ಲೂ ಸಂಚರಿಸುತ್ತಿದ್ದನು. ॥೨೧-೨೨॥

ವಜ್ರಾಯುಧಧಾರಿಯಾದ ಇವನು, ಧನುಸ್ಸಿನ ತುದಿಯಿಂದ ಉಂಟಾದ ತನ್ನ ಶರೀರದ ಜಿಡ್ಡನ್ನು ಧರಿಸುವಂತಹ ಯೋಧನಾಗಿದ್ದು ಜ್ಞಾನಸಂಬಂಧನ ಉಪದೇಶದಿಂದ. ಕೊನೆಗೆ ಪೂರ್ಣ ಜ್ಞಾನಿಯಾಗಿ ಪಂಡಿತನೆನಿಸಿಕೊಂಡನು. ಆದರಿಂದಲೇ ಜೈನಮತಾವಲಂಬನೆಯಿಂದ ತನಗುಂಟಾಗಿದ್ದ ಮನಃಕಷಾಯವನ್ನು ಕಳೆದುಕೊಂಡು ಅಂತಃಕರಣವನ್ನು ವಿಕಾಸಗೊಳಿಸುತ್ತಾ ದಕ್ಷಿಣಭಾರತದಲ್ಲಿ ದಕ್ಷನೆನಿಸಿಕೊಂಡು ಆ ಚಂಪೇಶ್ವರನ ದಯೆಯಿಂದ ತನ್ನ ರಾಜ್ಯದಲ್ಲೆಲ್ಲಾ ಪವಿತ್ರವಾದ ಶಿವಧರ್ಮವನ್ನು ಪ್ರಚಾರಪಡಿಸಿದನು. ॥೨೩-೨೪॥

ಇದೇ ಸಮಯದಲ್ಲಿ ಮಹಾಪರಾಕ್ರಮಿಗಳೆನಿಸಿದ್ದ ಉತ್ತರದ ಕೆಲವು ರಾಜರೂ ಪ್ರಬಲವಾದ ಸೈನ್ಯಸಂಪತ್ತಿನಿಂದ ಕೂಡಿ, ಲತಾಕುಂಜಮಯವಾಗಿದ್ದ ಮಧುರಾ ಪಟ್ಟಣವನ್ನು ಮುತ್ತಿದರು. ದೀರ್ಘಮಾರನೆಂಬ ಈ ರಾಜನಾದರೋ ಹೀಗೆ ಶತ್ರುರಾಜರ ಮುತ್ತಿಗೆಯನ್ನೂ ಜನಗಳ ಹಾಹಾಕಾರವನ್ನೂ ಕೇಳಿ ತಾನೂ ಯುದ್ಧಸಿದ್ಧ

ಅಭೂದಭೂತಪೂರ್ವಂ ತದಖರ್ವಬಲಗರ್ವಯೋಃ ।
ಯುದ್ಧಂ ತಿರೋಹಿತಾತ್ಯಂತ ದೈತ್ಯಾದಿತ್ಯರಣೋಪಮಂ ॥೨೭॥

ಶಂಖಕಾಹಲಭೇರಿಣಾಂ ಭೈರವಾರಾವಭೀಷಣಂ ।
ಬೃಂಹಿತೈರ್ಗಜವೃಂದಾನಾಂ ಹಯಾನಾಮಪಿ ಹೇಷಿತೈಃ ॥೨೮॥

ಯಂತ್ರಸ್ಯಂದನನಿಸ್ವಾನೈಃ ಶರಾಸನಗುಣಸ್ವನೈಃ ।
ಧಿಃಕೃತಾಂಭೋನಿಧಿರವಂ ಬಧಿರೀಕೃತದಿಙ್ಮುಖಂ ॥೨೯॥

ಶಸ್ತ್ರಕ್ಷತೇಷು ಬಹುಷು ಗಜವಾಜಿಪದಾತಿಷು ।
ಛತ್ರಫೇನತರಂಗೋರ್ಮಿ ಮಾತಂಗೋತ್ತುಂಗಭೂತಟಾಂ ॥೩೦॥

ಪ್ರವಾಹಪ್ರಾಚುರೀಂ ತತ್ರ ದಧಿರೇ ರುಧಿರಾಪಗಃ ।
ರಣರಂಗೋಽನುರಂಗೇನ ಪಿಶಾಚಾ ನನೃತುಸ್ತದಾ ॥೩೧॥

---

ನಾದನು. ಅಪರಿಮಿತವಾದ ಬಲ ಮತ್ತು ಅಹಂಕಾರಗಳುಳ್ಳ ಆ ಎರಡು ಕಡೆಯವರಿಗೂ ಪರಸ್ಪರವಾಗಿ ಹಿಂದೆ ಎಂದೂ ನಡೆಯದಿರುವಂತಹ, ಅತ್ಯಾಶ್ಚರ್ಯಕರವಾದ ದೇವದಾನವ ಸಮರಸಮಾನವಾದ ಯುದ್ಧವಾಯಿತು. ॥೨೫-೨೬-೨೭॥

ಆ ಯುದ್ಧವು ಶಂಖ, ಕಹಳೆ, ನಗಾರಿಗಳ ಭಯಂಕರವಾದ ಧ್ವನಿಯಿಂದಲೂ, ಘೋರವಾಗಿರುವ ಆನೆ ಹಿಂಡುಗಳ ಚೀತ್ಕಾರಗಳಿಂದಲೂ, ಕುದುರೆಗಳ ಕೆನೆತಗಳಿಂದಲೂ, ಯುದ್ಧ ಯಂತ್ರಗಳ ಸಂಚಾರ ಮತ್ತು ರಥಚಕ್ರ ಧ್ವನಿಗಳಿಂದಲೂ, ಬಿಲ್ಲುಗಳ ಹೆದೆಯೆಳೆಯುವ ಧ್ವನಿಗಳಿಂದಲೂ ಕೂಡಿ ಸಮುದ್ರಘೋಷವನ್ನೂ ತಿರಸ್ಕರಿಸುತ್ತಾ, ದಿಗಂತಗಳನ್ನೆಲ್ಲಾ ಕಿವುಡುಗೊಳಿಸುತ್ತಿದ್ದಿತು. ॥೨೮-೨೯॥

ಅನೇಕ ಆನೆ, ಕುದುರೆ ಮತ್ತು ಕಾಲಾಳುಗಳು ಕತ್ತಿಗಳ ಏಟಿನಿಂದ ಕತ್ತರಿಸಲ್ಪಟ್ಟು, ಛತ್ರಿಗಳೆಂಬ ನೊರೆಗಳ ಪ್ರವಾಹ ಮತ್ತು ಅಲೆಗಳುಳ್ಳದ್ದಾಗಿ, ದೊಡ್ಡ ದೊಡ್ಡ ಆನೆಗಳೆಂಬ ಭೂಮಿಯ ದಡವುಳ್ಳ ರಕ್ತದ ನದಿಯು, ಆ ಯುದ್ಧಭೂಮಿಯಲ್ಲಿ ಪ್ರವಾಹಭರಿತವಾಗಿ ಹರಿಯುತ್ತಿದ್ದಿತು. ಯುದ್ಧಭೂಮಿಯೆಂಬ ನಾಟ್ಯರಂಗದಲ್ಲಿ ಅನೇಕ ಪಿಶಾಚಿಗಳು ನಾಟ್ಯವಾಡುತ್ತಿದ್ದವು. ॥೩೦-೩೧॥

ಶೋಣಿತಾಂಗಾಃ ಸಮುತ್ತಿರ್ಣಾಃ ಶೂರಾ ಧೈರ್ಯಧುರಾ ರಣೇ।
ಇತ್ಥಂ ಯುದ್ಧೇ ಜಯಸ್ಪರ್ಧಾಬದ್ಧಚಿತ್ತಾಃ ಸಮುದ್ಧತಾಃ ॥೩೨॥

ಪಾಂಡ್ಯೇನ ಖಂಡಿತಾಃ ಸರ್ವೇ ಬಲೇನ ಪ್ರಬಲೇನ ತೇ।
ಗಿರೀಶಕೃಪಯಾ ಪಾಂಡ್ಯೋ ಜಿತ್ವಾ ನತ್ವಾಭ್ಯಗಾಚ್ಛಿವಂ ॥೩೩॥

ತತ್ಸುತೋಽಪಿ ಸದಾ ವಾಗ್ಮೀ ವಾಗೀಶಮೃಶಿತಾಂಘ್ರಿಕೇ।
ಆಸ್ವಾದಿತಾನಂದರಸಶ್ಚಿರಂ ರಾಜ್ಯಂ ಶಶಾಸ ಸಃ ॥೩೪॥

ಯಃ ಶಾಷ್ಕಭಾರ ಕ್ರಯಣೇನ ದೀಪಾನು
ದ್ಬೋಧಯತ್ಯೇಕಶಕಪಾಲದಾಹ್ಯೈಃ।
ಶೃಣೋತಿ ಯಸ್ತಸ್ಯ ಸಮೇಧಿತಾಶಯೋ
ಗಣೋತ್ತಮಾಧೀಶಪದಂ ಸ ಯಾತಿ ॥೩೫॥

---

ಧೈರ್ಯಶಾಲಿಗಳಾದ ಶೂರಸೈನಿಕರು ಯುದ್ಧರಂಗದಲ್ಲಿ ರಕ್ತಸಿಕ್ತಾಂಗರಾಗಿ ಮೇಲೆ ಬಿದ್ದು ಗೆದ್ದರು. ಹೀಗೆ ಯುದ್ಧದಲ್ಲಿ ಪರಸ್ಪರ ಜಯಪಡೆಯಬೇಕೆಂಬ ಉತ್ಸಾಹದಿಂದ ಕೊಬ್ಬಿದ ವೀರರು ವಿಜಯಿಗಳಾಗಲು ಜೀವದಾಸೆಯಿಲ್ಲದೆ ಹೋರಾಡುತ್ತಿದ್ದರು. ಕೊನೆಗೆ ಪ್ರಬಲನಾದ ಪಾಂಡ್ಯರಾಜನ ಪ್ರತಾಪದಿಂದ ಎಲ್ಲಾ ಶತ್ರುಗಳೂ ಕತ್ತರಿಸಲ್ಪಟ್ಟರು. ಆ ಗಿರೀಶ್ವರನ ದಯೆಯಿಂದ ಪಾಂಡ್ಯರಾಜನು ಗೆದ್ದು, ಅನಂತರ ಶಿವನ ಸನ್ನಿಧಿಗೆ ಬಂದು ನಮಸ್ಕಾರಮಾಡಿ ಶಿವಧರ್ಮಾನುಸರಣೆಯಿಂದಲೇ ರಾಜ್ಯಪರಿಪಾಲನೆ ಮಾಡುತ್ತಿದ್ದನು. ॥೩೨-೩೩॥

ಇವನಂತೆ ಇವನ ಮಗನೂ ಸಹ ಯಾವಾಗಲೂ ವಾಚಾಳಿಯಾಗಿ ವಾಗೀಶನೆಂಬ ಶೈವನ ಮೃದುವಾದ ಪಾದಸೇವೆಯಿಂದ ಅನುಭವಿಸಲ್ಪಟ್ಟ ಆನಂದವುಳ್ಳವನಾಗಿ ಬಹಳಕಾಲ ಧರ್ಮದಿಂದ ರಾಜ್ಯಭಾರಮಾಡಿಕೊಂಡಿದ್ದನು. ॥೩೪॥

ಜೈಗೀಷವ್ಯಮುನಿಯೇ ಕೇಳು, ಸೌದೆಯ ಹೊರೆಗಳನ್ನು ಮಾರಿ ಬಂದ ಹಣದಿಂದಲೇ ಶಿವನಿಗೆ ದೀಪಗಳನ್ನು ಹೊತ್ತಿಸುತ್ತಾ, ಕೊನೆಗೆ ತನ್ನ ತಲೆಗೂದಲನ್ನೇ ಗತ್ಯಂತರವಿಲ್ಲದೇ ದೀಪಾರ್ಥವಾಗಿ ಉಪಯೋಗಿಸಿ, ದೇವರಿಗೆ ಪ್ರಕಾಶವನ್ನುಂಟುಮಾಡಿ ಮುಕ್ತನಾದ ಭಕ್ತವರ್ಯನ ಕಥೆಯನ್ನು ಕುತೂಹಲದಿಂದ ಕೇಳುವ ಮಾನವನು ನಿಜವಾಗಿಯೂ ಗಣಾಧಿಪತಿಗಳೊಡೆಯನಾದ ಆ ಮಹಾದೇವನ ಪಾದವನ್ನು ಹೊಂದುತ್ತಾನೆ. ॥೩೫॥

ತ್ರೈಲೋಕ್ಯನಾಥಂ ಗಿರಿಜಾಸನಾಥಂ
ಕೈಲಾಸನಾಥಂ ಕವಿತಾಸನಾಥಃ ।
ಚಿತ್ತೇ ದಧಾನ ಪ್ರಣಿಧಾನಭಾವೋ
ದೇವಂ ಸಿಷೇವೇ ಗಣನಾಥಮೂರ್ತಿಂ ॥೩೬॥

ಶ್ರೀಭಸ್ಮಮುದ್ರಾಂ ಪ್ರವಿಸಾರ್ಯ ದಿಕ್ಷು
ಕ್ಷುರತ್ರ್ಪಸಂದಾನಿತವೈರಿವರ್ಗೈಃ ।
ವಿಧೂತಪಾಪೋ ವಿಜಿತಾರಿವರ್ಗೋ
ವ್ರಜತ್ಯಸೌ ತದ್ವೃಷವಾಹಧಾಮ ॥೩೭॥

ಕಾಲಾರಿಪಾದೇ ಕಲಿತಾಂತರಾತ್ಮಾ
ಕಾಲಾಂತರೇಣಾಮಲಧೀಃ ಸವಾಗ್ಮೀ ।
ಹಾಲಾಹಲಾಹಾರಸದಾನಿವಾಸಃ
ಕೈಲಾಸಶೈಲೇ ನಿಲಯಾಂ ಚಕಾರ ॥೩೮॥

---

ಮೂರು ಲೋಕಗಳಿಗೊಡೆಯನೂ, ಗಿರಿಜಾರಮಣನೂ, ಕೈಲಾಸೇಶ್ವರನೂ ಆದ ಪರಮಶಿವನನ್ನು ಕವಿತಾಸಹಾಯನಾದ ಕಾರಿನಾಥನು ನಾನಾರೀತಿ ಸ್ತುತಿಸಿ, ಅದೇರೀತಿ ಮನಸ್ಸಿನಲ್ಲಿ ಭಜಿಸಿ, ಕೊನೆಯಲ್ಲಿ ಶಿವಧಾಮವನ್ನೈದಿ ಗಣಾಧಿಪೇಶ್ವರ ನೆನಿಸಿದ ಆ ಮಹಾದೇವನನ್ನು ಸೇವಿಸಿ ಮುಕ್ತಿಹೊಂದಿದನು. ॥೩೬॥

ಶ್ರೀಭಸ್ಮಧಾರಣೆಯ ಮಹಿಮೆಯನ್ನು ಎಲ್ಲಾ ದಿಕ್ಕುಗಳಲ್ಲೂ ಜನರಿಗೆ ಹರಡಿ ತೀಕ್ಷ್ಣವಾದ ಶಸ್ತ್ರಸಮೇತವಾಗಿ ಬಂದ ಶತ್ರುಸಮೂಹವನ್ನು ಧ್ವಂಸಮಾಡಿ, ತನ್ನ ಪಾಪರಾಶಿಯನ್ನು ಕಳೆದುಕೊಂಡು, ಶತ್ರುಜಯಪಡೆದ. ಈ ದೀರ್ಘವಾರನು ಬಹು ಕಾಲ ಭೂಮಿಯಲ್ಲಿ ಸುಖಪಡೆದು, ಕೊನೆಗೆ ವೃಷಭವಾಹನನಾದ ಮಹಾದೇವನ ಪಾದಸನ್ನಿಧಿಯನ್ನು ಪಡೆದನು. ॥೩೭॥

ಮನ್ಮಥಾಂತಕನಾದ ಮಹಾದೇವನ ಪಾದಭಜನೆಯಲ್ಲಿ ಆಸಕ್ತವಾದ ಅಂತರಂಗವುಳ್ಳವನಾಗಿ ವಾಗ್ಮಿಯೆನಿಸಿದ ದೀರ್ಘವಾರ ರಾಜನು, ಪರಿಶುದ್ಧಚಿತ್ತ ನಾಗಿ ಕಾಲಕ್ರಮದಲ್ಲಿ ಸರ್ಪಹಾರನಾದ ಶಿವನಿಗೆ ಯಾವಾಗಲೂ ವಾಸಭೂಮಿಯೆನಿ ಸಿರುವ ಕೈಲಾಸಪರ್ವತವನ್ನೇ ತನ್ನ ಆವಾಸಭೂಮಿಯನ್ನಾಗಿ ಮಾಡಿಕೊಂಡನು.

ಇತಿ ಶ್ರೀಶಿವರಹಸ್ಯೇ ಸದಾಶಿವಾಖ್ಯೇ ನವಮಾಂಶೇ ದೀಪೋದ್ಬೋಧಕರ ದ್ವಿಜಕಥಾ ಕಾರಿನಾಥೇತಿಹಾಸವರ್ಣನಂ ನಾಮ ತ್ರಿಷಷ್ಟಿತಮೋಽಧ್ಯಾಯಃ

---

ಅಂದರೆ ಶಿವಸಾಲೋಕ್ಯವನ್ನು ಪಡೆದನೆಂದು ಜೈಗೀಷವ್ಯಾದಿಗಳಿಗೆ ಕುಮಾರ ಸ್ವಾಮಿಯು ಹೇಳಿದನು. ||೩೮||

ಇಲ್ಲಿಗೆ ಶ್ರೀಶಿವರಹಸ್ಯದಲ್ಲಿ ಸದಾಶಿವಸಂಜ್ಞಕವಾದ ಒಂಬತ್ತನೆಯ ಅಂಶದಲ್ಲಿ
ಶಿವನಿಗೆ ದೀಪವನ್ನು ಹೊತ್ತಿಸಿದ ಬ್ರಾಹ್ಮಣ ಮತ್ತು ಕಾರಿನಾಥನೆಂಬ
ಭಕ್ತರ ಇತಿಹಾಸವರ್ಣನೆಯೆಂಬ ಅರುವತ್ತುಮೂರನೆಯ
ಅಧ್ಯಾಯವು ಮುಗಿಯಿತು.



॥ ಶ್ರೀಃ ॥

॥ ಶ್ರೀ ಶಿವಾಯ ನಮಃ ॥

# ಅಥ ಶ್ರೀಶಿವರಹಸ್ಯೇ

## ಸದಾಶಿವಾಖ್ಯೇ

## ನವಮಾಂಶೇ

## ಚತುಃಷಷ್ಟಿತಮೋಽಧ್ಯಾಯಃ

॥ ಶ್ರೀಸ್ಕಂದ ಉವಾಚ ॥

ಕಾವೇರೀವಾರಿಕಲಿತೇ ಚೋಲಭೂಪಾಲಪಾಲಿತೇ ।
ದೇಶೇ ಪ್ರಕಾಶವಿಭವಮಸ್ತಿ ದೀರ್ಘಪುರಂ ಪರಂ ॥೧॥

ದೀರ್ಘದರ್ಶೀ ದೀರ್ಘಪುರೇ ತತ್ರ ಶೂದ್ರಕುಲೋದ್ಭವಃ ।
ನಾಸೀರಭಂಜನಾಖ್ಯೋಽಭೂತ್ಕೋಽಪಿ ಶಂಕರಕಿಂಕರಃ ॥೨॥

ಸ ಬಾಲ್ಯ ಏವ ಶ್ರೀಕಂಠಭಕ್ತೇಷೂತ್ಕಂಠಮಾನಸಃ ।
ಅನಿಶಂ ಪೂಜಯಾಮಾಸ ಭಕ್ತ್ಯಾಸೌ ಚಂದ್ರಶೇಖರಂ ॥೩॥

ಅಂಗಕಾರಕಲಾಟೋಪೈಃ ಸಂಪಾದ್ಯ ಸ ತದಾ ಧನಂ ।
ಓದನೈಃ ಷಡ್ರಸೋಪೇತೈರ್ಮೋದಮಾನಃ ಸ ಶಾಂಭವಾನ್ ॥೪॥

---

## ಅರವತ್ತುನಾಲ್ಕನೆಯ ಅಧ್ಯಾಯು

ಕಾವೇರೀನದಿಯ ನೀರಿನಿಂದ ವ್ಯಾಪ್ತವಾಗಿ ಚೋಲರಾಜನಿಂದ ರಕ್ಷಿತವಾಗಿರುವ ದಕ್ಷಿಣ ದೇಶದಲ್ಲಿ ಪ್ರಖ್ಯಾತವೈಭವವುಳ್ಳ ದೀರ್ಘಪುರವೆಂಬ ಶ್ರೇಷ್ಠವಾದ ಒಂದು ಪಟ್ಟಣವಿರುವುದು. ಆ ಊರಿನಲ್ಲಿ ದೂರಾಲೋಚನೆಯುಳ್ಳ ಶೂದ್ರವಂಶೀಯನಾದ 'ನಾಸೀರಭಂಜನ' ನೆಂಬ ಒಬ್ಬ ಶೈವವರ್ಯನಿದ್ದನು. ॥೧-೨॥

ಅವನು ಬಾಲ್ಯದಿಂದಲೇ ಶೈವರಲ್ಲಿ ಅಧಿಕವಾದ ಭಕ್ತಿಭಾವನೆಯುಳ್ಳವನಾಗಿ ಅನವರತವೂ ಚಂದ್ರಶೇಖರನನ್ನು ಭಕ್ತಿಯಿಂದ ಪೂಜೆಮಾಡುತ್ತಿದ್ದನು.

ವಿಭೂತಿಂ ಬ್ರಸಿಕಾಂ ಕಂಥಾಂ ಕೌಪೀನಂ ಚ ಕಮಂಡಲುಂ ।
ಅಭಿವಾಂಛಿತಮನ್ನಂ ಚ ಭಕ್ತೇಭ್ಯಃ ಪ್ರದದೌ ಮುದಾ ॥೫॥

ದುರ್ಬಲಾನಾಂ ಕ್ಷಿತೀಶಾನಾಂ ಪ್ರಾಪ್ಯ ಯುದ್ಧಸಾಹಾಯ್ಯತಾಂ ।
ಕಾಮಾರಿಪಾದಭಕ್ತ್ಯೈವ ಜಿತ್ವಾರೀಂಸ್ತಾನತೂತುಷತ್ ॥೬॥

ಕೃತ್ವಾ ರಾಜಕುಮಾರಾಣಾಮಸ್ತ್ರಶಿಕ್ಷಾಸು ಪಾಟವಂ ।
ಸಂಪಾದ್ಯ ಸಂಪದಸ್ತಾಭಿರೀಶಪೂಜಾಮರೀರಚತ್ ॥೭॥

ನಾಮನ್ಯತ ಶಿವಾದನ್ಯದ್ವರಿಷ್ಠಮಿತಿ ಮನ್ಯತೇ ।
ನಾಗಮಾತ್ಪರಮಂ ಶಾಸ್ತ್ರಂ ನ ಪಂಚಾಕ್ಷರತೋ ಮನುಃ ॥೮॥

ಭಸ್ಮತ್ರಿಪುಂಡ್ರಫಾಲಸ್ಯ ಯಸ್ಯ ರುದ್ರಾಕ್ಷಧಾರಣಂ ।
ಅಂತ್ಯಜಾನಪಿ ಚೇಶಾನಭಕ್ತಾನ್ತಾಂಛಿರಸಾನಮತ್ ॥೯॥

---

ಅವನು ಚಿತ್ರರಂಜನೆಯೇ ಮೊದಲಾದ ಕಲೆಗಳ ಮೂಲಕ ಹಣವನ್ನು ಸಂಪಾದಿಸಿ, ಷಡ್ರಸಭರಿತವಾದ ಆಹಾರಗಳಿಂದ ಶೈವರಿಗೆ ಭೋಜನಮಾಡಿಸುತ್ತಿದ್ದನು. ॥೩-೪॥

ವಿಭೂತಿ, ಮಡಿಚೀಲ, ಉಡುವ ಬಟ್ಟೆಗಳು, ಕೌಪೀನ, ಕಮಂಡಲು, ಆಹಾರೋಪಯೋಗಿಯಾದ ಪದಾರ್ಥ ಮುಂತಾದವುಗಳನ್ನು ಶಿವನ ಭಕ್ತರಿಗೆ ಸಂತೋಷದಿಂದ ಸಮರ್ಪಿಸುತ್ತಿದ್ದನು. ಇವನು ಬಲಹೀನರಾದ ರಾಜರನ್ನು ಸೇರಿ ಅವರಿಗೆ ಯುದ್ಧದಲ್ಲಿ ಸಹಾಯಮಾಡಿ, ಆ ಶಿವಪಾದಭಕ್ತಿಯಿಂದಲೇ ಅವರ ಶತ್ರುಗಳನ್ನೆಲ್ಲಾ ಗೆದ್ದು ಆ ರಾಜರನ್ನು ಸಂತೋಷಪಡಿಸುತ್ತಿದ್ದನು. ॥೫-೬॥

ಇವನು ರಾಜಕುಮಾರರಿಗೆ ಶಸ್ತ್ರವಿದ್ಯೆಗಳಲ್ಲಿ ಪಾಟವವನ್ನು ಕಲಿಸಿ ಬೇಕಾದಷ್ಟು ಐಶ್ವರ್ಯವನ್ನು ಸಂಪಾದಿಸಿ, ಅದರಿಂದ ಈಶ್ವರನ ಪೂಜೆಯನ್ನು ನೆರವೇರಿಸುತ್ತಿದ್ದನು. ಅವನು ಶಿವನಿಗಿಂತಲೂ ಉತ್ತಮವಾದ ಬೇರೊಂದು ವಸ್ತುವೇ ಇಲ್ಲವೆಂದೂ, ಆಗಮಕ್ಕಿಂತ ಬೇರೆ ಶಾಸ್ತ್ರವೂ, ಪಂಚಾಕ್ಷರಿಗಿಂತ ಶ್ರೇಷ್ಠವಾದ ಮತ್ತೊಂದು ಮಂತ್ರವೂ ಇಲ್ಲವೆಂದೂ ಭಾವಿಸಿದ್ದನು. ॥೭-೮॥

ಭಸ್ಮತ್ರಿಪುಂಡ್ರಗಳನ್ನು ಹಣೆಯಲ್ಲಿ ಧರಿಸಿ ರುದ್ರಾಕ್ಷಗಳನ್ನು ಧಾರಣೆಮಾಡಿರುವವರು ಕೀಳುಜಾತಿಯವರಾದರೂ ಅವರನ್ನು ಶೈವರೆಂದೇ ನಂಬಿ, ತಲೆಬಾಗಿ ಅವರಿಗೆ

ಅಧ್ಯಕ್ಷಗೋಚರಾನಂತಶಿವಜ್ಞಾನಪ್ರದಾಯಕಾನ್ ।
ಮೋದಮಾನಃ ಶಿವಂ ಭೇಜೇ ಭಜನೇನ ಶಿವಾಪತಿಂ ॥೧೦॥

ಆಸೀತ್ಪಲ್ಲವಭೂಪಾಲವಂಶಾಂಭೋನಿಧಿಚಂದ್ರಮಾಃ ।
ಪಾದಸಿಂಹ ಇತಿಖ್ಯಾತಃ ಸಿಂಹಸಂಹನನೋನೃಪಃ ॥೧೧॥

ಚತುರಂತಜಯಾಕಾಂಕ್ಷೀ ಚತುರಂಗಬಲಾನ್ವಿತಃ ।
ಯಥಾ ಪಟ್ಟವಿರೇಶಾನ ಮುಗ್ರಣೀರುತ್ತರಾಂ ದಿಶಂ ॥೧೨॥

ವಿನಿರ್ಜಿತ್ಯಾಭವದ್ರಾಜಾ ಉತ್ತರಾಶಾ ಧುರಂಧರಾನ್ ।
ಅರ್ಥಾನುಪಚಿತಾಸ್ತಸ್ಮಿನ್ಸದಾ ಶಂಕರಕಿಂಕರಃ ॥೧೩॥

ಸ ತೈರರ್ಥೈರ್ಮಹಾದೇವಧಾಮಾನ್ಯೇತ್ಯ ಚಕಾರ ಸಃ ।
ಕಲಯನ್ವಿದಧೇ ವಾಪೀ ಕೂಪಗೋಪುರಮಂಟಪಾನ್ ॥೧೪॥

ಸಹ್ಯಜಾತೀರಯೋಶ್ಚಕ್ರೇ ಧಾಮ ಶ್ರೀಚಂದ್ರಮೌಳಿನಃ ।
ಕಾಲಹಸ್ತಿಪುರೀಂ ಪ್ರಾಪ್ಯ ಪುಂಡರೀಕಪುರಂ ಯಯೌ ॥೧೫॥

---

ನಮಸ್ಕಾರಮಾಡುತ್ತಿದ್ದನು. ಪ್ರತ್ಯಕ್ಷವಾಗಿ ಬಂದು ಅಪಾರವಾದ ಶಿವಜ್ಞಾನವನ್ನುಂಟುಮಾಡುವ ಭಕ್ತರನ್ನು ಸಂತೋಷಪಡಿಸುತ್ತಾ, ಪಾರ್ವತೀರಮಣನ ಸೇವೆಯಿಂದ ಕೊನೆಗೆ ಆ ಪರಶಿವನ ಪರಮಪಾದವನ್ನೇ ಪಡೆದನು. ॥೯-೧೦॥

ಪಲ್ಲವರಾಜರ ವಂಶವೆಂಬ ಸಮುದ್ರಕ್ಕೆ ಚಂದ್ರಪ್ರಾಯನಾಗಿ ಸಿಂಹಗಳನ್ನು ಬೇಟೆಯಾಡುವ ಪಾದಸಿಂಹನೆಂಬ ಒಬ್ಬ ರಾಜನು ಪ್ರಖ್ಯಾತನಾಗಿದ್ದನು. ಇವನು ನಾಲ್ಕುದಿಕ್ಕುಗಳನ್ನೂ ಜಯಿಸಲಿಚ್ಛೆಯುಳ್ಳವನಾಗಿ ಆನೆ, ಕುದುರೆ, ರಥ, ಕಾಲಾಳುಗಳೆಂಬ ಚತುರಂಗಬಲಸಮೇತನಾಗಿ ಈಶ್ವರನಿಗೆ ಆಶ್ರಯವಾದ ಉತ್ತರದಿಕ್ಕನ್ನು ಜಯಿಸಿ, ಉತ್ತರದಿಕ್ಕಿನ ರಾಜರುಗಳನ್ನೆಲ್ಲಾ ಸಂಪೂರ್ಣವಾಗಿ ಗೆದ್ದು ತಾನು ರಾಜನೆನಿಸಿಕೊಂಡನು. ॥೧೧-೧೨॥

ಯಾವಾಗಲೂ ಶಿವಕಿಂಕರನಾದ ಅವನು ಆ ಯುದ್ಧದಲ್ಲಿ ದೊರೆತ ಧನರಾಶಿಯಿಂದ ಶಿವಧಾಮಗಳಿಗೆ ಹೋಗಿ, ಅಲ್ಲಿ ಬಾವಿ, ಕೊಳ, ಗೋಪುರ, ಮಂಟಪ ಮುಂತಾದವುಗಳನ್ನು ಮಾಡಿಸಿ, ಕಾವೇರೀನದಿಯ ದಡಗಳೆರಡರಲ್ಲೂ ಶಿವಕ್ಷೇತ್ರ

ಕಾಂಚೀಶೋಣಾದ್ರಿವೃದ್ಧಾದ್ರಿಗೋಪರ್ವತಮುಖೇಷು ಸಃ ।
ಪ್ರಣಮ್ಯೇಂದುಕಲಾವಮೌಳಿಮಯಾಸೀತ್ಕಮಲಾಲಯಂ ॥೧೬॥

ವಲ್ಮೀಕನಾಥಮಾನಮ್ಯ ತತ್ರೋವಾಸ ಪ್ರಿಯಾಸಖಃ ।
ಮಾಲಾಗೇಹಾಂತಿಕೇ ತಸ್ಯ ಮಹಿಷೀ ಪತಿತಂ ಸುಮಂ ॥೧೭॥

ಅಜಿಘ್ರದೇಕಂ ಕುಸುಮಂ ಸ್ತ್ರೈಣೇಣಾಜ್ಞಾನಹೇತುಕಂ ।
ತಾಪಸೋ ರಣಮಿತ್ರಸ್ತಾಂ ವಿಲೋಕ್ಯಾತೀವ ಕೋಪನಃ ॥೧೮॥

ಬಲಾದಾಕೃಷ್ಯ ತನ್ನಾಸಾಂ ಕರೌ ಚಿಚ್ಛೇದ ಶಸ್ತ್ರತಃ ।
ರಕ್ತೈರಕ್ಷಿತವಕ್ಷೋಜಚ್ಛಿನ್ನನಾಸಾಗ್ರನಿಸೃತೈಃ ॥೧೯॥

ಯಥಾಕುಂಕುಮಪಂಕೈಃ ಸಾ ರಾಜಪತ್ನೀವ್ಯರಾಜತ ।
ಸ ಸಾಂಜನಪತದ್ಬಾಷ್ಪಬಿಂದುರಾಕೀರ್ಣಭೂಷಣಾ ॥೨೦॥

---

ಗಳನ್ನು ಕಟ್ಟಿಸಿದನು. ಅನಂತರ ಕಾಲಹಸ್ತಿಪಟ್ಟಣಕ್ಕೆ ಹೋಗಿ ಆಮೇಲೆ ಪುಂಡರೀಕ ಪುರಕ್ಕೆ ಹೋದನು. ॥೧೩-೧೪-೧೫॥

ಕಾಂಚೀ, ಶೋಣಾಚಲ (ಅರುಣಾಚಲ), ವೃದ್ಧಾಚಲ, ವೃಷಪರ್ವತವೇ ಮೊದಲಾದ ಶಿವಕ್ಷೇತ್ರಗಳಲ್ಲಿ ಚಂದ್ರಮೌಳಿಗೆ ನಮಸ್ಕಾರಮಾಡಿ, ಅಲ್ಲಿಂದ ಕಮಲಾ ಲಯಕ್ಷೇತ್ರಕ್ಕೆ ಬಂದನು. ಅಲ್ಲಿಯೂ ವಲ್ಮೀಕೇಶ್ವರನಿಗೆ ಪ್ರಣಾಮಮಾಡಿ ಅಲ್ಲಿಯೇ ಕೆಲವು ಕಾಲ ತನ್ನ ಹೆಂಡತಿಯೊಡನೆ ವಾಸಮಾಡಿಕೊಂಡಿದ್ದನು. ಒಂದುದಿನ ಅವನ ಹೆಂಡತಿಯು ಮಾಲಾಗೃಹದ ಸಮೀಪದಲ್ಲಿ ಬಿದ್ದಿದ್ದ ಹೆಂಗಸರು ಮತ್ತು ಜಿಂಕೆಗಳಿಗೆ ಅತ್ಯಾಸೆಯನ್ನುಂಟುಮಾಡಿ ಮನಶ್ಚಾಂಚಲ್ಯಕ್ಕೆ ಕಾರಣವಾದ ಒಂದು ಹೂವನ್ನು ಮೂಸಿನೋಡಿದಳು. ॥೧೬-೧೭॥

ತಪಸ್ವಿಯಾದ ರಣಮಿತ್ರನು ಅದನ್ನು ನೋಡಿ ತುಂಬಾ ಕೋಪದಿಂದ ಆಕೆಯನ್ನು ಹಿಡಿದೆಳೆದು, ಅವಳ ಕೈಗಳೆರಡನ್ನೂ, ಮೂಗನ್ನೂ ಕತ್ತಿಯಿಂದ ಕತ್ತರಿ ಸಿದನು. ಆಗ ರಕ್ತವು ಮೂಗಿನಿಂದ ಧಾರಾಕಾರವಾಗಿ ಸುರಿಯುತ್ತಾ ಇರಲು ಆ ರಾಜಪತ್ನಿಯು ಕುಂಕುಮ ಲೇಪನದಿಂದ ಲೇಪಿತಳಾದವಳಂತೆ ಶೋಭಿಸು ತ್ತಿದ್ದಳು. ॥೧೮-೧೯॥

ಕಾಡಿಗೆಯೊಡನೆ ಧಾರಾಕಾರವಾಗಿ ಬೀಳುತ್ತಿರುವ ಕಂಬನಿಗಳಿಂದ ವ್ಯಾಪ್ತ ವಾದ ಆಭರಣಗಳುಳ್ಳವಳಾಗಿ, ಹೂ ಮತ್ತು ಚಿಗುರುಗಳಿಂದ ಯುಕ್ತವಾದ ಬಳ್ಳಿಯು

ಪುಷ್ಪಾಂಕುರಿತವಲ್ಲೀವ ಪಪಾತ ಪತಿತಾಲಿನೀ ।
ನತ್ವಾ ವಲ್ಮೀಕನಾಥಂ ತಂ ನಿರ್ಗತೋ ನೃಪತಿಸ್ತತಃ ॥೨೧॥

ಮಯಿ ಜಾಗ್ರತಿ ವಧ್ಯೇನ ಕೇನ ಮೌಢ್ಯಮಿದಂ ಕೃತಂ ॥೨೨॥

ಇತೀರಯನ್ಸ ದುಃಸಾಧ್ಯ ವಿಧತಃ ಕ್ರೋಧವಹ್ನಿನಾ ।
ತ್ರಾಸಾಕುಲಸ್ತದಾ ಸೋಽಪಿ ಭಕ್ತಸ್ತತ್ಪಾರ್ಶ್ವತಃ ಸ್ಥಿತಃ ॥೨೩॥

ರಣಮಿತ್ರೋ ಯಥಾವೃತ್ತಂ ನೃಪಾಯಾಸ್ಮೈ ನ್ಯವೇದಯತ್ ।
ಸ ತದಾ ಜ್ಞಾತತತ್ವಾರ್ಥೋ ದಂಡೇ ಗುರುಪರಾಯತೀಂ ॥೨೪॥

ಪುಷ್ಪಘ್ರಾತಃ ಕರೋಽಸ್ಯಸ್ಯಾಶ್ಛೇದ್ಯ ಏವೇತಿ ನಿರ್ಗತಃ ।
ಭಕ್ತ್ಯಾ ತಯಾ ಪಾರ್ಥಿವಸ್ಯ ಪ್ರಸನ್ನಃ ಪರಮೇಶ್ವರಃ ॥೨೫॥

ಆವಿರ್ಭೂತಂ ವೃಷಾರೂಢಂ ಪುರೋ ವಲ್ಮೀಕನಾಯಕಂ ।
ದೃಷ್ಟ್ವಾ ಹೃಷ್ಟಃ ಪ್ರಣಮ್ಯೇಶಂ ಪಾರ್ಥಿವಃ ಪ್ರಾಂಜಲಿಸ್ಸ್ಥಿತಃ ॥೨೬॥

---

ಸೊರಗಿ ಬೀಳುವಂತೆ ಬಳಲಿ ಬಿದ್ದಳು. ಅಷ್ಟು ಹೊತ್ತಿಗೆ ರಾಜನು ಇತ್ತ ವಲ್ಮೀಕೇಶ್ವರನಿಗೆ ನಮಸ್ಕರಿಸಿ, ಹಿಂದಿರುಗಿ ರಾಕ್ಷಸಿಯಂತೆ ಕೂಗುತ್ತಿರುವ ಇವಳನ್ನು ಕಂಡು ಬಹಳವಾಗಿ ಕುಪಿತನಾದನು. ॥೨೦-೨೧॥

ತನ್ನ ಹೆಂಡತಿಯ ಮೂಗು ಮತ್ತು ಕೈಗಳನ್ನು ಕೊಯ್ದಿರುವುದನ್ನು ನೋಡಿ, ವಿಶೇಷ ಕೋಪದಿಂದ ಕೆರಳಿ, ' ನಾನಿರುವಾಗ ವಧಾರ್ಹನಾದ ಯಾವ ನೀಚನು ಇಂತಹ ನೀಚಕೆಲಸಮಾಡಿದನು " ಎಂದು ಶತ್ರುನಾಶಕನಾದ ಅವನು ಹೇಳುತ್ತಿರಲು, ಆ ರಣಮಿತ್ರನೆಂಬ ಈಶಭಕ್ತನೂ ಭಯಗೊಂಡವನಾಗಿ ಅವನ ಪಕ್ಕಕ್ಕೆ ಬಂದು ನಿಂತು ವಿನಯದಿಂದ ನಡೆದದ್ದನ್ನೆಲ್ಲಾ ರಾಜನಿಗೆ ಸರಿಯಾಗಿ ತಿಳಿಸಿದನು. ॥೨೨-೨೩॥

ಆಗ ರಾಜನು ನಿಜವಾದ ವಿಷಯವನ್ನು ತಿಳಿದು, ದೊಡ್ಡ ಶಿವಾಪರಾಧಮಾಡಿದವಳ ದಂಡನೆಯನ್ನರಿತು, ಹೂವನ್ನಾಘ್ರಾಣಿಸಿದ ಇವಳ ಕೈಗಳು ಕತ್ತರಿಸಲ್ಪಡಲು ಅರ್ಹವೇ ಆಗಿರುವುವೆಂದು ಹೇಳಿ ಹೊರಟುಹೋದನು. ಆ ರಾಜನ ಭಕ್ತಿಯಿಂದ ಪರಮೇಶ್ವರನು ಪ್ರಸನ್ನನಾದನು. ॥೨೪-೨೫॥

ತನ್ನ ಮುಂದೆ ವೃಷಭಾರೂಢನಾಗಿ ಪ್ರತ್ಯಕ್ಷವಾದ ವಲ್ಮೀಕೇಶ್ವರನನ್ನು ನೋಡಿ, ಸಂತುಷ್ಟನಾಗಿ ರಾಜನು ಈಶ್ವರನಿಗೆ ಪ್ರಣಾಮಮಾಡಿ, ಕೈಜೋಡಿಸಿ

ಜಗಾದ ಜಗತಾಂ ನಾಥೋ ಭಕ್ತ್ಯಾ ಪ್ರೀತೋಽಸ್ಮಿತೇ ನೃಪ ।
ಈದೃಶಂ ಕರ್ಮ ಕಃ ಕುರ್ಯಾತ್ತ್ವಮಿವೇಹ ಮಹೀತಲೇ ॥೨೭॥

ಅಜ್ಞಾತಾಹ್ಯಪರಾಧಸ್ಯ ಮಹಾನ್ದಂಡಸ್ತ್ವಯಾಕೃತಃ ।
ರಾಜನ್ಪ್ರೀತಾ ಹಿ ತೇ ಪತ್ನೀ ಸಂಪೂರ್ಣಾವಯವಾ ಭವೇತ್ ॥೨೮॥

ಸ್ವಾರಾಜ್ಯಂ ರಾಜ್ಯಂ ಪ್ರಶಾಧಿ ತ್ವಂ ಸಮೇಧಿತಮನಾ ಮಯಾ ।
ಪುರಸ್ಕೃತಃ ಪುತ್ರಪೌತ್ರೈರ್ಭುಂಕ್ಷ್ವ ಭೋಗಾನ್ಭುವಸ್ಥಲೇ ॥೨೯॥

ಅಂತೇ ಯಾಸ್ಯಸಿ ಮಲ್ಲೋಕಮುಲ್ಲಸದ್ಭಕ್ತಿಭಾವಿತಃ ।
ಭೂಪೋ ವಿವೇಶ ಭೂತೇಶೋ ನಿಜಮೇವ ನಿವೇಶನಂ ॥೩೦॥

ಗಿರಾ ಹರಹರೇತ್ಯುಚ್ಚೈರುದಶ್ರುಹರ್ಷಜಾಸ್ತದಾ ।
ವವರ್ಷುಃ ಪುಷ್ಪವರ್ಷಾಣಿ ಹರ್ಷವಂತಃ ಸುರಾ ಅಪಿ ॥೩೧॥

ಭೂಪಾಲಃ ಸ್ವಪುರಂ ಪ್ರಾಪ್ಯ ಸ್ಥಾಪಯಿತ್ವಾ ಶಿವಾಲಯಂ ।
ಸ್ಥೀಯಸೀಂ ಶಿವಮುದ್ರಾಂ ಚ ಸರ್ವಾಮುರ್ವೀಂ ಶಶಾಸ ಸಃ ॥೩೨॥

---

ಕೊಂಡು ನಿಂತನು. ಆಗ ಜಗದೊಡೆಯನು, "ಓ ರಾಜನೇ, ನಿನ್ನ ಭಕ್ತಿಯಿಂದ ಪ್ರೀತನಾಗಿರುವೆನು. ನಿನ್ನಹಾಗೆ ಈ ಭೂಮಂಡಲದಲ್ಲಿ ಈರೀತಿ ಕೆಲಸವನ್ನು ಯಾರುತಾನೇ ಮಾಡುವರು? ॥೨೬-೨೭॥

ರಾಜೇಂದ್ರ, ಅಪರಾಧವನ್ನೇ ತಿಳಿಯದವಳಿಗೆ ನಿನ್ನಿಂದ ದೊಡ್ಡ ಶಿಕ್ಷೆಮಾಡಲ್ಪಟ್ಟಿತು; ರಾಜನೇ! ನಿನ್ನ ಹೆಂಡತಿಯು ನನ್ನಲ್ಲಿ ಬಹಳ ಪ್ರೀತಿಯುಳ್ಳವಳೆಂದು ತಿಳಿ. ಅವಳ ಅವಯವಗಳೆಲ್ಲಾ ಪೂರ್ಣವಾಗಲಿ; ನೀನೂ ನನ್ನಲ್ಲಿ ಶಾಂತಮನಸ್ಸಿಟ್ಟು ದೊಡ್ಡ ರಾಜ್ಯವನ್ನು ಆಳಿಕೊಂಡಿರು; ಪುತ್ರಪೌತ್ರರೊಡನೆ ಪರಿವೃತನಾಗಿ ಈ ಭೂಮಂಡಲದಲ್ಲಿ ಸಕಲ ಭೋಗಗಳನ್ನೂ ಅನುಭವಿಸು, ಕೊನೆಯಲ್ಲಿ ಅದೇ ನನ್ನ ಭಕ್ತಿಭಾವನೆಯಿಂದಲೇ ನನ್ನ ಲೋಕವನ್ನು ಪಡೆಯುವೆ;" ಎಂದು ಹೇಳಿದನು. ॥೨೮-೨೯॥

ಅನಂತರ ರಾಜನೂ ಮಹಾದೇವನೂ ಸಹ ತಮ್ಮ ಆ ವಾಸಸ್ಥಾನಗಳಿಗೆ ಹೋದರು. ಇತ್ತ ರಾಜನು 'ಹರ ಹರ' ಎಂದು ಹೇಳುತ್ತಾ ಕಣ್ಣಿನಲ್ಲಿ ಆನಂದ ಬಾಷ್ಪಗಳನ್ನು ಸುರಿಸುತ್ತಿದ್ದನು. ದೇವತೆಗಳೂ ಸಹ ಸಂತುಷ್ಟರಾಗಿ ಹೂಮಳೆಗರೆ

ತತ್ರ ಸಂಕರ್ಷಿರಿತ್ಯಾಸೀತ್ಪಾರ್ಥಿವೋ ಭಾನುವಂಶಜಃ ।
ರಾಜಾ ಪ್ರಜಾಽರಂಜಕೋಽಸೌ ನಿರ್ಜಿತ್ಯ ನಿಖಿಲಾನ್ನೃಪಾನ್ ॥೩೩॥

ಧರಾಧುರಮಮಾತ್ಯೇಷು ನಿಕ್ಷಿಪ್ಯ ನಿಭೃತೋಽಭವತ್ ।
ಸ ರಾಜಾ ಶಿವಪಾದಾಬ್ಜದಾಸ್ಯಕೈಂಕರ್ಯಮೋದಭೂಃ ॥೩೪॥

ಸಭೇಶಸ್ಯ ಸಭಾಂ ಚಕ್ರೇ ಕಾಂಚನೀಮರಿಚಕ್ರಜಿತ್ ।
ಶಿವಭಕ್ತಪದಾಬ್ಜಾರ್ಚಾಂ ಕೃತ್ವಾ ನತ್ವಾವಸನ್ನೃಪಃ ॥೩೫॥

ಸೋಮಾವತಂಸಧಾಮಾನಿ ಮಹೋತ್ಸವಯುತಾನಿ ಸಃ ।
ಮಹಾಪಚಿತಿಯುಕ್ತಾನಿ ಮಹೋತ್ಸವಯುತಾನಿ ಸಃ ॥೩೬॥

ಶಿವಭಕ್ತೋಽಭವದ್ಭಕ್ತಭೋಜನಾರ್ಥೇ ಕೃತಾದರಃ ।
ಕ್ಷುತ್ತೃಷ್ಣಾಪೀಡಿತೇ ಕಾಲೇ ಧಾನ್ಯಾಷ್ಟಾದಶವರ್ಜಿತೇ ॥೩೭॥

ಅಯಮತ್ಯಂತದೌರ್ಗತ್ಯಾದ್ಗತ್ಯಂತರಮದೃಷ್ಟವಾನ್ ।
ಶಿವಭಕ್ತೇಷು ಭಕ್ತಾರ್ಥಂ ಧೈರ್ಯಧೀಮುದಿತಾಶಯಃ ॥೩೮॥

---

ದರು. ಅನಂತರ ರಾಜನು ತನ್ನ ಪಟ್ಟಣಕ್ಕೆ ಹೋಗಿ ಅಲ್ಲಿ ಶಿವಾಲಯವನ್ನು ಸ್ಥಾಪಿಸಿ ದೊಡ್ಡದಾದ ಶಿವಮುದ್ರೆಯುಳ್ಳ ಸಕಲ ಭೂಮಂಡಲವನ್ನೂ ಕಾಪಾಡುತ್ತಿದ್ದನು. ॥೩೦-೩೧-೩೨॥

ಅಲ್ಲಿಯೇ ಸೂರ್ಯವಂಶಜನಾದ ಸಂಕರ್ಷಿಯೆಂಬ ರಾಜನಿದ್ದನು. ಆ ರಾಜನು ಪ್ರಜೆಗಳಿಗೆ ರಂಜನೆಯನ್ನುಂಟುಮಾಡುತ್ತಾ ಎಲ್ಲಾರಾಜರನ್ನೂ ಜಯಿಸಿ ಭೂಭಾರ ವನ್ನು ಮಂತ್ರಿಗಳಲ್ಲಿರಿಸಿ ತಾನು ಉದಾಸೀನನಾಗಿದ್ದನು. ಆದರೆ ರಾಜನು ಶಿವಪಾದ ಕಮಲಸೇವಾಕೈಂಕರ್ಯಗಳಿಂದುಂಟಾಗುವ ಆನಂದಕ್ಕೆ ಆಶ್ರಯನಾಗಿದ್ದನು.॥೩೩ ೩೪॥

ಶತ್ರುಮಂಡಲವನ್ನು ಜಯಿಸಿದ ಆ ರಾಜನು ಸಭಾಪತಿಗೆ ಚಿನ್ನದ ಸಭೆ ಯೊಂದನ್ನು ಮಾಡಿಸಿಕೊಟ್ಟನು. ಇವನು ಶೈವರ ಪಾದಕಮಲಗಳನ್ನು ಅರ್ಚಿಸುತ್ತಾ ನಮಸ್ಕಾರಮಾಡಿಕೊಂಡು ವಾಸಮಾಡುತ್ತಿದ್ದನು. ಆ ರಾಜನು ಚಂದ್ರಶೇಖರನ ಸ್ಥಳಗಳನ್ನೆಲ್ಲಾ ಸುವರ್ಣಮಯವನ್ನಾಗಿ ಮಾಡಿ ಮಹಾಪೂಜೆ, ಮಹೋತ್ಸವಗಳು ನಡೆಯುವಂತೆ ಏರ್ಪಡಿಸಿದನು. ॥೩೫-೩೬॥

ಆದೇ ಊರಿನಲ್ಲಿ ಶೈವರಿಗೆ ಭೋಜನಮಾಡಿಸುವುದರಲ್ಲಿ ಆದರವುಳ್ಳ ಒಬ್ಬ ಶಿವಭಕ್ತನಿದ್ದನು. ಅವನು ಹಸಿವು ಬಾಯಾರಿಕೆಯಿಂದ ಜನರು ಪೀಡಿತರಾಗಿ

ರಾತ್ರೌ ರಾಜ್ಞೋ ಧಾನ್ಯಕೋಟಂ ಭಿತ್ವಾ ಧಾನ್ಯಮಚೂಚುರತ್ ।
ಏವಂ ಸಂವತ್ಸರಂ ತತ್ರ ಭಕ್ತಭೋಜನಮಾಚರನ್ ॥೩೯॥

ದೃಷ್ಟೋ ಗೃಹೀತಸ್ತತ್ಪಾಲೈರ್ದ್ರುತಂ ರಾಜ್ಞೇ ನ್ಯವೇದಯತ್ ।
ತಾಡಿತಃ ಪೀಡಿತೋಽತ್ಯಂತಂ ಕಶಾಭಿಃ ಶೋಕದಾಯಿಭಿಃ ॥೪೦॥

ಕಿಂ ತ್ವಯಾದ್ಯ ಕೃತಂ ಮೂಢ ಗೂಢಚೌರ್ಯಮಿದಂ ಕೃತಂ ।
ಚಿಕೀರ್ಷಿತಂ ತೇ ವದ ಮಾಂ ನಿರ್ವ್ಯಲೀಕೇನ ಚೇತಸಾ ॥೪೧॥

ಇತ್ಯುಕ್ತಃ ಸ ನೃಪೇಣೈವಂ ತದಾ ಪ್ರಾಹ ಮುದಾ ದ್ವಿಜಃ ।
ಕ್ಷುತ್ತೃಷ್ಣಾರ್ತಾನ್ಯ್ಕಿಮೋ ಕ್ಷಾಮೇ ಭೋಕ್ತುಂ ಭಕ್ತಾಂಛಿವಸ್ಯ ಹಿ ॥೪೨॥

---

ಹದಿನೆಂಟು ಬಗೆಯ ಧಾನ್ಯಗಳಲ್ಲಿ ಒಂದೂ ದೊರೆಯದ ಕ್ಷಾಮಸಮಯದಲ್ಲಿ ತಾನು ತುಂಬಾ ಬಡವನಾಗಿ ಬೇರೆ ಮಾರ್ಗವನ್ನೇ ಕಾಣದೆ ಶೈವರಿಗೆ ಊಟಮಾಡಿಸುವ ಉದ್ದೇಶಕ್ಕಾಗಿ ಕಳ್ಳತನಮಾಡಲು ಯತ್ನಿಸಿದನು. ॥೩೭-೩೮॥

ಪ್ರತಿರಾತ್ರಿಯೂ ರಾಜನ ಧಾನ್ಯದ ಕಣಜಕ್ಕೆ ಕನ್ನಹಾಕಿ ಧಾನ್ಯಗಳನ್ನು ಕದಿಯುತ್ತಿದ್ದನು. ಹೀಗೆ ಇವನು ಒಂದುವರ್ಷಕಾಲ ಕಳ್ಳತನಮಾಡಿ ಬಂದ ಧಾನ್ಯದಿಂದ ಶೈವರಿಗೆ ಭೋಜನಮಾಡಿಸಿದನು. ಆದರೆ ಒಂದು ದಿವಸ ರಕ್ಷಕರು ಇವನನ್ನು ಪತ್ತೆಮಾಡಿ ರಾಜನ ಬಳಿಗೆ ಎಳೆದು ತಂದರು. ಅಲ್ಲಿ ದುಃಖ ಪ್ರದವಾದ ಚಾವಟಿಗಳಿಂದ ಹೊಡೆಯಲ್ಪಟ್ಟು ಇವನು ಬಲವಾದ ಶಿಕ್ಷೆಗೊಳಗಾದನು. ॥೩೯-೪೦॥

ಆಗ ರಾಜನು 'ಏ ಮೂರ್ಖ, ನೀನೇಕೆ ಈರೀತಿ ಗುಟ್ಟಾಗಿ ಕಳ್ಳತನ ಮಾಡಿದೆ. ನೀನು ಮಾಡಬೇಕೆಂದು ಮನಸ್ಸಿನಲ್ಲಿ ಸಂಕಲ್ಪಿಸಿಕೊಂಡಿರುವುದೇನು? ಸುಳ್ಳಾಡದೆ ನಿಜವಾದ ಮನಸ್ಸಿನಿಂದ ಹೇಳು" ಎಂದು ರಾಜನು ಪ್ರಶ್ನೆಮಾಡಲು, ಆಗ ಆ ಬ್ರಾಹ್ಮಣನು, ಸಂತೋಷದಿಂದ ಅಯ್ಯ ರಾಜನೇ, ಹಸಿವು ಬಾಯಾರಿಕೆ ಗಳಿಂದ ಪೀಡಿತವಾದ ಈ ಭಯಂಕರ ಕ್ಷಾಮಕಾಲದಲ್ಲಿ ಶೈವರಿಗೆ ಭೋಜನ ಮಾಡಿಸುವುದಕ್ಕೋಸ್ಕರ ಬೇರೆ ದಾರಿಗಾಣದೇ ನಾನು ಆ ಮಹೇಶ್ವರನ ಪ್ರೀತಿ ಗಾಗಿಯೇ ಈ ಕಳ್ಳತನ ಮಾಡಿದೆನೆಂದು ನುಡಿದನು. ॥೪೧-೪೨॥

ಮಯಾ ಮಹೇಶ್ವರಪ್ರೀತ್ಯೈ ಗತ್ಯಭಾವಾದಿದಂ ಕೃತಂ ।
ನೃಪಸ್ತಸ್ಯ ನಿಶಮ್ಯೋಕ್ತಿಮುತ್ಕ್ರಾಂತಂ ಮುದಿತೋಽಬ್ರವೀತ್ ॥೪೩॥

ಮದೀಯಂ ವಿಭವಂ ಸರ್ವಂ ಭಕ್ತಸಾತ್ಕುರು ವೈ ದ್ವಿಜ ।
ಇತ್ಯುಕ್ತಮಾತ್ರೇ ನೃಪತೌ ಕೋಶವೃದ್ಧಿರ್ಬಭೂವ ಹ ॥೪೪॥

ಶಿವಾಜ್ಞಯಾ ತದಾ ರಾಜ್ಞೋ ದತ್ತಭಕ್ತಧನಸ್ಯ ಹಿ ॥೪೫॥

ಏವಂ ಸ ದೇವೇಶ್ವರಕಿಂಕರೇಭ್ಯೋ
ವಿಶ್ರಾಣ್ಯ ಸರ್ವಂ ವಿಭವಂ ವರೇಣ್ಯಃ ।
ವಿಚಿಂತ್ಯ ಶಂಭುಂ ಭುವಿ ಭುಕ್ತಭೋಗೋ
ಪದಂ ಸ ಲೇಭೇ ಪರಮೇಶ್ವರಸ್ಯ ॥೪೬॥

ನಾಸೀರಭಂಜನ ಇತಿ ಪ್ರಥಿತೋ ಧರಣ್ಯಾಂ
ಪರಾಕ್ರಮಾಖ್ಯಾಪಿತಸರ್ವರತ್ನಃ ।
ಸಂಪ್ರೀಣಯನ್ಗಿರಿಶಧಾಮಸು ಭಕ್ತವೃಂದಂ
ಕೈಲಾಸಶೈಲನಿಲಯಂ ಸುಲಭಂ ಪ್ರಪೇದೇ ॥೪೭॥

---

ಆಗ ರಾಜನು ಅವನ ಗಂಭೀರವಾದ ಮಾತನ್ನು ಕೇಳಿ ಸಂತುಷ್ಟನಾಗಿ ಅವನನ್ನು ಕುರಿತು, ಅಯ್ಯ ಬ್ರಾಹ್ಮಣನೇ, ನನ್ನ ಐಶ್ವರ್ಯವನ್ನೆಲ್ಲಾ ಭಕ್ತರ ಅಧೀನ ಮಾಡೆಂದು ತಾನು ಹೇಳಿದಮಾತ್ರದಿಂದಲೇ ಅವನ ಕೋಶದಲ್ಲಿ ನಿಧಿಯು ಅಭಿವೃದ್ಧಿಯಾಯಿತು. ॥೪೩-೪೪॥

ಶಿವನ ಅಪ್ಪಣೆಯಂತೆ ಭಕ್ತರಿಗೆ ತನ್ನ ದ್ರವ್ಯಕೋಶವನ್ನೆಲ್ಲಾ ಸಮರ್ಪಿಸುತ್ತಿದ್ದ ರಾಜನ ಭಂಡಾರವು ದಿನದಿನಕ್ಕೂ ಅಭಿವೃದ್ಧಿಯಾಯಿತು. ॥೪೫॥

ಹೀಗೆ ಅವನು ಮಹಾದೇವನ ಭಕ್ತರಿಗೆ ತನ್ನ ಸಮಸ್ತ ಐಶ್ವರ್ಯವನ್ನೂ ಸಮರ್ಪಿಸಿ ಶಿವಭಕ್ತಿಸಂಪನ್ನನಾಗಿ ಸರ್ವದಾ ಶಿವನನ್ನು ಧ್ಯಾನಮಾಡುತ್ತಾ ಭೂಮಿಯಲ್ಲಿ ಸಕಲ ಭೋಗಗಳನ್ನೂ ಅನುಭವಿಸಿ, ಕೊನೆಗೆ ಪರಮೇಶ್ವರನ ಸನ್ನಿಧಿಯನ್ನು ಪಡೆದನು. ॥೪೬॥

ತನ್ನ ಪರಾಕ್ರಮದಿಂದ ಪ್ರಖ್ಯಾತಿಪಡಿಸಿದ ಸಕಲರತ್ನಗಳುಳ್ಳವನಾಗಿ ನಾಸೀರಭಂಜನ ಎಂದು ಭೂಮಿಯಲ್ಲಿ ಪ್ರಸಿದ್ಧನಾದ ಭಕ್ತನು ಶಿವಕ್ಷೇತ್ರಗಳಲ್ಲಿ ಶೈವರ

ಸ ಪಾದಸಿಂಹಃ ಪರನಾಗಸಿಂಹೋ
ಭೋಗಾನನೇಕಾನನುಭೂಯ ಭೂಮೌ ।
ಅಸೇವತಾಂತೇ ಪರಿಪೂರ್ಣಕಾಮಃ
ಕೈಲಾಸಮೂಲೇ ಶಿವಪಾದಜಾಲೇ ॥೪೮॥

ಇತಿ ಶ್ರೀ ಶಿವರಹಸ್ಯೇ ನವಮಾಂಶೇ ಸದಾಶಿವಾಖ್ಯೇ ನಾಸೀರಭಂಜನಪಾದ ಸಿಂಹಾಖ್ಯಾನಕಥನಂ ನಾಮ ಚತುಃಷಷ್ಟಿತಮೋಽಧ್ಯಾಯಃ

---

ಸಮೂಹವನ್ನು ಸಂತೋಷಪಡಿಸುತ್ತಾ ಕೊನೆಗೆ ಕೈಲಾಸಪರ್ವತವನ್ನೇ ತನ್ನ ಮನೆಯನ್ನಾಗಿ ಸುಲಭವಾಗಿ ಪಡೆದನು. ॥೪೭॥

ಶತ್ರುಗಳೆಂಬ ಆನೆಗಳಿಗೆ ಸಿಂಹಸದೃಶವಾದ ಆ ಪಾದಸಿಂಹನೆಂಬ ರಾಜನು ತಾನು ಇರುವವರೆಗೂ ಭೂಮಿಯಲ್ಲಿ ಅನೇಕ ಭೋಗಗಳನ್ನನುಭವಿಸಿ, ಕೊನೆಗೆ ಶಿವಪಾದಸಮೂಹವನ್ನು ಸೇವಿಸಿ ಪೂರ್ಣಮನೋರಥನಾಗಿ ಕೈಲಾಸವನ್ನು ಹೊಂದಿದನು, ಎಂದು ಜೈಗೀಷವ್ಯಾದಿಗಳಿಗೆ ಕುಮಾರಸ್ವಾಮಿಯು ಹೇಳಿದನು. ॥೪೮॥

ಇಲ್ಲಿಗೆ ಶ್ರೀಶಿವರಹಸ್ಯದಲ್ಲಿ ಸದಾಶಿವಸಂಜ್ಞಕವಾದ ಒಂಬತ್ತನೆಯ ಅಂಶದಲ್ಲಿ
ನಾಸೀರಭಂಜನ ಮತ್ತು ಪಾದಸಿಂಹರೆಂಬ ಭಕ್ತರ ಕಥೆಯೆಂಬ
ಅರವತ್ತುನಾಲ್ಕನೆಯ ಅಧ್ಯಾಯವು ಮುಗಿಯಿತು.



|| ಶ್ರೀಃ ||

|| ಶ್ರೀ ಶಿವಾಯನಮಃ ||

# ಅಥ ಶ್ರೀಶಿವರಹಸ್ಯೇ

## ಸದಾಶಿವಾಖ್ಯೇ

## ನವಮಾಂಶೇ

## ಪಂಚಷಷ್ಟಿತಮೋಽಧ್ಯಾಯಃ

|| ಶ್ರೀಸ್ಕಂದ ಉವಾಚ ||

ರಣವೀರೋಽಭವನ್ನಾಮ್ನಾ ಶಿವದ್ವಿಜಕುಲೋದ್ಭವಃ ।
ಕೋಽಪ್ಯಾಸೀತ್ಕೀರ್ತಿಮಿತ್ರಾಖ್ಯಃ ಕಲ್ಯಾಣಗುಣಭೂಷಣಃ ॥೧॥

ಪೂರ್ವಜನ್ಮಕೃತೈಃ ಪುಣ್ಯೈರ್ಭಕ್ತಿಮಾನ್ಪರಮೇಶ್ವರೇ ।
ಶಿವತತ್ತ್ವೈಕಧೀಃ ಸೋಽಪಿ ತ್ಯಕ್ತಸಂಸಾರವಾಸನಃ ॥೨॥

ನಿದ್ರಾತಂದ್ರಾದಿಮುದ್ಭ್ರಾಂತಾಂ ವಿದ್ರಾವ್ಯ ಪ್ರಾಪಿಸೇವಕಃ ।
ಸ್ನಾನಾರ್ಥಂ ದೇವದೇವಸ್ಯ ಕುಂಭೋದಕಮುದಾವಹತ್ ॥೩॥

---

## ಅರವತ್ತೈದದನೆಯ ಅಧ್ಯಾಯ

ಶೈವಬ್ರಾಹ್ಮಣವಂಶದಲ್ಲಿ ರಣವೀರನೆಂಬ ಹೆಸರಿನಿಂದ ಜನಿಸಿ, ಕೀರ್ತಿಮಿತ್ರನೆಂದು ಕರೆಯಲ್ಪಡುತ್ತಿದ್ದ ಭಕ್ತನೊಬ್ಬನು ಸಕಲ ಕಲ್ಯಾಣಗುಣಗಳಿಗೂ ಅಲಂಕಾರಪ್ರಾಯನಾಗಿ ವಾಸವಾಗಿದ್ದನು. ಅವನು ಹಿಂದಿನ ಜನ್ಮದಲ್ಲಿ ಮಾಡಿದ ಪುಣ್ಯರಾಶಿಯಿಂದ ಪರಮೇಶ್ವರನಲ್ಲಿ ಹೆಚ್ಚು ಭಕ್ತಿಯನ್ನು ಸಂಪಾದಿಸಿ, ಶಿವತತ್ತ್ವಜ್ಞಾನಿಯೆನಿಸಿದ್ದನು. ಹಾಗೂ ಸಾಂಸಾರಿಕ ಭಾವನೆಯನ್ನು ತೊರೆದು ಯಾವಾಗಲೂ ಶಿವತತ್ತ್ವಾನುಷ್ಠಾನದಲ್ಲಿಯೇ ತತ್ಪರನಾಗಿ ಕಾಲಕಳೆಯುತ್ತಿದ್ದನು. ||೧-೨||

ಹಾಗೆ ಶಿವಸೇವಾನಿರತನಾದ ಆತನು ನಿದ್ದೆ, ಸೋಮಾರಿತನ ಮುಂತಾದವುಗಳನ್ನು ಬಿಟ್ಟು ಮಹಾದೇವನ ಅಭಿಷೇಕಕ್ಕೋಸ್ಕರ ಬಿಂದಿಗೆಗಳಲ್ಲಿ ನೀರನ್ನು

ಏವಂ ಸಂಪೂಜಯಾಮಾಸ ಕುಂಭಧಾರಾಘಟಸ್ರವೈಃ ।
ಘಟಂ ಸೋಢುಮಶಕ್ತೋಽಸೌ ಕ್ಷುಧಾಕ್ಷೀಣವಪುರ್ಬಲಃ ॥೪॥

ಭವಾನೀಪತಿಪಾದಾಬ್ಜೇ ಪಪಾತಾಪಾತಯನ್ಘಟಂ ।
ದೇವೇಶಮಾಯಯಾ ಮುಹ್ಯನ್ನಿವಿಷ್ಟೋಽಭೂತ್ಸನಿದ್ರಯಾ ॥೫॥

ಪ್ರಸನ್ನಸ್ತತ್ಕ್ಷಣೇ ಸ್ವಪ್ನೇ ಪ್ರಾಹೈನಂ ಪಾರ್ವತೀಪತಿಃ ।
ಯಾವದ್ದುರ್ಭಿಕ್ಷಕಾಲಾಂತಂ ತಾವದ್ಧೇಮವಿಶಂಕಟಂ ॥೬॥

ದದಾಮಿ ಪೀಠತೋ ತುಭ್ಯಂ ಕ್ರೀತ್ವಾ ತೇನೈವ ಧಾನ್ಯಕಂ ।
ತೇನೈವ ತ್ವಂ ಬಲೀ ಭೂತ್ವಾ ಉದಕುಂಭಂ ದದಸ್ವಮೇ ॥೭॥

ಪ್ರಬುದ್ಧ ಉತ್ಥಿತೋ ದೃಷ್ಟ್ವಾ ಪೀಠೇ ಟಂಕಂ ಹಿರಣ್ಮಯಂ ।
ಕೀರ್ತಿಮಿತ್ರಃ ಕ್ಷುಧಾರ್ತೋಽಪಿ ಪ್ರಾಪ್ತಭೂತಿರಭೂತ್ತದಾ ॥೮॥

---

ಹೊತ್ತು ತರುತ್ತಿದ್ದನು. ಹೀಗೆ ಗಡಿಗೆಗಳಿಂದ ಧಾರಾಕಾರವಾಗಿ ಬೀಳುವ ನೀರಿನಿಂದ ಶಿವನಿಗೆ ಅಭಿಷೇಕಮಾಡುತ್ತಾ ಶಿವನನ್ನು ಪೂಜಿಸುತ್ತಿದ್ದನು. ಬಹುದಿನ ಹೀಗೆ ಕಳೆಯಲು ಒಂದು ದಿವಸ ಹಸಿವಿನಿಂದ ನೀರಿನ ಕೊಡವನ್ನು ಹಿಡಿಯಲು ಅಶಕ್ತನಾಗಿ, ದೇಹವೆಲ್ಲವೂ ಕೃಶವಾಗಿ ಅವನು ನೀರಿನ ಕೊಡವನ್ನು ಬೀಳಿಸಿಕೊಂಡು ಆ ಪಾರ್ವತೀರಮಣನ ಪಾದಕಮಲದಲ್ಲಿ ಬಿದ್ದುಬಿಟ್ಟನು. ॥೩-೪॥

ಅಲ್ಲಿಯೇ ಭಕ್ತನು ಮಹಾದೇವನ ಮಾಯೆಯಿಂದ ಮೂರ್ಛಿತನಾಗಿ ನಿದ್ರಾಸಕ್ತನಾದನು. ಆಗಲೇ ಅವನ ಕನಸಿನಲ್ಲಿ ಭಕ್ತಪರಾಧೀನನಾದ ಪಾರ್ವತೀರಮಣನು, 'ಓ ಭಕ್ತನೇ, ಈ ದುರ್ಭಿಕ್ಷಕಾಲ ಕಳೆಯುವವರೆಗೂ, ನಿನಗೆ ತುಂಬಾ ಚಿನ್ನವನ್ನು ನನ್ನ ಪೀಠದಿಂದ ಕೊಡುತ್ತೇನೆ. ನೀನು ಅದನ್ನು ಮಾರಿ ಧಾನ್ಯಗಳನ್ನು ತಂದು ನಿನ್ನ ಶರೀರವನ್ನು ಬಲಪಡಿಸಿ ಅನಂತರ ನನಗೆ ಜಲಕುಂಭವನ್ನು ತಂದುಕೊಡೆಂದು ಹೇಳಿದನು. ॥೫-೬-೭॥

ಆಗ ಅದರಂತೆ ನಿದ್ದೆಯಿಂದೆಚ್ಚೆತ್ತು ಮೇಲೆದ್ದು ನೋಡಲು, ಪೀಠದಲ್ಲಿ ಸುವರ್ಣಮಯವಾದ ಒಂದು ಟಂಕವಿದ್ದಿತು. ಆಗ ಕೀರ್ತಿಮಿತ್ರನು ಹಸಿವಿನಿಂದ ಪೀಡಿತನಾಗಿದ್ದರೂ ಹೊಟ್ಟೆ ತುಂಬಿದವನಂತೆಯೇ ಆದನು. ಆಗ ಅವನು ಆ ಸುವರ್ಣ

ಸದಾಶಿವಾರ್ಚನರತಃ ಕುಂಭಧಾರಾಗ್ರತಃ ಸದಾ ।
ಪ್ರಕಾಶಯಾಮಿ ಪ್ರಥಿತಂ ವೀರಶಾರ್ದೂಲವೈಭವಂ ॥೯॥

ಪ್ರಕಾಶೇ ಚೋಲದೇಶೇಽಸ್ಮಿನ್ನಾಮ್ನಾ ನಾಮಪುರಂ ಪರಂ ।
ತತ್ರ ಶೂದ್ರಕುಲೋತ್ಪನ್ನೋ ವೀರಶಾರ್ದೂಲ ಇತ್ಯಭೂತ್ ॥೧೦॥

ಸ ಚೋಲೇಂದ್ರಮಹೀಪಾಲತಂತ್ರಪಾಲಃ ಸುಶೀಲವಾಕ್ ।
ಪರಾಜಿತ್ಯ ಪರಾನ್ಯುದ್ಧೇ ರಾಜ್ಞಃ ಸಂಪದಮಾವಹನ್ ॥೧೧॥

ಭವಾನೀರಮಣೇ ಭಕ್ತಿಂ ಭಾವನಾಪರಿಪೂರಿತಾಂ ।
ತ್ಯಕ್ತ್ವಾ ದೇವಾಂತರೋ ದೇವಂ ಭಜನ್ಭುಜಗಭೂಷಣಂ ॥೧೨॥

ಪುರಾರಿಭೋಗಪೂಜಾಭಿರ್ಬಹ್ವೀಭಿಃ ಪರಿವರ್ತತೇ ।
ಶರ್ವಾಲಯೇಷು ಸರ್ವೇಷು ಶಿವಧರ್ಮಾನ್ಯಕಾರಯತ್ ॥೧೩॥

---

ವನ್ನು ಮಾರಿ ಕುಂಭಧಾರೆಯನ್ನು ಶಿವನ ಮುಂದೆ ನಡೆಸುತ್ತಾ ಯಾವಾಗಲೂ ಶಿವಪೂಜಾನಿರತನಾದನು. ॥೮॥

ಓ ಜೈಗೀಷವ್ಯನೇ! ಪ್ರಖ್ಯಾತನಾದ ವೀರಶಾರ್ದೂಲನೆಂಬ ಮತ್ತೊಬ್ಬ ಭಕ್ತನ ವೈಭವವನ್ನು ಪ್ರಕಟಗೊಳಿಸುವೆನು ಕೇಳು; ಪ್ರಸಿದ್ಧವಾದ ಚೋಲದೇಶದಲ್ಲಿ ನಾಮಪುರವೆಂಬ ಶ್ರೇಷ್ಠವಾದ ಒಂದು ಪಟ್ಟಣವಿದ್ದಿತು. ಆ ಪಟ್ಟಣದಲ್ಲಿ ಶೂದ್ರವಂಶೋತ್ಪನ್ನನಾದ ವೀರಶಾರ್ದೂಲನೆಂಬುವನಿದ್ದನು. ಅವನು ಚೋಲರಾಜನ ತಂತ್ರರಕ್ಷಕನಾಗಿ (ಮಂತ್ರಿಯಾಗಿ) ಒಳ್ಳೆಯ ಸ್ವಭಾವವುಳ್ಳವನಾಗಿದ್ದನು. ಇವನು ಯುದ್ಧದಲ್ಲಿ ಶತ್ರುಗಳನ್ನು ಸೋಲಿಸಿ ರಾಜನ ಸಂಪತ್ತನ್ನು ವಿಶೇಷವಾಗಿ ಅಭಿವೃದ್ಧಿಗೊಳಿಸಿದನು. ॥೯-೧೦-೧೧॥

ಅವನು ಪಾರ್ವತೀರಮಣನಲ್ಲಿ ಭಾವನಾಪೂರ್ಣವಾದ ಭಕ್ತಿಯನ್ನು ಪಡೆದಿದ್ದನು. ಇತರ ದೇವತೆಗಳನ್ನು ಬಿಟ್ಟು ಆ ಸರ್ಪಭೂಷಣನಾದ ಮಹಾದೇವನನ್ನೇ ಭಜಿಸುತ್ತಿದ್ದನು. ಅನೇಕಮಂದಿ ಆ ತ್ರಿಪುರಾಂತಕಭಕ್ತರಿಗೆ ಸುಖಪ್ರದವಾದ ಪೂಜೆಗಳನ್ನು ನಡೆಸುತ್ತಿದ್ದನು. ಎಲ್ಲಾ ಶಿವದೇವಾಲಯಗಳಲ್ಲೂ ಶಿವಧರ್ಮಕಾರ್ಯಗಳನ್ನು ಮಾಡಿಸುತ್ತಿದ್ದನು. ॥೧೨-೧೩॥

ಸ ವೀರೋ ವೀರಶಾರ್ದೂಲೋ ನೃಪೇಣಾಜ್ಞಾ ನಿಯೋಜಿತಃ ।
ಜಿತ್ವಾ ರಿಪೂನ್ಪ್ರತಿಷ್ಠಾಪ್ಯ ಶಿವಲಿಂಗಾನ್ಯನೇಕಶಃ ॥೧೪॥

ಬಾಲೇಂದುಮೌಲಿಪೂಜಾರ್ಥೇ ಶಾಲಿಕೂಟಾಃ ಸಹಸ್ರಶಃ ।
ಸಂಪಾದಿತಾ ಮಯ್ಯೈತೇಷು ಮಾ ಯೂಯಂ ಕುರುತ ವ್ಯಯಂ॥೧೫॥

ಯಃ ಕರೋತಿ ವ್ಯಯಂ ತೇಷು ಸದಾ ದಂಡ್ಯಃ ಸ ನಿರ್ದಯಂ ।
ಇತ್ಯುಕ್ತ್ವಾ ವೀರಶಾರ್ದೂಲಃ ಪ್ರತಸ್ಥೇ ಮುದಿತಂ ಪರಾನ್ ॥೧೬॥

ಅನಾಗತೇ ಚಿರಂ ತಸ್ಮಿನ್ಕಾಲೇ ದುರ್ಭಿಕ್ಷಭಕ್ಷಿತೇ ।
ತೇ ಕ್ಷುಧಾಭಕ್ಷಿತಾಶ್ಚಾಸನ್ವೀರಶಾರ್ದೂಲಬಾಂಧವಾಃ ॥೧೭॥

ಸ್ಥಿತೇಷು ಶಾಲಿಕೂಟೇಷು ಕ್ಷುಧಯಾ ಕಿಂ ಪ್ರಯಾಮಹೇ ।
ಇತಿ ನಿಶ್ಚಿತ್ಯ ತೇ ಸರ್ವೇ ವಿಭಿದ್ಯೈತದ್ವ್ಯಯಂ ದಧುಃ ॥೧೮॥

ವೀರಃ ಸ ವೀರಶಾರ್ದೂಲೋ ವಿಜಿತ್ಯ ವಿಮತಾನ್ರಣೇ ।
ಪ್ರತ್ಯಾಯಯೌ ಬಾಂಧವಾನ್ಸ್ವಾನ್ಮೋದಮಾನಮನಾಸ್ತದಾ ॥೧೯॥

---

ಆ ವೀರಶಾರ್ದೂಲನೆಂಬ ವೀರನು ಯುದ್ಧದಲ್ಲಿ ರಾಜನಿಂದ ನಿಯಮಿತನಾಗಿ ಶತ್ರುಗಳನ್ನೆಲ್ಲಾ ಗೆದ್ದು, ಅನೇಕ ಶಿವಲಿಂಗಗಳನ್ನು ಪ್ರತಿಷ್ಠೆಮಾಡಿಸಿ, ಬಾಲಚಂದ್ರ ಚೂಡನಾದ ಮಹೇಶನ ಪೂಜೆಗೋಸ್ಕರ ಸಾವಿರಾರು ಬತ್ತದ ಮೂಟೆಗಳನ್ನು ಇಡಿಸಿದನು. ಅಲ್ಲದೇ ಜನರನ್ನು ಕರೆದು, ಇವೆಲ್ಲವೂ ನನ್ನಿಂದ ಸಂಪಾದಿಸಲ್ಪಟ್ಟವು ಗಳು. ಇವುಗಳನ್ನು ನೀವು ಸುಮ್ಮನೆ ಖರ್ಚುಮಾಡಕೂಡದು, ಒಂದುವೇಳೆ ಯಾವನು ಹಾಗೆ ವ್ಯಯಮಾಡುವನೋ ಅವನು ಕಠಿನವಾದ ಶಿಕ್ಷೆಗೆ ಗುರಿಯಾಗುವ ನೆಂದು ಆ ವೀರಶಾರ್ದೂಲನು ತಮ್ಮವರಿಗೆ ಹೇಳಿ ತಾನು ಸಂತೋಷದಿಂದ ಮುಂದೆ ಹೊರಟನು. ॥೧೪-೧೫-೧೬॥

ಇತ್ತ ಬಹುಕಾಲ ವೀರಶಾರ್ದೂಲನು ಹಿಂದಿರುಗದೇ ಕಾಲವೂ ದುರ್ಭಿಕ್ಷ ಕ್ಕೊಳಗಾಗಲು, ಆ ವೀರಶಾರ್ದೂಲನ ನೆಂಟರೆಲ್ಲರೂ ಹಸಿವಿನಿಂದ ಬಳಲಿದವರಾಗಿ, ಬೇಕಾದಷ್ಟು ಅಕ್ಕಿಯ ಮೂಟೆಗಳಿರುವಾಗ ಸುಮ್ಮನೇ ಹಸಿವಿನಿಂದೇಕೆ ಸಾಯೋಣ ವೆಂದು ಯೋಚಿಸಿ ಅವರೆಲ್ಲರೂ ಅವುಗಳನ್ನು ಬಿಚ್ಚಿ ಖರ್ಚುಮಾಡಿದರು.॥೧೭-೧೮॥

ಇತ್ತ ವೀರನಾದ ವೀರಶಾರ್ದೂಲನು ಯುದ್ಧದಲ್ಲಿ ಶತ್ರುಗಳನ್ನು ಜಯಿಸಿ

ತೇಷಾಂ ಜ್ಞಾತ್ವಾ ಶಿವದ್ರೋಹಮಜಾನನ್ನಿವ ವಿಸ್ಮಿತಃ
ಅದ್ಯ ವೋ ದ್ರವಿಣಂ ದದ್ಯಾಂ ಯೂಯಮಾಯಾತ ಬಾಂಧವಾಃ ॥೨೦॥

ಇತ್ಯನ್ಯೈಷೀತ್ಸ ತಾನ್ಬಂಧೂನ್ಸ್ವೇನಾದ್ಯ ಪುರವಾಸಿನಃ।
ದಾತುಂ ದ್ರವ್ಯಾಣಿ ಚೋದ್ಯುಕ್ತೋ ಬಾಂಧವಾನ್ಸ್ವಗೃಹಾಗತಾನ್ ॥೨೧॥

ಯುಷ್ಮಾಭಿಃ ಶಿವಪೂಜಾರ್ಥಂ ಶಾಲಿಕೋಟಿವ್ಯಯಃ ಕೃತಃ।
ಅತಃ ಕೃತಶಿವದ್ರೋಹಾನ್ಕೋಶಾದಾಕೃಷ್ಯ ಚಾಯುಧಂ ॥೨೨॥

ಪಿತೃಭ್ರಾತೃಪಿತೃವ್ಯಾದೀನ್ಬಾಂಧವಾನಚ್ಛಿನದ್ರುಷಾ।
ಸ ದೇವ ಭಾವನಾಬಂಧೋ ಬಂಧುಚ್ಛೇದಂ ನ ಕೇವಲಂ ॥೨೩॥

ಸಂಸಾರಬಂಧಚ್ಛೇದಂ ಚ ಶಿವಾಚಾರಂ ಚಕಾರ ಸಃ।
ಸ್ತನಂಧಯಂ ಕಾಚಿದಸ್ಯ ಕುಲಾಲಂಕಾರತಾಂ ಗತಂ ॥೨೪॥

---

ಸಂತೋಷದಿಂದ ಆನಂದಭರಿತ ಮನಸ್ಸಿನಿಂದ ತನ್ನ ಬಂಧುಗಳ ಬಳಿಗೆ ಬಂದನು. ಅದೇ ಸಮಯದಲ್ಲಿ ಅವರು ಮಾಡಿರುವ ಶಿವದ್ರೋಹವನ್ನರಿತು, ಏನೂ ತಿಳಿಯದಂತೆ ನಟಿಸುತ್ತಾ, ಓ ಬಂಧುಗಳೇ, ಈ ದಿವಸ ನಿಮಗೆ ಹಣವನ್ನು ಕೊಡುವೆನು, ನೀವೆಲ್ಲರೂ ನಮ್ಮ ಮನೆಗೆ ಬನ್ನಿರಿ; ಈದಿನ ಈ ಪಟ್ಟಣದ ಜನಗಳಿಗೆಲ್ಲಾ ದ್ರವ್ಯ ದಾನಮಾಡಬೇಕೆಂದಿರುವೆನೆಂದು ಆ ತನ್ನ ಬಂಧುಗಳನ್ನೆಲ್ಲಾ ತನ್ನ ಮನೆಗೆ ಬರುವಂತೆ ಮಾಡಿದನು. ಅನಂತರ ಹೀಗೆ ಬಂದ ಬಂಧುಗಳನ್ನು ಕುರಿತು, ದ್ರವ್ಯದಾನಮಾಡಲುದ್ಯುಕ್ತನಾಗಿ; ॥೧೯-೨೦-೨೧॥

ಎಲೈ ಬಂಧುಗಳೇ, ಶಿವನ ಪೂಜೆಗಾಗಿ ಸಂಗ್ರಹಿಸಿದ್ದ ಬತ್ತದ ರಾಶಿಯನ್ನೆಲ್ಲಾ ನೀವು ಖರ್ಚುಮಾಡಿರುವಿರಿ. ಆದ್ದರಿಂದ ಈಗ ನೀವೆಲ್ಲರೂ ಶಿವದ್ರೋಹಿಗಳೇ ಸರಿ; ಎಂದು ಹೇಳಿ ಒರೆಯಿಂದ ಕತ್ತಿಯನ್ನು ಹಿರಿದು, ತಂದೆ, ಸಹೋದರ, ಚಿಕ್ಕಪ್ಪ, ದೊಡ್ಡಪ್ಪ ಮುಂತಾದ ತನ್ನ ಬಂಧುಗಳನ್ನೆಲ್ಲಾ ನಿರ್ದಯೆಯಿಂದ ಕತ್ತರಿಸಿದನು. ಮಹಾದೇವ ಭಕ್ತಿಭಾವಿತನಾದ ಅವನು ಕೇವಲ ಬಂಧುನಾಶವನ್ನು ಮಾತ್ರ ಮಾಡಲಿಲ್ಲ. ತನ್ನ ಸಂಸಾರಬಂಧನವೂ ಶಿವನ ದ್ರೋಹಕ್ಕೆ ಆಶ್ರಯವೆಂದು ತಿಳಿದು ಅದನ್ನೂ ಧ್ವಂಸಮಾಡಿದನು. ॥೨೨-೨೩॥

ಹಾಲುಕುಡಿಯುವ ಅವನ ಒಂದು ಮಗುವನ್ನು ಒಬ್ಬಳು ಗತಿಯಿಲ್ಲದೇ ಅವನ ಕೈಗೆಕೊಟ್ಟು, ಅಯ್ಯ! ವಂಶಾಲಂಕಾರಕ್ಕೆ ಅಂಕುರಪ್ರಾಯನಾದ ಈ ಮಗುವ

ಸಂರಕ್ಷತಾಮಿತಿ ಸುತಂ ವಿಧಿನಾ ತತ್ಕರೇ ದದೌ ।
ಅಯಂ ಚ ಗಿರಿಶಾನ್ನಾರ್ಹಃ ಪುಷ್ಟಮಾತುಃ ಸ್ತನಂಧಯಃ ॥೨೫॥

ಇತಿ ತಂ ವೀರಶಾರ್ದೂಲೋ ಖಡ್ಗೇನಾಖಂಡಯದ್ದ್ವಿಧಾ ॥೨೬॥

ತತ್ಕರ್ಮ ದೃಷ್ಟ್ವಾ ತರುಣೇಂದುಮೌಳಿಃ
ಪ್ರಾದುರ್ಬಭೂವಾಸ್ಯ ಪುರಃ ಪುರಾರಿಃ ।
ದೃಷ್ಟ್ವಾಭಿತುಷ್ಟಾವ ಶಿವಂ ಪ್ರಹೃಷ್ಟೋ
ನಿಷ್ಠಾವತಾ ಸ್ಯೆವ ಸುಚೇತಸಾ ಹರಂ ॥೨೭॥

ಹರಹರ ದುರಿತಾನಿ ದೀನಬಂಧೋ
ಕುರು ಮಮ ಬಂಧವಿಮೋಚನಂ ಭವೋದ್ಭವಾದ್ಯ ।
ಪರಿಹರ ಸಂಸೃತಿಭಾರಮುಗ್ರಖೇದಂ
ಗುರುಗರಲಾಶನ ದೇವದೇವ ಪಾಹಿ ॥೨೮॥

---

ನ್ನಾದರೂ ಕಾಪಾಡೆಂದು ಹೇಳಿದಳು. ಆದರೆ ಅವನು, ಶಿವದ್ರೋಹಮಾಡಿದ ತಾಯಿಯ ಎದೆಹಾಲು ಕುಡಿದು ಪುಷ್ಟನಾಗಿರುವ ಈ ಶಿಶುವು ಗಿರೀಶನಿಗೆ ಯೋಗ್ಯನಾಗಲಾರನೆಂದು ಯೋಚನೆಮಾಡಿ ಆ ಮಗುವನ್ನೂ ಕತ್ತಿಯಿಂದ ಎರಡು ತುಂಡಾಗಿ ಕತ್ತರಿಸಿದನು. ॥೨೪-೨೫-೨೬॥

ಧೀರನಾದ ವೀರಶಾರ್ದೂಲನ ಈರೀತಿಯಾದ ಸಾಹಸಕಾರ್ಯವನ್ನು ನೋಡಿ, ಬಾಲಚಂದ್ರಚೂಡನಾದ ಮಹೇಶ್ವರನು ಇವನ ಮುಂದೆ ಪ್ರತ್ಯಕ್ಷನಾಗಿ ನಿಂತನು. ಆಗ ಇವನನ್ನು ನೋಡಿ ಆ ವೀರಶಾರ್ದೂಲನು ದೃಢಬುದ್ಧಿಯಿಂದ ಒಳ್ಳೆಯ ಮನೋಭಾವನೆಯುಳ್ಳವನಾಗಿ ಈ ರೀತಿ ಸ್ತೋತ್ರಮಾಡಿದನು. ॥೨೭॥

ದೀನಪೋಷಕನಾದ ಶಿವನೇ, ನನ್ನ ಪಾಪಗಳನ್ನು ಪರಿಹರಿಸು ; ಜಗದುದ್ಭವ ಕಾರಣನಾದ ಶಂಕರನೆ, ನನ್ನ ಸಂಸಾರಬಂಧವಿಮೋಚನೆಯನ್ನು ಮಾಡು; ಈ ಭಯಂಕರ ದುಃಖಮಯವಾದ ಸಂಸಾರಭಾರವನ್ನು ಪರಿಹರಿಸು ; ಘೋರವಾದ ಕಾಲಕೂಟ ವಿಷವನ್ನು ಭಕ್ಷಿಸಿದ ಮಹಾದೇವನೇ, ನನ್ನನ್ನು ಕಾಪಾಡು, ಎಂದು ವೀರಶಾರ್ದೂಲನು ಶಿವನನ್ನು ಪರಿಪರಿಯಾಗಿ ಸ್ತೋತ್ರಮಾಡಿದನು. ॥೨೮॥

ಇತಿ ತಂ ಭಕ್ತಿತುಷ್ಟೋ ಪ್ರಭುರವದದಹೋ
ಭಕ್ತ ತುಷ್ಟೋಽಸ್ಮಿ ಭಕ್ತ್ಯಾ ।
ತವ ಸುಖಸುಖಿನೋ ವೈ
ಜೀವಿತಾಃ ಸಂತು ಸರ್ವೇ ॥೨೯॥

ಭೋಗಾಂಶ್ಚ ಭುಕ್ತ್ವಾ ಚಿರಮೇಹಿ ಮೇ ಪದಂ
ಸಂಸೇವ್ಯಮಾನಂ ಗಣವೃಂದವರ್ಯೈಃ ।
ಸ ತೇನ ನೀತ್ವಾ ಗಿರಿಶಾರ್ಪಿತೇನ
ಕಾಲಂ ಚ ತಂ ಕಾಂಚನ ಟಂಕಕೇನ ॥೩೦॥

ವಿಟಂಕನಾಥಸ್ಯ ಸ ಪಶ್ಯಯಾ ರತಃ
ಸ ಭಕ್ತವರ್ಯಃ ಪದಮಿಂದುಮೌಳೇಃ ।
ಕೀರ್ತಿಮಿತ್ರಚರಿತೇ ಕೃತಚೇತಾಃ
ಕೀರ್ತಿದಾಯಿನಿ ಸುಕರ್ಮಣೋ ಯಃ ॥೩೧॥

ಆರ್ತಿಮಪ್ಯಭಿವಿಭಜ್ಯ ಭವಾಪ್ತಾಂ
ವರ್ತತ್ಯೈವ ಶಿವಧಾಮಸೀಮಗಃ ॥೩೨॥

---

ಹೀಗೆ ತನ್ನನ್ನು ಸ್ತುತಿಸಿದ ಆ ವೀರಶಾರ್ದೂಲನಿಗೆ ಮಹಾದೇವನು, ಓ ಭಕ್ತನೇ, ನಿನ್ನ ಭಕ್ತಿಯಿಂದ ನಾನು ಸಂತುಷ್ಟನಾದೆನು, ನಿನ್ನ ಸುಖಕ್ಕೆ ಕಾರಣವಾಗಿರುವ ಈ ನಿನ್ನ ಬಂಧುಬಾಂಧವರೆಲ್ಲರೂ ಸುಖವಾಗಿ ಬದುಕಲಿ ; ॥೨೯॥

ನೀನೂ ಇಲ್ಲಿ ಬಹುಕಾಲ ಐಹಿಕಭೋಗವನ್ನು ಅನುಭವಿಸಿ ಗಣಶ್ರೇಷ್ಠರ ಗುಂಪಿನಿಂದ ಸೇವಿಸಲ್ಪಡುವ ನನ್ನ ಪಾದಸನ್ನಿಧಿಯನ್ನು ಹೊಂದುವೆಯೆಂದು ಅನುಗ್ರಹಿಸಿದನು. ಇತ್ತ ಆ ಕೀರ್ತಿಮಿತ್ರನು ಮಹೇಶ್ವರನು ತನಗೆ ಕರುಣಿಸಿದ ಚಿನ್ನದ ಟಂಕದಿಂದ ಬಹಳಕಾಲ ಜೀವಿಸಿ; ॥೩೦॥

ವಿಟಂಕೇಶ್ವರನ ಪೂಜೆಯಲ್ಲಿ ಆಸಕ್ತನಾಗಿ ಆ ಭಕ್ತಶ್ರೇಷ್ಠನು ಕೊನೆಗೆ ಚಂದ್ರಶೇಖರನ ಪಾದವನ್ನು ಸೇರಿದನು. ಕೀರ್ತಿಯನ್ನುಂಟುಮಾಡುವ ಇಂತಹ ಕೀರ್ತಿಮಿತ್ರನ ಕಥೆಯಲ್ಲಿ ಮನಸ್ಸಿಟ್ಟ ಸುಕೃತಶಾಲಿಯು ಈ ಸಂಸಾರಜನ್ಯವಾದ ಪೀಡೆಯನ್ನೂ ಕಳೆದುಕೊಂಡು ಶಿವನ ನೆಲೆಮನೆಯಾದ ಕೈಲಾಸದಲ್ಲಿ ವಾಸಮಾಡುತ್ತಾನೆ ಎಂಬುದರಲ್ಲಿ ಸಂಶಯವಿಲ್ಲ. ॥೩೧-೩೨॥

॥ ಈಶ್ವರ ಉವಾಚ ॥

ಭಕ್ತಾಃ ಸರ್ವೇ ಶಿವಂ ಧ್ಯಾತ್ವಾ ಕಲಾವೇವಂ ಭವಂತಿ ಹಿ ।
ಶಿವಭಕ್ತಾನ್ಸಮುದ್ವೀಕ್ಷ್ಯ ಶಿವಮೇವಾನುಚಿಂತಕಾಃ ॥೩೩॥

ನೀಚಾ ಅಪಿ ಶಿವೇ ಭಕ್ತಾ ಭವಂತ್ಯೇವ ಹಿ ಶೈಲಜೇ ।
ಕರ್ಮಣಾ ಮನಸಾ ವಾಚಾ ಸರ್ವಭಾವೇನ ಶಂಕರಂ ॥೩೪॥

ಯೇ ಪ್ರಪನ್ನಾ ಮಹಾದೇವಂ ತೇ ಭವಂತಿ ಗಣೇಶ್ವರಾಃ ।
ಚರಣಂ ಕರುಣಾಂಭೋಧೇರ್ಮಮ ಯೇ ಶರಣಂ ಗತಾಃ ॥೩೫॥

ನೈವಾಪ್ತಜನನಾಸ್ತೇಽಮೀ ಪರಿಚ್ಛೇದ್ಯಾಃ ಕಥಂ ಪರೈಃ ।
ಲೋಕಾನಾಲೋಕಯಂತೋಽಪಿ ನಿಲಯಾಯಾಲಯಂ ಮಮ ॥೩೬॥

ನಿಃಸೀಮ ಮಹಿಮಾನಸ್ತೇ ವರ್ಣನೀಯಾಃ ಕಥಂ ಪರೈಃ ।
ಸ್ಮರಂತಿ ಚ ಸ್ಮರಾರಾತೇಃ ಸದಾ ಪದಸರೋರುಹಂ ॥೩೭॥

---

ಎಲೌ ಪಾರ್ವತಿಯೇ! ಹೀಗೆ ಕಲಿಯುಗದಲ್ಲಿ ಭಕ್ತರೆಲ್ಲರೂ ನನ್ನನ್ನು ಧ್ಯಾನ ಮಾಡುತ್ತಾರೆ. ಮತ್ತು ಇವರು ಶೈವರ ದರ್ಶನಮಾಡಿ ಶಿವಧ್ಯಾನಾಸಕ್ತರಾದ ಅವರನ್ನೇ ಸೇವಿಸುತ್ತಾರೆ. ಎಲೌ ಪರ್ವತರಾಜಕುವರಿಯೇ, ನೀಚವಂಶೀಯರೂ ಕೂಡ ನನ್ನಲ್ಲಿ ಭಕ್ತಿಯುಳ್ಳವರಾಗಿ ಮುಕ್ತರೆನಿಸುವರು. ಕಾರ್ಯ, ಮನಸ್ಸು ಮತ್ತು ವಾಕ್ಕುಗಳಿಂದ ಅಥವಾ ಸಕಲ ರೀತಿಯಿಂದಲೂ ಜಗನ್ಮಂಗಳಕರನಾದ ನನ್ನನ್ನು ಆಶ್ರಯಿಸಿದವರು ಗಣಾಧಿಪತಿಗಳೆನಿಸುವರು. ॥೩೩-೩೪॥

ಕರುಣಾಸಮುದ್ರನಾದ ನನ್ನ ಪಾದವನ್ನು ಶರಣು ಹೊಂದಿದ ನನ್ನ ಆಪ್ತ ಜನರಾದ ಇವರು ಬೇರೆಯವರಿಂದ ತಿರಸ್ಕರಿಸಲ್ಪಡಲು ಸಾಧ್ಯವೇ ಇಲ್ಲ. ಸಕಲ ಲೋಕಗಳನ್ನೂ ಅವರು ನೋಡುತ್ತಿದ್ದರೂ ಸ್ಥಿರವಾಸಕ್ಕೆ ಮಾತ್ರ ನನ್ನ ಆಲಯವಾದ ಕೈಲಾಸವನ್ನೇ ಅಪೇಕ್ಷಿಸುವರು. ಎಲ್ಲೆಯಿಲ್ಲದ ಪ್ರಭಾವವುಳ್ಳ ಆ ನನ್ನ ಭಕ್ತರನ್ನು ಇತರರು ಹೇಗೆ ತಾನೇ ವರ್ಣನೆಮಾಡಲು ಸಾಧ್ಯವಾದೀತು? ಇವರು ಯಾವಾಗಲೂ ಮನ್ಮಥಾಂತಕನಾದ ನನ್ನ ಪಾದಕಮಲವನ್ನೇ ಸ್ಮರಣೆಮಾಡುತ್ತಿರುವರು. ॥೩೫-೩೬-೩೭॥

ಮತ್ತ್ಸ್ನತೌ ಗದ್ಗದತರ ಹರ್ಷಬಾಷ್ಪಪರಿಪ್ಲುತಾಃ ।
ನೇತ್ರಾಂಬುನಿರ್ಝರಾಸೇಕಾಃ ಪುಲಕಾಂಕುರಭೂಷಣಾಃ ॥೩೮॥

ನಾದಾಂತರೂಪೇ ಹೃದಯಾಂಬುಜಸ್ಥೇ
ಶಿವೇ ಪರಂಜ್ಯೋತಿವಿಚಿಂತ್ಯರೂಪೇ ।
ವಿನ್ಯಸ್ಯ ಚಿತ್ತೇ ವಿರತಾನ್ಯಕಾಮಾಃ
ಕಾಮಾರಿಧಾಮೈಕಗತಾ ಭವಂತಿ ॥೩೯॥

ವಿನ್ಯಸ್ಯ ನಾಚಿತ್ತಮುಮಾಸಹಾಯೇ
ಯೋ ಭಕ್ತಮಾಹಾತ್ಮ್ಯಮಿದಂ ಮಹಾರ್ಥಂ ।
ದಧಾತಿ ಚಿತ್ತೇ ಸತತಂ ನರೋ ಯಃ
ಪರಾತ್ಪರಂ ಶೈವಪದಂ ಪ್ರಪದ್ಯಾತ್ ॥೪೦॥

ತ್ರಿಷಷ್ಟಿಭಕ್ತಾಃ ಶಿವಿನಿಷ್ಠನಿಷ್ಠಾಃ ·
ಕನಿಷ್ಠವರ್ಣಾ ಅಪಿ ತೇಽಪಿ ಶಿಷ್ಟಾಃ ।

---

ಈ ನನ್ನ ಭಕ್ತರು ನನ್ನ ಸ್ತುತಿಯಲ್ಲಿ ಗದ್ಗದವಿಶಿಷ್ಟವಾದ ಧ್ವನಿಯುಳ್ಳವರಾಗಿ ಸಂತೋಷಬಾಷ್ಪಗಳಿಂದ ಭಾವಾವಿಷ್ಟರಾಗುತ್ತಾರೆ. ಕಣ್ಣೀರಿನ ಪ್ರವಾಹದಿಂದ ನೆನೆದು ರೋಮಾಂಚಗಳೆಂಬ ಅಂಕುರಗಳಿಂದ ಅಲಂಕೃತರಾಗಿರುತ್ತಾರೆ. ॥೩೮॥

ನಾದಬ್ರಹ್ಮಸ್ವರೂಪನೂ, ಪರಂಜ್ಯೋತಿಮಯನೂ, ಚಿಂತನೀಯರೂಪವುಳ್ಳವನೂ ಆದ ಶಿವನು ಹೃದಯಕಮಲದಲ್ಲಿರಲು, ಮನಸ್ಸಿನಲ್ಲಿ ಆ ಶಿವನನ್ನಿರಿಸಿ ಇತರ ಇಚ್ಛೆಗಳಲ್ಲೆಲ್ಲಾ ವೈರಾಗ್ಯಹೊಂದಿದ ಈ ನನ್ನ ಭಕ್ತರು ಸುಲಭವಾಗಿ ಕೈಲಾಸವನ್ನು ಪಡೆಯುವರು. ॥೩೯॥

ಯಾವ ಮಾನವನು ಉಮಾರಮಣನಾದ ನನ್ನಲ್ಲಿ ತನ್ನ ಮನವಿಟ್ಟು ಅಪಾರಾರ್ಥವುಳ್ಳ ಈ ಭಕ್ತರ ಮಾಹಾತ್ಮ್ಯರೂಪವಾದ ಕಥಾಭಾಗವನ್ನು ಅನವರತವೂ ತನ್ನ ಮನಸ್ಸಿನಲ್ಲಿ ಚಿಂತಿಸುತ್ತಾನೆಯೋ ಅವನು ಪರಮಶ್ರೇಷ್ಠವಾದ ಶಿವಧಾಮವನ್ನು ಸೇರುವನು. ॥೪೦॥

ಇಂತು ಶ್ರೀಶಿವನಲ್ಲಿ ಆಸಕ್ತರಾದ ಭಕ್ತರು ಮುಖ್ಯವಾಗಿ ಅರವತ್ತುಮೂರು ಮಂದಿ, ಅವರು ನೀಚವರ್ಣದವರಾದರೂ ಶ್ರೇಷ್ಠರೇ ಸರಿ; ಅವರೆಲ್ಲರೂ ನಮಗೆ

ಇಷ್ಟಾ ಶಿವಸ್ಯಾಬ್ಜಪದೈಸ್ಸಭಕ್ತಿ-
ಜುಷ್ಟಾನಿ ಕಷ್ಟಾನಪಿ ನಾಶಯಂತಿ ॥೪೧॥

ತಿಷ್ಯೇಽಪಿ ದೂಷ್ಯಚ್ಛಿವಭಕ್ತಿಸಕ್ತಿ
ಮಮುಷ್ಯ ಪುಷ್ಯಪ್ರಥಿತಪ್ರಭಾವಾಃ ।
ವಿಶಿಷ್ಯ ಪುಷ್ಪಾರ್ಪಣತೋಽಪಿ ಭಾವಾಃ
ಸಮರ್ಚ್ಯ ಶಿಷ್ಯಾಕೃತಯೋ ಮಮಾಂಬಿಕೇ ॥೪೨॥

ಚಂಡಾಲಃ ಶ್ವಪಚೋಽಸ್ತು ವಾ ಗಿರಿಸುತೇ ವಿಪ್ರೋಽಪಿ ವಾ ವೇದವಿ
ನ್ಮದ್ಭಕ್ತ್ಯಾ ಭುವನೇ ವನೇಽಪಿ ನಿವಸನ್ಭೂಯಾಚ್ಛಿವೇ ಪಾವನಃ ।
ತಸ್ಮೈ ತಾಂ ವಿತರಾಮಿ ಮುಕ್ತಿಪದವೀಂ ನಾಚಾರಜಾತಿಸ್ಪೃಹಾ
ನೋ ಶೀಲಂ ನಕುಲಂ ತದೀಯಮಗಜೇ ಪಶ್ಯಾಮಿ ಭಕ್ತ್ಯಾ ಹೃತಃ ॥೪೩॥

ಯೋ ವೀತಮನ್ಯುಃ ಸನಕಾದಿಮಾನ್ಯೋ
ಬಾಲೋಪಮನ್ಯುರ್ಮಮ ಶೈಲಕನ್ಯೇ ।

---

ಇಷ್ಟರಾದವರೆ; ಶಿವನ ಪಾದಕಮಲದಲ್ಲಿಯೇ ಭಕ್ತಿಯುಳ್ಳವರು ಎಂತಹ ಕಷ್ಟಗಳ ನ್ನಾದರೂ ನಾಶಪಡಿಸಿಕೊಳ್ಳುವರು. ॥೪೧॥

ಈ ಕಲಿಯುಗದಲ್ಲಿ ಕಾಲಮಹಿಮೆಯಿಂದ ನಿಂದ್ಯವಾಗುವ ಶಿವಭಕ್ತಿಭಾವ ವನ್ನು ಶ್ರೇಷ್ಠರೂ ಪ್ರಖ್ಯಾತಮಹಿಮೆಯುಳ್ಳವರೂ ಆದ ಶೈವರು ಸರಿಪಡಿಸಿ ಆದನ್ನು ಪ್ರಕಾಶಕ್ಕೆ ತಂದು ಪುಷ್ಪಸಮರ್ಪಣೆಯಿಂದಲೇ ನನ್ನನ್ನು ಪೂಜಿಸಿ ಕೊನೆಗೆ ಅವರು ಎಲೌ ಅಂಬಿಕೆಯೇ, ನನ್ನ ಪ್ರಿಯಶಿಷ್ಯರೆನಿಸುವರು. ॥೪೨॥

ಎಲೌ ಪಾರ್ವತಿ! ಚಂಡಾಲ, ನಾಯಿಮಾಂಸಭಕ್ಷಕ, ವೇದಜ್ಞನಾದ ಬ್ರಾಹ್ಮಣ ಇವರಾರೇ ಆಗಲೀ ನನ್ನ ಭಕ್ತರೆನಿಸಿದರೆ ಅವರು ಭೂಮಿಯಲ್ಲಿಯಾಗಲೀ ಅಥವಾ ನೀರಿನಲ್ಲಿಯೇ ಇರಲಿ, ಅವರು ಪವಿತ್ರರೇ ಆಗುವರು. ದೇವಿ, ನಾನು ಅಂತಹ ವನಿಗೆ ಮೋಕ್ಷಪದವಿಯನ್ನು ಕೊಡುವೆನು. ನನಗೆ ಆಚಾರ, ಜಾತಿ, ಸ್ವಭಾವ, ವಂಶ ಇವುಗಳೊಂದರ ಗಣನೆಯಲ್ಲಿಯೂ ಮನಸ್ಸಿಲ್ಲ. ಕೇವಲ ಅವನ ಭಕ್ತಿಗೆ ಮಾತ್ರ ನಾನು ಅಧೀನನಾಗಿ ಅವನಿಗೆ ಬೇಕಾದುದನ್ನೆಲ್ಲಾ ಕೊಡಲು ಸಿದ್ಧನಿರುವೆನು. ॥೪೩॥

ಎಲೌ ಗಿರಿರಾಜಕುಮಾರಿಯೆ! ಉಪಮನ್ಯು ಬಾಲಕನಿಂದಲೂ ಸನಕಸನಂದ ನಾದಿ ಋಷಿಗಳಿಂದಲೂ ಮಾನ್ಯನಾದ, ನನ್ನ ಭಕ್ತರಿಂದ ಗೌರವಾರ್ಹವಾದ ಈ ಭಕ್ತ

ಮದ್ಭಕ್ತನಾಮ್ನಾಂ ಚರಿತಂ ಕಲೌಯುಗೇ
ವಿಸ್ತಾರಯೇದ್ದೇವೀ ತಮನ್ಯುಹರ್ಷದಂ ॥೪೪॥

ಸಂಗೃಹ್ಯ ತತ್ಸೂತ್ರತಯೋಕ್ತಮೇತ
ದ್ಭಕ್ತಸ್ಯ ಮಾಹಾತ್ಮ್ಯಮಿದಂ ತವೇಶಿ ।
ಭಕ್ತಿಪ್ರಭಾವಂ ಕಲಿಕಾಲಮರ್ತ್ಯೇ
ಷ್ವಪೀದಮೇತನ್ನ ಹಿ ಜಾತಿವರ್ಣಾಃ ॥೪೫॥

ಸಂಸಾರಾಬ್ಧೌ ವಿಷಮವಿಷಯಾಗಾಧಬೋಧೈಕಗರ್ತೇ
ಜನ್ಮಾವೃತ್ತ್ಯೈವ ಮರ್ತ್ಯಾ ಮರಣಭಯಮಹಾವಾತ್ಯಯಾ ಶುಷ್ಕಪರ್ಣೇ ।
ವ್ಯಾವೃತ್ತೇವ ಪ್ರಭವತಿ ಶಿವೇ ಮಾನವೋ ಭಾರತೇಽಸ್ಮಿನ್
ಕಾಮಕ್ರೋಧಾಭಿಲೋಭೋನ್ಮದಮುದಿತಮಹಾನಕ್ರವಕ್ತ್ರಾಂತರಾಳೇ
॥೪೬॥

---

ಚರಿತ್ರೆಯನ್ನು ಕಲಿಯುಗದಲ್ಲಿ ದೇಶದಲ್ಲೆಲ್ಲಾ ಮತ್ತೊಬ್ಬರಿಗೆ ಸಂತೋಷವನ್ನುಂಟು ಮಾಡುತ್ತಾ ಹರಡುವವನು ಧನ್ಯನು. ॥೪೪॥

ಎಲೌ ಈಶ್ವರಿ, ನನ್ನ ಭಕ್ತರ ಇಂತಹ ಮಹಿಮಾಸ್ಪದವಾದ ಕಥೆಯನ್ನು ಸೂತ್ರದಂತೆ ಸಂಗ್ರಹಮಾಡಿ ನಿನಗೆ ಹೇಳಿದೆನು. ದೇವಿ, ಕಲಿಗಾಲದ ಮಾನವರಲ್ಲಿ ನನ್ನ ಭಕ್ತಿಭಾವವೊಂದೇ ಪ್ರಧಾನವಾದದ್ದು. ಮಾನವರ ಜಾತಿ, ವರ್ಣಗಳ ಗಣನೆಯು ಮುಖ್ಯವಾಗಿರುವುದಿಲ್ಲ. ॥೪೫॥

ವಿಷಮವಾದ ವಿಷಯಸುಖಗಳೆಂಬ ಪ್ರವೇಶಿಸಲಸಾಧ್ಯವಾದ ದೊಡ್ಡ ಹಳ್ಳಗಳಿಂದ ಕೂಡಿ, ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯಗಳೆಂಬ ಅರಿಷಡ್ವರ್ಗಗಳೆಂಬ ಘೋರವಾಗಿರುವ ದೊಡ್ಡ ಮೊಸಳೆಗಳ ಬಾಯಿಯೊಳಗೆ ಸಿಕ್ಕಿ, ಜನನ, ಮರಣ ಭಯಗಳೆಂಬ ಬಿರುಗಾಳಿಯಿಂದ ಒಣ ಎಲೆಗಳು ಅಲ್ಲಿಂದಿಲ್ಲಿಗೆ ಹಾರಾಡುವಂತೆ ಹಾರಾಡುತ್ತಾ ಚಂಚಲವಾಗಿ ಸುತ್ತುವ ಮಾನವರು ಸಂಸಾರವೆಂಬ ಸಮುದ್ರದಲ್ಲಿ ಬಿದ್ದು, ತಮ್ಮ ಉದ್ಧಾರಕ್ಕೋಸ್ಕರ ಈ ಭಾರತ ಭೂಮಿಯಲ್ಲಿ ಶಿವಭಕ್ತಿಯುಕ್ತರಾಗಿ ಮುಕ್ತರಾಗುತ್ತಾರೆ. ॥೪೬॥

ನವಗ್ರಹಾವಗ್ರಹವಿಗ್ರಹೋಜ್ಝಿತಾಃ
ಪತಂತಿ ಜನ್ಮಂ ಭಯಮದ್ರಿಕನ್ಯೇ ।
ಮಾಮುಗ್ರಮೀಶೇ ಶರಣಂ ಪ್ರಪನ್ನಾ
ನೈವೇಂದ್ರಿಯಗ್ರಾಮಪರಾ ಭವಂತಿ ॥೪೭॥

॥ ಸ್ಕಂದ ಉವಾಚ ॥

ಸದಾಶಿವಾಖ್ಯಃ ಶಶಿಶೇಖರೋದಿತೋ
ದೇವ್ಯೈ ಮುನೇಽಂಶೋ ನವಮೋಽಯಮೇವ ।
ಶ್ರುತ್ವಾ ಸದಾಶಿವಮಯೋ ಭವತೀಹ ವಿಪ್ರಃ
ಸ್ವರ್ಭಾನುಮುಕ್ತ ಇವ ಶೀತಗುಕಾಂತಿತುಲ್ಯಃ ॥೪೮॥

ಭಕ್ತಾನಾಮಥ ಭಕ್ತಿಭಾವಜನುಷಾಂ ಭಕ್ತಿಪ್ರಭಾವಪ್ರಥಾಂ
ಲೋಕಾನಾಂ ಕಲಿಕಾಲನಿರ್ಣಯವಿಧಿಃ ಶ್ರೀಕಾಲಕಾಲಾರ್ಚನಂ ।
ಅಸ್ಮಿನ್ನೇವ ಶಿವೇನ ಪರ್ವತ ಮಹಾಪುತ್ರ್ಯೈ ಪವಿತ್ರ್ಯೈ ಮಮ
ವಿಸ್ತಾರೇಣ ಸದಾಶಿವಾಶ್ರಯಕಥಾ ಪ್ರೋಕ್ತಾ ಶ್ರುತಾ ಮುಕ್ತಿದಾ ॥೪೯॥

---

ಎಲೌ ಪಾರ್ವತಿ, ನವಗ್ರಹಗಳ ಪೀಡೆಗಳಿಂದ ಪೀಡಿತರಾಗಿ ಜನರು ಭಯಂಕರವಾದ ದುಃಖವನ್ನು ಪಡೆಯುವರು. ಭಯಂಕರಸ್ವರೂಪನಾದ ನನ್ನನ್ನು ಶರಣುಹೊಂದಿದವರು ಈರೀತಿ ಇಂದ್ರಿಯಸಮೂಹಗಳಿಗೆ ಎಂದೂ ಅಧೀನರಾಗಲಾರರು. ॥೪೭॥

ಅಯ್ಯ ಜೈಗೀಷವ್ಯನೇ! ಈ ರೀತಿ ಚಂದ್ರಶೇಖರನು ಪಾರ್ವತಿಗೆ ಹೇಳಿದ ಒಂಬತ್ತನೆಯ ಅಂಶವು ಇದೇ ಎಂದು ತಿಳಿ. ಈ ಅಂಶದ ಕಥೆಯನ್ನು ಕೇಳುವ ವಿಪ್ರನು ನಿತ್ಯಮಂಗಳರೂಪನಾಗಿ ಆಗುವನಲ್ಲದೇ ರಾಹುವಿನಿಂದ ಬಿಡಲ್ಪಟ್ಟ ಚಂದ್ರನ ಕಾಂತಿಗೆ ಸಮನಾದ ಕಾಂತಿಯನ್ನು ಪಡೆಯುವನು. ॥೪೮॥

ಓ ಜೈಗೀಷವ್ಯನೇ! ಭಕ್ತಿಭಾವನೆಪಡೆದು, ಭಕ್ತಿಮಹಿಮೆಯಿಂದ ಪ್ರಸಿದ್ಧರೆನಿಸಿರುವ ಭಕ್ತಜನರಿಗೆ ಕಲಿಗಾಲದಲ್ಲಿ ಮಾಡಲೇಬೇಕಾದ ನಿರ್ಣೀತವಾದ ಕರ್ಮವೆಂದರೆ ಶ್ರೀಮಹಾದೇವನ ಪೂಜೆಯೇ ಸರಿ; ಓ ಮುನಿವರ್ಯನೇ, ಈ ಸಂದರ್ಭದಲ್ಲಿಯೇ ಶಿವನು ಪರ್ವತರಾಜಕುಮಾರಿಯೂ ನನ್ನ ತಾಯಿಯೂ ಆದ ಪಾರ್ವತಿಗೆ ವಿಸ್ತಾರವಾಗಿ ಹೇಳಿದ ಸದಾಶಿವನ ಸಂಬಂಧವಾದ ಈ ರಹಸ್ಯಾಂಶವು ದೇವಿಯನುಗ್ರಹದಿಂದ ನನಗೂ ತಿಳಿಸಲ್ಪಟ್ಟಿತು. ॥೪೯॥

ಶ್ರೋತೃಣಾ ಮಿದಮೇವ ಮಂಗಳಮಹಾ ಶೈವಂ ರಹಸ್ಯಂ ಮುನೇ
ಅಂಶದ್ವಾದಶಮಂಡಿತಂ ಶ್ರುತಿಮಹಾವಾಕ್ಯಾರ್ಥಸಾರೋತ್ತರಂ ।
ಪುಣ್ಯಂ ವರ್ಣ್ಯಪದೈಕಪೂರ್ಣಮಗಜಾಕಾಂತಾಂಘ್ರಿಭಕ್ತಿಪ್ರದಂ
ತೂರ್ಣಂ ಸ್ವಸ್ತ್ಯಯನಾಯ ಕರ್ಣಸುರಸಾನೋದಾಯ ಭೂಯಾದ್ಧಿತೇ ॥೫೦॥

॥ ಸೂತ ಉವಾಚ ॥

ಇತ್ಥಂ ಸ್ಕಂದಸುನಂದಿಶೋರುವಚಸಾ ವೃಂದಾರವೃಂದೈರ್ಗಣೈಃ
ಸಾನಂದಾಶ್ರುವಿಲೋಚನೋಽಥ ಸ ಮುನಿಃ ಶ್ರುತ್ವಾಭಿನಂದಂಛಿರಃ ।
ಬ್ರಹ್ಮಾನಂದರಸೋತ್ತರೋರುಸುಹೃದಾ ದಧ್ಯೌ ಪದಂ ಶಾಂಭವಂ
ಧನ್ಯೋಽಸ್ಮೀತಿ ವದನ್ಮುದಾ ಗಿರಿಭವಾಜಾತಂ ಪ್ರಣಮ್ಯೇಶ್ವರಂ ॥೫೧॥

---

ಓ ಜೈಗೀಷವ್ಯಮುನಿಯೇ! ಶ್ರವಣಾಭಿಲಾಷಿಗಳಿಗೆ ಮಂಗಳಕರವಾದ ಈ ಮಹಾಶಿವರಹಸ್ಯವೇ ಗ್ರಾಹ್ಯವಾದದ್ದು. ಇದು ಹನ್ನೆರಡು ಅಂಶಗಳಿಂದಲಂಕೃತವಾಗಿ ವೇದದಲ್ಲಿರುವ ಮಹಾವಾಕ್ಯಗಳ ಅರ್ಥವನ್ನೇ ಸಾರವನ್ನಾಗಿ ಉಳ್ಳದ್ದಾಗಿರುವುದು. ಪುಣ್ಯಕರವೆನಿಸಿ ವರ್ಣನೀಯವಾದ ಪದಗಳಿಂದ ಯುಕ್ತವಾಗಿ ಪಾರ್ವತೀರಮಣನಲ್ಲಿ ಭಕ್ತಿಯನ್ನುಂಟುಮಾಡುವುದೆಂದರೆ ಈ ಶಿವರಹಸ್ಯವೇ. ಮುನಿಯೇ! ಮಂಗಳವನ್ನುಂಟುಮಾಡುವುದಕ್ಕೂ ಕರ್ಣಾನಂದಪಡಿಸುವುದಕ್ಕೂ ಭಕ್ತವೃಂದಕ್ಕೆ ಈ ಶಿವರಹಸ್ಯವು ಸಹಾಯವಾಗಲಿ, ಎಂದು ಕುಮಾರಸ್ವಾಮಿಯು ಜೈಗೀಷವ್ಯನಿಗೆ ಹೇಳಿದನು. ॥೪೯-೫೦॥

ಹೀಗೆ ಕುಮಾರಸ್ವಾಮಿಯಿಂದ ಹೇಳಲ್ಪಟ್ಟು ಆನಂದಭರಿತವಾದ ವಾಕ್ಯಗಳಿಂದ ಕೂಡಿದ ಈ ಶಿವರಹಸ್ಯದ ಒಂಬತ್ತನೆಯ ಅಂಶದ ಕಥೆಯನ್ನು ದೇವತೆಗಳ ಸಮೂಹ ಮತ್ತು ಶಿವಗಣಗಳೊಡನೆ ಆನಂದಬಾಷ್ಪಸಮೇತವಾದ ಕಣ್ಣುಗಳುಳ್ಳವನಾಗಿ ಆ ಜೈಗೀಷವ್ಯಮುನಿಯು ಕೇಳಿ, ತಲೆಯನ್ನು ಅಲ್ಲಾಡಿಸುತ್ತಾ ಬ್ರಹ್ಮಾನಂದಸುಖಕ್ಕಿಂತಲೂ ಮೀರಿದ ಉತ್ತಮರಸಭರಿತವಾದ ಮನಸ್ಸಿನಿಂದ ಆ ಪಾರ್ವತೀರಮಣನಾದ ಶಿವನಿಗೆ ಪದೇ ಪದೇ ನಮಸ್ಕಾರಮಾಡುತ್ತಾ, ನಾನು ಧನ್ಯನಾದೆನೆಂದು ಹೇಳುತ್ತಾ ಶಂಕರನ ದಿವ್ಯಧಾಮವಾದ ಕೈಲಾಸವನ್ನು ಧ್ಯಾನಮಾಡಿದನು, ಎಂದು ಸೂತರು ವಾಜಶ್ರವಸಾದಿಮುನಿಗಳಿಗೆ ಹೇಳಿದರು. ॥೫೧॥

ಇತಿ ಶ್ರೀ ಶಿವರಹಸ್ಯೇ ಸದಾಶಿವಾಖ್ಯೇ ನವಮಾಂಶೇ ಕೀರ್ತಿಮಿತ್ರ ವೀರಶಾರ್ದೂಲಾಖ್ಯಾನವರ್ಣನಂ ನಾಮ ಪಂಚಷಷ್ಟಿತಮೋಽಧ್ಯಾಯಃ

## ಶ್ರೀ ಶಿವರಹಸ್ಯಂ ನವಮಾಂಶಕಥಾ ಸಮಾಪ್ತಾ

॥ ಶ್ರೀ ಕಾಶೀವಿಶ್ವೇಶ್ವರಾರ್ಪಣಮಸ್ತು ॥

॥ ಓಂ ತತ್ಸತ್ ॥

---

ಇಲ್ಲಿಗೆ ಶ್ರೀಶಿವರಹಸ್ಯದಲ್ಲಿ ಸದಾಶಿವಸಂಜ್ಞಕವಾದ ಒಂಬತ್ತನೆಯ ಅಂಶದಲ್ಲಿ ಕೀರ್ತಿಮಿತ್ರ, ವೀರಶಾರ್ದೂಲರೆಂಬ ಭಕ್ತರ ಕಥಾವರ್ಣನೆಯೆಂಬ ಅರವತ್ತೈದನೆಯ ಅಧ್ಯಾಯವು ಮುಗಿದುದು.

## ಶ್ರೀಶಿವರಹಸ್ಯದ ಒಂಬತ್ತನೆಯ ಅಂಶದ ಕಥೆಯು ಮುಗಿಯಿತು.

॥ ಶ್ರೀ ಕಾಶೀವಿಶ್ವೇಶ್ವರನಿಗೆ ಅರ್ಪಿತವಾಗಲಿ ॥

॥ ಶ್ರೀ ಶಿವಾಯ ನಮಃ ॥





